ಮಾಸ್ತಿಯವರ

# ಕನ್ನಡ ಪುಸ್ತಕಗಳು

(ಒಂಬತ್ತು ಸಂಪುಟಗಳಲ್ಲಿ)

| | | |
|---|---|---|
| ಸಂಪುಟ | ೧ | ಕತೆಗಳು ೧ |
| ,, | ೨ | ,, ೨ |
| ,, | ೩ | ಕಾವ್ಯಗಳು ೧ |
| ,, | ೪ | ,, ೨ |
| ,, | ೫ | ನಾಟಕಗಳು |
| ,, | ೬ | ವಿಮರ್ಶೆ |
| ,, | ೭. | ಉಪನ್ಯಾಸ ಭಾಗಗಳು |
| ,, | ೮. | ರವಿಕವಿ ಇತ್ಯಾದಿ |
| ,, | ೯. | ಚೆನ್ನಬಸವನಾಯಕ |

# ಚೆನ್ನಬಸವ ನಾಯಕ

(ಐತಿಹಾಸಿಕ ಕಾದಂಬರಿ)

ಶ್ರೀನಿವಾಸ

ಜೀವನ ಕಾರ್ಯಾಲಯ
ಬೆಂಗಳೂರು

ಮೊದಲನೆಯ ಮುದ್ರಣ
೧೯೪೯



ಬೆಲೆ : ರೂ. ೫-೮-೦
ಉತ್ತಮ ಪ್ರತಿ : ರೂ. ೬-೮-೦

ಪ್ರಕಾಶಕರು :
ಜೀವನ ಕಾರ್ಯಾಲಯ,
೪೪, ಗವೀಪುರದ ವಿಸ್ತರಣ, ಬಸವನಗುಡಿ
ಬೆಂಗಳೂರು ೪

ಮುದ್ರಣಕಾರರು :
ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು ೨

# ಮುನ್ನುಡಿ



ಈ ಕತೆಯನ್ನು ಬರೆಯುವ ಯೋಚನೆ ನನಗೆ ನಾನು ೧೯೨೦–೨೧ ರಲ್ಲಿ ಚಿಕ್ಕಮಗಳೂರಿನಲ್ಲಿ ಸಬ್‌ಡಿವಿರ್ಷ ಆಫೀಸರ್ ಆಗಿದ್ದಾಗ ಬಂದಿತು. ಜಾಗರ, ವಸ್ತಾರೆ, ಸೋಮನಕಾಡು, ಬಲ್ಲಾಳರಾಯನದುರ್ಗ, ನನ್ನ ಕಲ್ಪನೆಗೆ ಸಾಮಗ್ರಿಗಳಾಗಿ ಒದಗಿದ್ದು ಆಗ. ಅದೇ ಕಾಲದಲ್ಲಿ ಅಲ್ಲಿ ಸಾರ್ವಜನಿಕ ಜೀವನದಲ್ಲಿ ಪ್ರಮುಖರಾಗಿದ್ದ ಶ್ರೀ ಜಿ. ಶ್ರೀನಿವಾಸ ರಾಯರು ನನಗೆ ದತ್ತಾತ್ರೇಯಪೀಠ, ಗಾಳೀಕೆರೆ, ಸಿದ್ಧರಗವಿ, ಹಿಪ್ಪಲ, ಮುಂತಾದ ಸ್ಥಳಗಳನ್ನು ಕುರಿತ ಐತಿಹ್ಯಗಳನ್ನು ಹೇಳಿದರು. ಹಾಗೆಯೇ ರಾಣಿ ವೀರಮ್ಮಾಜಿ ಚೆನ್ನಬಸವನಾಯಕನನ್ನು ಕುರಿತು ತಾವು ಕೇಳಿದ್ದ ಕತೆಯನ್ನು ವಿವರಿಸಿದರು. ಆಗಲೇ ನಾನಿದನ್ನು ಬರೆಯಬೇಕು; ಅವಕಾಶ ವಿರಲಿಲ್ಲ. ಬೆಂಗಳೂರಿಗೆ ಬಂದಮೇಲೆ ೧೯೨೨ರಲ್ಲಿ ನಾನು ಇದರ ಒಂದು ಪರಿಜನ್ನು ಹಾಕಿಕೊಂಡೆನು; ೧೯೨೪ರಲ್ಲಿ ಅರವತ್ತು ಪುಟಗಳನ್ನು ಬರೆದೆನು. ಆದರೆ ಒಟ್ಟಿಗೆ ಇದಕ್ಕಾಗಿಯೇ ಕುಳಿತುಕೊಳ್ಳದೆ ಕೆಲಸ ಮುಂಬರಿಯುವಂತಿರಲಿಲ್ಲ; ಆದ್ದರಿಂದ ಅದು ಅಲ್ಲಿಗೆ ನಿಂತಿತು.

ಆಮೇಲೆ ದಿನ ಕಳೆದಂತೆ ಸರಕಾರದ ಕೆಲಸ ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ನನ್ನ ಶಕ್ತಿಯನ್ನೂ ಕಾಲವನ್ನೂ ತೆಗೆದುಕೊಂಡಿತು. ಹತ್ತೊಂಬತ್ತು ವರುಷ ಕಳೆದು ಸರಕಾರದ ಕೆಲಸ ಮುಗಿದಾಗ ಪರಿಷತ್ತಿನ ಕೆಲಸ ಐದು ವರ್ಷದ ದಿನ ನನ್ನ ಜೀವನವನ್ನು ಆಕ್ರಮಿಸಿತು.

ಅದೂ ಬಿಟ್ಟಮೇಲೆ ಕತೆ ಮುಂದರಿಯುವುದು ಸಾಧ್ಯವಾಯಿತು. ಇದನ್ನು ಈಗಿರುವ ಪ್ರಮಾಣದಲ್ಲಿ ಹಿಂದಿನ ಡಿಸೆಂಬರ್ ತಿಂಗಳಲ್ಲಿ ಬರೆಸಿ ಮುಗಿಸಿದೆನು.

ವೀರಮ್ಮಾಜಿ, ಚೆನ್ನಬಸವ ನಾಯಕ, ಹೈದರ್, ಕೃಷ್ಣರಾಜ, ದೇವಾಜಮ್ಮಣ್ಣಿ, ಲಿಂಗಣ್ಣಯ್ಯ, ನಂಬಯ್ಯ, ಉಜನಿ, ಮುಂತಾಗಿ ಇಲ್ಲಿ

ಬರುವ ಹಲವು ವ್ಯಕ್ತಿಗಳು ಇತಿಹಾಸದಲ್ಲಿ ಇದ್ದವರು; ನೇಮಯ್ಯ, ಶಾಂತವ್ವ, ಅಯ್ಯ, ಮಲ್ಲಿಗೆ, ಹೆಗ್ಗಡಿತಿ, ಮುಂತಾಗಿ ಇತರ ಹಲವು ವ್ಯಕ್ತಿಗಳು ಕಲ್ಪನೆಯ ವ್ಯಕ್ತಿಗಳು. ಇತಿಹಾಸದ ವಿವರಗಳನ್ನು ಬಲ್ಲವರು ಕತೆಯನ್ನು ಓದಿದರೆ ಇದರ ಸಂಗತಿಗಳು ಆದರ ತಡಿಕೆಯಮೇಲೆ ತಮ್ಮದೇ ಆದ ಒಂದು ನಿಯಮವನ್ನು ಅನುಸರಿಸಿ ಬೆಳೆದಿರುವುದನ್ನು ಕಾಣುವರು. ಈ ತಂತ್ರ ಇಂಥ ಕತೆಗಳಲ್ಲಿ ವಾಡಿಕೆಯಾದದ್ದೆ.

ಹತ್ತು ವರುಷದ ಹಿಂದೆ ನಾನು ನಗರಕ್ಕೆ ಹೋಗಿದ್ದಾಗ ಅಲ್ಲಿ ಡಾಕ್ಟರಾಗಿದ್ದ ಶ್ರೀ ಶಾಸ್ತ್ರಿ ಮಿತ್ರರು ಅದರ ಹಳೆಯ ಚರಿತ್ರೆಯ ಒಂದು ಹಸ್ತಪ್ರತಿಯನ್ನು ಸಂಪಾದಿಸಿ ಕೊಟ್ಟರು. ನಾನು ಇಲ್ಲಿ ಈ ಮಿತ್ರರ ಉಪಕಾರವನ್ನು ಸ್ಮರಿಸಬೇಕಾಗಿದೆ.

ಹೈದರ್ ನವಾಬ ಬರ್ಕಿ ಶ್ರೀನಿವಾಸರಾಯನನ್ನು ಬಿಡಿಸಿ ತಂದ ಕತೆಯನ್ನು ನಾನು ಶ್ರೀ ನವರತ್ನ ರಾಮರಾಯರವರಿಂದಲೂ ಹೈದರ್ ಮೀಸೆ ತೀಡಿಕೊಂಡ ಕತೆಯನ್ನು ಜನಾಬ್ ಸೈಯದ್ ತ್ಯಾಜ್ ಪಿಯರ್ರಾ ರವರಿಂದಲೂ ಕೇಳಿದೆನು. ಹೈದರನ ಮೂರ್ತಿಯನ್ನು ನಿರ್ಮಿಸುವುದರಲ್ಲಿ ಈ ಕತೆಗಳು ತುಂಬ ಉಪಯೋಗಕ್ಕೆ ಬಂದವು. ಈ ಬಗ್ಗೆ ಈ ಇಬ್ಬರು ಪೂಜ್ಯ ಮಿತ್ರರಿಗೂ ನಾನು ವಂದನೆಯನ್ನು ಒಪ್ಪಿಸುತ್ತೇನೆ.

ಮೊದಲಲ್ಲಿ ಹಲವು ವಿವರಗಳನ್ನು ಹೇಳಿದ ಪೂಜ್ಯ ವೃದ್ಧರು ಶ್ರೀ ಶ್ರೀನಿವಾಸರಾಯರಿಗೆ ನಾನು ಈಗ ವಂದನೆ ಹೇಳುವಂತಿಲ್ಲ. ಆದರೂ ಅವರ ಉಪಕಾರವನ್ನು ಸಂತೋಷದಿಂದ ನೆನೆಯುತ್ತೇನೆ. ಅವರ ರಸಿಕ ಭಾವುಕ ಜೀವದ ಸ್ಮೃತಿಗೆ ನನ್ನ ಗೌರವದ ಕಾಣಿಕೆಯನ್ನು ಸಲ್ಲಿಸುತ್ತೇನೆ.

ಆರಂಭದಲ್ಲಿ ಸಿದ್ಧವಾದ ಅರವತ್ತು ಪುಟಗಳನ್ನು ೧೯೩೮ರಲ್ಲಿ ಹಿರಿಯ ಗೆಳೆಯರು ಶ್ರೀ ವೆಂಕಣ್ಣಯ್ಯನವರಿಗೆ, ೧೯೪೫ರಲ್ಲಿ ಸೋದರ ಶ್ರೀ ಬೇಂದ್ರೆಯವರಿಗೆ, ಓದಿ ಹೇಳಿದೆನು. ಕತೆಯ ರಚನೆ ಮುಗಿಯುವುದು ವೆಂಕಣ್ಣಯ್ಯನವರು ನೋಡಲಾಗದಂತೆ ತಡವಾಯಿತೇ ಎಂಬುದು ನನಗೊಂದು ವ್ಯಥೆ. ಸೋದರ ಬೇಂದ್ರೆಯವರು ಅಂದು ಕೇಳಿದ ಅರವತ್ತು ಪುಟವನ್ನು ಒಪ್ಪಿಕೊಂಡರು; ಇಂದು ನೋಡುವ ಈ ನಾನೂರು ಪುಟವನ್ನೂ ಒಪ್ಪಿಕೊಳ್ಳಲಿ ಎಂದು ನಾನು ಆಶಿಸುತ್ತೇನೆ.

ಅಂತೇ ಎಲ್ಲ ಕನ್ನಡ ಜನವೂ ಇದನ್ನು ಒಪ್ಪಿಕೊಳ್ಳಲೆಂದು ನನ್ನ ಆಶೆ ಎನ್ನುವುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ.

ತರುಣ ಮಿತ್ರರು ಶ್ರೀ ಸ. ವೆಂಕಟಾಚಲಪತಿ ಈ ಕತೆಯನ್ನು ಬರೆದುಕೊಂಡರು; ಗೆಳೆಯ ಶ್ರೀ ತಿರುಮಲೆ ವೆಂಕಟರಂಗ್ಗ ಕತೆಯಲ್ಲಿ ಎಲ್ಲಿಯಾದರೂ ಇನ್ನಷ್ಟು ವಿವರಣೆ ಬೇಕೇ ಎನ್ನುವುದನ್ನು ನಿರ್ಧರಿಸಲು ಐದು ದಿನ ಕುಳಿತು ಕತೆಯನ್ನೆಲ್ಲ ಓದುವುದನ್ನು ಕೇಳಿದರು; ಗೆಳೆಯರು ನಗರ ಸಾಹುಕಾರ್ ಶ್ರೀನಿವಾಸರಾಯರವರು, ಶ್ರೀ ಕೆ. ಪಿ. ರಾಮನಾಥಯ್ಯನವರು, ಜನಾಬ್ ಮುರ್ಷಿದ್ ಪಿಯರ್‌ರವರು, ನಾನು ಈಚೆಗೆ ನಗರಕ್ಕೆ ಪೀಠಕ್ಕೆ ಬಲ್ಲಾಳರಾಯನದುರ್ಗಕ್ಕೆ ಹೋಗಲು ಬಯಸಿದಾಗ ಸೌಕರ್ಯ ಒದಗಿಸಿ ಜೊತೆಗಿದ್ದು ಸಹಾಯಮಾಡಿದರು; ಗೆಳೆಯರು ಶ್ರೀ ವಿ. ಸೀತಾರಾಮಯ್ಯನವರು ಶ್ರೀ ಜಿ. ಆರ್. ಯಾಜಿಯವರು ಆ ಸ್ಥಳಗಳಿಗೆ ನನ್ನೊಂದಿಗೆ ಬಂದು ಪ್ರವಾಸವನ್ನು ಒಂದು ಹಬ್ಬವೆನಿಸಿದರು.

ಈ ಎಲ್ಲ ಮಿತ್ರರಿಗೂ ಹೃತ್ಪೂರ್ವಕ ವಂದನೆ.

ಈ ಪುಸ್ತಕ ಗೆಳೆಯ ಜೋಶಿ ಗೋವಿಂದಾಚಾರ್ಯರ ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟವಾಗಬೇಕೆಂದು ಒಂದು ಯೋಚನೆ ಇದ್ದಿತು. ಇದನ್ನು ಬೆಂಗಳೂರಲ್ಲೆ ಅಚ್ಚುಮಾಡಬೇಕಾಗಿ ಬಂದು ಆ ಯೋಚನೆಯನ್ನು ಬಿಡಬೇಕಾಯಿತು.

ಮೂರನೆಯ ಪುಟದಲ್ಲಿ ಆರಂಭಿಸುವ ಮೊದಲ ವಾಕ್ಯವೃಂದದಲ್ಲಿ ನೂರ ಐವತ್ತು ಎಂದಿರುವಲ್ಲಿ ಇನ್ನೂರು ಎಂದು ಓದಿಕೊಳ್ಳಬೇಕು.

**ಬೆಂಗಳೂರು ವಿರೋಧಿ ಸಂ.**
**ಕಾರ್ತೀಕ ಶುದ್ಧ ಚತುರ್ದಶಿ** **ಶ್ರೀನಿವಾಸ.**
**೪-೧೧-೪೯**

# ಚೆನ್ನಬಸವ ನಾಯಕ

೧

ಶ್ರೀ ರಾಮಚಂದ್ರನ ಪುಣ್ಯಚರಿತ್ರೆಯ ಸಂಬಂಧದಿಂದ ಪ್ರಖ್ಯಾತವಾದ ಚಂದ್ರದ್ರೋಣಪರ್ವತ ಇದು. ಅಷ್ಟಘಂಟಾಶಕ್ತಿಯ ಘಾತದಿಂದ ಮೂರ್ಛಿತನಾದ ಲಕ್ಷ್ಮಣನನ್ನು ಆ ಮೂರ್ಛೆಯಿಂದ ಎಚ್ಚರಗೊಳಿಸಿ ರಘುರಾಮನನ್ನು ಶೋಕದಿಂದ ಉದ್ಧಾರಮಾಡಿದ ಸಂಜೀವನ ಇಲ್ಲಿ ಹುಟ್ಟಿತು. ಪಾಂಡವರೂ ಅರಣ್ಯವಾಸದಲ್ಲಿ ಈ ಪ್ರಾಂತದಲ್ಲಿ ನಡೆದಾಡಿದ್ದು ಉಂಟಂತೆ. ಗಿರಿಯ ತಲೆಯಲ್ಲಿ ಈ ಸರೋವರವನ್ನು ಭೀಮನು ತನ್ನ ಗದೆಯ ಒಂದು ಪೆಟ್ಟಿನಿಂದ ನಿರ್ಮಿಸಿದನೆಂದು ಪ್ರತೀತಿ. ಆದಕಾರಣವೇ ಜನ ಇದಕ್ಕೆ ಭೀಮನ ತಂದೆಯ ಹೆಸರನ್ನಿಟ್ಟು, ಇದನ್ನು ಗಾಳೀಕೆರೆ ಎಂದು ಕರೆಯುತ್ತಾರೆ. ಇಲ್ಲಿಂದ ಕೈಗೆ ನಿಲುಕಬಹುದು ಎಂಬಷ್ಟು ಹತ್ತಿರದಲ್ಲಿ ದತ್ತಾತ್ರೇಯ ಮಹಾಮುನಿಯ ಸಿದ್ಧಿಯಪೀಠ ಇದೆ. ತ್ರಿಮೂರ್ತಿಗಳ ಏಕಾವತಾರನಾದ ಆ ಅನಸೂಯಾ ಪ್ರಿಯಪುತ್ರನು ತನ್ನ ಅನುಚರ ಶ್ವಾನಗಳೊಡನೆ ಈಗಲೂ ಇಲ್ಲಿ ಸುಳಿಯುವುದು ಉಂಟಂತೆ: ಅವನನ್ನು ಕೆಲವರು ಕಂಡದ್ದುಂಟು ಎನ್ನುತ್ತಾರೆ. ಅವನ ಶ್ವಾನಗಳ ಗಂಭೀರ ಧ್ವಾನವನ್ನು ಇವಕ್ಕೂ ಹೆಚ್ಚಿನ ಜನ ಕೇಳಿದ್ದುಂಟು. ಈಗ ಈ ಪೀಠದಲ್ಲಿ ಅರಬ್ಬೀಯ ಮತಸ್ಥಾಪಕ ಮಹಮದ್ ಗುರುವರನ ಹೆಸರನ್ನು ಹೇಳುವ ಮೌಲ್ವಿ ಒಬ್ಬನು ದತ್ತಾತ್ರೇಯನನ್ನು ಗುರುವೆಂದು ಹೊಗಳಿ ಅವನ ಪೀಠವನ್ನು ನಡಸುತ್ತ ನಿಂತಿದಾನೆ. ಒಂದು ಹಿರಿಯ ಮತ ಇನ್ನೊಂದು ಹಿರಿಯ ಮತವನ್ನು ಹೀಗೆ ಹೊಗಳಿ ಹೇಳುವುದು ಪ್ರಾಯಶಃ ಇನ್ನೆಲ್ಲಿಯೂ ಇರಲಾರದು. ಪೀಠವಿರುವ ಗಿರಿಯನ್ನು ಈಗ ಬಾಬಾಬುಡನ್‌ಗಿರಿ ಎಂದು ಕರೆಯುವರು. ಇಲ್ಲಿಂದ ಸ್ವಲ್ಪದೂರದಲ್ಲಿ

ಒಂದು ಕಡೆಗೆ ಕಲ್‌ಹಟ್ಟಿಗಿರಿ, ಒಂದು ಕಡೆಗೆ ಮೂಡಲಯ್ಯನಗಿರಿ, ಇವೆ. ಮೂಡಲಯ್ಯನ ಗಿರಿಯ ತಗ್ಗಿನಲ್ಲಿ, ಭೀಮನ ಪಕ್ಕದಲ್ಲಿ ನಿಂತ ಕಿರಿಯನಾದ ಅರ್ಜುನನಂತೆ, ಸೀತಾಳಯ್ಯನ ಗಿರಿ ಇದೆ. ಅವುಗಳ ಒಂದು ಕಡೆಗೆ ಕವೀಕಲ್ ಕಂಡಿ; ಇನ್ನೊಂದು ಕಡೆಗೆ ಭೂತನ ಕಂಡಿ. ಅಲ್ಲಿ ನಿಂತರೆ ಎದುರಿನ ತಗ್ಗಿನಲ್ಲಿ ಅಲ್ಲೆ ಹತ್ತಿರದಲ್ಲಿ ಒಮ್ಮೆ ಹಿರಿದಾಗಿ ಬಾಳಿ ಇಂದು ಕಿರಿದಾಗಿ ಉಳಿದಿರುವ ವಸ್ತಾರೆ ಊರು. ಪೀಠದಿಂದ ಸೀತಾಳಯ್ಯನ ಗಿರಿಗೆ, ಕಲ್‌ಹಟ್ಟಿಯಿಂದ ಹಿಪ್ಪಲಕ್ಕೆ, ಬೆಟ್ಟ ನಿಡಿತೋಳುಗಳನ್ನು ನೀಡಿ ಅರ್ಧಚಂದ್ರದ ಆಕೃತಿಯಿಂದ ಶೋಭಿಸುತ್ತದೆ. ಅರ್ಧಚಂದ್ರಾಕೃತಿಯ ಇದರ ಒಳಮುಖದ ಅಗಾಧ ಪಾತ್ರದಲ್ಲಿ ಎಲ್ಲೆ ಇಲ್ಲದ ದಟ್ಟವಾದ ಹಸುರಕಾಡು ತುಂಬಿದೆ. ಈ ಕಾಡಿನ ಬಸಿರಲ್ಲಿ ಜಾಗರ ಮುಂತಾದ ಹತ್ತು ಗ್ರಾಮಇವೆ. ಅಪರಿಮಿತವಾದ ಕಾಡಹಸುರು ಅಲೆ ಅಲೆಯಾಗಿ ಹಾಯುತ್ತ ಮಲೆಯ ಕೋಡಿಗೆ ಸರಾಗವಾಗಿ ಏರಿ ಕೋಡಿ ಹರಿಯುತ್ತ ಇರುವುದನ್ನು ಕಂಡು ಜನತೆ ಈ ಹಸುರ ಆಳವನ್ನು ಜಾಗರದ ಸಮುದ್ರ ಎಂದು ಕರೆದಿದೆ. ನಾಲ್ಕೂ ಕಡೆಗೆ ನೋಟ ಹರಿಯುವಷ್ಟು ದೂರಕ್ಕೆ ಮಲೆ, ವನ, ಮಲೆ, ವನ, ಮೇಲೆಮೇಲೆ ಕಂಡು ಕಣ್ಣನ್ನು ತುಂಬುತ್ತವೆ. ಅಲ್ಲಿ ಮೂಡಲಯ್ಯನ ಗಿರಿಯ ಒಳತಪ್ಪಲಲ್ಲಿ ಪಂಡರವಳ್ಳಿ ಗ್ರಾಮ; ಈಚೆಗೆ ಕನಕನದೊಡ್ಡಿ. ಮಧ್ಯಕ್ಕೆ ಬರುತ್ತ ಪೀಠದ ತಪ್ಪಲಲ್ಲಿ ಕೀಳುಹುಲುವತಿ, ಮೇಲುಹುಲುವತಿ. ಮುಂದೆ ಪರ್ವತದ ಮೇಲೆ ಮುತ್ತಿನಂತೆ ಚೆಲ್ಲಿ ಶಿರವಾಸಿ, ಸೊಗದವಾಣಿ, ಮಾದಲ, ಹಿಪ್ಪಲ. ನೀರಿನದಲ್ಲದ ಸಮುದ್ರದಲ್ಲಿ ವನಗಳ ಆಳವಾದ ಹಸುರ ಬಸಿರಲ್ಲಿ ಈ ಹಳ್ಳಿಗಳು ಮುಳುಗಿಕುಳಿತಿವೆ. ಗಿರಿಯ ತಲೆಯ ನೂರಾರು ನೀರ ನೆಲೆಗಳಿಂದ ಜಿನುಗಿ ಸೇರಿ ಹೊನಲುಗಳಾಗಿ ಹರಿದು, ಅಲ್ಲಲ್ಲಿ ದುಮ್ಮಿಕ್ಕುವ ನೀರು ನಿರ್ಮಲವಾಗಿ, ಶೀತಲವಾಗಿ, ಸ್ವಾದುವಾಗಿ, ಪ್ರವಹಿಸುತ್ತಿದೆ. ಇಲ್ಲಿ ಅಬ್ಬಿ, ಇಲ್ಲಿ ಕೂಲು. ಇಲ್ಲಿ ಹೊಳೆ, ಹಳ್ಳ: ಇವೆಲ್ಲ ಜಾಗರದ ತಗ್ಗಿನಲ್ಲಿ ನೆರೆದು ಸೋಮವಾಹಿನಿ ನದಿಯಾಗಿವೆ. ಅದು ಮುತ್ತೋಣಿಯ ಬಳಿ ಮಲೆಗಳ ಒಳವಲಯವನ್ನು ಬಿಟ್ಟು ಮುಂದೆ ಭದ್ರಾನದಿಯನ್ನು ಸೇರುತ್ತದೆ. ಅಕೊ ಅಲ್ಲಿ ದೂರದಲ್ಲಿ ಬಾನ ಎತ್ತರಕ್ಕೆ ನಿಂತು ಕೆರವಿಯ ಗುಡ್ಡ

ಕಾಣುತ್ತದೆ. ಅದರಿತ್ತ ಕೊಟಿಗೆಹರ. ಸ್ವಲ್ಪ ಅತ್ತ ಕುದುರೇಮುಖ. ಇತ್ತ ಬಲ್ಲಾಳರಾಯನ ದುರ್ಗ. ಗಿರಿಯ ಹೊರವಳಯದಲ್ಲಿ ಇಲ್ಲಿ ತೊಗರೀ ಹನಕಲು; ಇಲ್ಲಿ ಮದಗದ ಕೆರೆ; ಇಲ್ಲಿ ಅಯ್ಯನ ಕೆರೆ; ಪಕ್ಕದಲ್ಲೆ ಸಖರಾಯ ಪಟ್ಟಣ. ಈಚೆಯ ಕಡೆ ಚಿಕ್ಕಮಗಳೂರು. ಅದರಾಚೆಗೆ ಭೂಮಿ ಏರುತ್ತ ಇಳಿಯುತ್ತ ದಿಕ್ಕಿನ ಕೊನೆಯವರೆಗೆ ಹಬ್ಬಿ ಹೊಂಜಾವಣಿಗೆಯ ಸೀಮೆ ಆಗಿದೆ. ಅದರ ನಡುನಾಡು ಬಲ್ಲಾಳರ ಬೇಲೂರು. ಇಲ್ಲಿ ಒಮ್ಮೆ ದೇವದೇವನ ವಿಶ್ವಮೋಹಕ ಚಿದ್ರೂಪ ಒಬ್ಬ ಮಾನವ ಶಿಲ್ಪಿಯ ಮನಸ್ಸಿನಲ್ಲಿ ಸೆರೆಸಿಲುಕಿ, ಉಳಿಯ ಮೊನೆಯಿಂದ ಶಿಲೆಯಲ್ಲಿ ರೂಪುಗೊಂಡಿತು. ಆ ಮೂರ್ತಿಯನ್ನು ಈಗಲೂ ಇಲ್ಲಿ ನೋಡಬಹುದು. ಅಲ್ಲಿಂದಾಚೆಗೆ ಸ್ವಲ್ಪದೂರದಲ್ಲಿ ಮತ್ತೊಬ್ಬ ಮಾನವ ಶಿಲ್ಪಿಯ ತಪಶ್ಚರ್ಯೆಯ ಸಿದ್ಧಿಯಾಗಿ, ಬೆಳುಗೊಳದ ಗಿರಿಯ ತಲೆಯಲ್ಲಿ ಗೊಮ್ಮಟೇಶ್ವರನ ಧೀರವಿಗ್ರಹ ನಿಂತಿದೆ. ಅದರಿಂದಾಚೆಗೆ ದೂರದಲ್ಲಿ ಶ್ರೀರಂಗಪಟ್ಟಣ; ಕಾವೇರಿಯ ಪುಣ್ಯತೀರ್ಥ. ಅಲ್ಲೆ ಹತ್ತಿರದಲ್ಲಿ ಮೈಸೂರು.

ಪ್ರಕೃತಿಯ ಸೌಂದರ್ಯದ ನೆಲೆಮನೆಯಂತಿರುವ ಈ ಸ್ಥಳದಲ್ಲಿ ದತ್ತಾತ್ರೇಯ ಪೀಠದಮೇಲೆ ನಿಂತು ಸುತ್ತ ನೋಡುವವನಿಗೆ ಸಂತೋಷ ದುಃಖಗಳು ಒಂದನ್ನೊಂದು ಅಟ್ಟಿ ಮುಂಬರಿಯುವುವು. ಎಡಗಡೆಯ ಬಯಲಲ್ಲಿ ಚಿಕ್ಕಮಗಳೂರಿಂದ ಮೈಸೂರಿನವರೆಗೆ ಬಾಳಿ ಬದುಕುವ ಜನದ ಚಿಹ್ನೆ ಕಾಣುತ್ತದೆ. ಈ ವಿಸ್ತೃತಭೂಮಿಯಲ್ಲಿ ಒಂದರ ಜೊತೆಗೆ ಒಂದಾಗಿ, ಊರುಗಳು, ತೋಪುಗಳು, ಕೆರೆಗಳು, ಮನೆಗಳು, ಕಂಗೊಳಿಸುತ್ತವೆ. ಜಾಗರದ ಸಮುದ್ರದಲ್ಲಿ, ಅದರಾಚೆಯ ಪ್ರದೇಶದಲ್ಲಿ, ಊರುಗಳು ಇವೆ; ಮನೆಗಳು ಕಾಣುವುದಿಲ್ಲ. ತೋಪು ಎಂದು ಬೇರೆ ಇಲ್ಲ: ಕಾಡೇ ತೋಪು. ಕೆರೆ ಒಂದು ಇರಬಹುದೆಂದು ತೋರುವುದಿಲ್ಲ. ಎಡದ ಭೂಮಿ ಹೊನ್ನಜೋಳಿಗೆಯ ಭೂಮಿ: ಅದರ ಬಯಲೆಲ್ಲ ಹೊಲಗದ್ದೆ; ಪಯಿರಿಂದ ಹಸುರಾಗಿದೆ. ಅದರಲ್ಲಿ ಜನಜೀವನದ ನಾಡಿ ಮಿಡಿಯುತ್ತಿರುವುದು ಕಾಣುತ್ತದೆ. ಈ ಬಲಗಡೆಗೂ ಗದ್ದೆಯಿದೆ, ಜನವಿಲ್ಲ: ಗದ್ದೆಯಲ್ಲಿ ಪಯಿರಿಲ್ಲ. ಹಂತಹಂತವಾಗಿ ಹಲಗೆಯ ಸೇರುವೆಯಂತೆ ಮೆರೆಯುತ್ತ ಸಾವಿರ ಜನವನ್ನು ಸಾಕಿಯೇನು ಎನ್ನುವ ಭೂಮಿ ನೇಗಿಲ ಮುಖವನ್ನು

ಕಾಣದು. ಅದು ಸಾಕಿಯೇನೆಂದರೆ ಸಾವಿರ ಜನವೂ ಈಗ ಇಲ್ಲ. ಗಿರಿಯ ಶಿರದ ಊರೆಂದೊ, ಲಕ್ಷ್ಮಿಯ ವಾಸಸ್ಥಾನ ಎಂದೊ, ಹೆಸರು ಪಡೆದ ಶಿರವಾಸಿ ಅಥವಾ ಸಿರಿವಾಸಿ ಈಗ ಬರಿಯ ಹೆಸರಾಗಿದೆ. ಸೊಗಡವನವೆಂದೊ, ಸೊಗದವಾಣಿಯೆಂದೊ, ಯಾರ ರಸಿಕಪುತ್ರರು ತಮ್ಮ ತಾಯನ್ನು ಪ್ರೀತಿಯಿಂದ ಕರೆದರೊ ಆ ಗ್ರಾಮ ಮಕ್ಕಳನ್ನು ಕಳೆದುಕೊಂಡ ತಾಯಾಗಿ ಖಿನ್ನವಾಗಿದೆ, ಸ್ತಬ್ಧವಾಗಿದೆ. ಎಡಪಕ್ಕದ ಹೊನ್ನ ಜೋಳಿಗೆಯ ಸೀಮೆಯಲ್ಲಿ ಮಿಡಿಯುತ್ತಿರುವ ಜನ ಜೀವನದ ನಾಡಿಯಗತಿ ಇಲ್ಲಿಯವರೆಗೆ ನಿಲುಕಲಾರದೆ ಮಧ್ಯೆಸೋತು ನಿಂತಿದೆ. ಇಲ್ಲಿ ಸುರಿಯುವ ಸಿರಿಯನ್ನು ಆರಿಸುವ ಕೈಇಲ್ಲ; ಇಲ್ಲಿಯ ವನದ ಸೊಗಡನ್ನು ಹೀರುವ ಉಸಿರಿಲ್ಲ. ಇಲ್ಲಿಯ ವಾಣಿಯ ಸೊಗವನ್ನು ಕೇಳಿ ನಲಿಯುವ ಕಿವಿಇಲ್ಲ, ಎದೆಇಲ್ಲ.

ಹೃದಯವನ್ನು ಔಕುವ ಈ ಪ್ರಾಂತ್ಯದ ಈ ವಿಜನತೆ ಈಗ ನೂರು ವರ್ಷಗಳಿಂದ ಇತ್ತೀಚಿನದು. ಈಗ್ಗೆ ನೂರ ಐವತ್ತು ವರ್ಷಗಳ ಹಿಂದೆ ಈ ನಾಡು ಬಿದನೂರ ನಾಯಕರ ಆಡಳಿತದಲ್ಲಿದ್ದಿತು. ಆಗ್ಗೆ ಈ ಗ್ರಾಮ ಗಳು ತುಂಬಿ ಬಾಳುತ್ತಿದ್ದವು. ಈ ಗದ್ದೆಗಳ ಹಂತ ಪಯಿರಿಂದ ಮೆರೆದವು. ಇವೇ ವನಗಳು ಒಂದು ಜನತೆಯ ತುಂಬು ಜೀವನದ ಕಳೆಯಿಂದ ಸುಖದ ಆವಾಸಗಳಾಗಿದ್ದವು. ಬಾಡಿದ ಹೂವಿನ ಕಂಪಿ ನಂತೆ ಹೃದಯದಲ್ಲಿ ಖೇದವನ್ನು ಮೆದಲಿಸುವ ಈ ಊರ ಹೆಸರುಗಳು ಸಜೀವಗಳಾದ ಗ್ರಾಮುಗಳನ್ನು ನಿರ್ದೇಶಿಸಿ ಮೆರೆಯುತ್ತಿದ್ದವು. ನಮ್ಮ ನಾಡು ಎಂಬ ಮಮತೆಯಿಂದ, ನಾಡು ನಮ್ಮದು ಎಂಬ ಹೆಮ್ಮೆಯಿಂದ, ಉಬ್ಬಿ ನಡೆದಾಡಿದ ರೈತ ಜೀತಗಾರ ನಾಡಿಗ ಹೆಗ್ಗಡೆಗಳು ಇಲ್ಲಿ ಸಂಪತ್ತನ್ನು ಬೆಳೆದು ಅಳೆಯುತ್ತಿದ್ದರು. ಬಿದನೂರಿನ ನಾಯಕರಿಗೆ ಇಷ್ಟುಷ್ಟು ತೆರಿಗೆಯನ್ನು ಸಲ್ಲಿಸಿ ಹೊರಗಣ ಕಿರುಕುಳ ಏನು ಎಂಬುದನ್ನು ಕಾಣದೆ ಆ ಜನಸ್ತೋಮ ತಾಯಮಡಿಲ ಮಗುವಿನಂತೆ ಸೌಮ್ಯವಾಗಿ, ಶಾಂತವಾಗಿ, ನಿರ್ಭೀತವಾಗಿ, ಧೀರವಾಗಿ, ತನ್ನದೆ ಆದ ಒಂದು ಜೀವನ ವನ್ನು ತಲೆಯೆತ್ತಿ ನಡೆಸುತ್ತಿದ್ದಿತು.

## ೨

ಶಾಲೀವಾಹನ ಶಕ ೧೬೪೪ರ ವಿಷುಸಂವತ್ಸರ ಫಾಲ್ಗುಣಮಾಸದ ಬೆಳುದಿಂಗಳ ದಿವಸದಲ್ಲಿ ದತ್ತಾತ್ರೇಯ ಪೀಠದ ಬದಿಯ ಗಾಳೀಕೆರೆಯ ಪಕ್ಕದಲ್ಲಿ ರಾಜಬೀಡಾರವೊಂದು ಏರ್ಪಟ್ಟಿದ್ದಿತು. ಅದನ್ನು ಬಿದನೂರ ನಾಯಕರ ಮನೆವಾರ್ತೆಯ ಮಂದಿ ಆ ಹತ್ತುದಿನದಲ್ಲಿ ಆತುರದಿಂದ ಕಟ್ಟಿ ಸಜ್ಜುಮಾಡಿಸಿದ್ದರು. ಹತ್ತಿರದ ಹತ್ತೂಗ್ರಾಮದ ಜೀತ ತಮ್ಮ ಸಂಸ್ಥಾನದ ನಾಯಕ ಮನೆತನದ ಸೇವೆಮಾಡುವ ಸಂತೋಷದಿಂದ ಈ ಕೆಲಸದಲ್ಲಿ ಉತ್ಸಾಹದಿಂದ ನೆರವಾಗಿದ್ದಿತು. ಉಳಿದ ಗ್ರಾಮಗಳಿಗಿಂತ ಹೆಚ್ಚಿನ ಒಂದು ಉತ್ಸಾಹದಿಂದ ವಸ್ತಾರೆಯ ಜನ ಈ ಕೆಲಸದಲ್ಲಿ ಭಾಗ ವಹಿಸಿದ್ದರು. ವಸ್ತಾರೆಯ ಹೆಗ್ಗಡಿತಿ ನಾಯಕ ಮನೆತನಕ್ಕೆ ಹತ್ತಿರದ ನಂಟು. ರಾಜಬೀಡಾರ ಕ್ಷಿಪ್ರದಲ್ಲಿ ಸಿದ್ಧವಾಗಬೇಕಾಗಿ ಇದ್ದದರಿಂದ ಹೆಗ್ಗಡಿತಿ ಹೆಚ್ಚಿನ ಜನವನ್ನು ಕಳುಹಿಸಿಕೊಟ್ಟು ರಾಜಕುಟುಂಬ ಅಲ್ಲಿಗೆ ಬರುವುದಕ್ಕೆ ಐದುದಿನ ಮುಂದಾಗಿಯೆ ಎಲ್ಲ ಸಿದ್ಧವಾಗಿರುವಂತೆ ಏರ್ಪಡಿಸಿದ್ದಳು.

ಎಲ್ಲ ಏರ್ಪಾಡಿಗೆ ಕಾರಣ, ತರುಣನಾಯಕ ಚೆನ್ನಬಸವನ ರಾಣಿ ಶಾಂತವ್ವ ಗಂಡನ ಜೀವನದಲ್ಲಿ ಇದ್ದ ಅನಿಷ್ಟದ ಪರಿಹಾರಕ್ಕಾಗಿ ದತ್ತಾತ್ರೇಯನ ಪೀಠಕ್ಕೆ ಯಾತ್ರೆಬರಲು ನಿಶ್ಚಯಿಸಿದ್ದದ್ದು. ಬಿದನೂರಿನ ನಾಯಕ ಬಸಪ್ಪ ವರ್ಷಅರ್ಧದ ಹಿಂದೆ ಶಿವಾಧೀನ ಆಗಿದ್ದನು. ಅವನ ಉತ್ತರಾಧಿಕಾರಿ ಮಗ ಚೆನ್ನಬಸವ. ಚೆನ್ನಬಸವ ಬಸಪ್ಪನಾಯಕನ ಎರಡನೆಯ ರಾಣಿ ವೀರಮ್ಮಾಜಿಯ ಮಗ. ವೀರಮ್ಮಾಜಿಯನ್ನು ಮದುವೆಯಾಗುವಾಗ್ಗೆ ಬಸಪ್ಪನಾಯಕನಿಗೆ ನಲವತ್ತುವರ್ಷಕ್ಕೆ ಮೀರಿದ ವಯಸ್ಸಾಗಿದ್ದಿತು. ಹದಿನೈದು ವರ್ಷದ ಕಿರಿಯರಾಣಿ ಗಂಡನೊಂದಿಗೆ ಕೆಲವುಕಾಲ ಚೆನ್ನವಾಗಿಯೆ ಬಾಳಿದಳು. ಚೆನ್ನಬಸವ ಹುಟ್ಟಿ ಹತ್ತು ವರ್ಷದ ಹುಡುಗನಾದನು. ಆ ವೇಳೆಗೆ ರಾಜಮನೆತನದ ಸಂತೋಷ ಸ್ವಲ್ಪವೇನೊ ಕುಗ್ಗಿತು. ಸಂಸಾರದಲ್ಲಿ ಯಾವುದೊ ವಿಷದ ಬೀಜ ನೆಟ್ಟಂತೆ ಕಂಡಿತು. ಅರಮನೆಯ ಮನೆವಾರ್ತೆಯಲ್ಲಿ ನಂಬಯ್ಯ ಎಂಬ

ಒಬ್ಬ ಯುವಕನು ಪ್ರಮುಖನಾಗಿದ್ದನು; ರಾಣಿ ಅವನಿಗೆ ಸ್ವಲ್ಪ ಹೆಚ್ಚಿನ ಸಲಿಗೆಯನ್ನು ಕೊಟ್ಟಳು ಎಂದು ಜನಕ್ಕೆ ತೋರಿತು. ಬಸಪ್ಪನಾಯಕನು ಇದನ್ನು ಬಲ್ಲನು. ಆದರೆ ಅವನದು ಬಹು ಹಿರಿಯ ಸ್ವಭಾವ. ಹೆಣ್ಣಿಗೆ ಗಂಡು ಇಂಥ ವಿಷಯದಲ್ಲಿ ಮುಖತಗ್ಗಿಸುವ ಮಾತನ್ನು ಹೇಳಸಲ್ಲ ಎಂದು ಅವನ ತಿಳಿವಳಿಕೆ. ಆದರೆ ಉಳಿದ ಜನ ಈ ವಿಷಯದಲ್ಲಿ ಇಂಥ ಸಹನೆಯನ್ನು ತೋರಿಸುವುದು ಸಾಧ್ಯವಲ್ಲ. ಉಳಿದ ಎಲ್ಲರಿಗಿಂತ ಹೆಚ್ಚಾಗಿ ಮಗ ಚೆನ್ನಬಸವನಿಗೆ ತಾಯಚರಿತೆಯ ಕಳಂಕ ತುಂಬ ಹೀನಾಯಕ್ಕೆ ಕಾರಣ ಎನಿಸಿತು. ಸಹಿಸಿಸಹಿಸಿ ಸುಮ್ಮನಿದ್ದು ಹದಿನಾಲ್ಕು ವರ್ಷದ ತರಳ ಒಂದು ದಿನ ಈ ಮಾತಿಗೆ ತಾಯನ್ನು ಬಯ್ದು ಒದರಿದನು. ವೀರಮ್ಮಾಜಿ ಇವನ ಒದರಾಟವನ್ನು ಹುಬ್ಬುಗಂಟಿಕ್ಕಿ ನೆಟ್ಟ ದೃಷ್ಟಿಯಿಂದ ಕೇಳಿದಳು. ಅವನ ಮಾತು ನಿಂತಮೇಲೆ, "ನನ್ನ ದಂಡಿಸುವಷ್ಟು ದೊಡ್ಡವನಾದೆಯಾಪ್ಪ ನೀನು? ಇದು ನನಗೆ ತಿಳಿದಿರಲಿಲ್ಲ. ನಿನ್ನ ಪಾಲಿಗೆ ನಿನ್ನ ತಂದೆ ಇಲ್ಲವಾದರೆ?" ಎಂದಳು. ಮಗ, "ಅವರು ನನ್ನ ಪಾಲಿಗಿದ್ದಾರೆ. ನಿಮ್ಮ ಪಾಲಿಗೆ ಇಲ್ಲ ಅಂತ ಕಾಣತಾ ಇದೆ," ಎಂದು ತಟ್ಟನೆ ಉತ್ತರಕೊಟ್ಟನು. ತನ್ನ ಮಾತು ಇಂಥ ಮರುಮಾತಿಗೆ ಎಡೆ ಕೊಡುತ್ತದೆಂದು ರಾಣಿಗೆ ತೋಚಿರಲಿಲ್ಲ. ಮಗನಾದರೂ ಮಾತಿನ ಚಮತ್ಕಾರಕ್ಕೆ ಹೀಗೆ ಹೇಳಿದವನಲ್ಲ. ಸಂದರ್ಭದಲ್ಲಿ ಪ್ರಶ್ನೆಗೆ ಉತ್ತರತಾನಾಗಿ ಬಂದಿತು. ರಾಣಿ ಮುಖಕೆಟ್ಟಳು; ಮಗನಿಗೆ ಉತ್ತರ ಹೇಳಲಿಲ್ಲ; ಬೇರೆಕಡೆಗೆ ಹೊರಟುಹೋದಳು. ಸ್ವಲ್ಪ ಹೊತ್ತಿನಮೇಲೆ ನಾಯಕನ ಹತ್ತಿರ ಕುಳಿತು ಕಣ್ಣೀರು ಹಾಕುತ್ತ, "ನೀವು ಹೇಳುವ ಮಾತಿದ್ದರೆ ನೇರವಾಗಿ ನನಗೆ ಹೇಳೋದು ಬಿಟ್ಟು ಮಗನ ಕೈಲಿ ಯಾಕೆ ನನ್ನನ್ನ ಬೈಸಿದಿರಿ?" ಎಂದಳು. ಮಗ ತಾಯನ್ನು ಗದ್ದರಿಸಿ ಮಾತನಾಡಿದ್ದಾನೆಂದು ನಾಯಕನಿಗೆ ಆ ಮೊದಲು ತಿಳಿದಿತ್ತು. ಅವನು ರಾಣಿಗೆ, "ಅರಿಯದ ಹುಡುಗ, ಏನೋ ಮನಕ್ಕೆ ಬೇನೆ ಆಗಿ, ಎಂಥದೊ ಒದರಿದ್ದಾನೆ. ತಾಯಿ ಅದನ್ನ ಕೇಳಲಿಲ್ಲಾ ಅಂತ ಇದ್ದುಬಿಡಬೇಕು," ಎಂದು ಸಮಾಧಾನಹೇಳಿದನು. ಆಮೇಲೆ ಮಗನನ್ನು ಹತ್ತಿರಕ್ಕೆ ಕರೆದು, "ಅಪ್ಪಾಜಿ, ಜನ ತೆಗಳಿತೂಅಂತ ತಾಯನ್ನ ಮಗನೂ ತೆಗಳೋದು ಬಾರದು. ಮನೆ ತಾಯಿ ಮನೆದೇವಿ,"

ಎಂದು ಬುದ್ಧಿಹೇಳಿದನು. ಚಿನ್ನಬಸವ, "ತಾಯಿ ದೇವಿ ಆಗಿದ್ದರೆ ನಾನು ಯಾಕೆ ಬಾಯಿ ತೆರೀತಿದ್ದೆ ? ನಡೀತಿದ್ದರೆ ಜನಾ ನನ್ನನ್ನ ಅದೇನು ನಿಟ್ಟಿಸಿನೋಡುತಾರೆ, ಇವನ ತಾಯಿ ಹೀಗೇಂತ ! ಕಣ್ಣಿಗೆ ಕಣ್‌ಕೊಟ್ಟು ನಿಲ್ಲುವಂತಿಲ್ಲ, ಈ ತಾಯಿ ಹೆತ್ತಮಗ," ಎಂದನು. ತಂದೆ ಮಾತನ್ನು ಬೆಳೆಸಲಿಲ್ಲ. ಇದಾದಮೇಲೆ ಒಂದು ಸಲ ಚಿನ್ನಬಸವ, ಅರಮನೆಯ ವ್ಯವಹಾರದಲ್ಲಿ ನಂಬಯ್ಯ ಯಾವುದೊ ಸ್ವಾತಂತ್ರ್ಯವಹಿಸಿದಾಗ, ಹತ್ತಿರಿದ್ದ ಸೇವಕನ ಕೈಯಿಂದ ಒಂದು ಕೋಲನ್ನು ತೆಗೆದುಕೊಂಡು ನಂಬಯ್ಯನಿಗೆ ಅದರಿಂದ ಎರಡು ಪೆಟ್ಟನ್ನೇ ಕೊಟ್ಟನು. ಕೋಪಕ್ಕೆ ಕಾರಣ ಇದ್ದಿರಬಹುದು: ಆದರೆ ಅದು ಮೇರೆಯನ್ನು ಮೀರುವ ಜಾತಿಯ ಕೋಪ. ಇದು ತರುಣನ ಸ್ವಭಾವದಲ್ಲೇ ಇದ್ದ ಕುಂದು. ರಾಣಿಯ ವಿಷಯಃವಾಗಿ ಅಸಮಾಧಾನಪಡುತ್ತಿದ್ದವರು ಕೂಡ ಇವನ ಈ ಕ್ರೂರ ವರ್ತನೆಯನ್ನು ಒಪ್ಪಲಿಲ್ಲ. ತೆಪ್ಪನೆ ಇದ್ದ ಮಾತನ್ನು ಇವನು ಎಬ್ಬಿಸಿದನು. ಮೊದಲು ಯಾರೊ ನಾಲ್ಕು ಜನ ಆಡಿಕೊಳ್ಳುತ್ತಿದ್ದ ಪಿಸುಮಾತು ಈಗ ಎಲ್ಲಕಡೆಯ ಗುಜುಗುಂಪಲಾಯಿತು.

ನಾಯಕನಿಗೆ ಮಗನೆಂದರೆ ಹಿಡಿಸಲಾರದ ಅಕ್ಕರೆ. ರೋಗದಿಂದ ತಾನು ಹಾಸಿಗೆ ಹಿಡಿದ ಸ್ವಲ್ಪ ದಿನದಲ್ಲಿ ಅವನು ಮಗನಿಗೆ ಪಟ್ಟಕಟ್ಟಿಸಿಬಿಡುವುದು ಎಂದು ಯೋಚಿಸಿದ್ದನು. ತಂದೆಯಿರುತ್ತ ಮಗನಿಗೆ ಪಟ್ಟಕಟ್ಟುವುದು ಅವಲಕ್ಷಣ ಎಂದು ವೀರಮ್ಮಾಜಿ ಅದಕ್ಕೆ ಅಡ್ಡಿಮಾಡಿದ್ದಳು. ಈಗ ತಾಯಿಗೆ ಮಗನಿಗೆ ಈ ಜಗಳಗಳಾದಮೇಲೆ ನಾಯಕನಿಗೆ ಮಗನ ವಿಷಯದಲ್ಲಿ ಶಂಕೆಹೆಚ್ಚಿತು. ಈ ಹುಡುಗ ಹೆತ್ತತಾಯನ್ನು ಹಗೆಮಾಡಿಕೊಂಡನೇ ! ಅರಮನೆಯ ಮನೆವಾರ್ತೆಯವನನ್ನು ಮೇಲೆಹಾಕಿಕೊಂಡನೇ ! ಮುಂದೆ ಇವನಿಗೆ ಒದಗುವ ಜನ ಯಾರು ? ಇದು ಅವನ ಚಿಂತೆ. ಇದರ ಪರಿಣಾಮವಾಗಿ ನಾಯಕನು ಮಗನಿಗೆ ಊರ ಮುಖಂಡ, ಸಾಹುಕಾರ ನೇಮಯ್ಯನ ತಮ್ಮನ ಮಗಳು ಶಾಂತವ್ವನನ್ನು ತಂದು ಮದುವೆಮಾಡುವುದು ಎಂದು ನಿಶ್ಚಯಿಸಿಕೊಂಡನು. ಮಗನಿಗೆ ಈ ಹುಡುಗಿಯನ್ನು ತರುವುದು ವೀರಮ್ಮಾಜಿಗೆ ಇಷ್ಟವಿಲ್ಲ. ಅವಳು ತನ್ನ ನಂಟರಲ್ಲಿ ಒಂದು ಹುಡುಗಿಯನ್ನು ತರಬೇಕೆಂದು ಯೋಚಿಸಿದ್ದಳು.

ಮಧ್ಯೆ ಈ ಸಂಬಂಧದ ಮಾತುಬಂದಿತು. ಚರ್ಚೆಗೆ ಅವಕಾಶಕೊಟ್ಟರೆ ತನ್ನ ಇಷ್ಟನಡೆಯದೆ ಹೋಗಬಹುದು ಎಂಬ ಕಾರಣದಿಂದ ನಾಯಕನು ಎಲ್ಲರನ್ನೂ ಆತುರಪಡಿಸಿ ಈ ಮದುವೆಯನ್ನು ನಡೆಸಿಯೇ ಬಿಟ್ಟನು. ನೇಮಯ್ಯ ರಾಜನ ಹಿತಚಿಂತಕ; ನಿಷ್ಕಲ್ಮಷ ಸ್ವಭಾವದ ಹಿರಿಯಜೀವ. ಅವನು ಮಗನ ಪಕ್ಷದಲ್ಲಿದ್ದರೆ ಊರೆಲ್ಲ ಇದ್ದಹಾಗೆ, ರಾಣಿಯಿಂದ ಏನೂ ಕೆಡಕು ತಾಕಲಾರದು, ಎಂದು ನಾಯಕನ ನಂಬಿಕೆ. ಈ ಸಮಾಧಾನ ದಲ್ಲಿ ಒಂದು ವರ್ಷಇದ್ದು ಅವನು ತೀರಿಕೊಂಡಿದ್ದನು.

೩

ಅರಮನೆಯ ವ್ಯವಹಾರದಲ್ಲಿ ನಂಬಯ್ಯ ಪ್ರಮುಖನಾಗುವುದಕ್ಕೆ ಮೊದಲು ನಾಯಕನ ಹತ್ತಿರ ಲಿಂಗಣ್ಣಯ್ಯ ಎಂಬ ಬ್ರಾಹ್ಮಣ ಪ್ರಬಲ ನಾಗಿದ್ದನು: ನಂಬಯ್ಯ ಮುಂದಾದನೇಲೆ ಇವನು ಸಂಸ್ಥಾನದ ಆಡಳಿತದ ಮಂತ್ರಿಯಾಗಿ ನಡೆದುಕೊಳ್ಳುತ್ತಿದ್ದನು. ಅರಮನೆಯಲ್ಲಿ ತಾಯಿ ಮಕ್ಕಳ ಮಧ್ಯೆ ಜಗಳಬಂದ ಹೊತ್ತಿನಲ್ಲಿ ಲಿಂಗಣ್ಣಯ್ಯ ಚೆನ್ನಬಸವ ನಾಯಕನಿಗೆ ಒತ್ತಾಸೆಯಾಗಿ ಮಾತನಾಡಿದ್ದನು. ನಂಬಯ್ಯನ ಇವನ ಮಧ್ಯದಲ್ಲಿ ತೀರಸಹಜವಾಗಿ ಅಸೂಯೆ ಬೆಳೆದಿದ್ದಿತು. ನಂಬಯ್ಯನಿಗೆ ಪೆಟ್ಟುಬಿದ್ದ ಸಂದರ್ಭದಲ್ಲಿ ಲಿಂಗಣ್ಣಯ್ಯ ತರುಣನಾಯಕ ಮಾಡಿದ್ದು ಸರಿ ಎಂದು ಸಾಧಿಸಿದನು. ಬಸಪ್ಪನಾಯಕನಿಗೆ ಇವನಮೇಲೆ ಪೂರ್ಣ ವಿಶ್ವಾಸ. ನೇಮಯ್ಯನ ಮಗಳನ್ನು ಸೊಸೆಯಾಗಿ ತಂದುಕೊಳ್ಳುವುದೆಂಬ ಸೂಚನೆ ಕೂಡ ಮೊದಲಲ್ಲಿ ಲಿಂಗಣ್ಣಯ್ಯನದೇ. ರಾಣಿ ಇದನ್ನೆಲ್ಲ ಬಲ್ಲಳು. ಅವಳೂ ನಂಬಯ್ಯನೂ ಅವನನ್ನು ಅವನ ಸ್ಥಾನದಿಂದ ಹೊತ್ತುಹಾಕಬೇಕೆಂದು ಹಲವುಸಲ ಯತ್ನಿಸಿದರು. ನಾಯಕನು ಆ ವಿಷಯದಲ್ಲಿ ಅವರಿಗೆ ಸಗ್ಗಲಿಲ್ಲ. ತಪ್ಪಿನಡೆಯುವ ಹೆಂಡತಿಯನ್ನು ಆ ತಪ್ಪಿನಷ್ಟಕ್ಕೆ ಅಡ್ಡಿಮಾಡದೆ ಬಿಡುವ ಗಂಡ ಉಳಿದ ವಿಷಯದಲ್ಲಿ ತನ್ನ ಇಚ್ಛೆಯಂತೆ ನಡೆಯುವೆನೆನ್ನುವುದು ಸಹಜ ಮನೋಧರ್ಮ. ನಾಯಕನು ತುಂಬ ಕಾಯಿಲೆ ಇರುವಾಗ ಅರಮನೆಯ ಒಡವೆ ಕೆಲವದರ

ವಿಷಯ ಹೆಚ್ಚುಕಡಮೆ ಬಂದಿದೆ ಎಂಬ ಮಾತನ್ನೆತ್ತಿ ರಾಣಿ ಲಿಂಗಣ್ಣಯ್ಯನ ಮೇಲೆ ತಪ್ಪನ್ನು ಹೊರಿಸಿದಳು. ನಗರದ ಸುಂಕದ ಕಟ್ಟೆಯ ಆಡಳಿತದಲ್ಲಿ ಲಿಂಗಣ್ಣಯ್ಯ ಹಣ ತಿಂದುಹಾಕಿದಾನೆ ಎಂದು ಒಂದು ಚಾಡಿಬಂದಿತು; ರಾಣಿ ಅದನ್ನು ಹಿಡಿದುಕೊಂಡಳು, ಲಿಂಗಣ್ಣಯ್ಯನನ್ನು ವಿಚಾರಣೆಗೆ ಗುರಿಮಾಡಿದಳು. ಇದೆಲ್ಲದರ ಕಾರಣ ಅವನು ಚೆನ್ನಬಸವನಿಗೆ ಒತ್ತಾಸೆಯಾಗಿ ನಿಂತಿದಾನೆ ಎನ್ನುವುದು. ನಾಯಕ ತೀರಿಕೊಳ್ಳುವುದಕ್ಕೆ ಬಹುದಿನ ಇರಲಿಲ್ಲ. ಆಗ ರಾಣಿ ಲಿಂಗಣ್ಣಯ್ಯ ತಪ್ಪಿತಸ್ಥನೆಂದು ನಿಶ್ಚಯಮಾಡಿ ಅವನನ್ನು ಕೆಲಸದಿಂದ ತೆಗೆದು, ಅವನು ಕದ್ದಿದ್ದ ಒಡವೆಗಳನ್ನೂ ತಿಂದಿದ್ದ ಹಣವನ್ನೂ ತಂದುಕೊಡುವವರೆಗೆ ಅವನನ್ನು ಸೆರೆಯಲ್ಲಿಡುವುದೆಂದು ಆಜ್ಞೆಮಾಡಿದಳು. ಬಸಪ್ಪ ನಾಯಕನು ಕಣ್ಣುಮುಚ್ಚಿಕೊಳ್ಳುವ ತರುಣದಲ್ಲಿ ಲಿಂಗಣ್ಣಯ್ಯ ಕುಂಸಿಯಲ್ಲಿ ಬಂದಿಯಾದನು.

ಲಿಂಗಣ್ಣಯ್ಯನ ಈ ದುರವಸ್ಥೆಗೆ ಅವನು ತನ್ನ ಪಕ್ಷವಾಗಿರುವುದು ಕಾರಣ ಎಂದು ಚೆನ್ನಬಸವನಾಯಕನಿಗೆ ತೀರ ನಿಶ್ಚಯ. ಅವನು, ಲಿಂಗಣ್ಣಯ್ಯನಮೇಲೆ ಹೊರಿಸಿರುವ ದೂರು ಸುಳ್ಳು ಎಂದು ತೋರಿಸಲು ಯತ್ನಮಾಡಿದನು; ಆ ಯತ್ನ ಊರ್ಜಿತವಾಗಲಿಲ್ಲ. ಅವನನ್ನು ಸೆರೆಗೆ ಹಾಕಕೂಡದು ಎಂದು ಅಡ್ಡಿಮಾಡಿದನು; ಅಡ್ಡಿ ಲಕ್ಷ್ಯಕ್ಕೆ ಬರಲಿಲ್ಲ. ಲಿಂಗಣ್ಣಯ್ಯನಮೇಲೆ ತಪ್ಪುಹೊತ್ತು ಅವನು ಬಂದಿಯಾದದ್ದು ತರುಣ ನಾಯಕನಿಗೆ ಸ್ವತಃ ಅನುಭವಿಸಿದ ಒಂದು ಹೀನಾಯ ಎನ್ನಿಸಿತು. ತಂದೆ ತೀರಿಕೊಂಡಾಗ ಮಗ ತುಂಬ ಬೇಸರದಿಂದ ಯಾವುದರಲ್ಲೂ ಮನಸ್ಸಿಲ್ಲದೆ ವ್ಯವಹಾರ ವಿಮುಖನಾಗಿ ತಟಸ್ಥನಾಗಿದ್ದನು. ಕೆಲವು ದಿನ ಕಳೆದು ರಾಣಿ ಮಗನ ಪಟ್ಟದ ಮಾತು ಎತ್ತುವಳೆಂದು ಊರ ಹಿರಿಯರೆಲ್ಲ ನಿರೀಕ್ಷಿಸುತ್ತಿದ್ದರು ಆದರೆ ಅವಳು ಆ ಮಾತನ್ನು ಎತ್ತಲಿಲ್ಲ. ಊರ ಜನದ ಪರವಾಗಿ ಮಾತನಾಡುವುದಾದರೆ ನೇಮಯ್ಯ ಮಾತನಾಡಬೇಕು. ಅವನು ನಾಯಕನಿಗೆ ಹೆಣ್ಣುಕೊಟ್ಟ ಮಾವ; ಈ ಮಾತನ್ನು ತಾನು ಹೇಗೆ ಎತ್ತುವುದು ಎಂದು ಸುಮ್ಮನಿದ್ದನು. ಮಂತ್ರಿಯಾಗಿದ್ದು ಈ ಮಾತನ್ನೆತ್ತುವವನೆಂದರೆ ಲಿಂಗಣ್ಣಯ್ಯ. ಅವನು ಸೆರೆಯಲ್ಲಿದ್ದನು.

ಮಂತ್ರಿ ಅಲ್ಲದೆ ಲಿಂಗಣ್ಣಯ್ಯನ ಪ್ರತಿನಿಧಿಯಾಗಿ ಮಾತನಾಡಬಹುದೆಂದರೆ ರಾಮಾಶಾಸ್ತ್ರಿ ಎಂಬ ಮಠಮುದ್ರೆ ಬ್ರಾಹ್ಮಣ. ಅವನು ಒಂದೆರಡುಸಲ ಈ ಪ್ರಸ್ತಾಪವನ್ನು ಎತ್ತಲು ನೋಡಿದನು; ರಾಣಿ ಅವನಿಗೆ ಅವಕಾಶ ಕೊಡಲಿಲ್ಲ. ಇನ್ನು ಈ ವಿಷಯದಲ್ಲಿ ಆಸಕ್ತಿವಹಿಸಬಹುದಾದರೆ ಚಿನ್ನಬಸವನಾಯಕ ತಾನೆ ವಹಿಸಬೇಕು. ಅವನು ತನ್ನ ಮನಸ್ಸೇನೆಂದು ಯಾರಿಗೂ ಸುಳಿವುಕೊಡದೆ ತನ್ನಂತೆ ತಾನು ಸುಮ್ಮನೆ ಇದ್ದುಬಿಟ್ಟನು.

ಚಿನ್ನಬಸವ ನಾಯಕನ ನಡೆನುಡಿ ಅವನ ಹತ್ತಿರದ ಜನಕ್ಕೇ ಅರ್ಥವಾಗನಂತೆ ಇದ್ದಿತು. ಅವನು ಬಹುದಿಟ್ಟದ ತರುಣ. ಅರಮನೆಯ ಗರಡಿಯಲ್ಲಿ ಮೈಮುರಿದು ವ್ಯಾಯಾಮ ಮಾಡಿ ಹದಿನೆಂಟು ವರ್ಷದ ಯುವಕ ಹೊನ್ನ ಅಲಗಿನಂತೆ ಕಾಣುತ್ತಿದ್ದನು. ಸ್ವಭಾವದಿಂದ ಅವನು ಸದಾ ಏನನ್ನಾದರೂ ಮಾಡುತ್ತಿರಬೇಕು. ಸಣ್ಣ ಹುಡುಗನಾಗಿದ್ದಾಗ ಮರವನ್ನೋ ಗೋಡೆಯನ್ನೋ ಏರಿ ಬೀಳಬೇಕು; ಹಳ್ಳಕ್ಕೆ, ಬಾವಿಯ ನೀರೊಳಕ್ಕೆ ದುಮುಕಬೇಕು; ಕಲ್ಲೆತ್ತಿ, ಚೆಂಡೆತ್ತಿ ಎಸೆಯಬೇಕು; ಕೋಲಿಂದ ಕತ್ತಿಯ ವರಸೆ ಆಡಬೇಕು. ವಯಸ್ಸು ಬಂದಂತೆ ಅವನು ಊರ ಗರಡಿಗಳಲೆಲ್ಲ ಜಟ್ಟಿಗಳ ಅಭ್ಯಾಸವನ್ನು ನೋಡುವನು. ಎಲ್ಲಿ ಒಂದು ಹುಲಿಯ ಬೇಟೆ ನಡೆದರೆ ಅಲ್ಲಿ ಹೋಗಿ ಬೇಟೆಯಲ್ಲಿ ಸೇರುವನು; ನಾಯಿಗಿಂತ ಮುಂದಾಗಿ ಹುಲಿಯ ಮೇಲೆ ಬೀಳುವನು. ಅವನಿಗೆ ಕಾಡು ಎಂದರೆ ಭಯವಿಲ್ಲ; ಜೀವದ ಮೇಲೆ ಬೆಲೆಯಿಲ್ಲ. ತಂದೆ ಹಾಸಿಗೆ ಹಿಡಿದಿದ್ದ ದಿನದಲ್ಲಿ ಅವನು ಮೇಲೆ ಒಂದು ಬಟ್ಟೆಯನ್ನು ಹಾಕಿಕೊಂಡು, ಕೈಯಲ್ಲಿ ಒಂದು ಕೋವಿ ಹಿಡಿದು, ಜೊತೆಗೆ ಒಬ್ಬ ಆಳನ್ನು ಕರೆದ. ಕೊಂಡೊ ಯಾರನ್ನೂ ಕರೆದುಕೊಳ್ಳದೆಯೊ, ಕಾಡಿಗೆ ಹೊರಟುಹೋಗುವನು: ಎಂದು ಬಂದರೂ ಬಂದ. ತಂದೆ ತೀರಿಕೊಂಡು ಪಟ್ಟವಾಗುವುದು ತಡವಾದಾಗ ಇವನ ಈ ಪ್ರವೃತ್ತಿ ಪ್ರಬಲವಾಯಿತು. ತಿಂಗಳಲ್ಲಿ ಹದಿನೈದು ದಿನ ಇಪ್ಪತ್ತು ದಿನ ತರುಣ ಅರಮನೆಯಲ್ಲಿ ಇರುತ್ತಿರಲಿಲ್ಲ. ಅವನು ಅಲ್ಲಿ ಇಲ್ಲವೆಂದೇ ಬಹು ಜನಕ್ಕೆ ತಿಳಿಯದು; ಎಲ್ಲಿದಾನೆ ಎಂದು ಯಾರೂ ಕಾಣರು.

೪

ಸಂಸ್ಥಾನದ ನಾಯಕಮನೆತನದ ಜೀವನದ ಈ ಸನ್ನಿವೇಶದಲ್ಲಿ ಈಗ ಶಾಂತವ್ವ ಪೀಠಕ್ಕೆ ಯಾತ್ರೆ ಬರುವುದರಲ್ಲಿದ್ದಳು. ತಂದೆ ತೀರಿಕೊಂಡರೆ ಮಗ ರಾಜನಾಗುವುದು ಅದೆಷ್ಟೋ ಸಹಜವಾಗಿ ಸರಾಗವಾಗಿ ನಡೆಯಬೇಕಾದ ಸಂಗತಿ. ತನ್ನ ಗಂಡನ ಪಾಲಿಗೆ ಇಂಥ ಸರಾಗವಾದ ವ್ಯಾಪಾರ ಹೀಗೆ ಸಾವಕಾಶವಾಗಬೇಕೇ ಎಂದು ಅವಳು ಬಹಳವಾಗಿ ಮನನೊಂದಳು, ಪರಿತಪಿಸಿದಳು. ಇದೇನು, ತನ್ನ ದುರದೃಷ್ಟ ಅವನ ಬಾಳಿನ ಮೇಲೆ ಬೀಸಿದ ನೆರಳೋ? ಗಂಡನಾದರೂ ಎಲ್ಲರಂತೆ ರಾಜ ಕುಮಾರನಾಗಿ ಅರಮನೆಯಲ್ಲಿ ಬಾಳಬಾರದೆ? ಸಾಹಸ ಇಲ್ಲದೆ ಅವನು ಸುಖ ಕಾಣಲೊಲ್ಲನು. ಅವನ ದಿನ ದಿನದ ಬಾಳುವೆಯೂ ಸಾವಿಗೆ ಸಂಚಕಾರವಾದರೆ ಈ ಹೆಂಡತಿಗೆ ಮನಸ್ಸಮಾಧಾನ ಎಲ್ಲಿಯದು? “ದೇವರೆ, ಈ ನನ್ನ ಅರಸನನ್ನು ಕಾಪಾಡಿಕೊಡು. ಇವನಿಗೆ ನ್ಯಾಯವಾಗಿ ದೊರೆಯಬೇಕಾದ ಪದವಿಯನ್ನು ದೊರಕಿಸಿ ಕೊಡು. ನಿನ್ನ ಇಚ್ಛೆಯಿದ್ದರೆ ಇವನು ರಾಜನಾಗುವ ವೈಭವವನ್ನು ನೋಡುವ ಪುಣ್ಯವನ್ನು ನನಗೆ ಅನುಗ್ರಹಿಸು,” ಎಂದು ಅವಳು ದೈವವನ್ನು ಬೇಡಿಕೊಂಡಳು. ಅವಳ ಮನೆತನ ಬಲ್ಲಾಳ ರಾಜರದು. ಆ ಬುಡಕಟ್ಟಿನ ರಾಯನೊಬ್ಬನು ನೇಮಯ್ಯನ ವಂಶದ ಹಿರಿಯ; ಆತ ದತ್ತಾತ್ರೇಯ ಪೀಠದಲ್ಲಿ ಸಿದ್ಧಿಯನ್ನು ಐದಿದನೆಂದು ಕುಟುಂಬದಲ್ಲಿ ಪ್ರತೀತಿ. ಈಗಲೂ ಆ ಹಿರಿಯ ಜೀವದ ತಪಸ್ಸು ಮನೆತನವನ್ನು ರಕ್ಷಿಸುತ್ತಿದೆಯೆಂದು ಇವರೆಲ್ಲರ ನಂಬಿಕೆ. ನೇಮಯ್ಯನ ಹಿರಿಯ ತಂದೆ ಒಬ್ಬಾತ ಈಗಲೂ ಆ ಸುತ್ತಿನಲ್ಲಿ ತಪಸ್ಸು ಮಾಡುತ್ತಿದ್ದನು. ದತ್ತಾತ್ರೇಯನ ಪೀಠವೆಂಬ ಕಾರಣದಿಂದಲೂ ತಮ್ಮ ಹಿರಿಯರ ಸಿದ್ಧಿ ಮತ್ತು ತಪಸ್ಸಿನ ತಾಣವೆಂಬ ಕಾರಣದಿಂದಲೂ ಶಾಂತವ್ವ ತನ್ನ ಪ್ರಾಣೇಶನ ಜೀವನದಲ್ಲಿ ಇರಬಹುದಾದ ಅನಿಷ್ಟದ ನಿವಾರಣೆಗಾಗಿ ಈ ಸ್ಥಳಕ್ಕೆ ಬರಲು ನಿಶ್ಚಯಿಸಿದಳು.

ಅರಮನೆ ಇದ್ದ ಸ್ಥಿತಿಯಲ್ಲಿ ಇದರ ಏರ್ಪಾಡನ್ನು ಇವಳ ಅತ್ತೆ ಮಾಡುವಂತೆ ಇರಲಿಲ್ಲ. ಆದ್ದರಿಂದ ಇದರ ವಿವರವನ್ನೆಲ್ಲ ನೇಮಯ್ಯ

ಏರ್ಪಡಿಸಿದ್ದನು. ಯಾತ್ರೆ ನಡಸುವುದೆಂದು ನಿಶ್ಚಯಮಾಡಿಕೊಂಡ ಮೇಲೆ ಶಾಂತವ್ವ ಅದನ್ನು ಮೊದಲು ಗಂಡನಿಗೆ ತಿಳಿಸಿದಳು. ಅವನು ಅಡ್ಡಿಹೇಳಲಿಲ್ಲ. ಆಮೇಲೆ ಒಂದು ದಿನ ಅವಳು ಅದನ್ನು ಮೆಲ್ಲನೆ ಅತ್ತೆಗೆ ಬಿನ್ನವಿಸಿದಳು. ರಾಣಿ, "ಬೇಕಾದ ಕಡೆ ಹೋಗಿ ಬಾ. ನನಗೆ ಹೇಳಬೇಕಾದದ್ದೇನು?" ಎಂದಳು. ಗಂಡನಿಂದ ಅತ್ತೆಯಿಂದ ಶಾಂತವ್ವ ಇದಕ್ಕಿಂತ ಹೆಚ್ಚಿನ ಉತ್ಸಾಹದ ಉತ್ತರಗಳನ್ನು ನಿರೀಕ್ಷಿಸಿರಲಿಲ್ಲ. ಇದಾದ ಮೇಲೆ ಅವಳು ಉದ್ದೇಶವನ್ನು ನೇಮಯ್ಯನಿಗೆ ತಿಳಿಸಿದಳು. ಅವನು, "ಆಗತ್ಯ ಹೋಗಿ ಬಾ ತಾಯಿ. ನೀನು ನಿನ್ನ ತಾಯಿಯಂತೆ ತುಂಬ ಸಾಧು. ಭಕ್ತಿವಂತ ಹೆಣ್ಣುಮಗು. ನಿನಗೆ ಈ ಯೋಚನೆ ತೋರಿದ್ದು ಒಳ್ಳೇದಾಯಿತು. ನನ್ನಂತ ಮುದುಕರಿಗೆ ಕೂಡ ಈ ಬುದ್ಧಿ ಹುಟ್ಟುವುದಿಲ್ಲ ನೋಡು," ಎಂದನು. ನೇಮಯ್ಯನಿಂದ ಇಂಥ ಪ್ರೀತಿಯ ಮಾತುಗಳನ್ನು ಕೇಳುವುದು ಶಾಂತವ್ವನಿಗೆ ವಾಡಿಕೆ. ನಿಜದಲ್ಲಿ ಅವಳು ಈ ಪ್ರೀತಿಯಿಂದಲೆ ಬೆಳೆದಿದ್ದಳು. ಎಲ್ಲ ಹೊತ್ತಿನಲ್ಲೂ ದೊಡ್ಡಪ್ಪನ ಮನಸ್ಸಿಗೆ ಒಪ್ಪುವಂತೆ ನಡೆದುಕೊಳ್ಳಬೇಕೆನ್ನುವುದು ಅವಳ ಬಾಳಿನ ಗುರಿಯಾಗಿ ಪರಿಣಮಿಸಿದ್ದಿತು. "ನೀವೇ ಅಲ್ಲಿಗೆ ಇಬ್ಬರನ್ನು ಕಳುಹಿಸಿ ನಮ್ಮನ್ನು ನೋಡಿಕೊಳ್ಳುವ ಹಾಗೆ ಮಾಡಬೇಕು ಅಣ್ಣಯ್ಯ," ಎಂದು ಅವಳು ಹೇಳಿದಳು. ನೇಮಯ್ಯ, "ಮತ್ತೇನು ತಾಯಿ? ಮನೆ ಮಗು ಯಾತ್ರೆ ಹೋಗಬೇಕು ಅಂದರೆ ತೌರು ಏರ್ಪಾಡು ಮಾಡಬೇಕು. ಈ ಹೊತ್ತೆ ಹೇಳಿ ಕಳುಹಿಸುತ್ತೇನವ್ವ," ಎಂದನು. ಯಾತ್ರೆ ಹೊರಡಲು ದಿನ ವಾರ ಮುಂತಾದ್ದನ್ನು ನಿರ್ಣಯಿಸಿ ಕೆಲಸಕ್ಕೆ ತಕ್ಕ ಜನರನ್ನು ನೇಮಿಸಿದ್ದನು. ವಸ್ತಾರೆಯ ಹೆಗ್ಗಡಿತಿ ರಾಜಮನೆತನಕ್ಕೆ ನೆಂಟಳೆಂಬ ಕಾರಣದಿಂದ ಅವಳ ಬಳಿಗೆ ಸುದ್ದಿಯನ್ನಟ್ಟಿ ಅವಳ ಮೂಲಕ ಸಹಾಯ ಪಡೆದಿದ್ದನು.

ಹೊರಡುವ ಮೊದಲು ಶಾಂತವ್ವ ಗಂಡನನ್ನು, "ನೀವೂ ಬರುತ್ತೀರಾ?" ಎಂದು ಕೇಳಿದಳು. ಅವನು ಬರಬೇಕು ಎಂದು ಅವಳಿಗೆ ಆಶೆ. ಆದರೆ ಅದನ್ನು ಬಾಯಿಬಿಟ್ಟು ಹೇಳುವ ಪ್ರಕೃತಿ ಅಲ್ಲ. ಅವನು, "ಗಂಡಸರಿಗೆ ಯಾತರದು ಯಾತ್ರೆ? ಹೋಗೋಣ ಬರೋಣ ಅಂತ ಏನೂ ನನಗೆ ಅನ್ನಿಸುತ್ತಯಿಲ್ಲ. ಹೆಣ್ಣುಮಕ್ಕಳು ಹೋಗಿ ಬನ್ನಿರಿ,"

ಎಂದನು. ನಿರೀಕ್ಷಿಸಿದ್ದ ಉತ್ತರವಾದರೂ ಶಾಂತವ್ವನ ಜೀವಕ್ಕೆ ಇದನ್ನು ಕೇಳಿ ಅತೃಪ್ತಿ ಆಗದೆ ಹೋಗಲಿಲ್ಲ. ಅವಳು ಗಂಡನ ಮರುಮಾತನ್ನು ಮೌನದಿಂದ ಕೇಳಿದಳು; ಮನಸ್ಸಿನಲ್ಲಿ ಕುಗ್ಗಿದಳು; ಮುಖದಲ್ಲಿ ಕುಗ್ಗನ್ನು ತೋರಿಸಲಿಲ್ಲ. ಕ್ಷಣಬಿಟ್ಟು ನಾಯಕ ತಾನಾಗಿ, "ಆ ಹೊತ್ತಿಗೆ ಸರಿಯಾಗಿ ನಾನು ಬೇರೆ ಕಡೆ ಹೋಗಬೇಕಾಗಿದೆ. ಇಲ್ಲದಿದ್ದರೆ ಬರಬಹುದಾಗಿತ್ತು," ಎಂದನು. ಹೆಂಡತಿ ಎಂಬ ಕಾರಣದಿಂದ ನಾಯಕ ಇಷ್ಟು ದಾಕ್ಷಿಣ್ಯ ತೋರಿಸುವುದಕ್ಕೆ ಸಿದ್ಧವಾಗಿದ್ದನು. ಇಷ್ಟಾದರೂ ಸಾಕು ಎಂದು ಶಾಂತವ್ವ ಅದನ್ನು ಸಂತೋಷದಿಂದ ಸ್ವೀಕರಿಸಿದಳು.

ಮಾರನೆಯ ದಿನ ನಾಯಕ ತನ್ನ ಕೆಲಸದ ಮೇಲೆ ವಾಡಿಕೆಯಂತೆ ಒಬ್ಬ ಸೇವಕನೊಡನೆ ನಗರದಿಂದ ಹೊರಟನು. ಶಾಂತವ್ವ ಯಾತ್ರೆಗಾಗಿ ಇತ್ತ ಹೊರಟುಬಂದಳು.

೫

ಫಾಲ್ಗುಣ ಶುದ್ಧ ತ್ರಯೋದಶಿಯ ದಿನ ಶಾಂತವ್ವ ಕಲ್ಲಟ್ಟೆಯ ಕಡೆಯಿಂದ ಬೆಟ್ಟವನ್ನೇರಿ ತನ್ನ ರಾಜ ಬೀಡಾರಕ್ಕೆ ಬಂದಳು. ಅವಳು ಬರುವ ಹೊತ್ತಿಗೆ ಮುಂದಾಗಿ ವಸ್ತಾರೆಯ ಹೆಗ್ಗಡಿತಿ ತನ್ನ ಕರಣೀಕ ಜೀತದೊಡನೆ ಅಲ್ಲಿಗೆ ಬಂದಿದ್ದು ಕಿರಿಯ ರಾಣಿಯನ್ನು ಬರಮಾಡಿ ಕೊಂಡಳು. ಹೆಗ್ಗಡಿತಿ ತಕ್ಕಷ್ಟು ವಯಸ್ಸಾದ ಹೆಂಗಸು. ಅವಳು ತನಗೆ ಅತ್ತೆಯ ವರಿಸೆಯೆಂದು ಶಾಂತವ್ವ ತಿಳಿದಿದ್ದಳು. ಆದಕಾರಣ ಹತ್ತಿರ ಬಂದೊಡನೆ ಅವಳು ಮುದುಕಿಯ ಎದುರಿಗೆ ಬಾಗಿ ನಮಸ್ಕಾರ ಮಾಡಿ ದಳು. ಹೆಗ್ಗಡಿತಿ ಅವಳು ಮಾಡಿದ ನಮಸ್ಕಾರವನ್ನೊಪ್ಪಿಕೊಂಡು ಆಮೇಲೆ ಅವಳನ್ನು ಹಿಡಿದು ನಿಲ್ಲಿಸಿ ತನ್ನ ಗೌಡಿತಿಯನ್ನು ಕರೆದು, "ಕಾಣಿಕೆ ಒಪ್ಪಿಸು," ಎಂದಳು. ಹೆಗ್ಗಡಿತಿಯ ಕಡೆಯಿಂದ ಕಿರಿಯ ರಾಣಿಗೆ ಕಾಣಿಕೆ ಯನ್ನು ಸಲ್ಲಿಸಿದ್ದಾಯಿತು.

ಹೆಗ್ಗಡಿತಿ, "ರಾಣಿ ಬಂದು ನಮಗೆ ಮಣಿಯುವುದಾ ಅಂತ ನನಗೆ ನಾಚಿತು ತಾಯಿ. ಅಂದರೆ ಹರಯದ ಹೆಣ್ಣು ಹಿರಿಯರನ್ನು ಕಂಡೆ

ಅಂತ ಮಣಿದರೆ ಬೇಡ ಅನ್ನಬಾರದು. ಹಾಗೆಂತ ಸುಮ್ಮನಿದ್ದೆ. ನಿನ್ನ ತಾಯಿತಿ ಭದ್ರವಾಗಿರಲಿ, ಹೊಟ್ಟೇಲಿ ಮಕ್ಕಳಾಗಲಿ, ಅವರು ನೂರು ಕಾಲ ಬಾಳೋದನ್ನ ನಿನ್ನ ಮುಪ್ಪು ನೋಡಲಿ, ನನ್ನವ್ವ. ಇದು ಹಿರಿಯೋಳು ಅನ್ನೋ ಮಾತು. ನಮ್ಮೊಡತಿ ನೀವು ಇಲ್ಲಿ ಯಾತ್ರೆ ಬಂದದ್ದು ನಾಡಮಂದಿಗೆಲ್ಲ ತುಂಬ ಆನಂದ. ನಾಯಕರೂ ಬಂದಾರೇನೋ ಅಂತ ಎಲ್ಲರಿಗೂ ಆಶೆಯಿತ್ತು. ಜನ ಸೇರಿಬಿಟ್ಟಿದೆ, ಗೌಡ ಜೀತ ಎಲ್ಲ, ಒಡತೀಗೆ ಕೈಮುಗೀಬೇಕೂ ಅಂತ," ಎಂದಳು.

ಮನೆತನದ ಸ್ಥಿತಿಯನ್ನು ಹಿಡಿದು ಯೋಚಿಸಿದರೆ ಈ ಮಾತನ್ನೆಲ್ಲ ಯಾರಾದರೂ ಅಪಹಾಸ್ಯಕ್ಕೆ ಹೇಳಬಹುದಾಗಿದ್ದಿತು. ನಿಜದಲ್ಲಿ ಇದು ಹೆಗ್ಗಡಿತಿಯ ಶುದ್ಧವಾದ ಮನಸ್ಸಿನ ನುಡಿ. ಶಾಂತವ್ವ ಅದನ್ನು ಹಾಗೆಂದು ಒಪ್ಪಿಕೊಂಡಳು. ಹೆಗ್ಗಡಿತಿಯೊಂದಿಗೆ ಬೀಡಾರದೊಳಕ್ಕೆ ಹೋದಳು.

ಮರುದಿನ ಉದಯದಲ್ಲೆದ್ದು ಸ್ನಾನ ಶಿವಪೂಜೆಯನ್ನು ಮುಗಿಸಿಕೊಂಡು ಅವಳು ಹೆಗ್ಗಡಿತಿಯೊಡನೆ ಪೀಠಕ್ಕೆ ಹೋದಳು. ಅಲ್ಲಿ ಸಂಪ್ರದಾಯದಿಂದ ತನ್ನ ವಂಶದ ಹಿರಿಯನಾದ ಸಿದ್ಧನದೆಂದು ತಿಳಿದಿದ್ದ ಸಮಾಧಿಗೆ ಮೊದಲು ಹೋಗಿ, ಮೊದಲು ಕಾಣಿಕೆ ಸಲ್ಲಿಸಿದಳು. ಅಲ್ಲಿಂದ ಹೊರಟು ದತ್ತಾತ್ರೇಯನ ತಪಸ್ಸಿನ ಗುಹೆಗೆ ಹೋಗಿ ಅಲ್ಲಿ ಸೇವೆ ಸಲ್ಲಿಸಿದಳು. ಮೂರು ದಿನ ಹೀಗೆ ಪೂಜೆ ಮಾಡುವುದಾಗಿ ಅವಳ ಹರಕೆ. ಎರಡು ಕಡೆಯೂ ಪೂಜೆ ಮುಗಿದ ಮೇಲೆ ಅವಳು ಪೀಠದ ಬಳಿ ಇದ್ದ ಸಾಧುಗಳಿಗೆ ಹಣ್ಣು ಹಂಪಲು ದಕ್ಷಿಣೆಯನ್ನು ಒಪ್ಪಿಸುವಂತೆ ಊಳಿಗಕ್ಕೆ ಬೆಸಸಿದಳು. ಅವರೆಲ್ಲರಿಗೂ ಪದಾರ್ಥ ಮುಟ್ಟಿದುವು ಎಂದು ತಿಳಿದು ಹಿಂತಿರುಗಿ ತನ್ನ ಬೀಡಾರಕ್ಕೆ ಬಂದಳು.

ಈ ಸ್ಥಳದಲ್ಲಿ ಏನೋ ವಿಶೇಷ ಶಕ್ತಿ ಒಂದಿದೆ ಎಂದು ಶಾಂತವ್ವನಿಗೆ ಆ ಮೊದಲ ದಿನವೇ ಕಂಡಿತು. ನಗರದ ಗಾಳಿಯೇ ಬೇರೆ; ಇಲ್ಲಿಯ ಗಾಳಿಯೇ ಬೇರೆ. ಉಸಿರಾಡಿದಂತೆ ಈ ಗಾಳಿ ಜೀವಕ್ಕೆಲ್ಲ ಬಲ ಕೊಡುತ್ತಿರುವುದು ತಿಳಿಯುವಂತಿದ್ದಿತು. ಜಾಗರದ ಅನಂತವಾದ ಹಸುರರಾಶಿ ಅವಳ ಕಣ್ಣಿಗೆ ನಗರದ ಕಡೆಯ ಹಸುರಿಗಿಂತ ಆಳವೆಂದು ಕಂಡಿತು. ಇಲ್ಲಿ ಸಿದ್ಧರಿರುವುದು ಸಾಧ್ಯ, ದೇವರು ಕಂಡರೂ ಆಶ್ಚರ್ಯವಿಲ್ಲ,

ವನದಲ್ಲಿ ಮರಗಳ ಮಧ್ಯೆ ದತ್ತಾತ್ರೇಯ ತನ್ನ ನಾಯಿಗಳೊಡನೆ ನಡೆಯುತ್ತಿರುವುದು ಕಂಡರೂ ಕಾಣಬಹುದು, ಎಂದು ಅವಳಿಗೆ ತೋರಿತು. ಪೀಠದ ಬಳಿ ಅಲ್ಲಲ್ಲಿ ಕುಳಿತಿದ್ದ ಸಾಧುಜನರೂ ಕೂಡ ತಮ್ಮ ಶಾಂತವಾದ ಚರ್ಯೆ ಮುಖಮುದ್ರೆಗಳಿಂದ ಇವಳ ಮನಸ್ಸಿಗೆ ಸಮಾಧಾನವನ್ನು ನೀಡಿದರು. ಮನುಷ್ಯರನ್ನು ಹೀಗೆ ಸಜ್ಜನರನ್ನಾಗಿ ಮಾಡುವ ಸ್ಥಳ ಪುಣ್ಯಕ್ಷೇತ್ರ. ತಾನು ಇಲ್ಲಿಗೆ ಬಂದದ್ದು ಒಳ್ಳೆಯದಾಯಿತು ಎಂದು ಅಂದೆ, ಶಾಂತವ್ವನಿಗೆ ತೋರಿತು.

ಅಂದಿನ ಸಂಜೆ ಬೆಳುದಿಂಗಳಲ್ಲಿ ಹೆಗ್ಗಡಿತಿ ತನ್ನ ಜೀತದಿಂದ ಕೋಲಾಟ ಆಡಿಸಿದಳು. ಶಾಂತವ್ವ ಹೆಗ್ಗಡಿತಿಯನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಆಟವನ್ನು ನೋಡಿದಳು; ಜೀವಮಾನದಲ್ಲಿ ಮೊದಲಸಲವಾಗಿ ತಾನು ರಾಣಿಯೆಂಬ ಒಂದು ಭಾವವನ್ನು ಅನುಭವಿಸಿದಳು; ಜೊತೆಗೇ ತನ್ನ ನಾಯಕ ಇಲ್ಲಿಗೆ ಬಂದಿದ್ದರೆ ಚೆನ್ನಾಗಿದ್ದಿತಲ್ಲ ಎಂದುಕೊಂಡಳು.

೬

ಕೋಲಾಟ ಮುಗಿದು ಇವರು ಒಳಗೆ ಕುಳಿತಾಗ ಹೆಗ್ಗಡಿತಿ ಶಾಂತವ್ವನನ್ನು ಕುರಿತು "ಮುದುಕಿ ಏನಾದರು ಎರಡು ಮಾತು ಮನೇದು ಕೇಳಲ? ಇಲ್ಲ ಬೇಡಾ ಅಂತೀರ?" ಎಂದು ಕೇಳಿದಳು.

ಶಾಂತವ್ವ, "ಕೇಳಿರಲ್ಲ. ಅಂದರೆ, ನಮಗೆ ತಿಳಿದ ಮಾತಾದರೆ ಹೇಳಿಯೇವು," ಎಂದಳು.

"ಬೇರೆ ಏನು ಮಾತವ್ವ? ನಾನು ಕೇಳಲಾ ಅಂದು ನೀವು ಆಗಲಿ ಅಂದು ಕೇಳೋ ಎಲ್ಲಾ ಮಾತೂ ಒಂದೇ ಮಾತು. ನಾಯಕರಿಗೆ ಬೇಗನೆ ಪಟ್ಟ ಆಗಬೇಕು. ಇದಾಗದೆ ಇದ್ದರೆ ಚೆಂದ ಇಲ್ಲ. ನಾಡಿಗೆ ಸೌಖ್ಯ ಇಲ್ಲ. ನಾಯಕರೇ ಬಂದಿದ್ದರೆ ಮನೇ ಮಗ ಅಂತ ಸದರದಿಂದ ನಾನೇ ಹೇಳಿಬಿಡತಾ ಇದ್ದೆ. ಆವರು ಬಂದಿಲ್ಲ. ಇದೋ ನಿಮಗೆ ಹೇಳತಾ ಇದ್ದೇನೆ."

"ಇದು ನಾವೂ ಬಯಸೋದೆ. ಕೇಳಿ ಹೇಳೋದೇನಿದೆ ಇದರಲ್ಲಿ?"

" ಕೇಳೋದೇನಾವ್ವ ? ಯಾಕೆ ಪಟ್ಟ ಆಗಲಿಲ್ಲಾಂತ."

" ಅದು ನಮಗೂ ತಿಳೀದವ್ವ. ಹಿರೇರು ತೀರಿಕೊಂಡರೂ ಅಂತ ಒಡತೀರಿಗೆ ನಾಯಕರಿಗೆ ಇಬ್ಬರಿಗೂ ಬೇಸರ."

" ಹಿರೇರು ತೀರಿಕೊಂಡದ್ದು ಹೊಸ ಮಾತೇನವ್ವ ? ಮನೇ ಸೊಸೆ ಅತ್ತೆ ಹೆಸರು ಕಾಯಬೇಕು ನಿಜ. ಅಂದರೆ ಈ ಬೇಸರ ಅನ್ನೋ ಮಾತು ಎಷ್ಟುದೂರ ಸಾಗಬಹುದು ? "

" ಉಳಿದ ಮಾತು ನಮಗೆ ತಿಳೀದವ್ವ. ನೀವೂ ಅವರೂ ಜೋಡಿ, ನಾವು ಎಂತಿದ್ದರೂ ಕಿರಿಯರು. ಹಿರಿಯರ ಮಾತು ಆಡಸಲ್ಲ."

" ನಿನ್ನ ಮಾತು ಬಂಗಾರ ತಾಯಿ. ಅಪರಂಜಿ ಇದಕ್ಕೆ ಎಣೆ ಅಲ್ಲ. ಅಂದರೆ ನಾಡ ಗತಿಯೇನು ? ಪಟ್ಟ ಆಗೋದು ಬಹಳ ತಡೆದರೆ ನಾಡ ಕೆಲಸ ಗಡಸಾಗಿ ಕೂಡತದೆ. ಈಗ ನೋಡಬೇಕು; ಇತ್ತೀಚೆಗೆ ಈ ಗಡಿಯಲ್ಲಿ ಬೂದಿ ಬಸವ ಅಂತ ಒಬ್ಬ ಸ್ವಾಮಿಯಂತೆ, ಬಂದಿದಾನೆ ; ನಾಡಿನ ಜನ ಮರುಳಾಗಿ ಅವನ ಹಿಂದೆ ಓಡತಾ ಅದೆ. ಊರಿನ ಬಾಳುವೆ ಹೆಂಗಾದರಾಗಲಿ, ಸ್ವಾಮಿ ಹೇಳಿದ ಹಂಗೆ ನಡೀತೀವಿ, ಅಂತ ಗೌಡ ಮಕ್ಕಳು ಕೂಡ ಕುಣೀತಿದ್ದಾರೆ. ನಾಯಕರು ಬಂದರೆ ಹೀಗೆ ಮಾಡ ಬಹುದಲ್ಲ; ಒಬ್ಬ ಸ್ವಾಮಿ ಇಷ್ಟು ಮೇಲ್ಗೈ ಆದರೆ, ನಾಳೆ ನಿಮ್ಮ ಗಂಡಸು ನಾಡನ ಆಳೋದು ಸರಳ ಅಲ್ಲ."

" ಸ್ವಾಮಿ ಏನಾದರೂ ತಪ್ಪು ಹೇಳುತಾನೇನವ್ವ? "

" ಸ್ವಾಮಿಯಾದೋನು ಬಾಯಿ ತೆರೆಯೋದಿಲ್ಲ. ಅದೆಂಥಾದೊ ವ್ರತಾನಂತೆ. ಬಾಯಿ ಮುಚ್ಚಿಕೊಂಡಿರಬೇಕು. ಹತ್ತರ ಒಬ್ಬ ಕಿವಿ ಮಂತ್ರಿ ಇದ್ದಾನೆ. ಸ್ವಾಮಿ ಏನು ಹೇಳತಾನೇ ಅಂತ ಅವ ಬಿತ್ತರಿಸತಾನೆ."

" ಈ ಮಂತ್ರಿ ಹೇಳೋ ಮಾತಿನಲ್ಲಿ ಜನರನ್ನು ಕೆಡಿಸೋದು ಏನಾದರೂ ಉಂಟೆ? "

" ಅವನು ಹೇಳತಾ ಕೆಟ್ಟದುಂಟೋ ಇಲ್ಲೋ, ಮಂದಿ ಕೇಳತಾ ಕೆಟ್ಟದು ಮಾಡಿಕೊತಾರೆ. ಇವರು, ನಮ್ಮ ಹೆಗ್ಗಡೆ, ನಮ್ಮ ಹೆಗ್ಗಡಿತಿ, ನಮಗೆ ಇಂಥ ಕಿರುಕುಳ ಮಾಡತಾರೆ, ಅನ್ನಬೇಕು. ನೀವು ಒಪ್ಪಬೇಡಿ, ಅಂತಾನೆ ಸ್ವಾಮಿ. ಒಪ್ಪದೇ ಇದ್ದರೆ ಅವರು ನೇಣಿಗೆ ಹಾಕತಾರೆ

ಅಂದರು ಇವರು. ಹಾಕು ನೋಡೋಣ ಅನ್ನಿ, ಹಾಕೋ ಧೈರ್ಯ ಬರೋದಿಲ್ಲ, ಅಂತಾನೆ ಸ್ವಾಮಿ. ಹಾಕೇ ಬಿಟ್ಟರೆ ಗತಿ, ಸ್ವಾಮಿ, ಅಂದರೆ: ಒಬ್ಬನ್ನ ಹಾಕಬಹುದು, ಇಬ್ಬರನ್ನ ಹಾಕೋಕಾಗೋದಿಲ್ಲ, ಇಬ್ಬರನ್ನ ಹಾಕಬಹುದು, ನೂರು ಜನಾನ ಹಾಕೋಕಾಗೋದಿಲ್ಲ, ಒಬ್ಬ ಸತ್ತು ನೂರು ಜನಾನ ಉಳಿಸಬೇಕು, ಅಂತಾನೆ. ಒಕ್ಕಲಿಗೆ ಹಟ ಹೇಳಿಕೊಟ್ಟು ನಾಡನ್ನ ಕೆಡಿಸತಾ ಇದ್ದಾನೆ. ಈಹೊತ್ತು ಹೆಗ್ಗಡಿತೀಗೆ ಎದುರು ಬಿದ್ದ ಜನ ನಾಳೆ ನಾಯಕನಿಗೆ ಎದುರು ಬೀಳತದೆ. ಆಮೇಲೆ ಯಾರು ಉಳೀಬೇಕು? "

"ಹೌದವ್ವ, ನಮಗೂ ಈ ಮಾತು ಒಂದೆರಡು ಮುಟ್ಟಿತ್ತು. ಆದರೆ ಇಷ್ಟೆಲ್ಲ ತಿಳಿದಿರಲಿಲ್ಲ."

"ನಾಯಕರು ಈ ಸಂಗತಿ ಬಲ್ಲರು ಹಂಗಾದರೆ?"

"ಹ್ಞು, ಬಲ್ಲರೂ ಅಂತ ಕಾಣತದೆ. ಯಾರೊ ಒಂದು ದಿನ ಅವರ ತಾವು ದೂರ ಹೇಳತಾ ಇದ್ದದ್ದೇ ನಮಗೂ ಕಿವೀಗೆ ಬಿತ್ತು."

"ಮತ್ತೆ ನಾಯಕರು ಏನು ಹೇಳಿದರು?"

"ಅದೇನೂ ಹೇಳಿದ ಹಂಗೆ ಕಾಣಲಿಲ್ಲ ಅವ್ವ. ಅವರು ಇಂಥಾ ಮಾತಿಗೆ ಮರುಮಾತಾಡೋದಿಲ್ಲ."

"ಏನು ಅವರದೂ ಒಂದು ಬಾಯಿ ಮುಚ್ಚಿಕೊಂಡಿರೊ ವ್ರತಾನೇ ತಾಯಿ?"

ಶಾಂತವ್ವ ಮೆಲ್ಲನೆ ನಕ್ಕಳು. ನಿಜವಾಗಿ ನಾಯಕ ವ್ರತಕ್ಕಾಗಿ ಮೌನ ಧರಿಸಿದಂತೆ ಬಾಯಿ ತೆರೆಯದೆ ಇರುವವನು. ಅವಳು ಹೆಗ್ಗಡಿತಿಗೆ "ವ್ರತ ಅಲ್ಲ ಅಂದರೂ ಬಾಯಿ ತೆರೆಯೋದು ಅಪರೂಪ ಅವ್ವ," ಎಂದಳು.

"ಅಂತೂ ನೀವು ಊರಿಗೆ ಹೋದಮೇಲೆ ಇದನ್ನ ನಾಯಕರಿಗೆ ಬಿಡಿಸಿ ಹೇಳಬೇಕು. ಬೇಗನೆ ಪಟ್ಟ ಆದರೆ ಸಮ. ಆಗಲಿಲ್ಲ, ನಾಯಕರು ಹಾಗೇವೆ ಒಂದುಸಲ ಜಂಬೂ ಸವಾರಿ ಮಾಡಿಕೊಂಡು ನಾಡು ಸುತ್ತ ಬೇಕು. ಗೌಡ ಹೆಗ್ಗಡೆ ಮಂದಿಗೆಲ್ಲ ಮೊಖ ತೋರಿಸಿ ಧೈರ್ಯ ನುಡೀ ಬೇಕು. ಇಷ್ಟಾದರೂ ಮಾಡಿದರೆ ಪಟ್ಟ ಆದ ಕಾಲಕ್ಕೆ ಎಲ್ಲ ಸರಿಯಾಗಿ ರತದೆ. ಹಾಗಲ್ಲದೆ ನಾಯಕರು ತಮ್ಮ ಪಾಡಿಗೆ ತಾವು ಕುಳಿತು

ಬಿಟ್ಟು, ಇಲ್ಲಿ ಸ್ವಾಮಿ ಒಂದು ವರ್ಷ ಜನಾನ ಹಿಂಗೆ ಎತ್ತಿಕಟ್ಟಿದರೆ ನಾಡಿಗೆ ಒಳಿತಲ್ಲ."

"ಈ ಮಾತು ಒಂದು ಓಲೆ ಬರಸಿ ಕಳಿಸಿರವ್ವ; ನಾ ಹೇಳಿದರೆ ಗಂಡನಿಗೆ ಪಟ್ಟ ಆಗಲೀ ಅಂತ ಹೇಳತಿದಾಳೇ ಅಂತಾರೆ."

"ಹೇಳಿದರೆ ಏನಾಯ್ತುವ್ವ? ಯಾರದೊ ಮನೆ ಗಂಟು ಕೇಳಿದರೂ ಅಂತಾರೇನು? ಗಂಡನ ಪಟ್ಟ ಗಂಡನಿಗಾಗಲಿ ಅಂದರೆ ಯಾರದೇನಂತೆ ಕಣ್ಣುಕಿಸರು?"

"ಅಂದರೂ ನಾಚೋದು ಒಳ್ಳೇದವ್ವ."

"ಇವ ನನ್ನ ಗಂಡ ಅನ್ನೋದನ, ಇವಳು ನನ್ನ ಹೆಂಡರೂ ಅನ್ನೋದನ, ಇದು ನನ್ನ ಗದ್ದಿಗೆ ಅನ್ನೋದನ ಹೇಳೋಕೆ ನಾಚಬಾರದು, ಕಾಣರವ್ವ. ಈಗ ನನ್ನ ವಸ್ತಾರೆ ಅದೆಯಲ್ಲ, ಆದರ ಮಾತು ಎಂಥದೇ ಆಗಲಿ ಆ ಮಾತೆಲ್ಲ ನನ್ನದೂ ಅಂತ ನಾ ಹೇಳತಿದೀನಿ. ನಾನೂ ಅನ್ನೋದೇ ಅಂತ ನಾಚಿಕೊಂಡು ಕೂತರೆ ಯಾರು ಕಾಯಬೇಕು, ಊರ ಹೆಗ್ಗಡಿಕೇನ, ಹೆಗ್ಗಡೇ ಊರ ಬಾಳನ? ನಾಡಿಗೆ ನಾಯಕರು, ಊರಿಗೆ ಹೆಗ್ಗಡೇ ಮುದಿಕೆ; ಯಾವುದೂ ನೇರ ನಡಿಯಬೇಕು. ನೋಡಿಕೋತಿದೀನಿ. ಹೆಗ್ಗಡೆ ಇದ್ದರು; ಇದ್ದಷ್ಟುದಿನ ನೋಡಿಕೊಂಡರು. ಕಣ್ ಮುಚ್ಚಿಕೊಂಡರು; ನೀನು ನೋಡಿಕೊ ಅಂದರು. ಮಗ ಮದಿವಿಯಾದ; ಒಬ್ಬ ಮಗನ್ನ ಹೆತ್ತ; ಕಣ್ಮುಚ್ಚಿಕೊಂಡ. ಸೋಸೇನ್ನೂ ಮೊಮ್ಮಗನ್ನೂ ಇಟ್ಟುಕೊಂಡು ನಾ ಎಲ್ಲಾ ನೋಡಿಕೋತಿದೀನಿ. ಮೊಮ್ಮಗ ಬೆಳೆದ ದಿನಕ್ಕೆ ತಾತನ ಹೆಗ್ಗಡೆತನ ಉಳಿದಿರಬೇಕಲ್ಲ. ಅದಕ್ಕಾಗಿ ಹೆಂಗಸು ಧೈರ್ಯಮಾಡಿ ನಡೀಬೇಕು."

ಶಾಂತವ್ವ ಈ ಮಾತನ್ನೆಲ್ಲ ಕೇಳುತ್ತ ಸುಮ್ಮನಿದ್ದಳು; ಪ್ರತಿ ಏನನ್ನೂ ಹೇಳಲಿಲ್ಲ. ಎರಡು ಕ್ಷಣ ಬಿಟ್ಟು ಹೆಗ್ಗಡಿತಿ ಶಾಂತವ್ವನಿಗೆ, "ಹೆಗ್ಗಡೆಗಳ ಜೀತ ಕಾಡು ಸೇರಿ ಕಳ್ಳಪಡೆ ಆಗತಾ ಅದೆ. ಇದನೂ ಈ ಬೂದಿ ಬಸವನೇ ಮಾಡತಾ ಇದಾನೆ ಅಂತ ಜನ ಹೇಳತಾ ಅದೆ. ಕಾಡಸಾರದ ಜೀತ ನಗರ ಸೇರತಾ ಅದೆ. ಆ ನಗರಾ ಅನ್ನೋದೋ ಕಾಡಿಗನ್ನ ಕೆಟ್ಟುಹೋಯ್ತು. ಆ ಗುಂಪಿನಲ್ಲಿ ಕಳ್ಳಜೀತಾನ ಗುರುತು ಹಿಡಿದು ಅರಮನೆಗೆ ತಿಳಿಸಿದರೆ,

ಅವರು ಹಿಂದಕ್ಕೆ ಕಳಿಸ್ತಾರೇ ಅಂತ ಹೆಸರು. ದೊರು ಹೇಳಿದ ಆರು ತಿಂಗಳು ಏನೂ ಅಂತ ಕೇಳೋರಿಲ್ಲ. ಇದನ್ನ ಒಂದು ಮಾತು ನೀವು ಪೂರಾ ನೋಡಿಕೊಳ್ಳಬೇಕು," ಎಂದಳು.

ಶಾಂತವ್ವ ಈ ಮಾತಿಗಾಗಲಿ ಯಾವ ಉತ್ತರವನ್ನೂ ಕೊಡುವ ಸ್ಥಿತಿಯಲ್ಲಿರಲಿಲ್ಲ; ಇದನ್ನು ಎಷ್ಟು ಸಲ ತಿಳಿಸುವುದು ಎಂದು ಸಮ್ಮನಿದ್ದಳು.

೭

ಹುಣ್ಣಿಮೆಯ ದಿನ ಮುಖ್ಯವಾದ ಸೇವೆ. ಅಂದೇ ಸಿದ್ಧರ ದರ್ಶನ ವಾಗತಕ್ಕದ್ದು. ಶಾಂತವ್ವ ಎಂದಿಗಿಂತ ಹೆಚ್ಚಿನ ಭಕ್ತಿಯಿಂದ ಪೂಜೆ ದರ್ಶನಗಳಿಗೆಂದು ಸಿದ್ಧವಾದಳು. ಹೆಗ್ಗಡಿತಿ ರಾಣಿಯನ್ನು ಕುರಿತ ಗೌರವ ದೊಂದಿಗೆ ಅವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳು ಎನ್ನುವುದಕ್ಕಿಂತ ಹೆಚ್ಚಿನ ಪ್ರೀತಿಯನ್ನು ಬೆರಸಿ ತರುಣಿಯನ್ನು ಉಪಚರಿಸಿ ನೋಡಿ ಕೊಂಡಳು.

ಆದರೆ ಶಾಂತವ್ವನ ಮನಸ್ಸಿನಲ್ಲಿ ಹಿಂದಿನ ದಿನದ ಉದಯ ಮೂಡಿಸಿದ್ದ ಉಲ್ಲಾಸ ಮೆಲ್ಲಮೆಲ್ಲನೆ ಮಸಕಾಗಿ ಹೋಗಿದ್ದಿತು. ಹೆಗ್ಗಡಿತಿಯ ಮಾತು ಇದಕ್ಕೆ ಮುಖ್ಯಕಾರಣ. ನಗರದಲ್ಲಿದ್ದಾಗಲೂ ಶಾಂತವ್ವನಿಗೆ ತನ್ನ ಗಂಡ ದೊರೆಯಾಗದ ವಿಷಯದಲ್ಲಿ ಮನಸ್ಸಿಗೆ ಶಂಕೆಯೇ. ಆದರೂ ಅದು ಸಾವಕಾಶವಾಯಿತೆನ್ನುವುದು ಒಂದು ಸಂಗತಿ ಅವಳಿಗೆ ತೋರಿದ್ದಿತು ಹೊರತಾಗಿ ಸಾವಕಾಶದಿಂದ ಇಷ್ಟೆಲ್ಲ ಅನರ್ಥ ಬೆಳೆದುಕೊಳ್ಳುತ್ತದೆ ಎಂದು ಅವಳು ಕಂಡಿರಲಿಲ್ಲ. ಈಗ ಇದನ್ನು ಕಂಡು ತರುಣಿ ಪ್ರಿಯನ ಭವಿಷ್ಯವನ್ನು ಕುರಿತು ತೀರಾ ಕಾತರಳಾದಳು. ರಾಜ್ಯ ತಪ್ಪಿಯೇ ಹೋಯಿತು, ನಾಡಜನ ಬೇರೆ ಯಾವನನ್ನೋ ದೊರೆ ಮಾಡಿ ಕೊಂಡರು, ಎಂಬ ಅರ್ಥದ ಒಂದು ಸ್ವಪ್ನ ರಾತ್ರಿ ಅವಳ ನಿದ್ದೆಯನ್ನು ಕೆಡಿಸಿದ್ದಿತು. ಪೂಜೆಗೆ ಸಿದ್ಧಳಾಗುತ್ತ ಶಾಂತವ್ವ ತಾನು ಒಬ್ಬಳೇ ಇಲ್ಲಿಗೆ ಯಾತ್ರೆ ಬರಬಾರದಾಗಿತ್ತು ಎಂದುಕೊಂಡಳು. ದೇವರು ತನ್ನ ಗಂಡನನ್ನು ಒಳ್ಳೆಯ ದಾರಿಯಲ್ಲಿ ಬಿಟ್ಟು ಕಾಪಾಡಲಿ ಎಂಮ ಮನಸ್ಸಿನಲ್ಲಿ ಪ್ರಾರ್ಥಿಸಿಕೊಂಡಳು.

ಹೀಗೆ ಪ್ರಾರ್ಥಿಸಿದಳೆಂದಮಾತ್ರಕ್ಕೆ ಶಾಂತವ್ವ ತನಗೆ ಸುಖ ಬೇಡ ವೆಂಬ ವೈರಾಗ್ಯವನ್ನು ಹಿಡಿದಳೆಂದಲ್ಲ. ಅಥವಾ ಇನ್ನು ತನ್ನ ಪಾಲಿಗೆ ಸುಖವಿಲ್ಲ ಎಂದು ನಿರಾಶೆಪಟ್ಟಳೆಂದೂ ಅಲ್ಲ. ಅವಳಿಗೆ ತನ್ನ ಬಾಳಿನಲ್ಲಿ ಏನಾದರೂ ಕೊರೆ ಇದೆ ಎಂದು ಕಾಣುತ್ತಿರಲಿಲ್ಲ; ಜೊತೆಗೆ ಆ ಬಾಳು ಗಂಡನ ಬಾಳಿಂದ ಬೇರೆ ಎಂದುಕಾಣುವುದೇ ತಪ್ಪಿಹೋಗಿದ್ದಿತು. ಅವಳ ಜೀವನದ ದಾರಿ ಹಾಗೆ ಹರಿದಿದ್ದಿತು. ಜೊತೆಗೆ ನೇಮಯ್ಯನ ನಡೆನುಡಿ ಅವಳ ನಂಬಿಕೆಯನ್ನು ಹಾಗೆ ತಿದ್ದಿದ್ದುವು. ಈ ಯಾತ್ರೆಗಾಗಿ ಎಲ್ಲ ಏರ್ಪಾಡನ್ನೂ ಮಾಡಿದಮೇಲೆ ಮಾತಿಗೆ ಮಾತು ಬಂದು ನೇಮಯ್ಯ ಹೇಳಿದನು:

"ನಿನ್ನ ಚಿಕ್ಕಂದಿನ ಮಾತು ನಿನಗೆ ನೆನವಿಲ್ಲ, ಅಮ್ಮಾಜಿ. ನೀನು ನೋಡಿದ್ದೆಲ್ಲ ನನ್ನನ್ನೇ. ಹೆತ್ತ ಹತ್ತು ದಿನಕ್ಕೆ ತಾಯಿ ತೀರಿಕೊಂಡಳು. ಹಡೆದ ತಿಂಗಳಲ್ಲಿ ಅಪ್ಪ ಕಾಡು ಸೇರಿದ. ಯಾರ ಗುರುತಿರಬೇಕು ನಿನಗೆ?"

ಶಾಂತವ್ವ "ಹೌದಣ್ಣಯ್ಯ, ಯಾರದೂ ಗುರುತಿಲ್ಲ" ಎಂದಳು.

"ನೀ ಮಗುವಾಗಿದ್ದಾಗ ಆ ಅಪ್ಪ ಒಂದುಸಲ ಬಂದು ನಿನ್ನನ್ನು ನೋಡಿದ. ನಿನಗೆ ನೆನಪಿರಲಾರದು."

"ಇಲ್ಲ ಅಣ್ಣಯ್ಯ. ಇನ್ಯಾರೋ ಒಬ್ಬರು ಬೆಳ್ಳನೆ ದಾಡಿಯವ ರೊಬ್ಬರು ಬಂದಿದ್ದರು. ಅವರ ನೆನಪಿದೆ."

"ಹ್ಞಾ ಹ್ಞಾ! ಅವರ ನೆನಪಿದೆ ಅಲ್ಲ? ಅವರು ನಿನಗೆ ದೊಡ್ಡ ತಾತ. ನಮ್ಮ ತಂದೇಗೆ ಹಿರಿಯೋರು. ಚಿಕ್ಕಂದೇ ತಪಸ್ಸಿಗೇಂತ ಜಾಗರದ ಕಾಡು ಸೇರಿದರು. ತೀರ್ಥದಲ್ಲಿ ನಿಂತರು. ನೀ ಪೀಠದಲ್ಲಿ ಅವರನ್ನ ಕಂಡೀಯೆ."

"ಕಾಣತೀನೆ ಅಣ್ಣಯ್ಯ, ಅವರ ಹರಕೆ ತಕ್ಕೊಳ್ಳತೀನೆ."

"ತಕ್ಕೊಳ್ಳವ್ವ ತಕೊ. ಬಹು ದೊಡ್ಡ ವಸ್ತು. ಕಾಪಾಡುತದೆ. ಅವರೇ ನನ್ನ ದೊಡ್ಡಪ್ಪ. ತಪಸ್ಸಿಗೆ ಹೋದದ್ದೆ ವರ್ಷದಲ್ಲಿ ಒಂದು ದಿನ ಪೀಠಕ್ಕೆ ಬರೋದು ಹೊರತಾಗಿ ಉಳಿದಂತೆ ತಮ್ಮ ಗವೀಲಿ ಇರತಾರೆ. ನರಪಿಳ್ಳೇನ ಅವರು ಕಾಣೋದಿಲ್ಲ. ನರಪಿಳ್ಳೆ ಅವರನ್ನ ಕಾಣೋದಿಲ್ಲ.

ವರ್ಷಾಂತರ ತಪಸ್ಸು ಮಾಡಿದಾರೆ. ಈಗ ಏನು ಅವರು ಸಿದ್ಧರೇ. ಅವರ ಆ ಗವೀನ ಸಿದ್ಧರ ಗವಿ ಅಂತಾರೆ. ಉಸಿರು ಇರತಾಲೆ ಸತ್ಯಾನ ಸಾಧಿಸಿ ಬಿಟ್ಟರು ನಮ್ಮ ದೊಡ್ಡಯ್ಯ"

"ಎಂಥ ದೊಡ್ಡವರಣ್ಣಯ್ಯ !"

"ಅವರ ತಲೇಗೆ ಹತ್ತಲೆ ಹಿಂದೆ ಹಿರಿಯರೊಬ್ಬರು ಸಿದ್ಧರಾದರು. ಅದಕ್ಕೇಂತಲೆ ಇವರು ಅಲ್ಲಿ ಹೋದದ್ದು. ನಮ್ಮ ಮನೆತನಕ್ಕೆ ಇದೇನೂ ಹೊಸದಲ್ಲ. ನಾನೂ ತಕ್ಕ ಕಾಲದಲ್ಲಿ ಅವರಲ್ಲಿಗೆ ಹೋಗಿ ಸೇರಿದ್ದರೆ ಸುಖವಾಗತಿತ್ತೊ ಅನ್ನಿಸತದೆ."

"ನನ್ಯಾರು ಸಾಕಬೇಕಿತ್ತು"?

"ಸತ್ಯ ನುಡಿದೆ, ಅಮ್ಮಾಜಿ. ನೋಡು ನಿಮ್ಮಪ್ಪ ತಬ್ಬಲಿ ಮಗೂನ ಕೈಬಿಡಬಾರದೂಂತ ಇಲ್ಲಿ ನಿಂತಿದ್ದನೆ, ನಾನು ಹೋಗಿ ಹಿರಿಯರ ತಾವು ನಿಲ್ಲಬಹುದಾಗಿತ್ತು. ಹಸುಗೂಸು ಅನ್ನೊ ಮರುಕ ಇಲ್ಲದೆ ಈ ಹುಡುಗ ಎದೆಗೆಟ್ಟು ಓಡಿದನೊ ಇಲ್ಲವೊ, ಇಲ್ಲಿ ನಾನು ನಿಲ್ಲಬೇಕಾಯಿತು. ಬಿಟ್ಟರೆ ದೇವರು ಮೆಚ್ಚರಲ್ಲ!"

"ಅಪ್ಪನ್ನ ದೂರೋಕಲ್ಲ, ಅಣ್ಣಯ್ಯ, ಅವರು ನಿಮ್ಮಂತೆ ಅಲ್ಲ ಅನ್ನಿಸತದೆ. ನಿಮ್ಮಂತೆ ಇದ್ದಿದ್ದರೆ ಬಿಟ್ಟು ಹೇಗೆ ಹೋಗತಿದ್ದರು?"

"ಒಬ್ಬರಂತೆ ಒಬ್ಬರಲ್ಲವ್ವ. ಯಾವದೂ ಕೆಟ್ಟದಲ್ಲ, ಯಾವದೂ ಒಳಿತಲ್ಲ. ಇದೂ ಅದೂ ಬೆರೆತೇ ಅದೆ. ನನಗ್ಯಾಕೇ ಎನ್ನೋ ನಿರಾಳ ದೊಡ್ಡದು. ಅಯ್ಯೋ ಪಾಪವೇ ಎನ್ನೊ ಮರುಕಾನೂ ದೊಡ್ಡದು. ಒಂದು ಜೀವಕ್ಕೆ ಒಂದು ಸರಿ ಅನ್ನಿಸತದೆ. ಅದದು ಅದರ ಕರ್ಮಾನ ನಡಸತದೆ. ಒಂದು ಸಂಗತಿ ನಿನಗೆ ಇದುವರೆಗೆ ಹೇಳಲಿಲ್ಲವ್ವ, ಈಗ ಹೇಳಬೇಕು. ನೀನಿದನ್ನ ತಿಳಿದುಕೊಳ್ಳಬೇಕು."

"ಹೇಳಿ ಅಣ್ಣಯ್ಯ"

"ಕಾಡು ಸೇರಿದ ನಿನ್ನ ತಂದೆ ತಪಸ್ಸಿಗೇಂತ ಹೋಗಲಿಲ್ಲಾವ್ವ. ಮನೆತನಕ್ಕೆ ದೊರೆತನ ಬರೋಯೋಗ ಇದೆ, ದೊರೆಯಾಗ ಬೇಕು ಅಂತ ಹೊರಟ. ಇಲ್ಲಿ ದೊರೆಯಾಗಬೇಕಾದರೆ ಬೇರೆ ಗಾದಿ ಯಾವದವ್ವ? ನಾಯಕರನ್ನ ತಪ್ಪಿಸಬೇಕು. ಸಂಗತಿ ತಿಳಿದು ಅರಮನೆಯವರಿಗೆ ಕೋಪ

ಬಂತು. ತಪಸ್ಸಿಗೇಂತ ಇವ ಹೋದ. ದ್ರೋಹ ಅಂತ ಇವರು ಇಲ್ಲಿ ಹೆಜ್ಜೆ ಇಟ್ಟೇಯ ಜೋಕೆ ಅಂದರು. ಅಂತೂ ನಿನ್ನ ಪಾಲಿಗೆ ತಂದೆ ಅನ್ನೋ ಪದಾರ್ಥ ಇಲ್ಲದೆ ಆಯ್ತು."

"ಯಾಕೆ ಹೀಗೆ ಅಂತೀರಿ ಅಣ್ಣಯ್ಯ? ಅವರೇನು, ನೀವೇನು? ನೀವು ನನಗೇನು ಕಡಮೆ ಮಾಡಿದಿರಿ? ತಾಯಿ ತಂದೆ ಎರಡೂ ಆಗಿ ಎದೇಗಿಟ್ಟುಕೊಂಡು ಸಾಕಿದಿರಿ."

"ಆಯಿತು ಅಮ್ಮಾಜಿ. ಹಸುಗೂಸು, ಬಿಡಲಾರದೆ ಕಟ್ಟಿಕೊಂಡು ಸಾಕಿದೆ ತಾಯಿ. ಬೆಳೆದ ಹುಡುಗೀನ ನಾಯಕರ ಮಗನಿಗೇಂತ ಕೇಳಿದರು. ಇಂಥವನ ಮಗಳನ್ನ ಈ ಆಗದವರ ಮನೆಗೆ ಕೊಡೋದೇ ಬಿಡೋದೇಂತ ನಾನು ತುಂಬ ಹಿಂದು ಮುಂದು ನೋಡಿದೆ. ಕೊನೆಗೆ ಆ ಅಪ್ಪನ ತಪಸ್ಸು ನಡೆದದ್ದೆಲ್ಲ ಮಗಳನ್ನ ರಾಣಿ ಮಾಡೋದಕ್ಕೆ ಇರ ಬಹುದು, ಯಾಕಲ್ಲ ಅಂದುಕೊಂಡು ಮದುವೇಗೆ ಒಪ್ಪಿದೆನವ್ವ. ಒಪ್ಪಿದೆ, ಮದುವೆ ಆಯ್ತು. ನೀನು ಸುಖವಾಗಿದ್ದೀಯ."

"ನನ್ನ ಮಾತೇನೋ ಒಳಿತಾಯಿತು ಅಣ್ಣಯ್ಯ. ನಿಮ್ಮಳಿಯಂದಿರದು ಒಳಿತಾಗಬೇಕು."

"ನಾ ಹೇಳಿದ್ದು ಅದನೇ ಅಮ್ಮಾಜಿ. ಹೆತ್ತನೆಲ, ಸುತ್ತಿನ ಗಾಳಿ, ಬಾನು ಎರೆಯೋನೀರು, ಮರಕ್ಕೆ ಎಲ್ಲಾ ಬೇಕು. ಬಾಳಿಗೆ ಬಾಳು ಹೆಣೆದಿರತದೆ. ಒಂದರ ಪುಣ್ಯ ಇನ್ನೊಂದನ ಕಾಯತದೆ. ಹಿರಿಯರ ನೆರಳಬೇಡಿ ಹೋಗುತಿದ್ದೀ ತಾಯಿ. ಅವರ ಮರುಕ ಇವರನೂ ಕಾಯತದೆ."

ಸಾಕು ತಂದೆಯ ಈ ಮಾತು ಶಾಂತವ್ವನ ಮನಸ್ಸಿನಲ್ಲಿ ನಿಂತಿದ್ದಿತು. ಅವಳಿಗೆ ನಿರಾಸೆ ಎನ್ನುವುದಿಲ್ಲ. ವೈರಾಗ್ಯ ಆ ಮೊದಲೇ ಇಲ್ಲ. ಅವಳ ಬುದ್ಧಿಗೆ ಗಂಡನನ್ನು ಕಾಪಾಡು ಎಂದರೆ ನನ್ನನ್ನು ಕಾಪಾಡು ಎಂದಂತೆಯೇ; ಇದನ್ನು ಬೇರೆಯಾಗಿ ಹೇಳಬೇಕು ಎಂಬಂತಿರಲಿಲ್ಲ.

೮

ಇತ್ತ ಪೀಠದ ಬಳಿ ಸಾವಿರ ಜನ ನೆರೆದು ಸಿದ್ಧನ ಬರವನ್ನು ಇದಿರು ನೋಡುತ್ತಿದ್ದಿತು. ಅವನು ತನ್ನ ಗವಿಯಿಂದ ಬರಬೇಕು. ಅದು ಗಾಳಿಯ ಕೆರೆಯಿಂದಲೂ ಆಚೆ ಒಂದು ಹರಿದಾರಿಯ ದೂರ. ಅವನು ಬಾಯಿ ತೆರೆದು ಹರಸುವುದೆನ್ನುವುದು ವರ್ಷದಲ್ಲಿ ಇದೊಂದೆ ದಿವಸ. ಆದ್ದರಿಂದ ಪೀಠದ ಬಳಿ ಅಲ್ಲದೆ ಅವನು ಬರಬಹುದೆನ್ನುವ ದಾರಿಯಲ್ಲಿ ಕೂಡ ಅವನ ಹರಕೆಯನ್ನು ಬಯಸಿದ ಜನ ಅಲ್ಲಲ್ಲಿ ನಿಂತಿದ್ದರು. ಹೊತ್ತು ಹುಟ್ಟಿದ ನಾಲ್ಕು ಗಳಿಗೆಯ ಮೇಲೆ ಅವನು ಪೀಠದ ಸಮಿೀಪವನ್ನು ಸಾರಿದನು. ಅವನ ಜೊತೆಗೆ ಒಬ್ಬ ಮಧ್ಯವಯಸ್ಸಿನ ಸಂನ್ಯಾಸಿ ನಡೆಯುತ್ತ ಅವನಿಗೆ ಏನನ್ನೊ ಹೇಳುತ್ತಿದ್ದನು. ಹಿಂದೆ ಇವರಿವರ ಮಾತನ್ನು ಕೇಳದಂತೆ ಹತ್ತುಮಾರು ದೂರದಲ್ಲಿ ನಾಲ್ಕಾರು ರೀತಿಯ ವಿರಕ್ತ ಜನ ಬರುತ್ತಿದ್ದರು. ದಾರಿಯಲ್ಲಿ ಕಾದಿದ್ದ ಜನ ಕೆಲವರು ಬಂದು ಅಲ್ಲಲ್ಲೆ ಸಿದ್ಧನಿಗೆ ನಮಸ್ಕಾರ ಮಾಡಿದರು. ಅವನು ಕೈಯೆತ್ತಿ ಅಂಥವರ ಕಡೆ ನಗುಮುಖ ದಿಂದ ನೋಡಿ ಹರಸಿದನು. ಅವನ ಬಾಯಿಂದ ಹರಕೆಯ ಮಾತನ್ನು ಕೇಳಬೇಕೆಂದು ಬಯಸಿದವರು ಅವನ ಹಿಂದೆ ಪೀಠದವರೆಗೆ ನಡೆಯಲು ಹೊರಟರು. ಹೀಗೆ ಗುಂಪು ಸ್ವಲ್ಪ ಸ್ವಲ್ಪವೇ ಬೆಳೆಯುತ್ತ ಸಿದ್ಧನು ಪೀಠವನ್ನು ಮುಟ್ಟುವವೇಳೆಗೆ ನೂರಾರು ಸಂಖ್ಯೆಯನ್ನು ಮುಟ್ಟಿತು.

ಪೀಠದ ಬಳಿ ಬಂದು ಹಿರಿಯ ನೆರೆದಿದ್ದ ಜನವನ್ನು ನೋಡಿದನು. ಎಲ್ಲಿದ್ದವರು ಅಲ್ಲಿಂದಲೆ ಅವನ ದೃಷ್ಟಿ ತಮ್ಮ ಮೇಲೆ ಹರಿದಂತೆ ಕೈಮುಗಿ ದರು. ಹತ್ತಿರಿದ್ದವರು ಅವನ ಕಾಲಿಗೆ ಬಿದ್ದು ದಂಡ ಸಮರ್ಪಿಸಿದರು. ಸಿದ್ಧನು ಈಗ ಬಾಯಿ ತೆರೆದು ಎಲ್ಲರಿಗೂ "ಒಳಿತು" "ಒಳಿತು" ಎಂದು ಹೇಳುತ್ತ ಮುಂದರಿದನು.

ಈರೀತಿ ಎಲ್ಲರಿಗೂ ಒಳ್ಳೆಯ ಮಾತನ್ನು ಹೇಳುತ್ತ ಅವನು ಹೆಜ್ಜೆ ಹೆಜ್ಜೆಯಾಗಿ ದತ್ತಾತ್ರೇಯನ ಗವಿಯ ಬಳಿಗೆ ಬಂದನು. ಅಲ್ಲಿ ಬಾಗಿಲಲ್ಲಿ ಕಾದಿದ್ದ ಒಬ್ಬ ಮುಸಲ್ಮಾನ ಫಕೀರ ಹಣೆಗೆ ಕೈಯಿಟ್ಟು ಅವನಿಗೆ ಮರ್ಯಾದೆ ತೋರಿದನು.

ಸಿದ್ಧನು ಅವನನ್ನು ಹರಸಿ ಹತ್ತಿರ ಬರಲು ಒತ್ತಿ ಬರುತ್ತಿದ್ದ ಜನರ ಸಲುವಾಗಿ ಗುಹೆಯ ಬಾಗಿಲಲ್ಲ ಸುಮ್ಮನೆ ಅಷ್ಟುಹೊತ್ತು ನಿಂತನು. ಬರುವವರೆಲ್ಲ ಬಂದು ದಂಡಸಮರ್ಪಿಸಿ ಹೋಗಲು ಎರಡು ಗಳಿಗೆಯ್ಯಾಗಿರಬೇಕು. ಅದೆಲ್ಲ ಆದಮೇಲೆ ಅವನು ಜೊತೆಯ ಸಂನ್ಯಾಸಿ ಮತ್ತು ಆ ಫಕೀರನೊಂದಿಗೆ ಗುಹೆಯೊಳಕ್ಕೆ ಹೋದನು.

ಅಲ್ಲಿ ಹೋದಮೇಲೆ ಅವನು ಫಕೀರನಿಗೆ "ಮೃತ್ತಿಕೆಯನ್ನು ತೆಗೆದಿಟ್ಟಿದೀಯಾ" ಎಂದು ಕೇಳಿದನು.

ಅವನು "ಇಟ್ಟಿದೇನೆ ಮಹಾರಾಜ್" ಎಂದು ಹೇಳಿ ಎರಡು ಪುಟ್ಟಿಯನ್ನು ತಂದು ಅವನೆದುರಿಗೆ ಇಟ್ಟನು. ಸಿದ್ಧ ಅದನ್ನು ಮುಟ್ಟಿ ಏನೋ ಮಂತ್ರ ಹೇಳಿ ಸ್ವಲ್ಪ ಮೃತ್ತಿಕೆಯನ್ನು ಹತ್ತಿರ ಇಟ್ಟುಕೊಂಡು "ಇದನ್ನು ತೆಗೆದುಕೊಂಡು ಹೋಗಿ ಎಲ್ಲರಿಗೂ ಕೊಡು" ಎಂದನು. ಫಕೀರನು ಆ ಮೃತ್ತಿಕೆಯ ಪ್ರಸಾದವನ್ನು ಜನರಿಗೆ ಕೊಡಲು ಪುಟ್ಟಿಗಳನ್ನು ಎತ್ತಿಕೊಂಡು ಹೊರಕ್ಕೆ ಹೋದನು.

ಅವನು ಹೋದಮೇಲೆ ಯುವಕ ಸಂನ್ಯಾಸಿ, "ಸಂಗತಿಯನ್ನೆಲ್ಲ ನಿಮಗೆ ತಿಳಿಸಿದೇನೆ. ಏನು ಮಾಡಬೇಕು ಎಂದು ತಿಳಿವಳಿಕೆ ಕೊಡಬೇಕು. ನನ್ನ ಪ್ರಯತ್ನ ಸಫಲವಾಗುವಂತೆ ಹರಸಬೇಕು. ಇದು ನಡೆಯಲಿ ಎಂದು ನಿಮ್ಮ ಬಾಯಲ್ಲಿ ಬಂದರೆ ಅದು ನಡೆಯುತ್ತದೆ. ಆ ಶಬ್ದಕ್ಕಾಗಿ ನಾನು ಈ ದಿನ ಬಂದೆ," ಎಂದನು.

ಹಿರಿಯ, "ನಾವು ಇಂಥ ಗೋಜಿಗೆ ಬರುವವರಲ್ಲ. ನಿನಗೆ ತಿಳಿಯದೆ?" ಎಂದನು.

"ಹೌದು. ಆದರೆ ಇದು ಯಾರೊಬ್ಬರ ಕಷ್ಟಸುಖದ ಮಾತಲ್ಲ. ಈ ಸಂಸ್ಥಾನದ ಕ್ಷೇಮವನ್ನು ಕುರಿತದ್ದು. ಮಹಾತ್ಮರು ದೇಶಕ್ಕೆ ಕ್ಷೇಮವಾಗಲೆಂದು ಹೇಳಿದರೆ ಗೋಜಿಗೆ ಬಂದಂತೆ ಅಲ್ಲ."

"ದೇಶಕ್ಕೆ ಕ್ಷೇಮವಾಗಲೆಂದು ನಾವು ಬೇರೆಯಾಗಿ ಹೇಳಬೇಕಾದದ್ದೇನು? ಹಿರಿಯರು ತೋರಿದ ದಾರಿಯಲ್ಲಿ ನಡೆಯುತ್ತಿದೇವೆ. ದೇಶದ ಕ್ಷೇಮ ತಾನೇ ಸಾಧಿಸುತ್ತದೆ."

"ಆದರೂ ಹರಕೆಯ ನುಡಿ ಎನ್ನುವುದುಂಟಲ್ಲ. ಅದರ ಬಲಇದ್ದೇ ಇದೆ."

"ಬಲ ಇದೆ ಎಂದೇ ನಾವು ಅದನ್ನು ನುಡಿಯಲು ಹಿಂದುಮುಂದು ನೋಡುವುದು."

"ಅದೇಕೆ?"

"ಅಯ್ಯಾ, ಲೋಕಸಂಕಲ್ಪ ಉಂಟಲ್ಲ. ನಮ್ಮ ಸಂಕಲ್ಪ ಅದಕ್ಕೆ ಎದುರಾಗಬಾರದು."

"ಇಷ್ಟುಜನಕ್ಕೆ ಒಳಿತು ಎಂದವರು ದೇಶಕ್ಕೆಒಳಿತು ಎನ್ನಲಾಗದೆ?"

"ಅಷ್ಟುಮಟ್ಟಿಗೆ ಹೇಳಬಹುದು."

"ಅದು ಲೋಕಸಂಕಲ್ಪಕ್ಕೆ ವಿರೋಧವಲ್ಲವೆ?"

"ಅಲ್ಲ. ಲೋಕಸಂಕಲ್ಪ ನಡೆಯಬೇಕು. ಆ ನಡೆದದ್ದು ಇವರಿವರಿಗೆ ಶುಭಕಾರಿ ಆಗಬೇಕು."

"ನಡೆಯಬೇಕಾದದ್ದು ನಡೆಯುವುದಕ್ಕೆ ಇವರು ಮಹಾತ್ಮರಲ್ಲಿ ಏಕೆ ಬರಬೇಕು?"

"ಅವರ ಮನಸ್ಸಿನ ತೃಪ್ತಿಗಾಗಿ."

"ಆಯಿತು. ಈ ದಿನ ನಿಮ್ಮ ಮೊಮ್ಮಗಳು ಬಂದಿದಾಳಲ್ಲ. ಅವಳಿಗೆ ಏನು ತಮ್ಮ ಅನುಗ್ರಹ?"

"ಲೋಕಸಂಕಲ್ಪ ಕೆಡದಂತೆ ಅವಳ ಬಯಕೆ ಸಲ್ಲುತ್ತದೆ."

"ನಾನು ಬಯಸುವುದನ್ನು ಬಯಸಿಯೇ ಅವಳು ಇಲ್ಲಿಗೆ ಬಂದಿರುವುದು."

"ಒಳ್ಳಿತು ನೋಡೋಣ."

"ಅವಳಿಗೆ ಮಾಡುವ ಅನುಗ್ರಹವನ್ನು ನನಗೂ ಮಾಡಬಹುದಲ್ಲ."

"ಅವಳು ಸಂಸಾರಿ. ನೀನು ಸಂನ್ಯಾಸಿ. ಸಂಸಾರಿ ಹೆಣ್ಣುಮಗುವಿನ ವಿಷಯಕ್ಕೆ ಮಾಡುವ ಅನುಗ್ರಹವನ್ನು ಸಂನ್ಯಾಸಿಯ ವಿಷಯಕ್ಕೆ ಮಾಡಲಾಗದು. ಅಲ್ಲದೆ ನಿನ್ನ ಅವಳ ಮನೋಧರ್ಮಕ್ಕೆ ಬಹಳ ಅಂತರವಿದೆ."

"ಅದು ಹೇಗೆ?"

"ಅವಳು ಸಂಸಾರಿಯಾದರೂ ನಿಸ್ವಾರ್ಥದಿಂದ ಬಂದಿದಾಳೆ. ನೀನು ಸಂನ್ಯಾಸಿಯಾಗಿದ್ದರೂ ಸ್ವಾರ್ಥದಲ್ಲಿ ಸಿಕ್ಕಿದೀಯೆ."

"ಅವಳ ಮನಸ್ಸು ಈಗಾಗಲೆ ತಮಗೆ ತಿಳಿದಿದೆ?"

ಸಿದ್ಧನು ಇದಕ್ಕೆ ಉತ್ತರ ಹೇಳಲಿಲ್ಲ.

ಇಷ್ಟು ಹೊತ್ತಿಗೆ ಫಕೀರನು ಬಾಗಿಲಲ್ಲಿ ಕಾಣಿಸಿಕೊಂಡು, "ರಾಣಿ ಸಾಹೇಬಾ ದಯಮಾಡಿಸಿದಾರೆ," ಎಂದನು.

ಹಿರಿಯನು 'ಒಳಗೆ ಬರಲಿ' ಎಂದು ಹೇಳಿ ಸಂನ್ಯಾಸಿಯನ್ನು ಕುರಿತು, "ನೀನು ಅವಳನ್ನು ನೋಡುವುದಿಲ್ಲ, ಅಲ್ಲ? ಸಮಾಧಿಯ ಬಳಿ ಆ ಮುಖವಾಗಿ ಕುಳಿತುಕೊ ಹೋಗು," ಎಂದನು.

ಕಿರಿಯನು ಒಳಗುಹೆಗೆ ಹೋಗಿ ಬಾಗಿಲ ಕಡೆಗೆ ಬೆನ್ನುಮಾಡಿ ಕಣ್ಣುಮುಚ್ಚಿ ಧ್ಯಾನದಲ್ಲಿ ಕುಳಿತನು.

ಶಾಂತವ್ವ, ಹೆಗ್ಗಡಿತಿ, ಸೇವಕಿ ಕೆಂಚವ್ವೆಯೊಡನೆ ಹೊರಗಿಂದ ಗುಹೆಗೆ ಇಳಿದು ಬಂದರು. ಸಿದ್ಧನು "ಬನ್ನಿ ತಾಯಿ" ಎಂದು ಅವರನ್ನು ಸ್ವಾಗತಿಸಿದನು.

ಶಾಂತವ್ವ ಹತ್ತಿರಕ್ಕೆ ಬಂದು ಕೆಂಚವ್ವೆಯ ಕೈಯಲ್ಲಿದ್ದ ಫಲಪುಷ್ಪದ ತಟ್ಟೆಯನ್ನು ಹಿರಿಯನೆದುರಿಗೆ ಇಟ್ಟು ಅವನಿಗೆ ಮಂಡಿಯೂರಿ ನಮಸ್ಕಾರ ಮಾಡಿದಳು. ಸಿದ್ಧನು "ಒಳ್ಳಿತು ತಾಯಿ, ಆಯಿತು," ಎಂದನು.

ಆಮೇಲೆ ಹೆಗ್ಗಡಿತಿ, ಅವಳಾದಮೇಲೆ ಕೆಂಚವ್ವೆ, ಅಂತೆಯೇ ನಮಸ್ಕಾರ ಮಾಡಿದರು. ಸಿದ್ಧನು ಅವರಿಗೆ 'ಒಳ್ಳಿತು.' ಎಂದು ಹರಕೆ ನುಡಿದನು.

ಇದಾದಮೇಲೆ ಸಿದ್ಧನು ಇವರಿಗೆ ಕುಳ್ಳಿರಹೇಳಿ ಸನ್ನೆಮಾಡಿದನು. ಶಾಂತವ್ವ ಹೆಗ್ಗಡಿತಿ ಕುಳಿತರು. ಕೆಂಚವ್ವೆ ರಾಣಿಯ ಹಿಂದೆನಿಂತಳು. ಸಿದ್ಧನು ಮೂವರಿಗೂ ಮೃತ್ತಿಕೆಯ ಪ್ರಸಾದವನ್ನು ಕೊಟ್ಟನು. ಶಾಂತವ್ವೆಯನ್ನು "ಎಲ್ಲರೂ ಕ್ಷೇಮವಷ್ಟೆ?" ಎಂದು ಕೇಳಿದನು.

ಶಾಂತವ್ವೆ, "ಹಿರಿಯರ ಅನುಗ್ರಹ, ಎಲ್ಲ ಕ್ಷೇಮ," ಎಂದಳು.

ಸಿದ್ಧನು ಪ್ರಸನ್ನ ಮುಖದಿಂದ ಅವಳನ್ನು ನೋಡಿದನು. ಒಂದು ಕ್ಷಣ ನೋಡಿ "ನಮ್ಮ ಹಿರಿಯರ ಸಮಾಧಿಗೆ ಹೋಗಿದ್ದಿರಷ್ಟೆ?" ಎಂದನು.

"ನಿನ್ನೆ ಹೋಗಿದ್ದೆವು. ಈಗ ಮತ್ತೆ ಹೋಗುತ್ತೇವೆ."

"ಸರಿ. ನೀವು ಬಂದದ್ದು ಸಂತೋಷ. ಇನ್ನು ನೀವು ಹೋಗಿ ಬರಬಹುದು."

ಶಾಂತವ್ವ ಎದ್ದಳು. ಸಿದ್ಧನಿಗೆ ಮತ್ತೆ ನಮಸ್ಕಾರ ಮಾಡಿದಳು. ಎದ್ದುನಿಂತು 'ಬರುತ್ತೇವೆ' ಎಂದು ಹೆಗ್ಗಡಿತಿ ಕೆಂಚವ್ವೆಯೊಡನೆ ಗುಹೆಯಿಂದ ಹೊರಕ್ಕೆ ಬಂದಳು.

೬

ಆ ದಿನ ಶಾಂತವ್ವ ಪೀಠದಲ್ಲಿ ನೆರೆದಿದ್ದ ಸಾಧುಗಳಿಗೆ ಊಟದ ಏರ್ಪಾಡನ್ನು ಮಾಡಿದಳು. ವಂಶದ ಹಿರಿಯನ ಸಮಾಧಿಯಲ್ಲಿ ಸೇವೆ ಸಲ್ಲಿಸಿದ ಬಳಿಕ ಅವಳು ಈ ಊಟದ ವ್ಯವಸ್ಥೆ ಸರಿಯಾಗಿ ನಡೆದಿದೆಯೆಂದು ನೋಡಿಕೊಂಡು ಬೀಡಾರಕ್ಕೆ ಹೋದಳು. ಇಲ್ಲಿ ಊಟ ಆಯಿತೆಂದು ಸುದ್ದಿಬಂದಮೇಲೆ ತಾನು ಊಟ ಮಾಡಿದಳು. ಆ ರಾತ್ರಿ ಇದ್ದು ಮಾರನೆಯ ಬೆಳಿಗ್ಗೆ ಹೆಗ್ಗಡಿತಿಯೊಡನೆ ವಸ್ತಾರೆಯನ್ನು ಕುರಿತು ಪ್ರಯಾಣ ಬೆಳಸಿದಳು.

ಅಲ್ಲಂಪುರ, ಬಸವನಹಳ್ಳಿ ಚಿಕ್ಕಮಂಗಳೂರು, ಮೂಗುತಿಹಳ್ಳಿ ಮಾರ್ಗವಾಗಿ ಇವರು ವಸ್ತಾರೆಯನ್ನು ಸೇರಿದರು. ಆ ವೇಳೆಗೆ ಊರಿನಲ್ಲಿ ಬೂದಿಬಸವ ಆ ಪ್ರಾಂತಕ್ಕೆ ಬಂದಿದ್ದಾನೆಂದೂ ಕೆಸವೆಯ ಹತ್ತಿರ ಬೆಟ್ಟದ ಬುಡದಲ್ಲಿ ಇದ್ದಾನೆಂದೂ ಸುದ್ದಿಹಬ್ಬಿತು. ಹೆಗ್ಗಡಿತಿಯ ಶಂಕೆಯನ್ನು ನಿಜಮಾಡುವಂತೆ, ಅವಳ ಊರಿನ ಜೀತಗಾರ ಸಗುನ, ಮಲ್ಲಿಗೆ, ಆ ಹಿಂದಿನ ದಿವಸ ಕರಣಿಕನ ಅಪ್ಪಣೆಯನ್ನು ಕೂಡ ಕೇಳದೆ ಸ್ವಾಮಿಯನ್ನು ನೋಡಬೇಕೆಂದು ಕೆಸವೆಗೆ ಹೊರಟು ಬಿಟ್ಟಿದ್ದರು.

ಈ ಮಲ್ಲಿಗೆ ಸಗುನರ ಕಥೆ ಹೆಗ್ಗಡಿತಿಗೆ ತುಂಬ ತೊಂದರೆ ಕೊಡುತ್ತಿತ್ತು. ಸಗುನ ಹೆಗ್ಗಡಿತಿಯ ಗ್ರಾಮಕ್ಕೆ ಹೆಸರು ತಂದ ತರುಣ. ಹಿಂದಿನ ವರ್ಷ ನಾಡಿನ ಜನ ಸೀತಾಳೇಶ್ವರನ ಉತ್ಸವಕ್ಕೆ ಗಿರಿಯ ಬಳಿ ನೆರೆದಾಗ, ವಸ್ತಾರೆಯ ಜೀತದ ಪ್ರತಿನಿಧಿಯಾಗಿ ಇವನು ಉಳಿದ ಊರುಗಳ ಪ್ರತಿನಿಧಿಗಳಿಗಿಂತ ವೇಗದಿಂದ ಬೆಟ್ಟವನ್ನು ಹತ್ತಿ ದೇವರ ಹರೆಯನ್ನು ಹೊಡೆದು ಮರ್ಯಾದೆಯನ್ನು ಗೆದ್ದಿದ್ದನು. ವಸ್ತಾರೆ ಗಿರಿಯ ಬುಡದ ಗ್ರಾಮ ಅಲ್ಲ. ಇಲ್ಲಿಯ ಜೀತ ದಿನವೂ ಬೆಟ್ಟ ಹತ್ತಬೇಕಾದ ಕೆಲಸವಿಲ್ಲ; ಅಡಿವಾರದ ಗ್ರಾಮಗಳ ಜನ ದಿನವೂ

ಬೆಟ್ಟಹತ್ತಿ ಇಳಿದು ವಾಡಿಕೆ ಉಳ್ಳವರು. ಆದ್ದರಿಂದ ಸಾಮಾನ್ಯವಾಗಿ ಈ ಪಂದ್ಯದಲ್ಲಿ ಅವರೇ ಗೆಲ್ಲುವರು. ಇಂಥದರಲ್ಲಿ ಈ ಒಂದು ಸಲ ವಸ್ತಾರೆಯ ತರುಣ ಒಂದು ಚಿರತೆಯಂತೆ ಕಾಡಿನಲ್ಲಿ ತೂರಿ, ಬೆಟ್ಟವನ್ನು ಏರಿ, ಅಡಿವಾರದ ಶೂರರನ್ನು ಸೋಲಿಸಿದ್ದನು. ಇದರಿಂದ ಹೆಗ್ಗಡಿತಿಗೆ ಸಗುನನನ್ನು ಕುರಿತು ದಾಕ್ಷಿಣ್ಯ.

ಆದರೆ ಇವನು, ಮಲ್ಲಿಗೆ, ನಡೆಯುತ್ತಿದ್ದರೀತಿ ತಪ್ಪು. ಮಲ್ಲಿಗೆ ಸಣ್ಣ ಹುಡುಗಿಯಾಗಿದ್ದಾಗಲೆ ಅವಳು ಜವರ ಎಂಬವನನ್ನು ಮದುವೆ ಯಾಗಬೇಕೆಂದು ಹೆಗ್ಗಡತಿಯ ಯಜಮಾನ ಅಪ್ಪಣೆ ಮಾಡಿದ್ದನಂತೆ. ಬೆಳೆದ ಹುಡುಗಿ ಮಲ್ಲಿಗೆ ತಾನು ಸಗುನನನ್ನು ಮದುವೆಯಾಗುತ್ತೇನೆ ಎಂದು ಹಟ ಹಿಡಿದಿದ್ದಳು. ಸಗುನ ಒಲ್ಲೆ ಎನ್ನಬೇಕು; ಎಂದಿರಲಿಲ್ಲ. 'ಒಲ್ಲೆ ಅನ್ನೊ' ಎಂದು ಹೆಗ್ಗಡಿತಿ ಅವನಿಗೆ ಹತ್ತುಸಲ ಹೇಳಿದ್ದಳು. ಸಗುನ, "ಹೆಣ್ಣು ನಿನ್ನೇ ಮದುವೆಯಾಗ್ತೇನೆ ಅಂದರೆ ಗಂಡು ಒಲ್ಲೆ ಅನ್ನಬಹುದೆ ಅವ್ವ? ಜವರನಿಗೆ ಸಣ್ಣೀನ ಕೊಡಿ. ಮಲ್ಲಿಗೆ ನನಗಿರಲಿ," ಎಂದಿದ್ದನು. ಸಾಮಾನ್ಯವಾಗಿ ಜೀತ ಇಷ್ಟು ಮಾತಾಡುವಂತಿಲ್ಲ. ಸಗುನ ಊರಿಗೆ ಮರ್ಯಾದೆ ತಂದವನು; ಆದಕಾರಣ ಅವನಿಗೆ ಇಷ್ಟು ಸ್ವಾತಂತ್ರ್ಯ. ಸಣ್ಣಿಯನ್ನು ಜವರನಿಗೆ ಕೊಡೋಣ ಎಂದರೆ ಹೆಗ್ಗಡೆ ಅವಳನ್ನು ಚೌಡನಿಗೆ ಎಂದು ಗೊತ್ತುಮಾಡಿದ್ದನು. ಸಣ್ಣಿ ಜವರನಿಗೆ ಆಗಿ, ಮಲ್ಲಿಗೆ ಸಗುನನಿಗಾದರೆ ಚೌಡನಿಗೆ ಒಂದು ಹುಡುಗೀನ ಹುಡುಕ ಬೇಕು. ಅವನು ವಯಸ್ಸಿನಿಂದ ಸಗುನನಿಗಿಂತ ಹಿರಿಯ. ಅವನ ಮದುವೆ ಮೊದಲು ಗೊತ್ತಾಗಬೇಕು. ಹೇಗೆ ಮಾಡುವುದು? ಅಲ್ಲದೆ, ಹುಡುಗಿ ಹಟಮಾಡಿದಳು ಎಂದು ಈಸಲ ಹೆಗ್ಗಡಿತಿ ದಾರಿಕೊಟ್ಟರೆ ಜೀತದ ಹುಡುಗಿಯರೆಲ್ಲ ಹೀಗೆಯೇ ಮಾಡಬಹುದು. ಆಮೇಲೆ ಜೀತವನ್ನ ಅಂಕೆಯಲ್ಲಿಡುವ ದಾರಿ?

ಊರೊಳಕ್ಕೆ ಬರುತ್ತಿದ್ದ ಹಾಗೆಯೆ ಮಲ್ಲಿಗೆಯ ಸುದ್ದಿ ಕಿವಿಗೆ ಬಿದ್ದು ಹೆಗ್ಗಡಿತಿ ಕಿರಿಯ ರಾಣಿಗೆ, "ಅವ್ವ, ಇದೇ ನಾ ಹೇಳಿದ್ದು" ಎಂದು ಕಥೆಯನ್ನೆಲ್ಲ ಹೇಳಿದಳು. ಈ ಮಾತನ್ನು ಕೇಳುತ್ತ ಊರನ್ನು ಹೊಕ್ಕು ಶಾಂತವ್ವ ಹೆಗ್ಗಡಿತಿಯ ಮನೆಯಲ್ಲಿ ಇಳಿದುಕೊಂಡಳು.

ಮನೆಯಲ್ಲಿ ಹೆಗ್ಗಡಿತಿಯ ಸೊಸೆ ಮನೆತಪ್ಪಿದ ಹೆಂಗಸು, ಅವಳ ಮಗು ಮುಂದಿನ ಹೆಗ್ಗಡೆ, ಇದ್ದರು. ಶಾಂತವ್ವ ಆ ಸೊಸೆಯನ್ನು ಮಾತ ನಾಡಿಸಿದಳು; ಅವಳೂ ತನ್ನಂತೆಯೆ ಒಬ್ಬ ನಿಸ್ಸಹಾಯಳಾದ ಹೆಂಗಸು ಎಂದು ಕಂಡು ಅವಳಿಗಾಗಿ ಮನಮರುಗಿದಳು. ಹೆಗ್ಗಡೆಯಾಗುವ ಸಣ್ಣ ಹುಡುಗ ತಾಯ ಹತ್ತಿರ ಹುದುಗಿಕೊಂಡು ಹೊಸಮುಖಕ್ಕೆ ಅಂಜಿ ನಿಂತನು; ಅಜ್ಜಿಯ ವಿಷಯದಲ್ಲೂ ಅವನು ಅಷ್ಟೇನೂ ಸಲಿಗೆ ತೋರಿಸಲಿಲ್ಲ. ಶಾಂತವ್ವನಿಗೆ, ಈ ಮುದುಕಿಯ ಸ್ವಭಾವ ಕಠಿನ, ಇವಳ ನೆರಳಲ್ಲಿ ಯಾರೂ ತಲೆಯೆತ್ತಿ ನಿಲ್ಲುವಂತಿಲ್ಲ, ಎನ್ನಿಸಿತು. ತನ್ನ ಅತ್ತೆ ಇಷ್ಟು ಕಠಿನ ಸ್ವಭಾವ ದವಳಲ್ಲ; ಆದರೆ ಅವಳ ನೆರಳಲ್ಲೂ ಜನ ತಲೆಯೆತ್ತಿ ನಿಲ್ಲುವಂತಿಲ್ಲ. ಏನೋ ಈ ಮನೆತನವನ್ನೂ ಅಷ್ಟೆ, ಆ ಮನೆತನವನ್ನೂ ಅಷ್ಟೆ, ದೇವರು ಕಾಪಾಡಬೇಕು. ಮುಪ್ಪಿನ ಜನ ಹೀಗೆ ಹಟವಂತರಾದರೆ ಮನೆಮಕ್ಕಳ ಬದುಕು ಒಂದು ಬದುಕಲ್ಲ.

ರಾಣಿ ಬರುವಳೆಂದು ತಿಳಿದು ಹತ್ತು ಊರಿನ ಹಿರಿಯರು ಬಂದಿದ್ದರು. ಸಂಜೆಯಲ್ಲಿ ಹಾವಹಳ್ಳಿ ದ್ರೋಣನಕೊಡಿಗೆಯ ನಾಲ್ಕು ಕೋಲಾಟದ ಜನ ಕೋಲಾಟ ಹಾಕಿದರು. ಗೌಡರು ನಾಡ ಕುಣಿತವನ್ನು ಕುಣಿದರು.

## ೧೦

ಬೆಟ್ಟದ ಮೇಲೆ ಆಡುವುದಕ್ಕೆ ಆಗದೆ ಇದ್ದ ಎರಡು ಮಾತನ್ನು ಶಾಂತವ್ವನ ಸೇವಕಿಯೊಂದಿಗೆ ಹೆಗ್ಗಡಿತಿ ಇಲ್ಲಿ ಆಡಬಹುದಾಯಿತು. ಸೇವಕಿ ಕೆಂಚವ್ವೆ ನಿಜವಾಗಿ ಶಾಂವತ್ವನಿಗೆ ಸೇವಕಿಗಿಂತ ಹೆಚ್ಚಾಗಿ ಗೆಳತಿ. ಅವಳು ಚಿಕ್ಕಂದಿನಿಂದ ಒಡತಿಯೊಡನೆ ನೇಮಯ್ಯನ ಮನೆಯಲ್ಲೇ ಬೆಳೆದಿದ್ದಳು. ಹಸುಗೂಸು ಶಾಂತವ್ವನನ್ನು ತೊರೆದು ಅವಳ ತಾಯಿ ಕಣ್ಣುಮುಚ್ಚಿಕೊಂಡಾಗ, ಕೆಂಚವ್ವೆಯ ತಾಯಿ ಅವಳ ದಾದಿಯಾಗಿ ನಿಂತಿದ್ದಳು. ಅವಳಿಗೆ ಎದೆಹಾಲವನ್ನು ಕೊಟ್ಟು ಮಗಳು ಕೆಂಚವ್ವೆ ಯೊಂದಿಗೆ ಅವಳಿಗಿಂತ ಹೆಚ್ಚಾಗಿ ಈ ತಬ್ಬಲಿ ಮಗುವನ್ನು ಬೆಳಸಿದ್ದಳು.

ಶಾಂತವ್ವನಿಗೆ ಮದುವೆಯಾದಾಗ ಕೆಂಚವ್ವೆ ಅವಳೊಂದಿಗೆ ಅವಳ ಆಪ್ತಳಾಗಿ ಅರಮನೆಗೂ ಹೋದಳು. ಅವಳಿಗೂ ಈ ವೇಳೆಗೆ ಮದುವೆ ಆಗಿರಬೇಕು. ತನ್ನ ಒಡತಿಯ ಸ್ಥಿತಿ ಸ್ವಲ್ಪ ಸಂದಿಗ್ಧವಾಗಿದ್ದದ್ದರಿಂದ ಅವಳು ಒಡನೆ ಸಂಸಾರಿಯಾಗಲು ಇಷ್ಟಪಡಲಿಲ್ಲ. ಅವಳನ್ನು ಮದುವೆಯಾಗುವ ತರುಣ ಮಲ್ಲಯ್ಯ ಅರಮನೆಯ ಊಳಿಗದಲ್ಲಿ ಸೇರಿದವನು; ನಾಯಕನ ಮುಖ್ಯ ಸೇವಕನಾಗಿದ್ದನು. ಅವನು ಕೂಡ, "ಒಡೆಯರು ಪಟ್ಟ ಮಾಡಿಕೊಳ್ಳಲಿ. ಅಂದೇ ನಾವು ಮದುವೆಯಾಗೋಣ," ಎಂದಿದ್ದನು.

ಹೆಗ್ಗಡಿತಿ ಕೆಂಚವ್ವೆಯನ್ನು ಬೇರೆ ಒಂದು ಕಡೆಗೆ ಕರೆದುಕೊಂಡು ಹೋಗಿ, "ಕೆಂಚವ್ವ, ನಾನು ನಿಮ್ಮ ಒಡತಿಗೆ ಕೆಟ್ಟದು ಎಣಿಸೋವಳಲ್ಲ. ಇದ ನೀನು ಬಲ್ಲೆಯಲ್ಲ?" ಎಂದು ಕೇಳಿದಳು.

"ಬಲ್ಲೆ ಹೆಗ್ಗಡಿತಿಯೋರೆ."

"ನೋಡು, ಒಡತಿ ಇದಕೆ ಮುಂದಾಗೇ ಬಸುರಾಗಬೇಕಾಗಿತ್ತು. ಸಂಸಾರಿ ಹೆಣ್ಣುಮಗು ಹಿಂಗೆ ಬರೀ ಕಂಕುಳಾಗಿರೋದು ಒಳಿತಲ್ಲ. ನಾಯಕರು ನಿಮ್ಮ ಒಡತೀಗೆ ಸರಿಯಾಗಿ ನಡಕೊಳತಾ ಇದ್ದಾರೊ?"

"ರಾಣಿಯೋರು ಹೆಜ್ಜೆ ಇಕ್ಕೊ ಕಡೆ ಹೂವು ಹಾಸಿಯೇನು ಅಂತಾರೆ ನಾಯಕರು!"

"ಒಳ್ಳೇದಾಯಿತು. ಬೇರೆ ಎಲ್ಲೂ ಮನಸುಗಿನಸು ಹಾಯಿಸತಾ ಇಲ್ಲವಲ್ಲ."

"ಕಾಣಲಿಲ್ಲ ಹೆಗ್ಗಡಿತಿಯೋರೆ."

"ಕಾಣಲಿಲ್ಲ ಅಂದರೆ, ಸಾಲದು. ಇಲ್ಲ ಅನ್ನಬೇಕು. ಅಂಥದೇನಾದರೂ ಇದ್ದರೆ ಹತ್ತಿರದ ಹೆಣ್ಣು ನೀನು ಅದನೆಲ್ಲ ಉಪಾಯವಾಗಿ ತಪ್ಪಿಸಬೇಕು. ಗಂಡಿನ ಬುದ್ಧಿ ಎಂದಿದ್ದರೂ ಅಲೆಯೋದೇ. ನಮ್ಮ ಹೆಗ್ಗಡೆ ಹಂಗೇ ಇದ್ದರು. ನನ್ನ ಮಗ ಇದ್ದನಲ್ಲ ಅವನೂ ಹಂಗೇ. ಅಂದರೆ, ಮನೆ ಹೆಸರು ನಿಲ್ಲೋಕೆ ಒಂದು ಮಗ ಆದರೆ ಕಂಡ್ಯಾ, ಅವರು ಹೋದರು, ಮಗ ಇದ್ದ; ಅವನು ಹೋದ, ಒಂದು ಮೊಮ್ಮಗ ಅದೆ. ಅರಮನೇಗೆ ಬೇಗನೆ ಒಬ್ಬ ದಾತ ಹುಟ್ಟಬೇಕು."

"ಹೌದು, ಹೆಗ್ಗಡಿತಿಯೋರೆ."

"ದೊಡ್ಡರಾಣಿ ಮಗನಿಗೆ ಇನ್ನೊಂದು ಹೆಂಡರ ಮಾಡತೀನಿ ಅಂತ ಕೂತವರಂತೆ, ಹೌದೇನು?"

"ಹ್ಞೂ ಹಂಗಂತಿದ್ದರು. ನಾಯಕರು ಒಪ್ಪಲಿಲ್ಲ."

"ಅದೀಗ ಒಳ್ಳೇ ಮನುಷ್ಯ. ಹೇಳಿದ್ದೇ ಸಾಕೂ ಅಂತ ನಾಯಿ ಕವಳಕ್ಕೆ ಬಾಯಿ ತೆರೆದಂತೆ ಆಗಲಿ ಅಂದಿದ್ದರೆ ಮನೆ ಎಂತು ಉಳಿಯೋದು? ಅಂತೂ ಆ ಮಾತು ನಿಂತುಹೋಯ್ತಲ್ಲ?"

"ನಿಂತಿಲ್ಲ, ಹೆಗ್ಗಡಿತಿಯೋರೆ. ದೊಡ್ಡಮ್ಮಾಜಿಯೋರು ಆ ಚೆಲುವೀನ ಅರಮನೇಲಿ ತಂದು ಇರಿಸಿಕೊಂಡಿದ್ದಾರೆ. ದಿನಕ್ಕೆ ನಾಲ್ಕುಸಲ ಮಗನೆದುರು ಸುಳಿಯಬಿಡತಾರೆ. ನಾಯಕರು ಮದುವೆ ಆಗತೇನೆ ಅಂದರೆ ನಾಳೆ ಆಗಿಬಿಡಬಹುದು. ಮದುವೆ ಅಂತ ಆದರೆ ನಾಳಿದ್ದೇ ಪಟ್ಟಾನೂ ಆಗಬಹುದು."

"ಅಯ್ಯೋ, ಹಂಗೆಲ್ಲಾದರೂ ಆಗಿಬಿಟ್ಟಾತು. ಪಟ್ಟ ಅಲ್ಲ, ಮದುವೆ. ಈ ಮಾತ ನಾ ಒಡತೀಗೆ ಹೇಳೋಕಾಗೋದಿಲ್ಲ, ನಾಯಕರನ್ನ ಎಚ್ಚರದಿಂದ ಕಾದುಕೋ ಬೇಕೂ ಅಂತ ನೀ ಹೇಳು."

"ಒಡತೀರ ಮನಸ್ಸು ಈ ಸಣ್ಣಮಾತಿಗೆ ಒಪ್ಪೋದಿಲ್ಲ, ಹೆಗ್ಗಡಿತಿಯೋರೆ. ನಾಯಕರ ಸಂತೋಷ ಎಂತಿದ್ದರೆ ಅಂತು ನಡೀಲಿ ಅಂತಾರೆ."

"ಏನದು; ಬೇರೆ ಮದುವೆ ಆಗತೀನಿ ಅಂದರೆ, ಆಗಲಿ ಅಂತಲೆ?"

"ಸೈ. ಅವರಿಗೆ ಸುಖವಾಗಲೀ ಅಂತ, ತಮ್ಮ ಜೀವ ಬೇಕಾದರೆ ಬಿಡತೀವೀ ಅಂತಾರೆ. ಅವರು ಪೀಠದಲ್ಲಿ ಏನು ಹರಸಿಕೊಂಡರು, ನೀವು ಕಾಣಿರಿ."

"ಏನು ಹರಸಿಕೊಂಡರು?"

"ಮಗ ಬೇಕೂ ಅನ್ನಲಿಲ್ಲ. ಗಾದಿ ಬೇಕೂ ಅನ್ನಲಿಲ್ಲ. ಗಂಡ ನಗತಾ ಇರಬೇಕು, ತಾನು ತಾಯಿತಿಯೊಂದಿಗೆ ಕಣ್ಣುಮುಚ್ಚಿಕೊಳ್ಳಬೇಕೂ ಅಂದರು. ತನ್ನೊಂದಿಗೆ ನಗತಿರಬೇಕೂ ಅಂತಲ್ಲ; ಎಲ್ಲಿ ನಕ್ಕರೂ ಸಮನೆ. ಆ ಮುಖ ನಗತಾ ಇರಬೇಕು; ತಾನು ತಾಯಿತಿಯೊಂದಿಗೆ ತೀರಿಕೋಬೇಕು. ಇದನ್ನು ಬೇಡಿದರು ಒಡತಿ, ದೇವರತಾವ."

"ಅಯ್ಯೋ, ದೇವರನ್ನ ಹಿಂಗೆ ಕೇಳಬಾರದವ್ವ! ದೇವರೂ ದೇವರೂ ಅಂತೀವಿ. ಕೇಳಿದ್ದಕ್ಕೆ ಹ್ಞು ಅಂತ ಏತರದೊ ವಕ್ರಮಾಡ ತಾರೆ ದೇವರು. ತಾಯಿತಿ ಒಂದಿಗೆ ಸಾಯತೀನಿ ಅಂದರೆ, ನಾಳೀನೆ ಸಾಯಿ ಅನ್ನಬಹುದು. ಇದು ಯಾತರ ಬೇಡಿಕೆ?"

"ಹೆಂಗೊ? ಅವರ ಮನಸು ಅಂತೇ. ಯಾವುದರಲ್ಲೂ ಆಶೆ ಇಲ್ಲ ಅವರಿಗೆ. ಇಷ್ಟಕ್ಕೆ ಆಶೆ ಪಟ್ಟರೆ 'ಕೊ' ಅನ್ನೊವರ್ಯಾರು? ಪಡದಿರೋದೆ ಒಳ್ಳೇದೂ ಅನ್ನಿ."

"ನಿಜವಾದ ಮಾತು ಕೆಂಚವ್ವ. ಅದಕಾಗಿಯೆ ನಿನಗೆ ಹೇಳತೀನಿ. ನೀನು ಬರೀಜೊತೆ ಅಂತ ತಿಳೀಬೇಡ, ಕಾವಲು ಅಂತ ತಿಳಿ. ಹೋದರೆ ಹೋಗಲೀ ಅಂತ ಒಡತಿ ಅನ್ನಲಿ; ನೀನದಕ್ಕೆ ಒಪ್ಪಬೇಡ. ನಾಯಕರನ್ನ ಕಾದುಕೊಬೇಕು; ಆ ಬೇರೆಯೋಳನ್ನ ಹೆಂಗಾದರೂ ಎತ್ತಲಾದರೂ ಸಾಗಿಸಬೇಕು"

"ಇದನೆಲ್ಲ ನಾನು ಒಬ್ಬಳು ಹೆಂಗೆ ಮಾಡಲವ್ವ?"

"ನಾನು ಜನಾನ ಕೊಡತೀನಿ ಕೆಂಚವ್ವ. ಊಳಿಗಕ್ಕೆ ಸೇರಿಸಿಕೊ; ಕಾವಲು ನಿಲ್ಲಿಸಿಕೊ; ಒಡತಿಯ ಒಳ್ಳೇದನ್ನ ಹತ್ತು ಕೈಯಿಂದ ಕಾದುಕೊ. ಏನಂತಿ?"

"ಒಡತೀರನ ಕೇಳಿ ಹೇಳತೇನರವ್ವ."

"ಇನ್ನೊಂದು ಸಂಗತಿ ನನ್ನ ಕಿವಿಗಿ ಬಿದ್ದದೆ. ಹೌದೇ, ತಿಳಿದಿದ್ದರೆ ಹೇಳು. ನಂಬಯ್ಯ ನಾಯಕರನ್ನ ತೀರಿಸಬೇಕೂ ಅಂತ ಮಾಡಿದ್ದಾನಂತೆ. ಹೌದೊ?"

"ಅವನು ಏನಮಾಡವೊಲ್ಲ ಹೆಗ್ಗಡಿತಿಯೋರೆ?"

"ಅಯ್ಯೊ ಶಿವನೆ, ಹಂಗಾರೆ ಏನು ದಾರಿ?"

"ನಂಬಯ್ಯನ ತಲೆ ನಾಯಕರ ಉಂಗುಟಕ್ಕೆ ಸಮಾನ ಅಲ್ಲ! ಅವನ ಬುದ್ದಿ ಕೆಟ್ಟ. ಅಂದರೆ ಅವಮಾಡಬಲ್ಲ ಏನ? ಮಾಸಲಂಬಲೀಗೆ ಸಾಯಿ ನಾಲಿಗೆ ಚಾಚಿದಂತೆ. ಅವ ನಾಯಕರನ್ನ ಏನು ಮುಟ್ಟಿಯಾನು?"

"ಆದರೂ ಅಷ್ಟು ಧೈರ್ಯವಾಗಿ ಇರಬಾರದವ್ವ. ನಾಲ್ಕು ಕಡೆ ಕಣ್ಣಿಟ್ಟು ನೋಡಿಕೊಳಬೇಕು."

ಹೀಗೆ ಹೆಗ್ಗಡಿತಿ ರಾಜಕುಟುಂಬದ ಕ್ಷೇಮಕ್ಕಾಗಿ ತನಗೆ ತೋರಿದ ಸಂಗತಿಯನ್ನು ಕೆಂಚವ್ವೆಗೆ ತಿಳಿಸಿದಳು. "ಇದನ್ನೆಲ್ಲಾ ಸರಿಯಾದ ರೀತಿಯಲ್ಲಿ ನಿನ್ನ ರಾಣಿಗೆ ತಿಳಿಸು. ಅವರು ನಾಯಕರಿಗೆ ತಿಳಿಸಲಿ. ಇವರಿಬ್ಬರೂ ವಸತಾರೆಯಲ್ಲಿ ತಮ್ಮದು ಅಂತ ಒಂದು ಮನೆ ಇರೋದ ತಿಳಿದಿರಲಿ. ಈ ಮಂದಿ ಸೊಂಟಕಟ್ಟಿ ನಿಂತಿದೆ," ಎಂದಳು. ಕೆಂಚವ್ವೆ ಸಂಗತಿಯನ್ನೆಲ್ಲ ಒಡತಿಗೆ ಅರುಹುವುದಾಗಿ ಒಪ್ಪಿಕೊಂಡಳು.

ಮಾರನೆಯ ದಿನ ಶಾಂತವ್ವ ತನ್ನ ಪರಿವಾರದೊಡನೆ ಬಿದನೂರ ಕಡೆಗೆ ಪ್ರಯಾಣ ಬೆಳಸಿದಳು.

## ೧೧

ಈ ಕಾಲದಲ್ಲಿ ಹಿಪ್ಪಲದ ಅಡಿವಾರದ ಕೆಸವೆಯ ಹತ್ತಿರ ಬೂದಿ ಬಸವಸ್ವಾಮಿ ತನ್ನ ಕಾರ್ಯದಲ್ಲಿ ಪ್ರವೃತ್ತನಾಗಿದ್ದನು.

ಬೂದಿಬಸವಸ್ವಾಮಿ ಈಗ ಒಂದು ವರ್ಷದಿಂದೀಚೆಗೆ ನಾಡಿನಲ್ಲಿ ಸುತ್ತಲು ತೊಡಗಿದ್ದನೆಂದು ಈ ಮೊದಲು ಹೇಳಿದೆ. ಅವನು ಎಲ್ಲಿಂದ ಬಂದವನು, ಅವನ ಹಿಂದು ಮುಂದೇನು, ಎಂದು ಯಾರೂ ಕಾಣರು. ಅವನು ಅಂಥ ವಯಸ್ಸಾದ ಮನುಷ್ಯನೇನೂ ಅಲ್ಲ. ಆದರೆ ತುಂಬ ಕಠಿನ ನಿಯಮದಿಂದ ಬಾಳನ್ನು ಸಾಗಿಸುತ್ತಿದ್ದನು. ಹಿಪ್ಪಲದ ಪ್ರಾಂತಕ್ಕೆ ಬಂದ ಮೊದಲಲ್ಲಿ ಅವನು ಐಹೊಳೆಯ ಒಂದು ಮಠದ ಅಯ್ಯನನ್ನು ಗುರುತು ಮಾಡಿಕೊಂಡನು; ಅಲ್ಲಿಂದ ಮೊದಲು ಅವನೊಬ್ಬನೊಂದಿಗೆ ಹೊರತು ಉಳಿದ ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಅವನೊಂದಿಗೆ ಕೂಡ ರಾತ್ರಿ ತನ್ನ ನಿಯಮದಂತೆ ಯಾವುದೊ ಒಂದು ಹೊತ್ತಿನಲ್ಲಿ ಇಷ್ಟೇ ಮಾತು ಎಂದು ಲೆಕ್ಕಮಾಡಿ ಮಾತಾಡುವನು. ಅವನನ್ನು ಕಾಣುವೆವು ಎಂಬ ಜನರು ತಂಡ ತಂಡವಾಗಿ ಅವನಿರುವ ಕಡೆಗೆ ಹೋಗುವರು; ಹತ್ತಿರ ನಿಂತು ಕಾಣಿಕೆ ಒಪ್ಪಿಸುವರು. ಅವನು ಇದು ಯಾವುದನ್ನೂ ಸ್ವಂತಕ್ಕೆ ಎಂದು ಸ್ವೀಕರಿಸುತ್ತಿರಲಿಲ್ಲ; ಹತ್ತಿರ ಬಂದ ಬಡ ಜನಕ್ಕೆ ಮಕ್ಕಳಿಗೆ ಹಂಚಿಕೊಡುವನು. ಸಂಜೆಯ ಹೊತ್ತಿಗೆ ಅವನ

ಹತ್ತಿರ ಅವನ ವಾಡಿಕೆಯ ವಸ್ತ್ರ ಹೊರತಾಗಿ, ಹಣ್ಣು ಹಂಪಲು ಬಟ್ಟೆ ಕಾಸು ಒಂದು ತೃಣ ಇರುತ್ತಿರಲಿಲ್ಲ. ಸ್ವಾಮಿ ಎಂದು ಪುಣ್ಯವಂತರು ಕೈತುಂಬ ಕಾಣಿಕೆ ತಂದು ಒಪ್ಪಿಸುವರು: ಬಡವರಿಗೆ ಕೊಡುತ್ತಾನೆ ಎಂಬ ಕಾರಣದಿಂದ ಹೊಟ್ಟೆಗಿಲ್ಲದ ಜನ ಸಂಕೋಚವಿಲ್ಲದೆ ಹತ್ತಿರ ಬಂದು ಕೈಯೊಡ್ಡಿ ಬೇಡುವರು. ಹೀಗೆ ಸ್ವಾಮಿ ಹಣವಂತರ ಸಹಾಯ ವನ್ನು ಪಡೆದು ಬಡವರ ಹಸಿವನ್ನು ನೀಗುವ ಒಂದು ಸಂಸ್ಥೆಯಾಗಿದ್ದನು.

ಗ್ರಾಮಗಳ ಹತ್ತಿರ ನಿಂತಾಗ ಊರಿನ ಜನಕ್ಕೆ ಹೀಗೆ ಸೇವೆ ಕೊಡುವಂತೆ ಸ್ವಾಮಿ ಕಾಡಿನಲ್ಲಿ ನಿಂತವೇಳೆ ಕಳ್ಳಕಾಕರ ಕಷ್ಟ ಸುಖಕ್ಕೆ ಕೂಡ ಆಗುತ್ತಿದ್ದನೆಂದು ಜನದ ತಿಳಿವಳಿಕೆ. ಹಿಪ್ಪಲದ ಕಳ್ಳರ ಪಡೆ ಇವನನ್ನು ಗುರುವಾಗಿ ಸ್ವೀಕರಿಸಿದ್ದಿತು ಎಂದು ಸುದ್ದಿ ಹರಡಿತು. ಇದಕ್ಕೆ ತಕ್ಕಂತೆ ಇವನು ಈ ಪ್ರಾಂತ್ಯ ಬಂದಾಗಲೆಲ್ಲ ತಪ್ಪದೆ ಒಂದು ಸಲ ಆ ಬೆಟ್ಟದ ತಲೆಗೆ ಏರಿ ಅಲ್ಲಿ ಎರಡು ದಿನ ಇದ್ದು ಇಳಿಯುವನು. ಗಿರಿಯ ಶಿಖರದಲ್ಲಿ ಹಿಪ್ಪಲೇಶ್ವರನ ದೇವಾಲಯ ಉಂಟು. ಅದರ ದೈವವನ್ನು ಕಳ್ಳರು ತಮ್ಮ ಅಭಿಮಾನಿ ದೈವ ಎಂದು ಕಂಡು ನಡೆದುಕೊಳ್ಳುತ್ತಿದ್ದರು. ಈಸಲ ಸ್ವಾಮಿ ಈಗಾಗಲೆ ಬೆಟ್ಟವನ್ನು ಹತ್ತಿ ಇಳಿದಿದ್ದನು.

ವಸ್ತಾರೆಯ ಮಲ್ಲಿಗೆ ಸಗುನ ಕೆಸವೆಯಲ್ಲಿ ಸ್ವಾಮಿಯ ಹತ್ತಿರ ಮುಟ್ಟುವವೇಳೆಗೆ ಅವನ ಗುಡಿಸಲ ಸುತ್ತ ಜನ ಒಂದು ಪರಿಷೆಯಂತೆ ನೆರೆದಿದ್ದಿತು. ಪುಣ್ಯವಂತರು ತಂದು ಕೊಟ್ಟ ಕಾಣಿಕೆಯ ಪದಾರ್ಥ ಗಳನ್ನು ಅವನು ಬಡವರಿಗೆ ಮಕ್ಕಳಿಗೆ ಹಂಚುತ್ತಿದ್ದನು. ಹತ್ತಿರದ ಜನ ಬಂದವರಿಗೆಲ್ಲ ಅಷ್ಟಷ್ಟು ಹಣ್ಣು ಹಿಟ್ಟು ಬೆಲ್ಲವನ್ನು ಕೊಟ್ಟುಕಳುಹಿಸು ವರು. ಬೇಡುವರು ಬಹುಜನ ಇದ್ದರೂ ಗದ್ದಲ ಇರಲಿಲ್ಲ. ನೂಕು ನುಗ್ಗಲಾದರೆ ಸ್ವಾಮಿ ಕೋಪಿಸಿಕೊಂಡು, ಗದ್ದಲ ಮಾಡಿದವರ ಮನೆ ಹಾಳಾದೀತು, ಎಂದು ಗುಂಪಿನಲ್ಲಿ ಒಂದು ಭಯ ಇದ್ದಿತು.

ಬಂದ ಜನವೆಲ್ಲ ಸ್ವಲ್ಪ ಹೊತ್ತಿನಲ್ಲಿ ತಮ್ಮ ತಮ್ಮ ಸ್ಥಳಕ್ಕೆ ಎಂದು ಹಿಂತಿರುಗಿ ಹೊರಟರು. ಸಗುನ ಮಲ್ಲಿಗೆ ಆ ಮೇಲೆ ಗುರುವಿನ ಸಮ್ಮುಖಕ್ಕೆ ಬಂದು ಮಂಡಿ ಊರಿ ನಮಸ್ಕಾರ ಮಾಡಿ ಎದ್ದು ನಿಂತರು; ಕೈಮುಗಿದೇ ಇದ್ದರು. ಸ್ವಾಮಿ ಹತ್ತಿರದ ಮನುಷ್ಯನಿಗೆ, "ಇವರ ವಿಷಯ

ಏನು ವಿಚಾರ ಮಾಡು," ಎಂದು ಸನ್ನೆಯಿಂದ ಬೆಸಸಿದನು. ಹತ್ತಿರದ ಅಯ್ಯ ಇವರಿಗೆ, "ನೀವು ಯಾರು, ಎಲ್ಲಿಯವರು? ಸಂಗತಿಯೆಲ್ಲ ಅರಿಕೆ ಮಾಡಿ," ಎಂದನು.

ಮಲ್ಲಿಗೆ, "ನಾವು ವಸ್ತಾರೆ ಜೀತ. ನಾನು ಮಲ್ಲಿಗೆ, ಇವ ಸಗುನ. ನಾವು ಮದಿವೆಯಾಗಬೇಕೊಂದ್ರೆ ಹೆಗ್ಗಡಿತಿ ಬ್ಯಾಡಾಂತಾರೆ. ನನ್ನ ಜವರನ್ನ ಮದುವೆಯಾಗೂಂತಾರೆ. ನಾನು ಜವರನ್ನ ಒಲ್ಲೆ. ಸ್ವಾಮಿ ನನ್ನ ಸಗುನಗೆ ಮದುವೆ ಮಾಡೂಂತ ಹೆಗ್ಗಡಿತೀಗೆ ಬೆಸಸಬೇಕು," ಎಂದಳು.

ಅಯ್ಯ, "ಹೆಗ್ಗಡಿತಿಯವರು ನಿಮ್ಮನ್ನು ಸರಿಯಾಗಿ ನೋಡಿಕೊಳ್ಳು ತಾರೊ, ಕಷ್ಟ ಕೊಡುತಾರೊ? ಎಂದು ಕೇಳಿದನು.

ಮಲ್ಲಿಗೆ: ಇದೊಂದು ಮಾತು ಹೊರತು ಏನೂ ಕಷ್ಟ ಇಲ್ಲ. ಹೆಗ್ಗಡಿತಿ ಕೆಟ್ಟೋರಲ್ಲ.

ಅಯ್ಯ, "ಒಳ್ಳೇದು. ಸ್ವಾಮಿಗಳ ಅಪ್ಪಣೆ ನಾಳೆ ತಿಳಿಸುತ್ತೇನೆ," ಎಂದನು.

ಮರುದಿನ ಬೆಳಗಾಗ ಇವರೂ, ಇವರಂತೆ ಇಂಥ ದೂರನ್ನು ತಂದಿದ್ದ ಇನ್ನೂ ಹತ್ತುಜನವೂ, ಸ್ವಾಮಿಯ ಸನ್ನಿಧಿಯಲ್ಲಿ ನಿಂತರು. ಅಯ್ಯ ಸ್ವಾಮಿಯ ಪರವಾಗಿ ಅವರಿಗೆಲ್ಲ ಉತ್ತರ ಹೇಳಿದನು. ಒಬ್ಬರಿಗೆ, "ನೀವು ಹತ್ತುಜನದ ಮಾತಿನಂತೆ ನಡೆಯಬೇಕು, ಹಟಮಾಡಬೇಡಿ," ಎಂದು; ಇನ್ನೊಬ್ಬರಿಗೆ, "ಒಳ್ಳೆಯದು, ನಾವು ನಿಮ್ಮೂರತ್ತ ಬಂದಾಗ ನೀವಿದನ್ನ ತಿಳಿಸಿ," ಎಂದು; ಬೇರೊಬ್ಬರಿಗೆ "ಇಂಥ ಗೌಡರಲ್ಲಿ ಹೋಗಿ, ಸಹಾಯಮಾಡುತ್ತಾರೆ," ಎಂದು: ವಿಧವಿಧವಾಗಿ ಉತ್ತರ ದೊರೆಯಿತು. ಮಲ್ಲಿಗೆಗೆ, "ಇಂಥ ಮಾತಿನಲ್ಲಿ ಸ್ವಾಮಿ ಹೆಗ್ಗಡಿತೀಗೆ ಬೆಸಸೋದಕ್ಕಾಗೋದಿಲ್ಲ. ಕೂಳು ಕಂಬಳ ಕೊಡತಿರೋ ಹೆಗ್ಗಡಿತೀ ಮಾತನ್ನ ಜೀತ ನಡಸಬೇಕು. ಊರಿಗೆ ಹಿಂದಕ್ಕೆ ಹೋಗಿ," ಎಂದನು.

ಮಲ್ಲಿಗೆಯ ಮುಖ ಪೆಚ್ಚುಬಿದ್ದಿತು. ಅವಳು ತೀರನಿರಾಶೆಯಿಂದ, "ಅಯ್ಯೋ ಒಡೆಯರೆ, ಹಂಗನ್ನಬೇಡರಿ. ಬೇಕಂದರೆ ನಿಮ್ಮ ಊಳಿಗ ಮಾಡಿಕೊಂಡು ಇಲ್ಲೇ ಇದ್ದು ಬಿಡತೀವಿರಿ. ಜವರನ್ನ ನಾ ಮದಿವಿ ಯಾಗವಲ್ಲಿ," ಎಂದು ಊಳಿದಳು.

ಅಯ್ಯ, "ಒಳ್ಳೇದು. ಆರುತಿಂಗಳು ತಡೀರೀ ಅಂತ ಸ್ವಾಮಿಗಳು ಹೇಳಿದರೂ ಅಂತನ್ನು ಹೆಗ್ಗಡಿತಿಯೋರಿಗೆ. ಆರು ತಿಂಗಳಲ್ಲಿ ಅವರನ್ನ ಕೇಳಿಕೊ; ಅವರನ್ನೇ ಒಪ್ಪಿಸಿಕೊ," ಎಂದನು. ಸ್ವಾಮಿ ಇದು ತನ್ನ ಇಷ್ಟದಂತೆ ಹೇಳಿರುವ ಮಾತು ಎಂದು ಸೂಚಿಸಿ ತಲೆ ಆಡಿಸಿದನು.

ಮತ್ತೇನು ಹೇಳುವುದು ಎಂದು ತೋರದೆ ಮಲ್ಲಿಗೆ ಕೈಮುಗಿದಳು; ಸಗುನನೊಂದಿಗೆ ಒಂದು ಪಕ್ಕಕ್ಕೆ ಸರಿದಳು.

೧೨

ಆ ರಾತ್ರಿ ಅಲ್ಲಿ ನಿಂತಿದ್ದ ಹತ್ತು ಜನದಲ್ಲಿ ಇವರಿಗೆ ಕೆಲವು ಸಂಗತಿ ತಿಳಿದವು. ಹಿಪ್ಪಲದ ಕಳ್ಳರಪಡೆಯನ್ನು ಸ್ವಾಮಿ ಸೋಮನ ಕಾಡಿಗೆ ಕಳುಹಿಸಲು ಏರ್ಪಾಡುಮಾಡಿದ್ದನು. ಈ ಕಳ್ಳರು ವಿಶೇಷವಾಗಿ ಪಕ್ಕದ ಬಯಲು ಸೀಮೆಗೆ ಹೋಗಿ ಕಳವುಮಾಡಿ ಬಂದು ಇಲ್ಲಿ ಕಾಡಿನಲ್ಲಿ ಬಾಳಬೇಕು. ಇವರ ವೃತ್ತಿಯ ಮುಖ್ಯ ಸಂಕೇತ ಇದು: ತಮ್ಮ ನಾಡಿನಲ್ಲಿ ಕಳವು ಮಾಡಬಾರದು. ಆದರೆ ಎಲ್ಲ ಹೊತ್ತಿನಲ್ಲೂ ಎಲ್ಲ ಕಳ್ಳರೂ ಈ ಸಂಕೇತವನ್ನು ನಡಸುತ್ತಿರಲಿಲ್ಲ. ನಾಲ್ಕಾರು ಸಲ ಕೆಲವರು ಜಾಗರದ ಸೀಮೆಯ ಗ್ರಾಮಗಳಲ್ಲೇ ಕಳವುಮಾಡಿದರು. ಇದು ಸ್ವಾಮಿಗೆ ತಿಳಿದು ಅವನು ಬಹಳ ಕೋಪಮಾಡಿದ್ದನು. "ಈ ಅವಿವೇಕ ತಕ್ಷಣ ನಿಲ್ಲಬೇಕು. ತನ್ನ ಆಜ್ಞೆಯನ್ನು ಮೀರಿ ನಡೆಯುವವರಿಗೆ ಕೈಕಾಲು ಇಲ್ಲದೆ ಹೋದೀತು ಜೋಕೆ," ಎಂದು ಎಚ್ಚರಿಕೆ ಹೇಳಿ ಅವನು, "ಇಲ್ಲಿ ನಿಮ್ಮ ಗುಂಪು ದೊಡ್ಡದಾಯಿತು. ಗಟ್ಟಿಮುಟ್ಟಾದ ಹರೆಯದ ಜನ ನೂರು ಮಂದಿಯು ಎರಡು ಪಡೆ ಗಡೀಗೆ ನಡೆಯಿರಿ. ಅಲ್ಲಿಯ ಪಡೆಯ ನಾಯಕನಿಗೆ ನಾವು ನಿಮ್ಮನ್ನು ಕಳುಹಿಸಿದೆವೆಂದು ಹೇಳಿ. ನಿಮಗೆ ಅವನು ಕೆಲಸ ಒದಗಿಸುತ್ತಾನೆ," ಎಂದು ಅಪ್ಪಣೆಮಾಡಿದ್ದನು. ಈ ಪಡೆಗಳ ಕೆಲವು ಭಾಗ ಈಗಾಗಲೆ ಗಡಿಯನ್ನು ಕುರಿತು ಹೊರಟಿತ್ತು.

ಈ ಸುದ್ದಿ ತಿಳಿದು ಮಲ್ಲಿಗೆಗೆ ಒಂದು ಆಸೆಹುಟ್ಟಿತು. ತಾನೂ ಸಗುನನೂ ಕಳ್ಳರಪಡೆಯೊಂದಿಗೆ ಗಡೀಗೆ ಯಾಕೆ ಹೋಗಬಾರದು?

ಬೆಳಗಾಗ ಎದ್ದು ಅವಳು ಸಮಯ ಕಾದು ಅಯ್ಯನ ಹತ್ತಿರ ಈ ಮಾತನ್ನು ಹೇಳಿಕೊಂಡಳು. ಅವನು, "ಸ್ವಾಮಿಗಳನ್ನ ಈ ಮಾತು ಕೇಳಿ ಗುಣ ಇಲ್ಲ. ಗಡೀಗೆ ಹೋಗೋ ಪಡೇಲಿ ಹೆಂಗಸರು ಯಾರೂ ಇಲ್ಲ," ಎಂದನು.

"ಬೇರೆ ಯಾರೂ ಇರಬೇಡ. ನಾ ಹೋದರೆ ಏನಂತೆ ?"

"ನೀನು ಬಾಳ ದಿಟ್ಟ ಹೆಂಗಸೂ ಅಂತ ಕಾಣತೀಯು. ನಿನ್ನಹಂಗೆ ಬೇರೆ ಹೆಂಗಸರು ತಮ್ಮ ಮಂದಿಯೊಂದಿಗೆ ಗಡೀಗೆ ಹೋಗತೇವೇ ಅಂದರು. ಸ್ವಾಮಿ ತಡೆದರು. ಅವರ ಮಾತು ಕೇಳಿ ಬದುಕಿಕೊ. ಎದುರು ಮಾತು ಬೇಡ ಕಂಡ್ಯಾ?"

ಸ್ವಾಮಿ ಹೇಳಿದಂತೆ ನಡೆಯದಿದ್ದರೆ ಅದು ಹೇಗೊ ಎಂತೊ ಕೆಟ್ಟ ದಾಗುವುದೆಂದು ಈ ಸುತ್ತಿನಲ್ಲೆಲ್ಲ ಒಂದು ಕುರುಡು ನಂಬಿಕೆ ದೃಢವಾಗಿ ಬೆಳೆದಿತ್ತು. ಹಿಂದಿನ ರಾತ್ರಿ ಇವರ ಜೊತೆಗಿದ್ದ ಗುಂಪಿನಲ್ಲಿ, ಒಬ್ಬ ಮಾತುಮೀರಿದ, ಬಿದ್ದು ಕಾಲುಮುರಿದುಕೊಂಡ, ಒಬ್ಬ ಮಾತಿಗೆ ತಪ್ಪಿದ, ಅವನ ದನ ಹತ್ತುಸತ್ತವು, ಯಾವಳೋ ಒಬ್ಬಳು ಕಾಣಿಕೆಕದ್ದಳು, ಅವಳ ಗಂಡ ತೀರಿಕೊಂಡ, ಈ ರೀತಿಯ ನಾಲ್ಕಾರು ಕಥೆ ಇವರ ಕಿವಿಗೆ ಬಿದ್ದಿದ್ದಿತು. ಮಲ್ಲಿಗೆ, "ಹತ್ತುಬೆಟ್ಟ ದಾಟಿ ಬಂದದ್ದು ಸುಮ್ಮನೆ ಆಯ್ತಲ್ಲ ಸಗುನ! ಹೆಂಗಸನ್ನೋದು ಆಗದು ಅಂದರೆ ನಾವೆತ್ತಹೋಗೋದು ?" ಎಂದಳು.

ಅಯ್ಯ ನಕ್ಕನು. "ಏನು ನೀ ಸಗುನನ್ನೂ ಹೆಂಗಸು ಮಾಡಿದೆಯಾ ?" ಎಂದು ಕೇಳಿದನು.

ಸಗುನ ನಕ್ಕನು. "ಮಲ್ಲಿಗೆ ಒಳ್ಳೆ ಮಳ್ಳಿ ಏಳ್ರ! ಮಾಡಿದರೂ ಮಾಡೋಳೆ ?" ಎಂದನು. ಅವನ ಮಾತಿನಲ್ಲಿ ಮೆಚ್ಚಿಕೆ ಅಡಗಿತ್ತು.

ಮಲ್ಲಿಗೆ ನ್ಯಾಯವಾಗಿ ನಗಬೇಕು; ಆದರೆ ಅವಳಿಗೆ ಮನಸ್ಸಿರಲಿಲ್ಲ. ಊರಿಗೆ ಹೋಗುವುದು ಹೊರತು ಬೇರೆ ದಾರಿ ಕಾಣಲಿಲ್ಲ. ಬೇರೆ ಎಲ್ಲಿಗಾದರೂ ಹೋದಳೆ, ತಾನು ಬಿದ್ದೊ ಸಗುನ ಸತ್ತೊ ಏನಾದರೂ ಕೇಡಾದರೆ ಏನು ದಾರಿ ? ಊರಿಗೇ ಹೋಗುವುದು ; ಆರು ತಿಂಗಳು ತಡೆಯಿರಿ ಎಂದು ಸ್ವಾಮಿ ಅಪ್ಪಣೆಮಾಡಿದ್ದಾರೆ ಎಂದು ತಿಳಿಸುವುದು ; ಆ ಆರು

ತಿಂಗಳಲ್ಲಿ ಹೆಗ್ಗಡಿತಿಯ ಮನಸ್ಸನ್ನು ಒಲಿಸಿಕೊಳ್ಳುವುದು: ಹೀಗೆಂದು ಮಲ್ಲಿಗೆ ನಿಶ್ಚಯಮಾಡಿಕೊಂಡಳು.

ಸಗುನನಿಗೆ ಕೊಟ್ಟು ಮದುವೆ ಮಾಡು ಎಂದು ಸ್ವಾಮಿ ಅಪ್ಪಣೆ ಮಾಡಿದನು ಎಂದು ಹೆಗ್ಗಡಿತಿಗೆ ಹೇಳಬಾರದೆ? ತಾನೆ ಆಜ್ಞೆಯನ್ನು ಹೊತ್ತು ಹೋಗುವಾಗ ಮಾತನ್ನು ಬೇರೆ ಮಾಡಿದರೆ? ಮಲ್ಲಿಗೆಗೆ ಇದು ತೋರದೆ ಇರಲಿಲ್ಲ. ಆದರೆ ಅದಕ್ಕೂ ಸ್ವಾಮಿಯನ್ನು ಕುರಿತ ಅಂಥ ಶ್ರದ್ಧೆ ಅಡ್ಡ ಬಂದಿತು. ಸ್ವಾಮಿಗೆ ಮೋಸಮಾಡಿ ಬದುಕುವ ಆಸೆ ಇಲ್ಲ. ಒಳ್ಳೆಯದು; ಸಹಿಸಿಕೊಳ್ಳುವುದು.

ಹೊರಡುತ್ತಾ ಅವಳು ಅಯ್ಯನನ್ನು ಕುರಿತು, "ತಿರಿಗಿ ಸ್ವಾಮಿಗಳನ್ನ ಕಾಣಬೇಕು ಅಂದರೆ ಹೆಂಗೆ ಅಯ್ನೋರೆ?" ಎಂದು ಕೇಳಿದಳು.

"ಹಂಗೇ ನೋಡತಾ ಇರಬೇಕು. ಎಲ್ಲೋ ಒಂದುಕಡೆ ಇರತಾರೆ."

"ಈ ಶೀಮೇಲಿ ಇರೋಲ್ಲಲ್ಲ, ಆ ದಿನದಾಗ?"

"ಅಂತಾ ದಿನದಾಗ ಅವರನ್ನ ನೊಡಬೇಕು ಅನ್ನಬಾರದು."

"ಅಲ್ಲ, ತೀರ ಜೀವಕ್ಕೆ ಬಂತೂಂತ ನೋಡ್ಬೇಕು ಅಂದರೆ?"

"ಬಿದನೂರು ದುಬಾರಿ ತಿಟ್ಟಿನ ಅತ್ತತ್ತ ಬೂದಿ ಬಸವನ ಪಾಳಯ ಅಂತ ಅದೆ. ಅಲ್ಲಿ ನೋಡಬಹುದು. ಅಂದರೆ ಹೋಗದಿರೋದು ಒಳ್ಳೇದು."

ಮಲ್ಲಿಗೆ ಸಗುನನೊಡನೆ ವಸ್ತಾರೆಗೆ ಹಿಂದಿರುಗಿದಳು. ಊರ ಜನ ನಕ್ಕಿತು. ಹೆಗ್ಗಡಿತಿ ರೇಗಿದಳು; ಮಲ್ಲಿಗೆ ಮುಟ್ಟಿಸಿದ ಸ್ವಾಮಿಯ ಆಜ್ಞೆಗೆ ವಿಧಿಯಿಲ್ಲದೆ ಒಪ್ಪಿದಳು. "ನನ್ನ ಮಾತು ಮೀರಿ ನೀನು ಒಬ್ಬ ಸ್ವಾಮಿಾನ ಕಂಡ್ಯಾ? ಆಗಲಿ. ನೀನು ಅದು ಹೆಂಗೆ ಸಗನನ್ನ ಮದುವೆ ಆಗತೀ ನೋಡೋಣ," ಎಂದಳು.

## ೧೩

ವಸ್ತಾರೆಯಿಂದ ಹೊರಟ ಐದು ದಿನದಲ್ಲಿ ಶಾಂತವ್ವ ಬಿದನೂರನ್ನು ಸೇರಿದಳು. ನಾಯಕ ಹಿಂದಿರುಗಿ ಬಂದಿರಬಹುದೇನೋ ಎಂಬ ನಿರೀಕ್ಷೆಯಲ್ಲಿ ಅರಮನೆಯನ್ನು ಹೊಕ್ಕಳು. ಅವನು ಆಗ ಊರು ಬಿಟ್ಟು

ಹೋದವನು ಇನ್ನೂ ಬಂದಿರಲಿಲ್ಲ. ಶಾಂತವ್ವ ತಾನು ಬಂದ ಸಂಗತಿಯನ್ನು ತಂದೆಗೆ ತಿಳಿಸಲು ಸುದ್ದಿಅಟ್ಟಿ ಅತ್ತೆಯನ್ನು ಕಂಡು ಪ್ರಸಾದ ಒಪ್ಪಿಸುವುದಕ್ಕೆ ಯಾವಾಗ ಬರಲಿ ಎಂದು ಕೇಳಲು ಕೆಂಚವ್ವೆಯನ್ನು ರಾಣಿಯ ಬಳಿಗೆ ಕಳುಹಿಸಿದಳು.

ರಾಣಿ, "ಪ್ರಸಾದ ಒಪ್ಪಿಸೋಕೆ ಯಾರು ಯಾಕೆ ಬರಬೇಕು? ನೀವು ಯಾರಾದರೂ ತಂದು ಇಲ್ಲಿ ಇಕ್ಕಿ," ಎಂದಳು.

ಯಾತ್ರೆ ಹೋಗಿ ಬಂದ ಸೊಸೆಯನ್ನು ಹತ್ತಿರ ಬರಕೊಟ್ಟು ಎರಡು ಮಾತನಾಡಿಸಿದರೆ ಚೆನ್ನ ಎಂದು ರಾಣಿ ಬಲ್ಲಳು. ಆದರೆ ಅವಳ ಮನಸ್ಸು ಪ್ರಸನ್ನವಾಗಿರಲಿಲ್ಲ. ಸಣ್ಣಮಾತು ದೊಡ್ಡಮಾತು ಎಲ್ಲದರಲ್ಲಿಯೂ ಅವಳು ತನಗೆ ಈ ಸೊಸೆ ಬೇಕಾಗಿಲ್ಲ ಎನ್ನುವುದನ್ನು ತೋರಿಸುತ್ತಿದ್ದಳು.

ಕೆಂಚವ್ವೆ, "ಆಯಿತು ಅಮ್ಮಾಜಿ," ಎಂದು ಹಿಂದಕ್ಕೆ ಬಂದಳು; ಆ ಮಾತನ್ನು ಶಾಂತವ್ವನಿಗೆ ತಿಳಿಸಿದಳು. ಶಾಂತವ್ವ ಮನಸ್ಸಿನಲ್ಲಿ ತುಂಬ ನೊಂದುಕೊಂಡು ತಾನು ತಂದಿದ್ದ ವಿಭೂತಿ ಮೃತ್ತಿಕೆ ಅಷ್ಟಷ್ಟನ್ನು ಎರಡು ಬಟ್ಟಲಲ್ಲಿಟ್ಟು ಅವನ್ನು ಒಂದು ತಟ್ಟೆಯಲ್ಲಿರಿಸಿ ಅತ್ತೆಯವರಿಗೆ ಒಪ್ಪಿಸಿ ಬಾ ಎಂದಳು. ಕೆಂಚವ್ವೆ ತಟ್ಟೆಯನ್ನು ತೆಗೆದುಕೊಂಡು ಹೋಗಲು ರಾಣಿ ಅದು ಏನು ಎಂದು ತೆಗೆದುಕೂಡ ನೋಡದೆ ಒಂದು ಕಡೆ ಇರಿಸ ಹೇಳಿ ಅವಳನ್ನು ಹಿಂದಕ್ಕೆ ಕಳುಹಿಸಿದಳು.

ಮಧ್ಯಾಹ್ನ ಶಾಂತವ್ವ ಸ್ವಲ್ಪ ಪ್ರಸಾದವನ್ನು ತೆಗೆದುಕೊಂಡು ತಂದೆಯ ಮನೆಗೆ ಹೋದಳು. ನೇಮಯ್ಯ ಅವಳನ್ನು ಪ್ರೀತಿಯಿಂದ ಬರಮಾಡಿಕೊಂಡನು. ಅವಳು ತಂದಿದ್ದ ಪ್ರಸಾದವನ್ನು ಬಹು ಸಂಭ್ರಮದಿಂದ ತೆಗೆದುಕೊಂಡನು. ಪ್ರಯಾಣ ಸುಖವಾಗಿದ್ದಿತೆ ಎಂದು ಕೇಳಿ ನಡೆದ ಸಂಗತಿಯನ್ನೆಲ್ಲ ವಿಚಾರಿಸಿ, ಸಿದ್ಧನ ಆರೋಗ್ಯ ಹೆಗ್ಗಡಿತಿಯ ಯೋಗಕ್ಷೇಮ ಹೇಗೆ ಎಂದು ಕೇಳಿದನು.

ಶಾಂತವ್ವ ಎಲ್ಲವನ್ನೂ ವಿವರವಾಗಿ ಹೇಳಿದಳು. ಅತ್ತೆ ತೋರಿಸಿದ್ದ ಅಸೂಯೆಯಿಂದ ಆದ ನೋವನ್ನು ದೊಡ್ಡಪ್ಪನ ಅಕ್ಕರೆಯ ಸವಿಯಲ್ಲಿ ಮರೆತಳು.

ಇಳಿಹೊತ್ತಿನಲ್ಲಿ ಮತ್ತೆ ಅವಳು ಅರಮನೆಗೆ ಹೋದಾಗ ಊಳಿಗದ ಒಬ್ಬಳು, "ಪ್ರಸಾದ ನೋಡಿ ಅಮ್ಮಾಜಿಯವರು ಬಹಳ ಅತ್ತುಕೊಂಡ ರಂತೆ, ಕೋಪಮಾಡಿದರಂತೆ," ಎಂದಳು.

ಇದು ಏಕೆ ಎಂದು ಶಾಂತವ್ವನಿಗೆ ತೋರಲಿಲ್ಲ. ಆದರೆ ಏಕೆ ಎಂದು ಕೇಳುವುದಕ್ಕೆ ಅವಳು ಇಷ್ಟಪಡಲಿಲ್ಲ. ತನ್ನಗು ರಾಣಿಯದು ಆದ ಮಾತನ್ನು ಊಳಿಗದೊಂದಿಗೆ ಹೇಗೆ ಚರ್ಚೆಮಾಡುವುದು?

ಏಕೆ ಎಂದು ವಿಚಾರಿಸಲಿಲ್ಲ; ಆದರೆ ತಿಳಿಯಬೇಕೆಂದು ಅವಳಿಗೆ ತುಂಬ ತವಕವಾಯಿತು. ತಾನು ಏನು ತಪ್ಪುಮಾಡಿದೆನೊ? ಹೇಗೆ ತಿಳಿದುಕೊಳ್ಳುವುದು? ಹೇಗೆ ಸಮಾಧಾನ ಮಾಡುವುದು?

ಒಡತಿ ಕೇಳಲಿಲ್ಲ; ಆದ್ದರಿಂದ ಊಳಿಗದ ಹೆಣ್ಣು ತಾನಾಗಿ ಆದರ ವಿವರವನ್ನು ತಿಳಿಸಲು ಸಾಹಸ ಮಾಡಲಿಲ್ಲ.

ಒಡತಿಯ ಕಷ್ಟ ಕೆಂಚವ್ವೆಗೆ ತಿಳಿಯಿತು. ಅವಳು ತನ್ನ ಜೊತೆಯ ಮತ್ತು ರಾಣಿಯ ಊಳಿಗದೊಂದಿಗೆ ಮಾತನಾಡಿ ಆಕೆಯ ಅಸಮಾ ಧಾನದ ಕಾರಣವನ್ನು ತಿಳಿದಳು.

ಇವಳು ಪ್ರಸಾದವನ್ನು ಇಟ್ಟುಬಂದ ಸ್ವಲ್ಪ ಹೊತ್ತಿನಲ್ಲಿ ಸಣ್ಣವ್ವ ರಾಣಿಯ ಹತ್ತಿರ ಬಂದಳು. ಸ್ವಲ್ಪ ದೂರದಲ್ಲಿ ಇಟ್ಟಿದ್ದ ತಟ್ಟೆಯನ್ನು ನೋಡಿ "ಅದೇನು ಅಮ್ಮಾಜಿ," ಎಂದಳು.

ರಾಣಿ: ಏನೋ ಪ್ರಸಾದಾನಂತೆ.

ಧ್ವನಿಯ ಬೇಸರದಿಂದ ಅದು ಶಾಂತವ್ವ ತಂದ ಪ್ರಸಾದ ಎಂದು ಊಹಿಸಿ ಸಣ್ಣವ್ವ "ಗಿರೀದಾ?" ಎಂದು ಕೇಳಿದಳು.

ರಾಣಿ: ಹೌದಂತೆ.

ಸಣ್ಣವ್ವ ಅದರ ಹತ್ತಿರ ಹೋಗಿ ಅದಕ್ಕೆ ಹೊದಿಸಿದ್ದ ಮಡಿಯನ್ನು ಎತ್ತಿದಳು. ವೀಭೂತಿ ಮಣ್ಣಿನ ಎರಡು ಬಟ್ಟಲನ್ನು ನೋಡಿದಳು.

"ಇದೇನಮ್ಮಾಜಿ ಇದರಲ್ಲಿ? ಒಂದೇನೋ ವೀಭೂತಿ; ಇನ್ನೊಂದು ಅಷ್ಟು ಜೇಡಿಮಣ್ಣಿದೆಯಲ್ಲ?"

"ಜೇಡೀಮಣ್ಣೆ?"

"ಊಂ ಜೇಡೀಮಣ್ಣು."

ರಾಣಿ ಹುಬ್ಬುಗಂಟಿಕ್ಕಿದಳು. ಇವಳಹತ್ತಿರ ಬಂದು ಬಟ್ಟಲನ್ನು ತಾನೇ ನೋಡಿದಳು. ಒಂದರಲ್ಲಿ ಮಣ್ಣಿದ್ದದ್ದನ್ನು ಕಂಡಳು.

ಗಿರಿಗೆ ಹೋದವರು ಗುಹೆಯ ಮಣ್ಣನ್ನು ಪ್ರಸಾದವಾಗಿ ತರುವರೆಂದು ಅವಳಿಗೆ ತಿಳಿದಿರಲಿಲ್ಲ. ಆದರೆ ಇದು ಏನು ಎಂದು ಬೇಕಾದರೆ ಸೊಸೆಯನ್ನು ಕೇಳಿ ತಿಳಿಯಬಹುದಾಗಿದ್ದಿತು. ಕೇಳಲಿಲ್ಲ, ತಿಳಿಯಲಿಲ್ಲ. ಸೊಸೆ ಏನೋ ಕುಚೋದ್ಯ ಮಾಡಿದ್ದಾಳೆ ಎಂದು ಕಲ್ಪಿಸಿಕೊಂಡು ರೇಗಿಬಿದ್ದಳು.

"ನೋಡಿದ್ಯಾ ಇವಳ ಕೊಂಕಾಟಾನ. ತರೋದೇನು, ಕೊಟ್ಟು ಕಳುಹಿಸು, ಎಂದರೆ ಕೋಪಮಾಡಿಕೊಂಡು ಮಣ್ಣು ಕಳುಹಿಸಿದಾಳೆ. ನಾನು ಅಂದರೆ ಇವಳಿಗೆ ಇಷ್ಟು ತಾತ್ಸಾರ ಆಯಿತೆ? ಏನು ಇವಳ ಪೊಗರು!"

ಹೀಗೆ ರೇಗಿ ರಾಣಿ ಒಂದುಕ್ಷಣ ಬಿಟ್ಟು, "ಮನೆಗೆ ಹೆಜ್ಜೆ ಇಟ್ಟವಳು ಮಾವನ್ನ ಮಣ್ಣುಮಾಡಿದಳು. ನನಗೆ ಮಣ್ಣು ಮುಕ್ಕಿಸಿದಳು. ಈಗ ಅಪ್ಪ ಯಾತ್ರೆಮಾಡಿಸಿದ ಅನ್ನೋ ಅಹಂಕಾರದಲ್ಲಿ ನನಗೆ ನಿನ್ನ ಪಾಲಿಗೆ ಇನ್ನಿರೋದು ಇಷ್ಟು ಮಣ್ಣು ಅಂತ ಇದನ್ನು ಕಳುಹಿಸಿದಾಳೆ. ಇವಳು ಮನೆಗೆ ಬಂದಾಗಲೇ ನನ್ನ ಅದೃಷ್ಟ ಮಣ್ಣುಪಾಲಾಯಿತು. ಇವಳು ಇದನ್ನ ನನಗೆ ಹೇಳೋದೇನು?" ಎಂದಳು; ಅಳುತ್ತ ಕುಳಿತಳು.

ಎರಡು ನಿಮಿಷ ಬಿಟ್ಟು ಸಣ್ಣವ್ವ, "ಇಂತಾ ಏಳಾಲ ಮಾಡೋ ದುಂಟೆ? ಏನಿವರ ಪೊಗರು!" ಎಂದು ರಾಣಿಗೆ ಒತ್ತಾಸೆ ನುಡಿದು, "ಇದನ್ನು ಆಚೆಗೆ ಎಸಿ ಅನ್ನಲಾ?" ಎಂದು ಕೇಳಿದಳು.

ರಾಣಿ ಆಗಬಹುದು ಎಂದು ತಲೆ ಆಡಿಸಿದಳು. ಸಣ್ಣವ್ವ ಊಳಿಗದವಳನ್ನು ಕರೆದು ಪ್ರಸಾದವನ್ನು ತಿಪ್ಪೆಗೆ ಎಸೆ ಎಂದು ಬೆಸಸಿದಳು. ಊಳಿಗದವಳು ವೀಭೂತಿಯನ್ನೂ ಮೃತ್ತಿಕೆಯನ್ನೂ ಹಿತ್ತಲಿಗೆಸೆದಳು.

ಕೆಂಚವ್ವೆ ಎಲ್ಲ ಸಂಗತಿಯನ್ನೂ ವಿಚಾರಿಸಿ ತಿಳಿದುಕೊಂಡು ಮೆಲ್ಲನೆ ಒಡತಿಯ ಬಳಿಗೆ ಬಂದಳು. ಅವಳು ಚಿಂತೆಯಲ್ಲಿ ಇರುವುದನ್ನು ನೋಡಿ ಸುಮ್ಮನೆ ಹತ್ತಿರ ನಿಂತಳು.

ಶಾಂತವ್ವ "ಏನವ್ವ" ಎಂದು ಕೇಳಿದಳು.

ಕೆಂಚವ್ವೆ, "ದೇವರ ಪಾದದ ಹುಡಿ ಅಂತ ತಿಳೀದೆ ಅಮ್ಮಾಜಿ ಯವರು ಏನೋ ಮಣ್ಣು ಕಳುವಿದರು ಅಂತ ಕೋಪ ಮಾಡಿದರಂತೆ," ಎಂದಳು.

ಶಾಂತವ್ವನಿಗೆ ಇದರಿಂದ ಸಮಾಧಾನವೇನೂ ಆಗಲಿಲ್ಲ. ಅಂತೂ ತಾನು ಅತ್ತೆಯಾದ ರಾಣಿಗೆ ಪ್ರಸಾದ ಎಂದು ಹೆಸರಿಟ್ಟು ಏತರದೋ ಅಷ್ಟು ಮಣ್ಣನ್ನ ಕಳುಹಿಸಬಲ್ಲವಳು ಎಂದಾಯಿತು. ಯಾವ ದಿಟ್ಟಕ್ಕೆ ಬಂದಿತು ಈ ಅತ್ತೆ ಸೊನೆಯ ಸಂಬಂಧ! ಸದ್ಯ ಈದಿನ ತನ್ನ ನಾಯಕ ಇರಲಿಲ್ಲ; ಒಳಿತಾಯಿತು. ಇದ್ದಿದ್ದರೆ ಮಾತು ಇನ್ನೆಲ್ಲಿಗೆ ಬೆಳೆಯುತ್ತಿದ್ದಿತೊ!

"ಪ್ರಸಾದ ಒಪ್ಪಿಸತಾ ನೀನು ವೀಭೂತಿ ಪಾದದ ಹುಡಿ ಎಂತ ಹೇಳಲಿಲ್ಲ."

"ನನಗೆ ತೋಚಲಿಲ್ಲಾವ್ವ."

"ಅದೇ ತಪ್ಪಾಯಿತು."

"ಅಂತಲೇ ಕಾಣತದವ್ವ."

"ಈಗಲಾದರೂ ಹೋಗಿ ಹೇಳು."

"ಹೇಳತೇನವ್ವ ಅಂದರೆ ಮಣ್ಣಾ ಅತ್ತ ಒಗಿ ಅಂದರಂತೆ. ಈ ಹೆಣ್ಗಾಳು ಅದನ್ನ ಒಗದಿದ್ದಾರೆ."

ಪ್ರಸಾದವನ್ನು ಎಸೆದರು ಎಂದು ಕೇಳಿ ಶಾಂತವ್ವನಿಗೆ ತುಂಬ ಭಯವಾಯಿತು. ಇದರಿಂದ ಕೇಡಲ್ಲದೆ ಬೇರೆ ಏನು ಬರಬಹುದು? ಅವಳ ಮನಸ್ಸು ತನ್ನಿಚ್ಛೆಯಿಂದ ಇದರ ದೋಷ ನಾಯಕನನ್ನು ತಟ್ಟದೆ ಇರಲಿ ಎಂದಿತು.

"ಒಗೆದೇ ಬಿಟ್ಟರೆ?"

"ಒಗೆದರಂತೆ ಅವ್ವ."

"ವೀಭೂತೀನ್ನೂ?"

"ಯಾಬೂತೀನು."

ಶಾಂತವ್ವ ಮತ್ತೆ ಯೋಚನೆ ಮಾಡಿದಳು. ಮಣ್ಣು ಏನು ಎಂದು ತಿಳಿಯಲಿಲ್ಲ? ವೀಭೂತಿ ಏನು ಎಂದು ತಿಳಿಯಲಿಲ್ಲವೆ? ಅದನ್ನು ಏಕೆ ಎಸೆದರು? ಅವಳು ಏನೂ ಹೇಳಲಿಲ್ಲ. ಏನುಮಾಡುವುದು ಎಂದು

ಅವಳಿಗೆ ತೋರಲೂ ಇಲ್ಲ. ಅಂತೂ ತನ್ನ ಸಲುವಾಗಿ ಇವರಿಗೆ ದೇವರ ಪ್ರಸಾದವೂ ಬೇಡವಾಯಿತು ಎಂಬಷ್ಟು ಸಂಗತಿ ಅವಳ ಮನಸ್ಸನ್ನು ಮುಟ್ಟಿತು. ತಡೆಯಲಾರದೆ ಅವಳ ಕಣ್ಣಲ್ಲಿ ಎರಡು ಹನಿ ಕೂಡಿತು.

ಈಗ ಅವಳಿಗೆ, ನಾಯಕ ಇದ್ದಿದ್ದರೆ ಚೆನ್ನಾಗಿದ್ದಿತು, ಎನ್ನಿಸಿತು. ಅವನು ಏನಾದರೂ ಯೋಚನೆ ಮಾಡಿ ಈ ಅಪಚಾರಕ್ಕೆ ನಿವಾರಣೆ ಮಾಡುತ್ತಿದ್ದನು ಎಂದು ಅವಳು ಚಿಂತಿಸಿದಳು. ಇದರ ಹಿಂದೆ ಮನಸ್ಸು, ಅವನು ತನ್ನ ದುಃಖವನ್ನು ಅರಿಯುತ್ತಿದ್ದನು, ತನಗೆ ಒಂದು ಸಮಾಧಾನದ ಮಾತನ್ನು ಹೇಳುತ್ತಿದ್ದನು, ಎಂದೂ ಚಪಲಗೊಂಡಿತು. ಅರಮನೆಯ ಇಷ್ಟು ಲೋಕದಲ್ಲಿ ತನ್ನನ್ನು ಕುರಿತು ಸ್ವಲ್ಪವಾದರೂ ಮರುಕವುಳ್ಳವನು ತನ್ನ ಗಂಡ ಒಬ್ಬನೇ ಎಂದು ಶಾಂತವ್ವನ ಅಂತರ್ಯ ಕಂಡುಕೊಂಡಿತು.

## ೧೪

ಕೆಂಚವ್ವೆ ಅವರ ಸಂಗಡ ಇವರ ಸಂಗಡ ಮಾತನಾಡಿ ಆ ಮಣ್ಣು ಎನ್ನುವುದು ದತ್ತಗುರುವಿನ ಪಾದಧೂಳಿಯೆಂದು ಪ್ರತೀತಿ, ಗಿರಿಗೆ ಹೋದವರೆಲ್ಲ ಅದನ್ನು ಪ್ರಸಾದವಾಗಿ ತರುವುದು ವಾಡಿಕೆ ಎನ್ನುವುದನ್ನೂ, ಶಾಂತವ್ವ ದೊಡ್ಡಪ್ಪನ ಮನೆಗೂ ಇದೇ ಪ್ರಸಾದವನ್ನು ಕೊಂಡುಹೋಗಿ ಒಪ್ಪಿಸಿದಳು ಎನ್ನುವುದನ್ನೂ, ರಾಣಿಯ ಕಿವಿಗೆ ಮುಟ್ಟಿಸಿದಳು. ಇದರಿಂದ ರಾಣಿ ಇದು ಸೊಸೆಯ ಅಪಹಾಸ್ಯ ಎಂದು ತಿಳಿದಿದ್ದ ತಪ್ಪು ತಿಳಿವಳಿಕೆ ತಿದ್ದಿತು. ಆದರೆ ಶಾಂತವ್ವನ ಮೇಲೆ ಬೇರೆ ಒಂದು ತಪ್ಪು ಹೊತ್ತಿತು. ಈ ಸೊಸೆ ತನ್ನ ಹುಟ್ಟಿದ ಮನೆಯಂತೆ ಹೊಕ್ಕ ಮನೆಯೂ ಅರ್ಧ ಜೈನ ಎಂದು ತಿಳಿದಿದ್ದಂತೆ ಕಂಡಿತು. ಈ ಜೈನ ಹೆಣ್ಣು ಅರಮನೆಯ ದಾಸೋಹ ಜಂಗಮ ಪೂಜೆಯನ್ನು ಏನು ನಡಸಿಯಾಳು? ಮಗ ಸಣ್ಣವ್ವನನ್ನ ಮದುವೆಯಾಗಬೇಕು ಎಂತ ನಾನು ಯೋಚಿಸಿದ್ದು ಒಳಿತಾಯಿತು. ಇದು ನಡೆದು ಅರಮನೆಯಲ್ಲಿ ಸ್ವಲ್ಪ ಶಿವಾಚಾರ ಉಳಿದರೆ ಉಳಿದ ಹಾಗೆ; ಇಲ್ಲದೆ ಹೋಯಿತೆ ಅದರ ಮಾತು ಬೇಡ.

ನಿಜದಲ್ಲಿ ರಾಣಿ ಶಿವಾಚಾರದ ಸಲುವಾಗಿ ಬಹಳ ಯೋಚನೆ ಮಾಡಿದಳೆಂದಲ್ಲ. ಅವಳು ಮಾಡಿದ ಯೋಚನೆಗೆ ಶಿವಾಚಾರ ಸಹಾಯವಾಗಿ ಬಂದಿತು. ಅವಳು ಅದನ್ನು ಸ್ವಾಗತಿಸಿದಳು.

ಮಗ ಊರಿಗೆ ಬರುವ ವೇಳೆಗೆ ಇದನ್ನು ಒಂದು ರೂಪಕ್ಕೆ ತರಬೇಕು. ಇದಕ್ಕೆ ರಾಮಶಾಸ್ತ್ರಿಯ ಸಹಾಯವನ್ನು ತೆಗೆದುಕೊಳ್ಳಬೇಕು.

ಆ ಬೆಳಗಾಗ ಶಾಸ್ತ್ರಿ ಅನುಷ್ಠಾನದಲ್ಲಿದ್ದಾಗ ಅರಮನೆಯಿಂದ ಹರಿಕಾರ ಬಂದನು. "ಅಮ್ಮಾಜಿಯವರು ಸ್ವಾಮಿಗಳಿಗೆ ಅರಿಸೋ ಮಾತು ಅದೆಯಂತೆ, ಸ್ವಾಮಿಗಳ ಸಂಧ್ಯಾಂದನ ಮುಗಿದ ಮೇಲೆ ಸ್ವಲ್ಪ ಆ ತಟ್ಟು ಬರಬೇಕು ಎಂದರು," ಎಂದನು.

ಮನೆಯವರು ಶಾಸ್ತ್ರಿಗೆ ಇದನ್ನು ತಿಳಿಸಿದರು. ಈ ಆಹ್ವಾನದಿಂದ ಅವನಿಗೆ ಸ್ವಲ್ಪ ಆಶ್ಚರ್ಯವಾಯಿತು. ಅವನು, ಹರಿಕಾರ ಒಂದುಕ್ಷಣ ಇರಲಿ, ಎಂದು ಹೇಳಿ ಅನುಷ್ಠಾನವನ್ನು ಬೇಗನೆ ಮುಗಿಸಿ ಹೊರಕ್ಕೆ ಬಂದನು. "ಅಮ್ಮಾಜಿಯವರು ಸೌಖ್ಯವಾಗಿದಾರೆಯೆ?" ಎಂದು ಕೇಳಿದನು.

"ಸೌಖ್ಯವಾಗಿದಾರೆ."

ಸಂಗತಿಯೇನು ಎಂದು ತಿಳಿದರೆ ಸ್ವಲ್ಪ ಅನುಕೂಲ; ಆದರೆ ಕೇಳುವಂತಿಲ್ಲ. ಶಾಸ್ತ್ರಿ, ಬಂದೆ ಅಂತ ಹೇಳು, ಎಂದು ಒಳಗೆ ಹೋದನು.

ರಾಣಿ ತನ್ನನ್ನು ಬರಹೇಳುವುದಕ್ಕೆ ಕಾರಣವೇನಿರಬಹುದು? ನಾಯಕನಿಗೆ ಪಟ್ಟ ಆಗಲಿ ಎಂದ ತಪ್ಪಿಗೆ ತನ್ನಮೇಲೆ ಈಕೆ ಕೋಪ ಮಾಡಿದ್ದಳು. ಈಗ ಸಂಗತಿಯೇನು?

ಎಷ್ಟು ಯೋಚಿಸಿದರೂ ಶಾಸ್ತ್ರಿಗೆ ಸಂಗತಿ ಏನಿರಬಹುದೆಂದು ತೋಚಲಿಲ್ಲ. ಯಾರಾದರೂ ತನ್ನಮೇಲೆ ಏನಾದರೂ ಚಾಡಿಹೇಳಿರಬಹುದೊ? ನೇಮಯ್ಯನ ಬಳಿ ಹೋಗಿ ಕೇಳಿದರೆ ಆದೀತು. ಆದರೆ ಅದಕ್ಕೆ ಹೊತ್ತಿಲ್ಲ. ಹರಿಕಾರ ಹೋಗಿರುತ್ತಾನೆ, ಅನುಷ್ಠಾನ ಮುಗಿದಿತ್ತು ಎಂದು ಹೇಳಿರುತ್ತಾನೆ. ತಾನು ಸಾವಕಾಶ ಮಾಡಿ ಹೋಗುವುದು ಯುಕ್ತವಲ್ಲ.

ಒಳ್ಳೆಯದು, ಹೋಗಿ ನೋಡೋಣ, ಯಾವ ಮಾತೇ ಆದರೂ ಆತುರಪಡದೆ ಇದ್ದರೆ ಆಯಿತು, ಎಂದುಕೊಂಡು ಶಾಸ್ತ್ರಿ ಅರಮನೆಗೆ ಹೊರಟನು.

ಅವನು ಬರುವ ವೇಳೆಗೆ ಹರಿಕಾರ ಬಾಗಿಲಲ್ಲಿದ್ದು ಅವನನ್ನು ಒಳಕ್ಕೆ ಕರೆದುಕೊಂಡು ಹೋದನು. ತೊಟ್ಟಿಯಲ್ಲಿ ರಾಣಿಯ ಮನೆವಾರ್ತೆಯ ಜಗಲಿಯಮೇಲೆ ಕುಳ್ಳಿರ ಹೇಳಿ "ತಿಳಿಸುತೇನೆ" ಎಂದು ಒಳಗೆ ಹೋದನು.

ವೀರಮ್ಮಾಜಿ ಶಾಸ್ತ್ರಿಯನ್ನು ಕಾಯಿಸಲಿಲ್ಲ. ಅವನಿಗಾಗಿ ಕಾದಿದ್ದ ಳೆಂದು ಕಂಡಿತು. ಹರಿಕಾರ ಹೇಳಿದ ಕ್ಷಣವೇ ಜಗಲಿಗೆ ಬಂದಳು.

ಶಾಸ್ತ್ರಿ ಎದ್ದು ನಮಸ್ಕಾರ ಮಾಡಿದನು. ರಾಣಿ ಪ್ರತಿಯಾಗಿ ನಮಸ್ಕಾರ ಮಾಡಿ "ಕುಳ್ಳಿರಿ ಶಾಸ್ತ್ರಿಗಳೆ" ಎಂದಳು. ತಾನು ತನ್ನ ಸ್ಥಳ ದಲ್ಲಿ ಕುಳಿತಳು.

ಆಕೆ ಕುಳಿತ ಮೇಲೆ ಶಾಸ್ತ್ರಿ ತನ್ನ ಸ್ಥಳದಲ್ಲಿ ಕುಳಿತನು.

೧೫

ರಾಣಿಯ ಮುಖ ಬಹು ಪ್ರಸನ್ನವಾಗಿದ್ದಿತು. ಇದು ಶಾಸ್ತ್ರಿಗೆ ಒಂದರ್ಥಕ್ಕೆ ಸಮಾಧಾನ. ಆದರೆ ಶಂಕೆಯೂ ಉಂಟು. ಏನೋ ಕೆಲಸ ಹೇಳುತ್ತಾರೆ, ಅದು ಕಷ್ಟದ್ದಿರಬೇಕು, ಎಂದು ಅವನು ಊಹಿಸಿ ಕೊಂಡನು.

ರಾಣಿ, "ಬಹಳ ದಿನ ಆದವು ನೀವು ಇತ್ತ ಬಂದಿದ್ದು ಶಾಸ್ತ್ರಿ ಗಳೆ," ಎಂದಳು.

ಶಾಸ್ತ್ರಿ, "ಕ್ಷಮಾಪಣೆ ಕೇಳಬೇಕು ಎಂದುಕೊಂಡೇ ಬಂದೆ. ಸಮ್ಮುಖದಲ್ಲಿ ಅರಿಕೆಮಾಡಬೇಕಾದ ಸಂಗತಿ ಇರಲಿಲ್ಲ; ಬರಲಿಲ್ಲ. ಸೇವೆಗೇನೋ ಸದಾ ಸಿದ್ಧವಾಗಿದ್ದಿದೇನೆ," ಎಂದನು.

"ಅದಬಲ್ಲೆವಿ, ಬಿಡಿರಿ. ಮಠದಲ್ಲಿ ಚಂದ್ರಮೌಳೀಶ್ವರ ಸ್ವಾಮಿ ಗಳದು ಶಾರದಾಂಬಾ ಅವರದು ಸೇವೆ ನಡೀತಾ ಗುರುಗಳು ಸುಖ ವಾಗಿರತಾ ನಮ್ಮನೆಲ್ಲ ಹರಸತಿದಾರಲ್ಲ?"

"ಸಮಸ್ತಸೇವೆ ಎಂದಿನಂತೆ ನಡೆಯುತಾ ಇದೆ ಅಮ್ಮಾಜಿಯವರೆ; ಗುರುಗಳು ಸುಖವಾಗಿದ್ದಾರೆ, ಹರಕೆಹೇಳಿಕಳುಹಿಸಿದಾರೆ," ಹೀಗೆಂದು ಶಾಸ್ತ್ರಿ ಬಾಗಿಲಕಡೆಗೆ ನೋಡಿ, "ಪ್ರಸಾದ ಕಳುಹಿಸಿದೆ ಇಷ್ಟರಲ್ಲೇ ತಂದಾರು," ಎಂದನು.

ರಾಣಿ: ಇಷ್ಟರಲ್ಲೇ ಪಟ್ಟ ಆಗಬೇಕಲ್ಲ, ಅಗ್ಯೆ ದೇವರಿಗೆ ಅಮ್ಮನವರಿಗೆ ಒಡವೆ ವಸ್ತು ಒಪ್ಪಿಸಬೇಕು. ಗುರುಗಳಿಗೆ ಕಾಣಿಕೆ ಸಲ್ಲಿಸಬೇಕು. ಹಿಂದಿನಸಲ ಏನೇನು ಮರ್‍ಯಾದೆ ನಡೆಯಿತೋ ಕೇಳಿ ತಿಳಿದು ಸ್ವಲ್ಪ ನಮಗೆ ಹೇಳಬೇಕು.

ಶಾಸ್ತ್ರಿ: ಆಯಿತು, ಅಮ್ಮಾಜಿಯವರೆ ಆ ವಿವರ ಎಲ್ಲ ಇಲ್ಲಿ ನಡೆವಳಿ ಪತ್ರಿಕೆಯಲ್ಲಿ ಸಿಕ್ಕುತ್ತದೆ.

"ಸಂತೋಷ. ಹ್ಯಾಗೂ ನಾವೂ ದೇವರಿಗೆ ಒಂದು ಹರಳಸರ ಅಮ್ಮನವರಿಗೆ ಜೋಡಿ ಹರಳೋಲೆ ಒಂದು ಮುಂದಲೆ ಹೂ ಕೊಡೋದು ಅಂತಿದ್ದೇವಿ. ಎಲ್ಲಾ ನೋಡಿ ಏನೂ ಕಡಮೆಯಾಗದ ಹಾಗೆ ಎಚ್ಚರ ಹೇಳಿದರೆ ಸಾಕು."

"ತಮ್ಮ ದೃಷ್ಟಿಯಲ್ಲಿರಬೇಕಾದರೆ ಯಾವ ಕಡಮೆಯೂ ಆಗುವುದಿಲ್ಲ. ನಾವೂ ನೋಡಿಕೊಳ್ಳುತೇವೆ. ಎಲ್ಲ ಇಲ್ಲಿಂದಲೇ ನಡೆಯುತಿರುವಾಗ ಕಡಮೆ ಹೆಚ್ಚು ಏನೂ ಆಗುವುದಿಲ್ಲ."

"ಹಾಗೇ ಇನ್ನೊಂದು ಮಾತು ಇತ್ತು. ಈ ಪಟ್ಟದ ಸಮಯದಲ್ಲಿ ಇನ್ನೊಂದು ಶುಭ ನಡಸಬೇಕಾದೀತು. ಅದಕ್ಕೂ ಗುರುಗಳ ಹರಕೆ ತರಿಸಬೇಕು."

ಶಾಸ್ತ್ರಿ, ಇದೇ ಸಂಗತಿಗಾಗಿ ಈಕೆ ನನ್ನನ್ನು ಕರೆಸಿದಾರೆ, ಅದು ಏನು ಸಂಗತಿ ಈಗ ತಿಳಿಯುತ್ತದೆ, ಎಂದು ಮನಸ್ಸಿನಲ್ಲಿ ಯೋಚಿಸಿಕೊಂಡು, "ಅಪ್ಪಣೆಯಾಗಬೇಕು," ಎಂದನು.

"ನಾಯಕರದು ಶಿವಾಚಾರದ ಮನೆತನ ಆದರೂ ಹಿರಿಯರು ಬ್ರಾಹ್ಮಣರಿಗೆ ನೆಲ ಮನೆ ದಾನಮಾಡಿ ಬೇರೆ ಅನ್ನೋದು ಇಲ್ಲದೇ ನಡೆದುಕೊಂಡು ಬಂದಿದಾರೆ."

"ಹೌದು. ಅಮ್ಮಾಜಿಯವರೆ, ತಾವು ಈಗ ಆಡಿದ ಮಾತೂ ಅದೇ. ಪಟ್ಟದವೇಳೆ ಕಾಣಿಕೆ ಒಪ್ಪಿಸುವುದು ಹರಕೆ ತರಿಸುವುದು ಇದೆಲ್ಲ ಆ ಸಂಪ್ರದಾಯವನ್ನು ನಡೆಸುವಮಾತೇ."

"ಹೌದು. ಜೊತೆಗೆ ಅರಮನೇಲಿ ಯಾವಾಗಲೂ ಶಿವಾಚಾರವನ್ನೇ ನಡಿಸಿದಾರೆ."

"ಹೌದು."

"ನಾವೇನೋ ಶಿವಾಚಾರದಲ್ಲಿ ಹುಟ್ಟಿದೆವಿ; ಶಿವಾಚಾರದಲ್ಲಿ ಬೆಳೆದೆವಿ. ಅರಮನೆ ಹೊಕ್ಕಕಾಲಕ್ಕೆ ಆಡಳಿತವೆಲ್ಲ ಕೈಗೆ ತಕೊಂಡೆವಿ. ಮಾಡೋದು ನೀಡೋದು ಏನು ಅಂತ ನೋಡಿಕೊಂಡೆವಿ. ಇನ್ನು ನಮ್ಮ ದಿನ ಆಯಿತು. ಪಟ್ಟ ಆಗಿ ಅರಮನೆ ನೋಡೋ ಆಕೆ ಈ ಕೆಲಸ ಕೈಗೆ ತಕೋಬೇಕು."

ಶಾಸ್ತ್ರಿ ಇದಕ್ಕೆ ಉತ್ತರ ಹೇಳಲು ಇಷ್ಟ ಪಡಲಿಲ್ಲ: ಸುಮ್ಮನಿದ್ದನು.

"ತಕೋಬೇಕು, ಅಂದರೆ ಅದರ ಆಗು ಹೋಗು ತಿಳಿದಿರಬೇಕು."

"ಹೌದು."

"ನಾಯಕರು ಕರತಂದ ಸೊಸೆಯವರಿಗೆ ಇದು ಅಷ್ಟು ತಿಳಿಯದು. ಆಗ ಅದರ ಮಾತು ನಮಗೆ ಅಷ್ಟಾಗಿ ತೋರಲಿಲ್ಲ. ಈಗ ಪಟ್ಟ ಆಗ ಬೇಕಾಗಿದೆಯಲ್ಲ, ನಾಳೆ ಹತ್ತು ಜನ ದಾಸೋಹಕ್ಕೆ ಬಂದಾಗ ಎಡೆಯೇನು ನೀಡೋದೇನು ಅನ್ನೋದನ್ನ ನೋಡಿಕೊಳ್ಳೋಕೆ ನಾಯಕರಿಗೆ ಈ ಹವಣ ಬಲ್ಲ ಹೆಂಡಿರು ಒಬ್ಬರು ಇದ್ದರೆ ಆದೀತು ಅನ್ನಿಸತಾ ಇದೆ."

"ಆಯಿತು, ಅಮ್ಮಾಜಿಯವರೆ."

"ಇದು ಮೊದಲೇ ಮನಸಿಗೆ ತೋರಿ ನಾವು ಒಂದು ಹೆಣ್ಣಾಗೂನ ನೋಡಿದೆವಿ. ಅವಳನ ಕರೆಸಿ ಅರಮನೆಯಲ್ಲಿ ಇರಿಸಿಕೊಂಡೆವಿ. ಈ ಸಲ ನಾಯಕರು ಬರುತಾ ನೀವು ಅವರಿಗೆ ಒಂದು ಮಾತು ಹೇಳಿ ಇದಕ್ಕೆ ಒಪ್ಪಿಸಿದರೆ ಆಮೇಲೆ ನೇಮಯ್ಯನವರಿಗೆ ಹೇಳಿ ಕೆಲಸ ನಡಸ ಬಹುದು. ಒಡನೇನೇ ಪಟ್ಟಾನೂ ಆಗಬಹುದು."

ಶಾಸ್ತ್ರಿ: ನಾಯಕರು ಇದಕ್ಕೆ . . .

ರಾಣಿ: ಹುಡುಗಿ ಚೆಲುವಿ. ಪ್ರಾಯದ ಹುಡುಗ ಯಾಕೆ ಬೇಡಾ ಅಂದಾರು. । ಮರ್ಯಾದೆಗೆ ಮೊದಲ ಹೆಂಡರು ನೊಂದಾರು ಅನ್ನೋಕೆ ಒಲ್ಲೆ ಅನ್ನತಾರೆ. ಹಿರಿಯರು, ಬಲ್ಲವರು, ಮನೆತನಕ್ಕೆ ಒಳಿತು ಅಂದರೆ ಒಪ್ಪತಾರೆ.

ಶಾಸ್ತ್ರಿ: ನೋಡಬೇಕು.

ರಾಣಿ: ನೇಮಯ್ಯ ಬೇಕಾದರೆ ಅಡ್ಡಿನುಡಿದಾರು. ನಾವೇನು ಹಿರಿಯ ಸೊಸೇನ ಆಚೆಗಟ್ಟೋರಲ್ಲ. ಆಕೇನೇ ರಾಣಿ: ಅವಳ ಕೈ ಮೇಲಾಗಿರಲಿ. ಆಕೇನೇ ಪಟ್ಟಕೆ ಕೂರಲಿ; ನಮಗೆ ಸಂತೋಷ. ಬರುವರು ಹೋಗುವರು ಪೂಜೆಪುರಸ್ಕಾರ ಇದಕ್ಕಾಗಿ ಬಲ್ಲವಳು ಒಬ್ಬಳು ಊಳಿಗಕ್ಕೆ ಆನ್ನೋಹಂಗೆ ಇರಲಿ ಅಂತೇವಿ ಅಷ್ಟೆ.

ಶಾಸ್ತ್ರಿ: ಸರಿ.

ರಾಣಿ: ಮನೆಸೊಸಿ ಅದರೇನು ಅದೊಂದು ಗರತಿ ಅಲ್ಲವೆ? ಗರತಿಹೆಣ್ಮಗಳ ಕಣ್ಣಲ್ಲಿ ನೀರು ತರಿಸಿ ನಮಗಾಗೊ ಒಳ್ಳೇದೇನು?

ಶಾಸ್ತ್ರಿ: ನಿಜ.

ರಾಣಿ: ಅಂದರೆ ನಾಯಕರು ಬಂದಾಗ ಈಮಾತನಾಡಬಹುದಲ್ಲ?

ಶಾಸ್ತ್ರಿ: ನೋಡೋಣ ಅಮ್ಮಾಜಿಯವರೆ. ನಾಯಕರು ನೇಮಯ್ಯ ಏನಂದರೂ ಅನ್ನದಿದ್ದರೂ ಇದರಲ್ಲಿ ಬೇರೇ ಜನದ ವಿಷಯ ಯೋಚಿಸ ಬೇಕಾದದ್ದಿದೆ.

ರಾಣಿ: ಯಾರದು ಅಂತೀರಿ?

ಶಾಸ್ತ್ರಿ: ನೇಮಯ್ಯನವರ ತಮ್ಮ ಚಿಕ್ಕ ರಾಣಿಯ ತಂದೆ ಒಬ್ಬರು. ಅವರಿಗೆ ಬೇಕಾದವರಾದ ಹಿರಿಯರು ಅವರು ಇವರು.

ರಾಣಿ: ಮಗಳನ್ನು ತೊರೆದ ತಂದೆ, ಅವರಿಗೆ ಇದೇನು ಬೇಕು? ಇನ್ನು ನಾಡಹಿರಿಯರು ಯಾರು, ನಿಮಗೆ ನೇಮಯ್ಯನವರಿಗೆ ಮಿಗಿಲಾಗಿ?

ಶಾಸ್ತ್ರಿ: ನಮ್ಮ ಮಾತೇನು? ನಿಮ್ಮ ಅಭಿಮಾನ ಒಂದು ಪದಾರ್ಥ ಅಂದಾಗ ಪದಾರ್ಥ. ಉಳಿದವರ ಮಾತೇನೋಡಬೇಕು.

ರಾಣಿ: ಯಾರನ್ನೂ ನೀವೇ ಒಪ್ಪಿಸಬೇಕು.

ಶಾಸ್ತ್ರಿ: ಈ ಕೆಲಸವನ್ನ ಅವರಿವರಿಗೆ ಹೇಳೋದಕ್ಕಿಂತ ನೇರವಾಗಿ ನೇಮಯ್ಯನವರಿಗೆ ಹೇಳುವುದು ಕ್ಷೇಮ, ಅಮ್ಮಾಜಿಯವರೆ.

ರಾಣಿ: ಮೊದಲು ದೊಡ್ಡವರು ನಾಲ್ಕು ಜನ ಒಪ್ಪಿದರೆ ಒಳಿತು ಅನ್ನಿಸತದೆ.

ಶಾಸ್ತ್ರಿ: ಸಾಕಿದ ಮಗಳು ಎಂತ ಅವರು ಒಪ್ಪದೆ ಇದ್ದಾರು ಎನ್ನುವ ಆತಂಕ ಬೇಡ ಅಮ್ಮಾಜಿಯವರೆ. ಅರಮನೆಗೆ ಒಳ್ಳೇದು ಎಂದರೆ ಅವರು ಸ್ವಂತದ ಮಾತನ್ನ ಮರೆಯುತಾರೆ.

ರಾಣಿ: ಆಯಿತು; ಅವರಿಗಾದರೂ ನೀವೇ ಹೇಳಿ ಒಪ್ಪಿಸಿ.

ಶಾಸ್ತ್ರಿ: ಹೇಳಂದರೆ ಹೇಳತೇನೆ. ಒಪ್ಪಿಸುವ ಯೋಗ್ಯತೆ ನನಗೆ ಇಲ್ಲ.

ರಾಣಿ: ಅಷ್ಟೇಮಾಡಿ. ಹಗುರವಾಗಿ ಸುಳಿವು ತಿಳಿಸಿ. ಶೃಂಗೇರಿಗೆ ಹೋಗಿ ಗುರುಗಳ ಹರಕೆ ತನ್ನಿ. ಮದುವೇಲಿ ಆ ಸಲ ಕಾಣಿಕೆ ಹೊನ್ನು ಎಷ್ಟು ವರಹ ಒಪ್ಪಿಸಿದೆವೊ ಈ ಸಲಾನು ಅಷ್ಟು ಒಪ್ಪಿಸಬೇಕಾಗುತದೆ. ಅದನ್ನೆಲ್ಲ ನಾವು ನೋಡಿಕೊಳ್ಳುತ್ತೇವಿ.

ಶಾಸ್ತ್ರಿ: ಇಲ್ಲಿ ಆಗಬೇಕಾದ ಮಾತು ಆಗಲಿ ಅಮ್ಮಾಜಿಯವರೆ. ಅಲ್ಲಿಗೆ ಹೋಗುವುದು ಕಷ್ಟವಿಲ್ಲ.

ರಾಣಿ ಶಾಸ್ತ್ರಿಗೆ, ಒಳಿತು, ಎಂದು ಹೇಳಿ ಒಳ ಬಾಗಿಲ ಕಡೆಗೆ "ಯಾರು ಅಲ್ಲಿ" ಎಂದು ಕರೆದಳು; ಬಾಗಿಲಿಂದ ಸಣ್ಣವ್ವ ಇಣಿಕಿ ನೋಡಿದಳು.

ರಾಣಿ, "ಬಾ ಸಣ್ಣವ್ವ ಶಾಸ್ತ್ರಿಗಳಿಗೆ ತಾಂಬೂಲ ಸಲ್ಲಿಸು" ಎಂದಳು.

ಸಣ್ಣವ್ವ ವಾಡಿಕೆಯಂತೆ ಎಲೆ ಅಡಿಕೆ ಕಾಯನ್ನು ಇಟ್ಟ ಒಂದು ತಟ್ಟೆಯನ್ನು ಕೈಯಲ್ಲಿ ಹಿಡಿದು ಬಂದಳು.

ರಾಣಿ, "ಇದೇ ನಾ ಹೇಳಿದ ಹೆಣ್ಣು ಶಾಸ್ತ್ರಿಗಳೆ. ಶಾಸ್ತ್ರಿಗಳಿಗೆ ಕೈಮುಗಿ ಸಣ್ಣವ್ವ," ಎಂದಳು. ಸಣ್ಣವ್ವ ತಟ್ಟೆಯನ್ನು ಶಾಸ್ತ್ರಿಯ ಮುಂದೆ ಇಟ್ಟು ಕೈಮುಗಿದಳು.

ಶಾಸ್ತ್ರಿ "ಒಳ್ಳೆಯದಾಗಲಿ" ಎಂದನು. ಎಲೆ ಅಡಿಕೆಯನ್ನು ತೆಗೆದುಕೊಂಡು ಎದ್ದನು. ರಾಣಿ ಎದ್ದು, "ನಿಮ್ಮಿಂದಲೇ ಇದು ನಡೆಯಬೇಕು. ಹ್ಯಾಗೆ ನಡಸತೀರೋ ನೋಡಿ," ಎಂದಳು. ಶಾಸ್ತ್ರಿ, "ನೇಮಯ್ಯನವರಲ್ಲಿ ತಿಳಿಸತೇನೆ ಅಮ್ಮಾಜಿಯವರೆ," ಎಂದು ಲಘುವಾಗಿ ಕೈಮುಗಿದು ಹೊರಕ್ಕೆ ಬಂದು ನೇರವಾಗಿ ನೇಮಯ್ಯನ ಮನೆಗೆ ಹೋದನು.

## ೧೬

ನೇಮಯ್ಯನಿಗೆ ಆ ದಿನ ಅರಮನೆಗೆ ಹೋಗುವ ಕೆಲಸವಿರಲಿಲ್ಲ. ಅವನು ಬೆಳಗಿನ ಪೂಜೆಯನ್ನು ಮುಗಿಸಿಕೊಂಡು ತನ್ನ ಮನೆವಾರ್ತೆಯ ಒಂದೆರಡು ಸಂಗತಿಯನ್ನು ನೋಡಿ ಶಾಸ್ತ್ರಿ ಬರುವ ವೇಳೆಗೆ ಬಿಡುವಾಗಿಯೇ ಕುಳಿತಿದ್ದನು. "ಶಾಸ್ತ್ರಿಗಳು ದಯಮಾಡಿದಾರೆ" ಎಂದು ಆಳು ಹೇಳಲು ಎದ್ದು ಬಾಗಿಲಿಗೆ ಬಂದು ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿ ಕುಳ್ಳಿರಿಸಿಕೊಂಡನು.

ನೇಮಯ್ಯನಿಗೆ ಸುಮಾರು ಐವತ್ತು ವರ್ಷ ವಯಸ್ಸು. ಮುಖ ಸ್ವಲ್ಪ ಉದ್ದ, ತೆಳು: ವರ್ಚಸ್ವಿಯಾಗಿ ಅಂದವಾಗಿದ್ದಿತು. ಮನುಷ್ಯ ಸೌಮ್ಯನೆಂದು ಮೊದಲಲ್ಲೆ ತಿಳಿಯುವುದು. ಹಣೆಯಲ್ಲಿ ಶುಭ್ರವಾದ ವಿಭೂತಿ; ಮಧ್ಯೆ ಒಂದು ಬೊಟ್ಟು. ಅವನ ರೀತಿಯಲ್ಲೆ ಅವನ ಮನಸ್ಸಿನ ನಯ ಕಾಣುವಂತಿದ್ದಿತು. ಆ ನಯವಾದರೂ ಮುತ್ತಾತ ಹೆತ್ತಾತನ ಕಾಲದಿಂದ ಮನೆಯಲ್ಲಿ ಕ್ರಮವಾಗಿ ಬೆಳೆದು ಬಂದದ್ದು. ಮನೆತನ ಪುಣ್ಯವಂತ ಮನೆತನ. ಇವರ ತಂದೆಗೆ ಇವನು, ಇವನ ತಮ್ಮ, ಇಬ್ಬರೆ ಮಕ್ಕಳು. ತಾವು ಬಲ್ಲಾಳರಾಯರ ವಂಶಿಕರೆಂದು ಮನೆತನದ ನಂಬಿಕೆ. ಹಿರಿಯರು ರಾಜರಾಗಿದ್ದರು, ಯೋಗಿಗಳಾಗಿದ್ದರು. ಕೆಲವು ತಲೆಮಾರಿನ ಹಿಂದೆ ಈ ಶಾಖೆಯ ಹಿರಿಯರು ಶಿವಾಚಾರವನ್ನು ಅವಲಂಬಿಸಿದರು. ವಂಶದಲ್ಲಿ ಒಬ್ಬ ಮತ್ತೆ ರಾಜನಾಗುವನೆಂದು ಭವಿಷ್ಯ ಇದ್ದಿತಂತೆ. ನೇಮಯ್ಯನ ತಮ್ಮ ಉದ್ಯಮಶೀಲ. ಜ್ಯೋತಿಷ್ಕರನ್ನು ಕೇಳಿ, ಆ ರಾಜನಾಗುವವನು ತಾನು ಎಂದು ನಿಶ್ಚಯಿಸಿಕೊಂಡಿ

ದ್ದನು; ತರುಣ ವಯಸ್ಸಿನಲ್ಲಿ ಸ್ವಲ್ಪ ಅತಿಕ್ರಮಿಸಿ ಮಾತನಾಡಿ ನಡೆದು, ನಗರದ ಅರಮನೆಗೆ ವಿರೋಧಿ ಎನ್ನಿಸಿಕೊಂಡನು. ಅವನಿಗೆ ಆಗತಾನೆ ಒಬ್ಬ ಮಗಳು ಹುಟ್ಟಿದಳು. ಆ ಮಗಳನ್ನು ಹೆತ್ತು ಅವನ ಹೆಂಡತಿ ತೀರಿಕೊಂಡಳು. ತಂದೆ ಮಗಳು ಒಬ್ಬರೊಬ್ಬರ ಮುಖನೋಡುವುದು ಕೆಡಕು ಎಂದು ಜ್ಯೋತಿಷ್ಯ ಹೇಳಿದನು. ಅರಮನೆಯ ಜನ ಇವನನ್ನು ದಂಡಿಸಬೇಕು ಎಂಬ ಅಪೇಕ್ಷೆಯಲ್ಲಿ ಇದ್ದರು. ಆ ಸಮಯದಲ್ಲಿ ಈ ಅನರ್ಥ ಪ್ರಾಪ್ತವಾಗಿ, ತರುಣ ಮುಂದುಗೆಟ್ಟನು; ಎಳೆಯ ಮಗುವನ್ನು ಬಿಟ್ಟು ಅದೆತ್ತಲೊ ಹೋದನು. ಇವನು ರಾಜ್ಯವನ್ನು ಸಾಧಿಸುವುದ ಕ್ಕೋಸ್ಕರ, ಹಾಗೆಯೆ ಸಿದ್ಧಿಯನ್ನು ಪಡೆಯುವುದಕ್ಕೋಸ್ಕರ, ಚಂದ್ರ ದ್ರೋಣ ಪರ್ವತದ ವನದಲ್ಲಿ ತಮ್ಮ ವಂಶದ ಹಿರಿಯರಾದ ಸಿದ್ಧರನ್ನು ಸೇವಿಸಿ ತಪಸ್ಸು ಮಾಡುತ್ತಿದಾನೆ ಎಂದು ನೇಮಯ್ಯನಿಗೆ ಆಮೇಲೆ ತಿಳಿಯಿತು.

ತಮ್ಮನ ಹೆಂಡತಿ ತೀರುವ ಮೊದಲೆ ಅಣ್ಣನ ಹೆಂಡತಿ ತೀರಿದ್ದಳು. ನೇಮಯ್ಯ ಮತ್ತೆ ಮದುವೆ ಆಗಿರಲಿಲ್ಲ.

ಶಾಂತನೂ ವಿರಕ್ತನೂ ಆಗಿದ್ದ ಕಾರಣದಿಂದ ನೇಮಯ್ಯ ಊರ ಎಲ್ಲ ಜನರ ಗೌರವವನ್ನು ಗಳಿಸಿದ್ದನು. ಅಲ್ಲದ ಮಾತಿಗೆ ಒಪ್ಪುವವನಲ್ಲ ಎಂಬ ಕಾರಣದಿಂದ ಪ್ರಬಲರಾದ ಜನ ಹಲವರಿಗೆ ಇವನ ವಿಷಯದಲ್ಲಿ ಬೇಸರ. ಆದರೆ ಅಂಥವರು ಕೂಡ ತಮಗೆ ಬೇಕೆಂದು ತೋರಿದಾಗ ಇವನ ಸಹಾಯವನ್ನು ಕೇಳುವರು, ಪಡೆಯುವರು.

ನೇಮಯ್ಯ ತನ್ನ ಈ ನಿಸ್ವಾರ್ಥ ವರ್ತನದಿಂದ ಸಾಧಿಸಿದ್ದ ಸ್ಥಿತಿ ಅರಮನೆಯ ಬಾಳಿನಲ್ಲಿ ಬಹು ಸ್ಫುಟವಾಗಿ ಕಾಣುತ್ತಿದ್ದಿತು. ನಾಯಕನಿಗೂ ರಾಣಿಗೂ ಮನಸ್ಸು ಕೆಡಲು ಮೊದಲಾದಾಗ ಇವನು, "ಈ ಮಾತು ಏನಿದ್ದರೂ ಅರಮನೆಯ ಒಳಗೆ ಇರಬೇಕು. ರಾಜಗೃಹಚ್ಛಿದ್ರ ಹೊರಕ್ಕೆ ಕಾಣಬಾರದು," ಎಂದು ಬಹು ಪ್ರಯತ್ನಮಾಡಿದನು. ಮಗ ತಾಯನ್ನು ಅಲ್ಲಗಳೆದ ದಿನದಲ್ಲಿ ನೇಮಯ್ಯ ಅವನಿಗೆ, "ತಾಯಲ್ಲಿ ತಪ್ಪು ಹುಡುಕು ವುದು ಬೇಡಿ ನಾಯಕರೆ," ಎಂದು ಹೇಳಿದನು.

ಚಿನ್ನಬಸವನು, "ನಿಮ್ಮ ತಾಯಿ ಆಗಿದ್ದರೆ ಸುಮ್ಮನೆ ಇರುತ್ತಿದ್ದಿರಾ?" ಎಂದು ಕೇಳಿದನು.

"ಏನಾಗಿದ್ದರೆ ? "

" . . . ಹೀಗಾಗಿದ್ದರೆ ? "

" ಅದು ನನ್ನ ಕಣ್ಣಿಗೆ ಕಾಣುತ್ತಿರಲಿಲ್ಲ, ನಾಯಕರೆ."

" ಒಳ್ಳೆಯದು ಅಣ್ಣನವರೆ, ನಿಮ್ಮ ಕಣ್ಣು ಸಮಯದಲ್ಲಿ ಮಂಕಾಗುತ್ತದೆ. ನಮಗೆ ಆಗುವುದಿಲ್ಲವಲ್ಲ."

ಬಸಪ್ಪನಾಯಕನು ಶಾಂತವ್ವನನ್ನು ಮಗನಿಗೆ ಕೊಟ್ಟು ಮದುವೆ ಮಾಡಬೇಕು ಎಂದು ಕೇಳಿದಾಗ, ನೇಮಯ್ಯ ರಾಣಿಯ ಪೂರ್ಣ ಅನುಮತಿ ಇಲ್ಲದೆ ಈ ಸಂಬಂಧ ಮಾಡಲು ಒಪ್ಪಲಿಲ್ಲ. ರಾಣಿ ತೀರ ಒಪ್ಪಿದರೂ ಶಾಂತವ್ವನನ್ನು ಈ ಮನೆಗೆ ಕೊಡಬಹುದೆ ಎಂದು ದೊಡ್ಡಪ್ಪನಿಗೆ ಸಂದೇಹ. ಅವನು ನಾಯಕನಿಗೆ, " ತಾವು ಈ ವಿಷಯ ಮತ್ತೆ ಯೋಚನೆಮಾಡಿ. ನಾಯಕರು ಸರಿಯವರಲ್ಲಿ ಸಂಬಂಧ ಬೆಳೆಸಬೇಕು. ನಾವು ಸಾಮಾನ್ಯ ಮನೆತನ. ಅರಸರಿಗೆ ಸಮನಲ್ಲ," ಎಂದನು. ಬಸಪ್ಪನಾಯಕನು, "ನೀವು ಬಲ್ಲಾಳರ ವಂಶದವರು ಎಂದು ಹೇಳಿರಲಿಲ್ಲವೆ ? ನೀವು ಸಾಮಾನ್ಯ ಆದರೆ ನಾವೂ ಸಾಮಾನ್ಯವೇ," ಎಂದನು. ಆಳುವ ಒಂದು ಮನೆಯಿಂದ ಬಂದು ವೀರಮ್ಮಾಜಿ ತನ್ನ ಹೆಸರನ್ನು ಕೆಡಿಸಲಿಲ್ಲವೆ ಎಂದು ಮನಸ್ಸಿನಲ್ಲೆ ನೊಂದುಕೊಂಡನು. ಕೊನೆಗೂ ವೀರಮ್ಮಾಜಿ ನೇಮಯ್ಯನಿಗೆ, " ನಾಯಕರು ಶಾಂತವ್ವನ್ನ ಮಗನಿಗೆ ಕೇಳತಾರಲ್ಲ, ನೀವು ಯಾಕೆ ಒಲ್ಲೆ ಅಂತೀರಿ ನೇಮಯ್ಯ? " ಎಂದಳು. ನೇಮಯ್ಯ, "ರಾಣಿಯವರು ಹೇಳೋ ಮಾತನ್ನ ರಾಜರು ಹೇಳಿದರು. ಸರಿಯಾದವರು ಕೇಳಲಿ ಅಂತ ತಡೆದೆ," ಎಂದನು. ವೀರಮ್ಮಾಜಿ, " ಅವರು ಬೇಕು ಎಂದಿರೋವಾಗ ನಾನು ಬೇಡ ಅಂತೇನೆಯೆ? ಒಪ್ಪಿಕೊಳ್ಳಿ," ಎಂದಳು. ಆ ಮೇಲೆ ಮದುವೆಯಾಯಿತು; ಶಾಂತವ್ವ ಅರಮನೆಯನ್ನು ಸೇರಿದಳು.

ಬೀಗನಾದೆನೆಂದು ನೇಮಯ್ಯ ನಡೆಯನ್ನು ಬೇರೆ ಮಾಡಿಕೊಳ್ಳಲಿಲ್ಲ. ಅರಮನೆಗೆ ಹೋಗುವುದು ಆ ಮೊದಲೆಷ್ಟೊ ಅಷ್ಟೆ; ಅಳಿಯನೊಂದಿಗೆ ಮೊದಲು ಎಷ್ಟೋ ಅಷ್ಟೆ ಸಲಿಗೆ. ಶಾಂತವ್ವ ತನ್ನ ಮನೆಯಲ್ಲಿರುವಾಗ,

"ಶಾಂತವ್ವ," ಎಂದು ಅಕ್ಕರೆಯಿಂದ ಕರೆದು ಹತ್ತಿರ ಹೋಗುವನು. ತಬ್ಬಲಿಯಾದ ಎಳೆಗೂಸಿನಿಂದ ಅವಳನ್ನು ಕರೆದು ಕರೆದು ಆ ಧ್ವನಿ ಮೆದುವಾಗಿರುವುದು ಹೇಗೆ ಎಂಬುದನ್ನು ಚೆನ್ನಾಗಿ ಕಲಿತಿತ್ತು. ಆದೇ ಶಾಂತವ್ವನನ್ನು ಅರಮನೆಯಲ್ಲಿ ಕಂಡಾಗ ಇವನು ತಾನು ತಂದೆ ಎಂಬಂತೆ ತೋರಿಸಿಕೊಳ್ಳುತ್ತಿರಲಿಲ್ಲ. ಇದೆಷ್ಟುದೂರ ಹೋಯಿತೆಂದರೆ, ಒಂದುಸಲ ಶಾಂತವ್ವ ಇವನ ಮನೆಗೆ ಬಂದವೇಳೆ, "ಅಣ್ಣಯ್ಯ, ನೀವು ನನ್ನ ಅರಮನೇಲಿ ಮಾತನೇ ಆಡಿಸೋದಿಲ್ಲ ಯಾಕೆ?" ಎಂದಳು. ನೇಮಯ್ಯ ಪ್ರಶ್ನೆಯಿಂದ ಚಕಿತನಾಗಿ ಅವಳ ಕಡೆ ನೋಡಿದನು. ಮಗು ತನ್ನ ನಿರ್ಲೇಪವನ್ನು ಅಲಕ್ಷ್ಯವೆಂದು ತಿಳಿದುಕೊಂಡಳೋ? ಉತ್ತರ ಬಾರದೆ ಶಾಂತವ್ವ, "ನನ್ನ ಕುರಿತು ಬೇಸರಾನೆ? ನಾ ಏನು ಮಾಡಿದೆ?" ಎಂದಳು. ನೇಮಯ್ಯ, "ಏನು ಮಾಡಿದೆ ಅಂತೀಯಾ ಅವ್ವ? ರಾಣಿ ಯಾದೆ!" ಎಂದನು. "ಅಬ್ಬ! ರಾಣೀನೆ? ಅಂದರೆ ನೀವು ರಾಣಿ ಅಣ್ಣಯ್ಯನಲ್ಲ!" "ಅಹ್ಹ. ನಾನು ಶಾಂತವ್ವಗೆ ಅಣ್ಣಯ್ಯ; ರಾಣೀಗೆ ಊಳಿಗ ತಾಯಿ," "ಅವ್ವಯ್ಯ! ನಾನದೇಸು ದೊಡ್ಡವಳಾದೆ?" "ಇನ್ನೂ ದೊಡ್ಡವಳಾಗು ತಾಯಿ!" ಹೀಗೆಂದು ನೇಮಯ್ಯ ಆಗ ಅವಳ ಹತ್ತಿರ ಹೋದನು; ಮುಂಗುರುಳನ್ನು ನೇವರಿಸಿ ಸಮಾಧಾನಪಡಿಸಿದನು.

ಬಸಪ್ಪನಾಯಕ ತೀರಿಕೊಂಡು, ಅವನ ರಾಣಿಯ, ಮಗನ, ಮನಸ್ತಾಪ ಬೆಳೆದಾಗ ನೇಮಯ್ಯ ಅಳಿಯ ಗಾದಿಯನ್ನೇರುವ ವಿಷಯ ದಲ್ಲಿ ತಾನು ಬಾಯಿ ತೆರೆಯುವುದಿಲ್ಲ ಎಂದು ನಿಶ್ಚಯಮಾಡಿಕೊಂಡನು. ಹತ್ತು ಜನ ಬಲವಂತಮಾಡಿ ಅವನನ್ನು ಮುಂದಿಟ್ಟುಕೊಂಡು ಒಂದುಸಲ ಈ ವಿಷಯದಲ್ಲಿ ರಾಣಿಗೆ ಬಿನ್ನಹಮಾಡಿದರು. ವೀರಮ್ಮಾಜಿ, "ನೇಮಯ್ಯ ಇದ್ದಾರೆ, ಅವರ ಅಳಿಯ ಇದ್ದಾರೆ. ಅವರ ಮೂಲಕ ಎಲ್ಲ ಏರ್ಪಾಡು ಮಾಡಿಸಿ," ಎಂದಳು. ನೇಮಯ್ಯ, "ನನ್ನ ಮಗಳನ್ನ ನೀವು ನಾಯಕರಿಗೆ ತಂದುಕೊಳ್ಳದೆ ಇದ್ದಿದ್ದರೆ ಈ ಭಾರ ನಾನು ಹೊತ್ತುಕೊಳ್ಳುತ್ತಾ ಇದ್ದೆ. ಈಗ ಇದು ನನಗೆ ಚೆನ್ನ ಅಲ್ಲ," ಎಂದನು. ರಾಣಿ, "ಅಳಿಯನ ಮೇಲೆ ಒಲವಿದ್ದರೆ ತಪ್ಪೆ ನೇಮಯ್ಯ? ಮಗಳು ರಾಣಿ ಆಗಲಿ ಅಂತ ಆಶೆ ಇರ ಬಾರದೆ?" ಎಂದಳು. ನೇಮಯ್ಯ, "ನನ್ನ ನಡತೇನ ತಾವು ಶೋಧಿಸಿ

ನೋಡಬೇಕು. ಈ ನಿಷ್ಠುರ ನುಡಿಯೋ ಹಾಗೆ ನಾನು ನಡೆದಿಲ್ಲ," ಎಂದನು. ಇಂಥ ಹೊತ್ತಿನಲ್ಲೆಲ್ಲ ನೇಮಯ್ಯನನ್ನು ಅವನ ಶುದ್ಧ ಮನಸ್ಸು ಕಾಪಾಡುತ್ತಿದ್ದಿತು. ಅನ್ಯಾಯದಲ್ಲಿ ಲಿಂಗಣ್ಣಯ್ಯ ಸೆರೆಗೆ ಹೋದನು: ನೇಮಯ್ಯ ಅದು ತನಗೆ ಒಪ್ಪಿಗೆಯಿಲ್ಲ ಎಂಬುದನ್ನು ಸ್ಪಷ್ಟ ಪಡಿಸಿದನು; ಆದರೆ ಅದನ್ನು ಸರಿಪಡಿಸುವ ಶಕ್ತಿ ತನ್ನದಲ್ಲ, ಸುಮ್ಮನಿದ್ದನು. ನಂಬಯ್ಯ ರಾಣಿ ಕೊಟ್ಟ ಸಲಿಗೆಯಿಂದ ಹೆಚ್ಚಿಕೊಂಡು ನಡೆದನು. ನೇಮಯ್ಯ ಆ ವಿಷಯದಲ್ಲಿ ತನ್ನ ಅತೃಪ್ತಿಯನ್ನು ಸ್ಪಷ್ಟವಾಗಿ ತೋರಿಸುವನು; ತನ್ನ ಕೈಯಲ್ಲಿದ್ದ ಸಂಗತಿಯನ್ನು ಸರಿಪಡಿಸುವನು, ಉಳಿದ ವಿಷಯದಲ್ಲಿ ಸುಮ್ಮನಿರುವನು.

ಹೀಗೆ ಬಿದನೂರಿನ ರಾಷ್ಟ್ರಜೀವನದಲ್ಲಿ ನೇಮಯ್ಯನದು ಒಂದು ವಿಚಿತ್ರವಾದ ಸ್ಥಾನವಾಗಿದ್ದಿತು. ನೇಮಕದಿಂದ ಮಂತ್ರಿ ಅಲ್ಲ; ಆದರೂ ಇವನು ಮಂತ್ರಿಯಂತೆ ನಡೆಯಬೇಕು. ಅಧಿಕಾರ ಇಲ್ಲದೆಯೆ ರಾಜ್ಯದ ಕ್ಷೇಮದ ಹೊಣೆಯನ್ನು ಹೊರಬೇಕು.

## ೧೭

ಶಾಸ್ತ್ರಿ ಒಂದು ಕ್ಷಣ ನೇಮಯ್ಯನ ಮುಖವನ್ನೇ ದೃಷ್ಟಿಸಿ, "ಈಗ ನಾನು ಎಲ್ಲಿಂದ ಬಂದೆ ಬಲ್ಲಿರಾ ನೇಮಯ್ಯನವರೆ?" ಎಂದನು.

ಇವರು ಒಬ್ಬರನ್ನೊಬ್ಬರು ನೋಡುವ ರೀತಿಯಲ್ಲಿ ಪರಸ್ಪರ ಪೂರ್ಣ ಆದರ ವಿಶ್ವಾಸ ಇರುವುದು ಕಾಣುತ್ತಿದ್ದಿತು

ನೇಮಯ್ಯ, ನಗುತ್ತ, "ಕಳ್ಳರುಕಾಕರು ಆದರೆ ಕಾವಲ ಜನ ಬಂದು ತಿಳಿಸಿರೋದು. ಸತ್ಯವಂತರು ಎಲ್ಲಿಗೆಹೋಗಿದ್ದರು ಎತ್ತಲಿಂದ ಬಂದರು ಅನ್ನೋದು ನಮಗೆ ಸುದ್ದಿ ಬರೋದಿಲ್ಲ," ಎಂದನು.

"ಸತ್ಯವಂತನಾಗಿಯೇ ಬಂದಿದೇನೆ ನಿಜ. ಆದರೆ ಸುಲಭವಾಗಿ ಕಳ್ಳನಾಗಬಹುದಾಗಿತ್ತು."

"ಯಾವುದೂ ಸುಲಭ ಅಲ್ಲ ಶಾಸ್ತ್ರಿಗಳೆ. ಪೂರ್ವಾರ್ಜಿತ ಅಂತೀರಲ್ಲ ಅದು ಇರಬೇಕು. ಅದಿಲ್ಲ, ಕಳ್ಳನಾಗಲಿಲ್ಲ."

" ಹಾಸ್ಯಹಾಗಿರಲಿ. ನಾ ಬಂದದ್ದು ಎಲ್ಲಿಂದ ಊಹಿಸಿಹೇಳಿ. "

" ನಾನು ದಡ್ಡ ಅಂತ ತಿಳಿದೇ ನನ್ನನ್ನು ಕಣ್ಣುಕಟ್ಟಿ ಆಡಿಸತೀರಿ. ಬಹುತೇಕ ನೀವು ಹೋಗಿರಲ್ಲ ಅನ್ನೋ ತಾವು ಯಾವುದು ಅಂತ ಅಲ್ಲ? ಒಳ್ಳೇದು ಅರಮನೆ ಇರಬಹುದೆ ?"

" ಎಲಾ ನಿಮ್ಮ ದಡ್ಡತನಾನೆ! ಇದು ದಡ್ಡ ಆದರೆ ಬುದ್ಧಿ ಯಾವುದಪ್ಪ ? ಹೌದು, ನೋಡಿ. ರಾಣಿಯಮ್ಮನವರು ಹೇಳಿಕಳುಹಿಸಿ ದರು. ಹೋಗಿದ್ದೆ."

" ಎರಡೂ ಸೋಜಿಗ. ಒಳಿತೇ ಆಯಿತಲ್ಲ."

" ಒಳಿತಾಗಲಿಲ್ಲ. ನಡೆದ ಸಂಗತಿ ಏನು ಅಂತ ತಿಳಿಸುತೇನೆ. ಕೇಳಿ ಹೇಳಿ."

" ಅಪ್ಪಣೆ ಆಗಲಿ."

"ತಿಂಗಳದಿನ ಇಲ್ಲದ್ದು ಇಹೊತ್ತೇನಪ್ಪ ಬಂತು ಎಂದುಕೊಂಡೆ. ಸ್ವಲ್ಪ ಭಯಪಟ್ಟುಕೊಂಡೇ ಹೋದೆ."

" ಒಳಿತುಮಾಡಿದಿರಿ. ಹಿಂದಿನಸಲ ನೀವು ನಡಕೊಂಡರೀತೀಲಿ ಬರೋದಿಲ್ಲ ಎಂದಿದ್ದರೂ ಆಗುತಿತ್ತೆ. ಅಷ್ಟು ಬೇಸರ ಪಟ್ಟಿರಿ."

" ಹ್ಯಾಗಪ್ಪ ಆಗತ್ತೆ ? ನಮ್ಮ ಸ್ವಂತದ ಮಾತಲ್ಲವಲ್ಲ. ಮಠದ ಸೇವೆ ಎಂದಮೇಲೆ ಎಡಬಲ ನೋಡಿ ಅಲ್ಲವೆ ನಡೆಯಬೇಕು."

" ಅದೇ ಸರಿ."

" ಹೋದರೆ ಅಮ್ಮಾಜಿಯವರು ಪಟ್ಟದ ಕಟ್ಟಾಣಿಕೆ ನಡೆಯಬೇಕು ಎಂದರು, ದೇವರಿಗೆ ಕಾಣಿಕೆ ಎಂದರು, ಆಮೇಲೆ ಗುರುಗಳಿಗೆ ಮರ್ಯಾದೆ ಎಂದರು, ಆಮೇಲೆ ಒಂದು ಕೆಲಸ ಹೇಳಿದರು."

" ಸರಿ."

" ಏನು ಕೆಲಸ ಊಹಿಸಿ."

" ಇದ್ದ ಬುದ್ಧಿ ಆಗಲೇ ಸೋತಿತು. ತಾವೇ ಹೇಳಿಬಿಡಿ."

" ನೀವೇನು ಚಿಂತೆ ಮಾಡೋದಿಲ್ಲವಲ್ಲ? ನಿಮಗೆ ಇಷ್ಟವಲ್ಲದ ಮಾತು."

" ನಮ್ಮ ಇನ್ನೊಬ್ಬರ ಇಷ್ಟ ಏತರದು? ಅರಮನೆ ಇಷ್ಟ ನಮ್ಮ ಇಷ್ಟ."

"ಅದನ್ನೇ ನಾನು ಹೇಳಿದೆ ಅಮ್ಮಾಜಿಯವರಿಗೆ. ಅವರು ನನಗೆ ಹೇಳಿದ ಕೆಲಸವನ್ನ ನಿಮಗೆ ಒಪ್ಪಿಸುತ್ತೇನೆ ಎಂತ ಬಂದೆ."

"ನಮ್ಮ ಕೈಯಿಂದ ಆಗೋದಾದರೆ."

"ಆಗುತ್ತೆಯೇ ಇಲ್ಲವೆ ನೋಡಿ." ಹೀಗೆಂದು ಶಾಸ್ತ್ರಿ ರಾಣಿ ಹೇಳಿದ್ದ ಮಾತನ್ನೆಲ್ಲ ನೇಮಯ್ಯನಿಗೆ ವಿವರವಾಗಿ ತಿಳಿಸಿದನು.

ನೇಮಯ್ಯ ಮಧ್ಯೆ ಸರಿ, ಒಳಿತು, ಆಯಿತು, ಎನ್ನುತ್ತ ಎಲ್ಲವನ್ನೂ ಸಮಾಧಾನವಾಗಿ ಕೇಳಿದನು.

ಕಥನ ಮುಗಿದಮೇಲೆ ಶಾಸ್ತ್ರಿ "ಏನಂತೀರಿ?" ಎಂದು ಕೇಳಿದನು.

ನೇಮಯ್ಯ, "ಇಂಥ ಮಾತು ಈ ಮುನ್ನ ನನ್ನ ಕಿವಿಗೆ ಬಿದ್ದಿತ್ತು. ಇದು ಹೊಸತೇನಲ್ಲ," ಎಂದನು.

"ಅರ್ಥಮರ್ಥ ಯಾರೋ ಹೇಳಿದ್ದು ಅನ್ನೋದಕ್ಕೂ ಪ್ರತ್ಯಕ್ಷ ವಾಗಿ ಬೀಗಿತಿ ಹೇಳಿದ್ದು ಅನ್ನೋದಕ್ಕೂ ವ್ಯತ್ಯಾಸವಿಲ್ಲವೆ?"

"ಇದೆ."

"ಇದೆ ಅಂತ ಇಷ್ಟು ತಂಪಾಗಿ ಹೇಳತೀರಲ್ಲ ನೇಮಯ್ಯ. ನನಗೆ ಕೇಳುವುದು ಕಷ್ಟವಾಯಿತು. ನೀವು ಹಸನ್ಮುಖವಾಗಿದೀರಲ್ಲ."

"ಹಸನ್ನ ಪ್ರಸನ್ನ ಅಲ್ಲ . . . ."

"ಅಪ್ರಸನ್ನವೂ ಅಲ್ಲ."

"ಅಪ್ರಸನ್ನವೂ ಅಲ್ಲ. ಒಡತೀರ ಮಾತು. ಯೋಚಿಸಿ ಮಾಡ ಬೇಕು."

"ಯಾತರ ಮಾಡೋದು? ಇದು ಕೂಡದು ಅನ್ನಬೇಕು."

"ಅದನ್ನ ಬೇರೆಯೋರು ಅನ್ನಬೇಕು ಶಾಸ್ತ್ರಿಗಳೆ. ನಾನೆನ್ನಬಾರದು."

"ಅನ್ನಬಾರದು?"

"ಅನ್ನಬಾರದು. ನಮ್ಮದೇ ಮಾತು ಸಿಲುಕಿರುವಾಗ ನಾವು ಅದು ಅಲ್ಲ ಇದು ಇಲ್ಲ ಅಂತ ಹೇಳಬಾರದು."

"ಅವರಿಗೆ ಕೆಟ್ಟದು ಅಂತ ಅಲ್ಲವೆ? ಊರಿನ ಜನ ಪುಂಡು ಏಳದೆ, ಈ ಮಾತು ಕೇಳಿದರೆ?"

"ಏಳಬಹುದು. ಅದನ್ನ ನಾವು ಹೇಳಿದರೆ ಅವರಿಗಾಗಿ ಹೇಳುತೇವೊ ನಮಗಾಗಿ ಹೇಳತೇವೊ ಅವರಿಗೆ ತಿಳಿಯೋ ಬಗೆ ಯಾವುದು? ನಮಗಾಗಿ ಹೇಳತೇವೆ ಅಂತ ಕಾಣೋ ಹೊತ್ತಿನಲ್ಲಿ ನಾವು ಬಾಯಿ ತೆರೆಯಬಾರದು."

"ಇಷ್ಟು ಖಂಡಿತವಾಗಿ ಹೇಳತೀರಲ್ಲ."

"ನಮ್ಮ ಗುರುಗಳು ಹೇಳೋದುಂಟು. ಕೈ ತುಪ್ಪದಾಗೆ ಸುಟ್ಟಿತಂತ ನಾಲಿಗೆ ಅದನ್ನನೆಕ್ಕೋದು ಬೇಡ. ಕೈಯ ಕಾಯೋಕಂತ ನೆಕ್ಕಿತೊ, ತನಗೆ ಬೇಕು ಅಂತ ನೆಕ್ಕಿತೊ? ಕೈ ಹೇಳಬಹುದು ನೋಡಿ, ಕಾವು ನನ್ನ ಪಾಲಿಗಾಯಿತು, ತುಪ್ಪ ನಾಲಿಗೆ ಪಾಲು ಅಂತ."

"ಹಾಗಾದರೆ ಇದನ್ನ ನಡೆಸಿಬಿಡತೀರಿ?"

"ನಡಸೋವರಿಗೆ ಈಗ ಎಲ್ಲಿ ಬಂತು? ಬೇಡ ಅನ್ನೋ ಮಾತು ನಾವು ಹೇಳೋರಲ್ಲ. ಬೇಕು ಅಂತ ಗೊತ್ತಾಗಲಲ್ಲ. ಆಮೇಲೆ ನಡಸೋದು."

ಅರಮನೆಗೆ ಒಳ್ಳೆಯದಾಗಲಿ ಎಂದರೆ ನೇಮಯ್ಯ ಸ್ವಾರ್ಥವನ್ನು ಅಡ್ಡ ತರುವುದಿಲ್ಲ ಎಂದು ಶಾಸ್ತ್ರಿಯೇ ಹೇಳಿದ್ದನು. ಅವನಿಗೆ ಅದು ನಿಶ್ಚಯವೂ ಹೌದು. ಆದರೂ ಆ ನಂಬಿಕೆ ಇಷ್ಟು ಸ್ಫುಟವಾಗಿ ಸರಿ ಎನಿಸಿ ಎದುರಿಗೆ ನಿಂತಾಗ ಅವನಿಗೆ ಕೂಡ ಆಶ್ಚರ್ಯವಾಯಿತು. ಅವನು, "ನೀವು ಸ್ಥಿತಪ್ರಜ್ಞರು ನೇಮಯ್ಯ, ಇದು ನಮ್ಮಿಂದ ಆಗೋ ಮಾತಲ್ಲ," ಎಂದನು.

ನೇಮಯ್ಯ: "ನೀವಾದರೂ ಹೀಗೆಯೇ ನಡದೀರಿ."

"ನಡೆದೇವೇನೊ. ಆದರೆ ಈ ರಾಣಿ ನಾವು ಹರಳೋಲೆಗೆ ಕಾಣಿಕೆಗೆ ಸೋತು ಹೇಳಿದ ಮಾತಿಗೆ ಒಪ್ಪತೇವೆ ಅಂತ ತಿಳಿದಿದಾರೆ."

"ಅದೂ ಲೋಕದಲ್ಲಿ ಉಂಟಲ್ಲ."

"ಲೋಕದಲ್ಲಿರಬಹುದು. ನಮ್ಮ ಗುರುಗಳು ಹೀಗೆ ಮಾಡತಾರೆ ಅಂದರೆ ಕೇಳಿ ಸಹಿಸುವುದೇ ಕಷ್ಟ."

"ನಮ್ಮ ಗುರುಗಳು ಅಂದರೆ ಕಷ್ಟ ತಾನೆ. ಸುಮ್ಮನೆ ಗುರುಗಳು ಅನ್ನಿ. ಅಷ್ಟು ಕಷ್ಟ ಇಲ್ಲ. ಗುರುಗಳು ತಾನೆ ಏನು ಮಾಡುತಾರೆ?

ಮನೆ ಇಲ್ಲ ಸರಿ, ಮಠ ಇಲ್ಲವೇನು? ಮದಿವೆಯಾಗಿ ಮಗಳಿಲ್ಲ; ಶಾರದಾಂಬಾ ಅವರು ಇಲ್ಲವೆ? ಮಗಳಾದರೆ ಕೇಳ್ಳೋಳು. ಈ ತಾಯಿ ಬಾಯಿ ತೆರೆಯೋಲ್ಲ. ದೇವೀ ಬಾಳಲಿ ಎಂತ ಬಯಸಿದರೆ ಏನು ತಪ್ಪು? ಈ ಗುರುಗಳು ಅನ್ನಲಿಲ್ಲ. ಹಿಂದೆ ಯಾರೋ ಅಂದಿರತಾರೆ. ಬೇರೆ ಎಡೆ ಅನ್ನೋರಿರುತಾರೆ. ಇವರು ಅಂಥಾವರೋ ಏನೋ ಎಂತ ಜನ ಕೇಳ ತಾರೆ, ನೋಡತಾರೆ."

"ಹಾಗಾದರೆ ಕಾಸು ತಕ್ಕೊಂಡು ಅನ್ಯಾಯಕ್ಕೆ ಸಹಾಯಮಾಡಿ ಅನ್ನುವುದು ತಪ್ಪಲ್ಲ?"

"ನಿಮಗಿದು ನ್ಯಾಯ ಅನ್ಯಾಯ; ಎದುರಾಳಿಗೆ ಒಂದು ವ್ಯಾಪಾರ. ಕಾಸು ಕೊಡತೇವೆ ಸತ್ಯಕೊಡಿ ಅನ್ನತಾರೆ. ನಾವು ಅಂಗಡಿ ಇಡಲಿಲ್ಲ ಅನ್ನಬೇಕು. ಅಷ್ಟೆ."

"ಆಯಿತಪ್ಪ ನೀವು ಹೋಗಿ ಇನ್ನು ನಿಮ್ಮ ಒಡತಿಗಾಗಿ ಏನೇನು ಮಾಡಿಕೊಳ್ಳುತೀರೋ ನೋಡಿ. ನಾ ಬರುತೇನೆ."

ಹೀಗೆಂದು ಶಾಸ್ತ್ರಿ ಎದ್ದನು. ನೇಮಯ್ಯ ಅವನ ಜೊತೆಗೆ ಬಾಗಿಲ ವರೆಗೆ ಹೋಗಿ ಅವನನ್ನು ಕೊಟ್ಟುಕಳುಹಿಸಿ, ಅರಮನೆಗೆ ಹೋಗಿ ಈ ಮಾತನ್ನು ಬೇಗನೆ ಮುಗಿಸಬೇಕು, ಎಂದು ಯೋಚಿಸುತ್ತಾ ತೊಟ್ಟಿಗೆ ಹಿಂದಿರುಗಿದನು

## ೧೮

ಅರಮನೆಗೆ ಹೋಗಿ ರಾಣಿಯೊಂದಿಗೆ ಈ ಮಾತನಾಡುವುದರಲ್ಲಿ ಸಾವಕಾಶವೇನೂ ಆಗಲಿಲ್ಲ. ರಾಣಿಯ ಸಮಯವನ್ನು ವಿಚಾರಿಸಿದ್ದರಲ್ಲಿ ಅಂದಿನ ಸಂಜೆ ಬರಬಹುದೆಂದು ಉತ್ತರ ಬಂದಿತು. ನೇಮಯ್ಯ ಹೋಗಿ ರಾಣಿಯನ್ನು ಕಂಡನು.

ರಾಣಿ, "ಶಾಸ್ತ್ರಿಗಳು ಸಂಗತಿ ಅರಿಸಿದರೆ ನೇಮಯ್ಯನವರೆ" ಎಂದಳು. ನೇಮಯ್ಯ, "ಎಲ್ಲ ಹೇಳಿದರು," ಎಂದನು.

ರಾಣಿ, "ನಾವು ಈ ಮಾತನ್ನ ಹೇಳಬೇಕಾದರೆ ಬಹಳ ಹಿಂಜರಿದಿದೇವಿ ನೇಮಯ್ಯನವರೆ. ಮಗುವನ್ನ ಕೊಟ್ಟು ನಮಗೆ ಲೇಸು ಮಾಡಿದ

ವರನ್ನ ನೋಯಿಸಿದಂತೆ ಆದಾತು ಅಂತ ಬಹಳ ಹಿಂದು ಮುಂದು ನೋಡಿದ್ದಾಯ್ತು," ಎಂದಳು.

ನೇಮಯ್ಯ : "ತಾವು ಹೀಗೇ ನಮ್ಮನ್ನ ಕಾಪಾಡಿಕೊಂಡು ಬಂದಿದೀರಿ. ಈಗಲೂ ಅಷ್ಟೆ: ನೀವು ನೋಡಿಕೊಳ್ಳಬೇಕು, ನಾವು ಬಾಳಬೇಕು."

"ನಿಮ್ಮ ಮಾತಾದರೂ ಇರಲಿ. ಸೊಸೆಯಾದ ಹೆಣ್ಮಗು ಅತ್ತೆ ತನ್ನ ಬಾಳ ಕೆಡಿಸಿದರು ಅಂದುಕೊಂಡರೂ ಕಷ್ಟಾನೆ."

"ಅರಿಯದೆ ಇದ್ದ ಮಕ್ಕಳು ಅಂದುಕೊಳ್ಳಬಹುದು ತಾನೆ. ಅತ್ತೆ ಅನ್ನೋದು ಏನು ಆಗದ ಜೀವಾನೇ? ಕೊಂಡದಿನ ಅತ್ತೆ, ಕೂಡಿದ ದಿನ ತಾಯಿ. ಹಾಲಿನಲ್ಲೇ ಮಿಾಯಿಸಲಿ, ಜೇನಿನಲ್ಲೇ ಮಿಾಯಿಸಲಿ."

"ನೀವು ಹೀಗನ್ನೋದು ನನಗೆ ಬಹು ಸಂತೋಷ. ನೀವು ಆಗಬಹುದು ಅಂದಮೇಲೆ ಆಗಬಾರದು ಅಂತ ಯಾರಂದರೇನು?"

"ನಾನು ಯಾವುದೂ ಹೇಳೋದಿಲ್ಲ ಅಮ್ಮಾಜಿಯವರೆ. ಆಗಬಹುದು ಅಂತಾಗಲಿ ಆಗಬಾರದು ಅಂತಾಗಲಿ ಯಾವಮಾತನ್ನೂ ಬೇರೆಯವರೇ ಹೇಳಬೇಕು. ನಿಮ್ಮ ಸೊಸೆಯಾದ ಹೆಣ್ಮಗಳು ನಾವು ಸಾಕಿದ ಮಗು. ನಾವದನ್ನ ಸಾಕಿದ್ದೇ ನಿಜವಾದರೆ ಅದು ಅತ್ತೆ ತನ್ನ ಬಾಳನ್ನ ಕೆಡಿಸಿದರು ಅಂತ ಹೇಳೋದಿಲ್ಲ. ಹೇಳಿತು ನಾವು ಸರಿಯಾಗಿ ಸಾಕಲಿಲ್ಲ. ಅಷ್ಟೇ ನಾನು ಅರಿಕೆಮಾಡಿದ್ದು."

"ಇನ್ನಿದರ ಸಾಧಕ ಬಾಧಕ ಯಾರು ನಮಗೆ ಹೇಳೋರು?"

"ಎಲ್ಲರೂ ಹೇಳಬಹುದು."

"ಎಲ್ಲರಂತೆ ನೀವೂ ಹೇಳಬಹುದಲ್ಲ?

"ಆಗೋದಿಲ್ಲ ಅಮ್ಮಾಜಿಯವರೆ."

"ಯಾಕೆ ಅಂತೀರಿ? ನಮಗೆ ಯಾವುದು ಒಳ್ಳೇದು ಅಂತ ನೀವಲ್ಲದೆ ಯಾರು ಹೇಳಬೇಕು?"

"ನಮ್ಮ ಮಾತಲ್ಲದೆ ಇದ್ದರೆ ಹೇಳತಕ್ಕದ್ದೆ ಅಮ್ಮಾಜಿಯವರೆ. ನಮ್ಮ ಮಾತು ಅಂದರೆ ನಾವು ಒಳ್ಳೇದು ಕೆಟ್ಟದನ್ನ ತಿಳಿಯೋದು ಕಷ್ಟ."

"ನಮ್ಮ ಮಾತಲ್ಲ ಅಂತ ಎಣಿಸಿಕೊಂಡು ಹೇಳಬಾರದೆ?"

"ಹೇಳಬಹುದೇನೊ. ನಮ್ಮಂತವರು ಹೇಳೋಕೆ ಹೋಗಬಾರದು. ನಾನು ನನ್ನದು ಅನ್ನೋದು ಬುದ್ಧೀನ ಮೆಳ್ಳೆ ಮಾಡತದೆ. ಮೆಳ್ಳೆ ಇರಲಿಲ್ಲ, ಯಾವ ದಿಕ್ಕಿಗೆ ಹರಿಯುತಿತ್ತು? ಮೆಳ್ಳೆ ಇರುವ ಕಣ್ಣು ಇದನ್ನ ಹೇಳಲಾರದು."

"ಒಳಿತು ನೀವು ಏನೂ ಹೇಳೋದು ಬೇಡ. ಯಾರನ್ನ ಕೇಳಬೇಕು, ಯಾರಿಗೇನು ಹೇಳಬೇಕು, ಇದನ್ನೆಲ್ಲ ನೋಡಿ."

"ಇದೂ ನನಗೆ ಬೇಡಾ ಅಮ್ಮಾಜಿಯವರೆ. ಯಾರು ಹೇಳೋದೂ ನಿಮ್ಮ ಕಿವಿಗೆ ನೇರವಾಗಿ ಸಾರಲಿ. ಏನು ಎತ್ತ ನೀವು ನಿಶ್ಚಯಮಾಡಿ. ಹೀಗೆ ಮಾಡು ಅಂದರೆ ಅದರಂತೆ ನಡಸುವ ಊಳಿಗ ನಮಗಿರಲಿ".

"ಹಾಗಂದರೆ ಈಗ ಮೊದಲು ಯಾರಲ್ಲಿ ಕೇಳಬೇಕು ಯೋಚನೆ ಹೇಳಿ."

"ಅಯ್ಯನವರನ್ನ ಕೇಳಬೇಕು."

ಅಯ್ಯ ಹಿರಿಯ ಮಠದಸ್ವಾಮಿ; ಪರಂಪರೆಯಿಂದ ರಾಜಗುರು. ಅರಮನೆ ತಾನಾಗಿ ಕರೆಯದೆ ಅವನು ಅದರ ಒಂದು ಮಾತಿಗೆ ಬರುತ್ತಿರಲಿಲ್ಲ. ಆದರೆ ಕರೆದಾಗಲೆಲ್ಲ ಬರುವನು; ತನ್ನ ಅಭಿಪ್ರಾಯ ಇವರಿಗೆ ರುಚಿಸುವುದೇ ಇಲ್ಲವೇ ಎಂಬ ಯೋಚನೆ ಇಲ್ಲದೆ ಅದನ್ನು ಸ್ಪಷ್ಟವಾಗಿ ಹೇಳುವನು. ಅವನನ್ನು ಈಗಲೆ ಕೇಳುವುದು ರಾಣಿಗೆ ಇಷ್ಟವಿಲ್ಲ; ಆದರೆ ನೇಮಯ್ಯ ಇದನ್ನು ಸೂಚಿಸಿದ ಮೇಲೆ ತಾನು ಬೇಡ ಎನ್ನುವಂತಿಲ್ಲ. ಅವಳು ವಿಧಿಯಿಲ್ಲದೆ ಒಪ್ಪಿದಳು.

"ಸರಿ"

"ನಾಯಕರನ್ನ ಕೇಳಬೇಕು."

"ನಾಯಕರನ್ನಂತೂ ನಾವು ಕೇಳೋ ಹಾಗಿಲ್ಲವಲ್ಲ. ನಮ್ಮದು ದುರಾದೃಷ್ಟ. ಅವರು ಬಂದಾಗ ಅವರಿಗೆ ನೀವೇ ತಿಳಿಸಬೇಕು."

ಒಲ್ಲೆ ಒಲ್ಲೆ ಎಂದು ಹೇಳಿ ನೇಮಯ್ಯನಿಗೆ ಸಾಕಾಗಿತ್ತು. ಅವನು, "ಅರಮನೆಯಲ್ಲಿ ಹೇಳುವ ಮಾತಲ್ಲವೆ. ತಾವು ಒತ್ತಪ್ಪು ಇರುತಾತಮಗಾಗಿ ನಾನು ಹೇಳುತೇನೆ. ಅಡ್ಡಿಯಿಲ್ಲ," ಎಂದನು.

"ಅಯ್ಯನವರಿಗೂ ನೀವೇ ಹೇಳಿಬಿಡಿ." ರಾಣಿ ಹೀಗೆನ್ನುವುದಕ್ಕೆ ಕಾರಣವಿದ್ದಿತು. ಇವಳ ನಡತೆಯ ವಿಷಯ ಚರ್ಚೆಗೆ ಬಂದ ದಿನದಲ್ಲಿ ಅಯ್ಯ ಇತರರು ಇವಳನ್ನು ದಂಡಿಸುವುದು ಕೂಡದು ಎಂದನಾದರೂ ಇವಳಿಗೆ, "ಅಮ್ಮಾಜಿಯವರು ಇಂತ ಮಾತು ಜನದ ಮನಕ್ಕೆ ಬಾರದಂತೆ ನಡಕೊಳ್ಳಬೇಕು," ಎಂದಿದ್ದನು. ಮಾತೇನೋ ನಯವಾಗಿತ್ತು, ಆದರೆ ಅರ್ಥ ಅಷ್ಟೇ ನಿಶ್ಚಿತ, ಸ್ಪಷ್ಟ.

ನೇಮಯ್ಯ, "ಅವರನ್ನೂ ಇಲ್ಲಿಗೆ ಕರೆಸೋಣ; ನಾ ಮಾತಾಡತೇನೆ," ಎಂದನು.

ರಾಣಿ, "ನಾವು ಈಗ ದೇವಗಂಗೆಗೆ ಹೋಗೋಣ ಅಂತಿದ್ದೆವಿ. ನೀವೂ ಅತ್ತಬನ್ನಿ, ಅಯ್ಯನವರಿಗೆ ಹೇಳಿಕಳಿಸಿ. ಅಲ್ಲಿ ಕುಳಿತು ಮಾತಾಡೋಣ," ಎಂದಳು.

ದೇವಗಂಗೆ ಅರಮನೆಯ ನೀರಾಟದ ಕೊಳಗಳ ಆವರಣ; ಅದರ ಸುತ್ತ ಹೂತೋಟ. ಅರಮನೆಯ ಜನ ಸಂಜೆಯಲ್ಲಿ ಅಲ್ಲಿ ಆರಾಮವಾಗಿ ಕುಳಿತಿರುವುದಕ್ಕೆ ಹೋಗುವುದುಂಟು. ಮಠ ಅದೇ ದಿಕ್ಕಿನಲ್ಲಿದ್ದದ್ದರಿಂದ ಅಯ್ಯನಿಗೆ ಹೋಗುವ ಬರುವ ಕಷ್ಟ ಕಡಮೆಯಾದೀತು.

ನೇಮಯ್ಯ, "ಅಪ್ಪಣೆ ಅಮ್ಮಾಜಿಯವರೆ," ಎಂದನು.

೧೯

ಎರಡು ಗಳಿಗೆಯ ಮೇಲೆ ದೇವಗಂಗೆಯ ಹೊರಜಗಲಿಯ ಮೇಲೆ ಅಯ್ಯಬಂದು ರಾಣಿಯನ್ನು ಕಂಡನು. ನೇಮಯ್ಯ ಅಲ್ಲೆ ಇದ್ದವನು ಆತನಿಗೆ ರಾಣಿಯ ಇಚ್ಛೆಯನ್ನು ತಿಳಿಸಿದನು.

ಅಯ್ಯ ಏನೂ ಹೇಳಲಿಲ್ಲ; ಸುಮ್ಮನೆ ಕುಳಿತಿದ್ದನು.

ರಾಣಿ, "ಇದಕ್ಕೆ ಅಯ್ಯಗಳು ತಮ್ಮ ಹರಕೆ ನೀಡಬೇಕು," ಎಂದಳು.

"ಬೇಕು ಅಂದರೆ ನೀಡಬೇಕು. ಸೈ. ಬೇಕೇ ಅಂತ?"

"ಗುರುಮನೆ ತಾವು ಹೇಳಿರಿ. ಗುರುಪೂಜೆ ದಾಸೋಹ ನೋಡಿಕೊಳ್ಳೋಕೆ ಬಲ್ಲಾಕೆ ಒಬ್ಬಾಕೆ ಬೇಕಲ್ಲ."

"ಈ ಮಾತ ಆಡತಾ ನೇಮಯ್ಯನವರು ಇರಲಿ ಅಂತೀರಾ?"

ಅಯ್ಯ ಆವನ ಎದುರಿಗೆ ಹೇಳಲು ಸಂಕೋಚಪಡುವ ಮಾತು ಏನೋ ಇದೆ ಎಂದು ಗ್ರಹಿಸಿ ರಾಣಿ ನೇಮಯ್ಯನ ಕಡೆ ನೋಡಿದಳು. ನೇಮಯ್ಯ ಎದ್ದು, "ನಾನು ಅತ್ತತ್ತ ಇರತೇನೆ," ಎಂದು ಅವರ ಎದುರ ಲ್ಲಿಯೇ ತಕ್ಕಷ್ಟು ದೂರ ನಡೆದು ಹೋಗಿ ಮರಗಳಡಿ ಶತಪಥ ಹಾಕ ತೊಡಗಿದನು.

ಅವನು ಸ್ವಲ್ಪ ದೂರಹೋದಮೇಲೆ ಅಯ್ಯ, "ಅಮ್ಮಾಜಿ ಏನು ಇದು? ಬುಟ್ಟಿಯಲ್ಲಿ ಬಿದ್ದಿರುವ ಹಾವಾದರೂ ತಲೇಮೇಲೆ ಬಡಿಯೋ ದುಂಟೆ?" ಎಂದನು.

ರಾಣಿ: "ನಾವು ಈ ಸೊಸೇ ಮರ‍್ಯಾದೇನ ರವೆಯಷ್ಟು ತೆಗೆಯೋ ದಿಲ್ಲ. ಶಿವಾಚಾರದ ಸೊಸೆ ಅಂತ ಒಬ್ಬಳಿರಲಿ ಅಂತೇವಿ. ಗುರುಮನೆ ಇದಕ್ಕೆ ಒಪ್ಪಬೇಕು."

"ಈ ಸೊಸೆ ಶಿವಾಚಾರ ಅಲ್ಲ ಅಂದರೆ ಜನ ಒಪ್ಪತಾರೆಯೇ? ಶಿವಾಚಾರ ಆದಮೇಲೆ ಜಿನಾಚಾರ ಉಳಿದೀತೆಂತು? ತಿಳಿಯದ್ದೇ ಇದ್ದರೆ ತಿಳಿಸಿಕೊಡಬೇಕು."

"ಬಲ್ಲವಳು ಒಬ್ಬಾಕೆ ಊಳಿಗದಂತೆ ಇರಲಿ ಅಂತೇವಿ."

"ಆ ಒಬ್ಬಾಕೆ ಅನ್ನೋಳು ಬಲ್ಲವಳು ಹೆಂಡಿರಾಗಿ ಊಳಿಗದಂತೆ ಇರಬೇಕು ಯಾಕೆ? ಹೆಂಡಿರು ಅನ್ನೋ ಮಾತಿಲ್ಲದೆ ಊಳಿಗವಾಗಿ ನೋಡಿ ಕೊಳ್ಳಲಿ. ಎರಡನೆ ಹೆಂಡಿರಾಗಿ ಊಳಿಗ ಆದೆ ಅಂತನೋಯೋದು ಬೇಡ. ಅವಳನ್ನ ಸರಿಯಾದವರಿಗೆ ಕೊಟ್ಟು ಮದುವೆಮಾಡಿ. ಅವಳ ಮನೆಗೆ ಅವಳು ರಾಣಿಯಾಗಿರಲಿ."

"ಇಲ್ಲಿ ನನ್ನದು ಅಂತ ಮಾಡುವರಿಲ್ಲ."

"ನನ್ನದು ಅಂತ ಅವಳು ಮಾಡಿದರೆ ಊಳಿಗವಾಗಿ ಏಸುದಿನ ಇದ್ದಾಳು? ಸವತೀ ಜಗಳಲ್ಲಿ ಅರಮನೆ ದೀಪ ನೋಡೋರು ಇಲ್ಲದೆ ಹೋದಾರು! ಎಚ್ಚರಿರಲಿ ನಮ್ಮ ತಾಯಿ!"

"ಎಚ್ಚರ" ಶಬ್ದ ರಾಣಿಗೆ ರುಚಿಸಲಿಲ್ಲ. ಅವಳು, "ಎಚ್ಚರ ಹೇಳಬೇಕು ಸರಿಯೆ ಅರಮನೆಗೆ ಗುರುಮನೆ" ಎಂದಳು.

"ಎಚ್ಚರ ಅನ್ನೋದು ಕಯಿ ಆದರೆ ನಾವು ಬೇಡೋರು ರಾಣಿಯ ಮ್ಮಾಜಿ. ಅಂದರೆ ಹಿರೇ ತಾವಿನ ಮಂದಿ ತಗ್ಗಿ ನಡೆಯೋದು ಕಿರಿಯರು ಅನ್ನುವರ ಬೇರಿಗೆ ಒಳಿತಲ್ಲ ಅನ್ನತಾರೆ. ನಮ್ಮ ದಿನ ಮುಗಿಯಿತು. ನಾಯಕರು ಹಸುಮಗ. ಅವರ ಒಳ್ಳಿತ ನೋಡಿಕೊಳ್ಳೋಣ ನಾವೂ ನೀವೂ."

ನಿನ್ನ ದಿನ ಮುಗಿಯಿತು ಎಂದನಲ್ಲ ಈ ಅಯ್ಯ. ರಾಣಿಗೆ ಮತ್ತಷ್ಟು ಬೇಸರ. ಅವಳು "ಅಯ್ಯನವರು ಹೀಗಂದೀರಿ ಅಂತ ನಮಗೆ ತಿಳಿದಿತ್ತು," ಎಂದಳು.

"ಹೌದು, ಅಮ್ಮಾಜಿ, ತಿಳಿದಿರಬೇಕು, ಇನ್ನೊಂದು ಮಾತು. ಅರಮನೆಗೆ ನಗರಕ್ಕೆ ನೇಮಯ್ಯ ಒಂದು ಕೋಟೆಗನ್ನ ಮಿಗಿಲು. ಕೋಟೆ ಬೇಕಂದರೆ ಕೆಡವಿಸಿ; ನೇಮಯ್ಯನ ಕಾಲು ಭದ್ರನಿಲ್ಲಿಸಿರ್ರಿ."

ರಾಣಿ ಏನೂ ಹೇಳಲಿಲ್ಲ. ಅಯ್ಯ, "ಇನ್ನು ನಾವು ಹೊರಡ ಬಹುದೇ," ಎಂದನು. ರಾಣಿ ಊಳಿಗವನ್ನು ಕರೆದು ಅವನಿಗೆ ತಟ್ಟೆ ಒಪ್ಪಿಸಿದಳು. ಅವನು ಅದನ್ನು ಮುಟ್ಟಿ ಹೊರಡಲನುವಾಗಿ ಎದ್ದನು.

ಇದನ್ನು ನೋಡಿ ನೇಮಯ್ಯ ಹತ್ತಿರ ಬಂದನು.

ರಾಣಿ, "ಬನ್ನಿ, ನೇಮಯ್ಯ. ಅಯ್ಯನವರು ಅಂತಾರೆ, ಆ ವ್ಯವಹಾರ ಈಗ್ಯೆ ಇಂತೇ ನಿಂತಿರಲಿ, ಮುಂದರಿಸೋದು ಬೇಡ ಅಂತ. ನಿಂತಿರಲಿ ಬಿಡಿ. ಹಿರಿಯರ ಮಾತು ಕೇಳೋಣ," ಎಂದಳು.

ನೇಮಯ್ಯ ಏನೂ ಹೇಳಲಿಲ್ಲ.

ತಾನು "ಈಗ್ಯೆ" ಎಂತ ಹೇಳಿರಲಿಲ್ಲ; ಅದು ರಾಣಿ ಸೇರಿಸಿದ ಮಾತು. ಅವಳ ಮರ್ಯಾದೆ ಉಳಿಸಿಕೊಳ್ಳುವುದಕ್ಕೆ ಅವಳು ಸೇರಿಸಿದರೆ ತಪ್ಪಿಲ್ಲ. ಅಯ್ಯ ಹೀಗೆ ಯೋಚಿಸಿಕೊಂಡು ಮಠದ ಕಡೆಗೆ ಹೊರಟನು.

ಅಯ್ಯ ಏನು ಹೇಳಿದನೆಂದು ತಿಳಿಯಲು ನೇಮಯ್ಯನಿಗೆ ಕುತೂಹಲ ವುಂಟು. ಅವನು ಅದಕ್ಕೆ ಎಡೆ ಕೊಡಲಿಲ್ಲ; ರಾಣಿಯ ಅಪ್ಪಣೆ ಪಡೆದು ನೇರವಾಗಿ ಮನೆಗೆ ಹೋದನು.

ರಾಣಿ "ಈಗ್ಯೆ" ಪದವನ್ನು ಸೇರಿಸಿದ್ದು ಮರ್ಯಾದೆ ಉಳಿಸಿಕೊಳ್ಳುವು ದಕ್ಕೆ ಅಲ್ಲ. ಈ ಸಲ ತಾನು ಈ ಕಾರ್ಯ ನಡಸಲಾಗಲಿಲ್ಲ. ಒಳ್ಳೆಯದು;

ಬೇಡ; ಇನ್ನೊಮ್ಮೆ ಆಗಬಹುದು; ಮತ್ತೆ ನೋಡಬೇಕು. ಅವಳು ತನ್ನ ಉದ್ದೇಶವನ್ನು ಸಾಧಿಸುವ ಆಸೆಯನ್ನು ತೊರೆಯಲಿಲ್ಲ.

ಮಗ ತನ್ನನ್ನು ತಕ್ಕ ಮರ್ಯಾದೆಯಿಂದ ಕಾಣುತ್ತಿಲ್ಲ ಎಂಬ ಕಾರಣದಿಂದ ತಾನು ತಾಯಿ ಎನ್ನುವುದನ್ನು ಸ್ಥಾಪಿಸುವುದು ಅವಶ್ಯಕ ಎಂದು ಅವಳ ಬುದ್ಧಿ ಹಠ ತೊಟ್ಟಿತ್ತು. ಆ ಸ್ಥಾಪನೆಯ ಒಂದು ಅಂಕ ಈ ಮದುವೆ ಮಾಡುವುದೆನ್ನುವುದು. ಈಗ ತನ್ನ ತಾಯ್ತನ ತಪ್ಪಿಹೋಗಿತ್ತು. ಈ ಮದುವೆಯಾದರೆ ಅದು ಮರಳಿ ಮೂಡಿತು; ಇಲ್ಲದಿದ್ದರೆ ಇಲ್ಲ.

ಈ ಮನೋಧರ್ಮ ವಿಚಿತ್ರವೆಂದು ತೋರಬಹುದು. ನಿಜದಲ್ಲಿ ಇದು ಬಹು ಸಾಮಾನ್ಯ. ಸಾವಿರ ಜೀವನದಲ್ಲಿ ಸಾವಿರ ಸಂದರ್ಭದಲ್ಲಿ ಮನುಷ್ಯ ಬುದ್ಧಿ ಹರಿಯುವುದು ಹೀಗೆಯೇ.

## ೨೦

ಈ ಮಾತನ್ನೆಲ್ಲ ರಾಣಿ ತಕ್ಕಷ್ಟು ಗುಪ್ತವಾಗಿಯೇ ನಡೆಸಿದ್ದರೂ ಸಣ್ಣವ್ವನ ನಡೆನುಡಿಯಿಂದ ಹತ್ತಿರದ ಊಳಿಗದ ಪಿಸುಮಾತಿನಿಂದ ಇದೇನೋ ಸಂಧಾನ ನಡೆಯುತ್ತಿರುವುದು ಹೊರಕ್ಕೆ ತಿಳಿಯದೆ ಹೋಗಲಿಲ್ಲ. ಇದರ ಸುಳಿವು ಕೆಂಚವ್ವನನ್ನು ಮುಟ್ಟಿತು. ಅವಳು ಮೆಲ್ಲನೆ ಅವರಿವರನ್ನು ಅನುಸರಿಸಿ ತನ್ನ ಒಡತಿಗೆ ಅನಿಷ್ಟ ಒದಗುವಂತಿದೆ ಎನ್ನುವುದನ್ನು ಕಂಡುಕೊಂಡಳು.

ಅದೇ ಹೊತ್ತಿನಲ್ಲಿ ಅವಳಿಗೆ ಬೂದಿಬಸವಸ್ವಾಮಿ ನಗರಕ್ಕೆ ಬಂದಿದಾನೆ ಎಂದು ಜನ ಹೇಳುತ್ತಿದ್ದದ್ದು ಕೇಳಿಸಿತು.

ವಸ್ತಾರೆಯ ಹೆಗ್ಗಡಿತಿ ಮುಂದಾಗಿ ಕಂಡ ಎರಡು ಕೇಡೂ ಹೀಗೆ ಏಕಕಾಲದಲ್ಲಿ ಮೇಲೆ ಕವಿದುವೆ ಎಂದು ಅವಳು ಬಹಳ ಪರಿತಪಿಸಿದಳು. ಎರಡು ಸಂಗತಿಯ ವಿವರವನ್ನೂ ತಂದು ಒಡತಿಗೆ ಒಪ್ಪಿಸಿದಳು.

"ನೋಡಿರವ್ವ ಈ ಅಮ್ಮಾಜಿಯವರ ಧೈರ್ಯಾನ. ಇದನ್ನು ಮಾಡಿಸಿ ಎಂತ ಇವರು ಅಣ್ಣಯ್ಯನವರಿಗೆ ಹೇಳಿದರಂತೆ."

"ಎಲ್ಲಾ ಕೆಲಸವನ್ನೂ ಹೇಳೋ ಹಾಗೆ ಇದನ್ನೂ ಹೇಳಬೇಕಲ್ಲ. ಬೇರೆ ಯಾರಿಗೆ ಹೇಳೋದು?"

"ಅಣ್ಣಯ್ಯನವರು ಅಡ್ಡಿ ಇಲ್ಲ ಅಂದರಂತೆ."

ಶಾಂತವ್ವ ತಟ್ಟನೆ ಇವಳ ಕಡೆ ತಿರುಗಿ ನೋಡಿದಳು. ಆಕ್ಷಣ ಅವಳು ಈ ಮಾತನ್ನು ನಂಬಿದಂತೆ ಕಾಣಲಿಲ್ಲ. ಮರುಕ್ಷಣದಲ್ಲಿ ಅವಳ ಆ ಅಪನಂಬಿಕೆಯ ರೀತಿ ಮರೆಯಿತು. ಅವಳು, "ಪಾಪ, ಮತ್ತೆ ಏನು ಮಾಡಿಯಾರು?" ಎಂದಳು. ಅವಳ ಕಣ್ಣಲ್ಲಿ ನೀರು ಚಿಮ್ಮಿತು.

"ಬೇಡ ಅನ್ನಬಾರದೇ ಅವ್ವ?"

"ಅಣ್ಣಯ್ಯನವರು ಬೇಡ ಅಂತ ಅನ್ನಬಹುದೇ?"

"ಇನ್ನು ಯಾರು ಅನ್ನಬೇಕವ್ವ?"

"ಯಾರಾದರೂ ಅನ್ನಬಹುದು. ನಾನು ಅಣ್ಣಯ್ಯ ಅನ್ನಬಾರದು."

"ನೀವೂ ಅನ್ನಬಾರದು?"

ಶಾಂತವ್ವ ಹೌದು ಎಂದು ತಲೆ ಆಡಿಸಿದಳು.

"ಮತ್ತೆ ಸವತಿ ಹೆಂಡರು ಅನ್ನೋಳು ಬರಲಿ ಅನ್ನಬೇಕು?"

"ನಾಯಕರು ಬರಲಿ ಅಂದರೆ ನಾವೂ ಬರಲಿ ಅಂತಲೇ ಅನ್ನಬೇಕು."

"ಹೆಗ್ಗಡಿತಿಯೋರು ಅಂದರು: ನಾಯಕರು ಎಲ್ಲಿಯಾರು ತಲೆ ಜೋಲು ಹಾಕಿಯಾರು, ಚಿಕರಾಣಿ ತಮ್ಮ ಪದವೀ ತಾವು ಕಾದುಕೊಳ್ಳಲಿ, ಆ ಅತ್ತೆ ಮಾಡೋ ತಂತ್ರಕ್ಕೆ ಎಡೆ ಕೊಡಬಾರದು, ಅಂತ. ಇದು ನಮಗೆ ಒಲ್ಲದು ಅಂತ ನಾಯಕರಿಗೆ ನೀವು ಹೇಳಬೇಕರವ್ವ. ನೀವು ಹೇಳೋದು ಬ್ಯಾಡ ಅಂದರೆ ನಾನು /ಅಡಿ ಮುಟ್ಟಿ ಅರಿಕೆ ಮಾಡತೀನಿ."

"ಮೊದಲು ಅವರ ಮನಸ್ಸು ತಿಳೀಲಿ. ಆಮೇಲೆ ಅರಿಕೆ ಮಾಡುವುದು ಬಿಡುವುದು ನೋಡಬಹುದು."

"ಹೆಗ್ಗಡಿತೀರಿಗೆ ನಾ ಅಂದಿ, ನಾಯಕರು ಒಪ್ಪೋದಿಲ್ಲ ಅಂತ. ಒಡತಿ ನಡೀತಿದ್ದರೆ ನಾಯಕರು ಆ ಕಾಲೇ ನೋಡತಿರತಾರೆ ಅಂತ. ನೋಡಬೇಕು ಅಂತ ಆಸೆ, ಅದ ಕಾಣಿಸಿಕೊಳ್ಳೋಕೆ ನಾಚಿಕೆ. ಹೆಣ್ಮಕ್ಕಳು ನಾವವರನ್ನ ಧೈರ್ಯವಾಗಿ ನೋಡತೀವಿ. ಅವರು ನಿಮ್ಮನ್ನ ನೋಡಬೇಕಾದರೆ ನಾಚಿನಾಚಿ ನಾಚತಾರೆ."

ಶಾಂತವ್ವನಿಗೆ ನಗೆ ಬಂದಿತು; ನಾಚಿಕೆ ಆಯಿತು; ಸಂತೋಷವೂ ಆಯಿತು. ಅವಳು, "ಅದನ್ನು ನೋಡೋದೆ ನಿನ್ನ ಕೆಲಸ," ಎಂದಳು.

ಕೆಂಚವ್ವೆ, "ಬೇರೆ ಯಾಕವ್ವ ನಾವು ನೂರು ಜನ? ಒಡತಿ ಅನ್ನೋರು ನೆಮ್ಮದಿಯಾಗಿದ್ದರೆ ನಮ್ಮ ಊಟಾನು ಮೈಗಂಟತದೆ. ಇಲ್ಲದೆ ಇದ್ದರೆ ಯಾರಿಗೆ ಬೇಕು? ಈಗ ನೋಡಿ ಇನ್ನು ಈ ಸ್ವಾಮಿ ಬೇರೆ ಇಲ್ಲಿಗೆ ಬಂದಾನಂತೆ. ಜಾಗರದ ಭೂತ ಜಾಗರದಾಗಿದ್ದರಾಗದೆ? ನಗರಕ್ಕೆ ಯಾಕೆ ಬರಬೇಕು?"

"ಅದೇ ಸ್ವಾಮಿಯೋ ಇವರು, ಬೇರೆ ಅದೇ ಹೆಸರಿನವರೋ?"

"ಇಲ್ಲವ್ವ ಅವರೇಯೆ. ತಿಂಗಳ ಹಿಂದೆ ಇಲ್ಲಿಗೆ ಮೊದಲು ಬಂದ ರಂತೆ. ಒಂದು ದಿನ ಇದ್ದದೆ ಮಂಕಮಾಯ ಆದರಂತೆ. ತಿರಿಗಿ ನಿನ್ನೆ ಆಕಾಶದಿಂದ ದುಮ್ಮಿಕ್ಕಿದಾರೆ. ಅಂದರೆ ಅಲ್ಲಿ ಹಾಗೆ ಇಲ್ಲಿ ಜನಾನ ಹತ್ತಿರ ಬಿಡತಾ ಇಲ್ಲ."

"ಎಲ್ಲಿ ಇಳಿದಿದಾರಂತೆ?"

"ಎಲ್ಲಿ ಏನು ಇಳಿಯೋದು ಬೂದಿಸ್ವಾಮಿ ಅನ್ನೋನು? ಆ ದೇವಗಂಗೆ ದುಬಾರಿ ತಿಟ್ಟಾಚೆ ಸಿದ್ಧರ ಮಂಟಪ ಅದೆಯಲ್ಲ ಅದರಾಗೆ ಇದಾರಂತೆ. ಮನಸ್ಸಿತ್ತೆ ಕಾಣಿಸಿಕೊಂಡರು, ಮನಸ್ಸಿಲ್ಲ ಮಂಕಮಾಯ. ಅಲ್ಲಿ ಜನಾನ ಕೆಡಿಸಿದಂತೆ ಇಲ್ಲ ಕೆಡಿಸಿದರೆ ಕಷ್ಟ ಅಷ್ಟೆ."

"ಅದರ ಭಯ ಇಲ್ಲಿ ಇಲ್ಲ ಕೆಂಚಾ. ಅದು ಜಾಗರದ ದೂರದ ಮೂಲೆ. ನಗರದಲ್ಲಿ ಅದೆಲ್ಲ ನಡೆದೀತೆ?"

"ಹೆಂಗಾದರೂ ಹೆಗ್ಗಡತೀರು ಹೇಳಿದ ಮಾತನ್ನ ಅಣ್ಣಯ್ಯನವರಿಗೆ ತಿಳಿಸಬೇಕಲ್ಲವಾವ್ವ?"

"ತಿಳಿಸಬೇಕು. ಹೋಗಿ ಹೇಳು."

"ಹಂಗೇ ಹೋಗಿ ಆದರೆ ಈ ಸ್ವಾಮಿ ಹೆಂಗಿದಾರೆ ನೋಡಿಕೊಂಡು ಬರಲಾವ್ವ?"

ಶಾಂತವ್ವ ಈ ಹೆಣ್ಣ ಕುತೂಹಲವನ್ನು ಬಗೆದು ನಕ್ಕಳು. ನಿಜ ದಲ್ಲಿ ಅವಳಿಗೂ ಸ್ವಾಮಿಯನ್ನು ನೋಡಬೇಕು ಎನ್ನಿಸಿತ್ತು. ತಾನು

ಬಯಸಿದ್ದನ್ನು ಸೇವಕಿ ಬಯಸಿದ್ದಳು. ಅವಳು, "ನೋಡಿಕೊಂಡು ಬಾ. ತಕೊಂಡರೆ ತಟ್ಟೆ ಒಪ್ಪಿಸಿ ಪ್ರಸಾದ ತಕ್ಕೊಂಡು ಬಾ," ಎಂದಳು.

ಕೆಂಚವ್ವೆ "ಆಯಿತವ್ವ" ಎಂದು, ಬೇರೆ ಊಳಿಗಕ್ಕೆ ಒಡತಿಯ ಹತ್ತಿರ ಇರಹೇಳಿ, ನೇಮಯ್ಯನನ್ನೂ ಸ್ವಾಮಿಯನ್ನೂ ನೋಡಲು ಹೊರಟಳು.

## ೨೧

ಆಗ ಇಳಿ ಹಗಲಹೊತ್ತು. ಶಾಂತವ್ವ ತನ್ನ ತೊಟ್ಟಿಯ ಹೊರ ಕೋಣೆಯಲ್ಲಿ ಮಂಚದಮೇಲೆ ಮೂಡೆಗೆ ಒರಗಿ ಕುಳಿತಿದ್ದಳು. ಸವತಿ ಬರುವ ಮಾತನ್ನು ಕೇಳಿದಾಗ ಅವಳು ಧೈರ್ಯ ಕೆಡದಂತೆ ಕಂಡಿದ್ದಳಾದರೂ ಅವಳ ಮನಸ್ಸು ಕ್ಷೋಭೆಗೊಳ್ಳದೆ ಇರಲಿಲ್ಲ. ಕೆಂಚವ್ವೆ ಹೊರಟುಹೋದಮೇಲೆ ಅವಳು ಹಾಗೆಯೇ ಕುಳಿತು ಆ ಮಾತನ್ನೆಲ್ಲ ಪುನಃ ಮನಸ್ಸಿಗೆ ತಂದುಕೊಂಡಳು. ಅದನ್ನು ಮನಸ್ಸಿನಲ್ಲಿ ತಿರುವಿ ಹಾಕುತ್ತ ಹಾಗೆಯೆ ಅರೆ ನಿದ್ದೆಗೆ ಇಳಿದಳು.

ಆದರಲ್ಲಿ ಅವಳಿಗೆ ಒಂದು ಕನಸು ಬಿದ್ದಿತು.

ತಾನು ಅಲ್ಲಿಯೆ ಕುಳಿತಿದಾಳೆ. ಬಾಗಿಲಿನಿಂದ ಯಾರೋ ಒಳಗೆ ಬಂದರು. ಬೇರೆ ಯಾರೂ ಅಲ್ಲ; ಬಂದವನು ನಾಯಕ. ಇವಳು ಏಳಬೇಕು; ಎದ್ದುಹೋಗಿ ಕಾಲನ್ನು ಮುಟ್ಟಬೇಕು; ಇವಳಿಗೆ ಏಳಲಾಗಲಿಲ್ಲ. ಇದೇನಾಯಿತೋ ಎಂದು ಇವಳು ತನ್ನ ಅಕ್ಕಪಕ್ಕ ನೋಡಿದಳು. ಏನೂ ಇಲ್ಲ; ಆದರೆ ಏಳಲಾಗಲಿಲ್ಲ. ತಲೆಯೆತ್ತಿದಳು. ಗಂಡ ಹತ್ತಿರ ಬಂದಿದ್ದನು; ಇವಳ ಎದುರಿನಲ್ಲಿ ನಿಂತಿದ್ದನು. ಅವನ ಪಕ್ಕದಲ್ಲಿ ಒಂದು ಮೂರ್ತಿ. ಯಾರು ಇದು? ಸಣ್ಣವ್ವ. ಹೌದು; ಅಲ್ಲ. ಮತ್ತೆ ನೋಡಿದಳು. ತನ್ನ ಗಂಡ ಅವಳ ಕೈಯನ್ನು ಹಿಡಿದಿದ್ದನು. ಶಾಂತವ್ವ ನಕ್ಕು ಸಂತೋಷವನ್ನು ತೋರಬೇಕು, ಕೆಂಚ ಆರತಿ ತಾ ಎನ್ನಬೇಕು. ನಗಲಾಗಲಿಲ್ಲ, ಬಾಯಿ ತಿರುಗಲಿಲ್ಲ. ಕಣ್ಣಲ್ಲಿ ನೀರು ಬಂದಿತು; ಅವಳು "ಅಣ್ಣಯ್ಯ" ಎನ್ನುತ್ತ ಎಚ್ಚೆತ್ತಳು.

ನಿಜವಾಗಿಯೂ ಅವಳೆದುರಿಗೆ ನಾಯಕ ನಿಂತಿದ್ದನು.

ಅವನ ಪಕ್ಕದಲ್ಲಿ ಯಾವ ಹೆಣ್ಣೂ ಇರಲಿಲ್ಲ. ಕನಸಿನ ದುಃಖದಿಂದ ಬಂದ ಕಣ್ಣೀರು ಶಾಂತವ್ವನ ಕೆನ್ನೆಯಮೇಲೆ ಹರಿಯಿತು. ಕನಸು ನಿಜ ಅಲ್ಲ ಎಂದರೂ ಅದು ಒಡನೆ ನಿಲ್ಲಲಿಲ್ಲ. ಅವಳು ಕೂಗಿದ ಕೂಗೂ ನಿಜವಾಗಿಯೇ ಕೇಳಿಸಿತು; ಕೋಣೆಯ ಬಾಗಿಲಲ್ಲಿದ್ದ ಊಳಿಗದ ಹೆಣ್ಣು ಒಳಕ್ಕೆ ಸ್ವಲ್ಪ ಬಂದು ಇವರು ಜೊತೆಗಿರುವುದನ್ನು ನೋಡಿ ಹಿಂದಿರುಗಿದಳು.

ನಾಯಕ, "ಕನಸು ಬಿದ್ದಿತೆ, ಏನಾಯಿತು," ಎಂದು ಮೆಲ್ಲನೆಯ ದನಿಯಲ್ಲಿ ಕೇಳಿದನು.

ಶಾಂತವ್ವ ಜೀವವನ್ನು ಸ್ತಿಮಿತಕ್ಕೆ ತಂದುಕೊಳ್ಳುತ್ತ, "ಹೌದು ಕನಸು," ಎಂದು ಎದ್ದು ಗಂಡನೆದುರಿಗೆ ನಿಂತಳು; ಮಣಿಯಲು ಅವನ ಕಾಲತ್ತ ಬಾಗಿದಳು.

ನಾಯಕ ಅವಳನ್ನು ಹಿಡಿದು ತಡೆದನು. ಎದುರಿಗೆ ನಿಲ್ಲಿಸಿಕೊಂಡು, "ಕಣ್ಣಲ್ಲಿ ನೀರು ಸುರಿಯುತದಲ್ಲ. ಯಾತರದು ಕನಸು," ಎಂದನು; ಕೈಯಿಂದ ಕಣ್ಣೀರನ್ನು ಒರಸಿದನು.

ಶಾಂತವ್ವ, "ಯಾತರದೊ ಹಾಳು ಕನಸು," ಎಂದು ಸೆರಗಿನಿಂದ ಕಣ್ಣನ್ನು ಒರಸಿಕೊಂಡು, "ಯಾರಲ್ಲಿ ಬಾಗಿಲಲ್ಲಿ; ಚೌರಿಗೆ ಚೊಂಬು ತಾ," ಎಂದು ಹೇಳಿದಳು.

ನಾಯಕ, "ನಾವು ಕಾಲು ತೊಳೆದಾಯಿತು," ಎಂದು ಹೇಳಿ ಅಲ್ಲೆ ಮಂಚದಮೇಲೆ ಕುಳಿತು ಪಕ್ಕದಲ್ಲಿ ಸ್ಥಳತೋರಿ, "ಸ್ವಲ್ಪ ಕೂರ ಬಹುದಲ್ಲ; ಆ ಕನಸಿನ ಕಷ್ಟಾನ ಹೇಳಿ, ಕೇಳೋವ" ಎಂದನು.

ಶಾಂತವ್ವ ಅವನು ತೋರಿದ ಸ್ಥಳದಲ್ಲಿ ಕುಳಿತಳು. "ನೆರಳಲ್ಲಿ ಬಾಳೋರ ಕನಸಿನ ಕಷ್ಟ ಅಂತಿರಲಿ. ಕಾಡಿನಲ್ಲಿ ಅಲೀತಾ ಘಾಸಿ ಏಸಾಯಿತು ಹೇಳಿ. ಈಸಲಾ ಅಂತೂ ತೀರಾ ತಿಂಗಳಾಗಿ ಹೋಯಿತು," ಎಂದಳು.

ಇಷ್ಟುಹೊತ್ತಿಗೆ ಸರಿಯಾಗಿ ಕೆಂಚವ್ವೆ ಹೊರಗಿನಿಂದ, "ಅವ್ವಾ ಬೂದಿಸ್ವಾಮಿಗಳದು ಯಾತರದೂ ಭಯ ಇಲ್ಲ," ಎನ್ನುತ್ತಾ ನೇರವಾಗಿ ಇವರು ಕುಳಿತಿದ್ದ ಸ್ಥಳಕ್ಕೆ ಬಂದುಬಿಟ್ಟಳು. ತಾನು ತಂದ ಸುದ್ದಿಯ

ಸಂಭ್ರಮದಲ್ಲಿ ಅವಳಿಗೆ ತೀರ ಹತ್ತಿರ ಬರುವವರೆಗೂ ಎದುರಿಗೆ ನಾಯಕ ಇದಾನೆನ್ನುವುದು ಮನಸ್ಸಿಗೆ ಮುಟ್ಟಲಿಲ್ಲ. ವಾಕ್ಯ ಮುಗಿಯುವ ವೇಳೆಗೆ ಇವರಿಬ್ಬರನ್ನೂ ನೋಡಿ ಅವಳು ಬಹು ಸಂಕೋಚಪಟ್ಟು ಸೆರಗನ್ನು ಸೆಳೆದು ಬಾಯಿ ಮುಚ್ಚಿಕೊಂಡಳು, ಮುಖ ಕೆಟ್ಟು ಹೊರಕ್ಕೆ ಹೋಗಿ ಬಾಗಿಲಲ್ಲಿ ನಿಂತಳು.

ನಾಯಕನಿಗೆ ನಗು ಬಂದಿತು. ಅವನು, "ಒಡತಿಗೆ ಸುದ್ದಿ ಹೇಳವ್ವ, ಸ್ವಾಮಿ ಸಂಗತಿ ಏನು ?" ಎಂದನು. ಶಾಂತವ್ವನ ಕಡೆ ತಿರುಗಿ, "ಬರ ಹೇಳಿ, ಸುದ್ದಿ ಏನು ಕೇಳಿ," ಎಂದನು.

ಕನಸಿನ ಮಾತನ್ನು ಮರೆಸುವುದಕ್ಕೆ ಅನುಕೂಲವೇ ಆಯಿತು ಎಂದು ಶಾಂತವ್ವ ಕೆಂಚವ್ವೆಯನ್ನು ಬಳಿಗೆ ಬರಹೇಳಿ, "ಏನು ಸಂಗತಿ ಅರಿಕೆಮಾಡು, ನಾಯಕರು ಕೇಳಬೇಕಂತೆ," ಎಂದಳು.

ಕೆಂಚವ್ವೆ ಹೇಳಿದಳು. ಅವಳು ಮೊದಲು ನೇಮಯ್ಯನ ಬಳಿ ಹೋಗಿ ವಸ್ತಾರೆ ಹೆಗ್ಗಡಿತಿ ಬೂದಿಬಸವಸ್ವಾಮಿಯ ವಿಷಯವಾಗಿ ಹೇಳಿದ್ದ ಮಾತನ್ನು ಅವನಿಗೆ ತಿಳಿಸಿ ಅಲ್ಲಿಂದ ಸ್ವಾಮಿಯನ್ನು ನೋಡು ವುದಕ್ಕೆ ಹೋದಳು. ಪೇಟೆದಾಟಿ ಹೋಗಲಿಲ್ಲ; ಎದುರಿಗೆ ಅಷ್ಟು ಜನ ಬರುತ್ತಿರುವುದು ಕಂಡಿತು. ಅವರು ಸ್ವಾಮಿಯನ್ನು ನೋಡುವುದಕ್ಕೆಂದು ಹೋಗಿದ್ದು ಹಿಂದಿರುಗುತ್ತಿದ್ದವರು. ಈಹೊತ್ತು ಸ್ವಾಮಿಯನ್ನು ನೋಡು ವುದಕ್ಕಾಗುವುದಿಲ್ಲ ಎಂದು ಅವರು ಹೇಳಿಕೊಳ್ಳುತ್ತಾ ಇದ್ದರು. ಇವಳು ಅವರಲ್ಲಿ ಒಬ್ಬನನ್ನು ಪಕ್ಕಕ್ಕೆ ಕರೆದು, ಇದು ಏನು ಸಂಗತಿ ಎಂದು ಕೇಳಿದಳು. ಸ್ವಾಮಿ ಈ ದಿನ ದುಬಾರಿ ತಿಟ್ಟಿನ ಮಂಟಪಕ್ಕೆ ಹೋಗಲಿಲ್ಲ; ಮಾನವಮಿ ಬ್ಯಾಣದ ಮಂಟಪಕ್ಕೆ ಹೋದರು. ಅವರು ಇರುವ ಸ್ಥಳಕ್ಕೆ ಬಹು ಹತ್ತಿರ ಹೋಗುವುದಕ್ಕೆ ಯಾರಿಗೂ ಧೈರ್ಯ ಇಲ್ಲ. ಇವರು ಒಬ್ಬನನ್ನು ಹಿಡಿದು ಮೆಲ್ಲನೆ ಹೋಗಿ ಸ್ವಾಮಿ ಎತ್ತ ಮುಖ ಮಾಡಿ ಕುಳಿತಿದಾರೆ ನೋಡಿಕೊಂಡು ಬಾ, ಎಂದರು.

ಅವನು ಮೆಲ್ಲನೆ ಹೋಗಿ ಅತ್ತ ಇತ್ತ ನೋಡುತಾ ಮಂಟಪ ಸೇರುವ ವೇಳೆಗೆ ನಾಯಕ ಹೊರಕ್ಕೆ ಬಂದನು. ಈ ಮನುಷ್ಯನನ್ನು ಕಂಡು ಏನು ಎಂದು ಕೇಳಿದನು. ಅವನು: ಕಕಮಕನಾಗಿ, ಸ್ವಾಮಿಗಳು

ಇದಾರೇನು, ಎಂದನು. ನಾಯಕ, "ಒಳಗೆ ಇದಾರೆ, ನಾವು ಅವರನ್ನು ನೋಡಿಕೊಂಡೇ ಬಂದೆವಿ, ಇನ್ನವರು ನೆನೆಯೋಕೆ ಕುಂತುಕೊಳ್ಳುತಾರೆ, ಅದನ್ನು ಯಾರೂ ಕಲಕೋದುಬಾರದು, ಈಗ ಎಲ್ಲಾ ಹೊರಟು ಹೋಗಿ, ನಾಳೆ ಬೆಳಗಾಗ ಬಂದು ನೋಡಿ," ಎಂದನು. ಇವನು ಈಕಡೆ ನಡೆದನು, ಇವರಿಗೆ ಸಂಗತಿಯನ್ನು ತಿಳಿಸಿದನು. ಇವರೆಲ್ಲ ಹೊರಟು ಬಂದರು. ನಾಯಕರು ಸ್ವಾಮಿಾನ ಬಲ್ಲರು ಎನ್ನುವುದು ತಿಳಿದು ಕೆಂಚವ್ವೆಗೆ ಬಹಳ ಧೈರ್ಯ ಆಯಿತು. ಅವಳು ಈ ಸಂಗತಿಯನ್ನು ಒಡತಿಗೆ ತಿಳಿಸಬೇಕು ಎಂತ ಆತುರದಿಂದ ಅರಮನೆಗೆ ಬಂದಿದ್ದಳು.

ತಾನು ಸ್ವಾಮಿಯನ್ನು ನೋಡಿಕೊಂಡು ಹೊರಗೆ ಬಂದಮಾತನ್ನು ಕೆಂಚವ್ವೆ ಹೇಳಿದಾಗ ನಾಯಕ "ಹೌದು" ಎಂದು ತಲೆ ಆಡಿಸಿದ್ದನು. ಇವಳ ಮಾತು ಮುಗಿದಾಗ, "ಹೌದು, ಇವರು ಗುಂಪು ಗುಂಪು ಹೋಗಿ ಅವರ ಧ್ಯಾನ ಕೆಡಿಸಬಾರದು," ಎಂದನು.

ಶಾಂತವ್ವ, "ಅವರ ಧ್ಯಾನ ಅಂತಿರಲಿ. ಅದನ್ನ ಅವರು ನೋಡಿಕೊಂಡಾರು. ಸ್ವಾಮಿ ಜನಾನ ಕೆಡಸತಾರೆ ಅಂದರು ಹೆಗ್ಗಡಿತಿ. ನಾಯಕರೇ ಅವರನ್ನು ಕಂಡಿದಾರೆ ಅಂದಮೇಲೆ ಆದರ ಭಯ ಇಲ್ಲ. ಅದಕ್ಕಾಗಿ ಕೆಂಚವ್ವೆಗೆ ಅಷ್ಟು ಸಂತೋಷ," ಎಂದಳು.

ನಾಯಕ, "ಸ್ವಾಮಿ ಜನವನ್ನು ಕೆಡಿಸೋದಿಲ್ಲ, ನಾವು ಅವರನ್ನು ಬಲ್ಲೆವು," ಎಂದನು.

ಈ ಮಾತು ಆದಮೇಲೆ ನಾಯಕ ಶಾಂತವ್ವ ಎದ್ದು ಒಳತೊಟ್ಟಿಗೆ ಹೋದರು.

ಬೂದಿಬಸವಸ್ವಾಮಿ ಈಸಲವೂ ಅಷ್ಟೆ, ಒಮ್ಮೆ ಕಾಣಿಸಿಕೊಂಡದ್ದೆಷ್ಟೋ ಅಷ್ಟೆ, ಮಾರನೆಯ ದಿನ ನೋಡಿದರೆ ಹೊರಟುಹೋಗಿದ್ದನು.

ನಾಯಕನೂ ಆ ಮಾರನೆಯ ದಿನ, ಮೂರನೆಯ ದಿನ ಊರಲ್ಲಿದ್ದು ಮತ್ತೆ ತನ್ನ ಸುತ್ತಾಟಕ್ಕೆ ಹೊರಟನು. ಆಮಧ್ಯೆ ಎರಡನೆಯ ಮದುವೆಯ ಮಾತು ಏನೂ ಬರಲಿಲ್ಲ. ಇದು ಕೆಂಚವ್ವೆಗೆ ಬಹು ಸಂತೋಷ. ಶಾಂತವ್ವನಿಗೂ ಸಮಾಧಾನವೆ.

## ೨೨

ಮಲ್ಲಿಗೆ ಸಗುನ ಕೆಸವೆಯಿಂದ ಹಿಂದಿರುಗಿದಮೇಲೆ ಹತ್ತಿರ ಹತ್ತಿರ ತಿಂಗಳು ವಾರದ ಸುಮಾರಿನ ಒಂದು ದಿವಸ ಕೊಟಿಗೇಹರದ ಬಳಿಯ ಗಡಿಯ ಕಾಡಿನಲ್ಲಿ ಕಳ್ಳರ ಪಡೆ ಒಂದು ಸ್ಥಳದಲ್ಲಿ ನೆರೆಯ ತೊಡಗಿತು. ಯಾರು ನೆರೆಯತಕ್ಕದ್ದೆಂದು ದಳಪತಿ ಮೊದಲೇ ಆಜ್ಞೆಮಾಡಿದ್ದನು. ಆದಷ್ಟೆ ಜನ ಎಲ್ಲ ನೆರೆದಮೇಲೆ, ಪಡೆಯ ಸೇರುವೆಗಾರ ತೆಂವಿಯ ಸುಬ್ಬ ಎಂಬವನು ಅವರಿಗೆ ಯಾವ ಯಾವ ಸ್ಥಳದಲ್ಲಿ ಎಷ್ಟೆಷ್ಟು ಜನ ನಿಲ್ಲಬೇಕು ಎಂದು ಹೇಳಿ, ಹತ್ತು ಜನಕ್ಕೆ ಒಬ್ಬನಂತೆ ಐವರು ಮುಖಂಡರನ್ನು ನೇಮಿಸಿ, "ನೀವು ಮುಂದೆ ಹೋಗಿ ನಿಂತುಕೊಳ್ಳಿ, ನಾನು ಆಮೇಲೆ ಬಂದು ನೋಡುತ್ತೇನೆ," ಎಂದನು. ಒಂದೊಂದು ಗುಂಪೂ ಏರ್ಪಟ್ಟಂತೆ ತನ್ನ ತನ್ನ ನಾಯಕನ ಹಿಂದೆ ಹೊರಟಿತು. ಈ ಗುಂಪುಗಳು ಎಲ್ಲವೂ ಹೊರಟು ಹೋದ ಮೇಲೆ, ಹಿರಿಯ ಸೇರುವೆಗಾರ ಕೆಳಗೂರಿನ ಬಸವಯ್ಯ ಅವನ ಬಳಿಗೆ ಬಂದನು. "ಎಲ್ಲರನ್ನೂ ಅವರವರ ತಾವಿಗೆ ಕಳುಹಿಸಿದೆಯಾ ?" ಎಂದನು.

"ಆಯಿತು, ದಣಿಗಳೆ."

"ದಣಿಗಳು ಅನ್ನಬೇಡಯ್ಯ. ಅಣ್ಣಾವರೆ ಅನ್ನು. ದಣಿ ಒಬ್ಬರೇ. ತಿಳೀತೊ ?"

"ನಾನೇನು ಕಂಡೆ? ದಣಿ ಕಣ್ಣಿಗೆ ಬೀಳೋದಿಲ್ಲಾಂದ್ರೆ, ಕಣ್ಣಿಗೆ ಬಿದ್ದೋರನ್ನ ದಣಿ ಅಂತೀವಿ."

"ಸರಿ ಕಾಣಪ್ಪ, ಅಂದರೆ ಇದೆಲ್ಲ ನಾವು ಯಾರೋ ಮಾಡ್ತಿರೋದು ಅಂತ ತಿಳೀಬೇಡ. ದೊಡ್ಡವರೊಬ್ಬರಿದ್ದಾರೆ. ನಡಸ್ತಾ ಇದ್ದಾರೆ. ಕಾಣಬೇಕಾದಾಗ ಕಾಣಿಸ್ತಾರೆ. ಅವರು ದಣಿ. ನಾವೆಲ್ಲ ಅಣ್ಣ ತಮ್ಮ, ಸೇರುವೆಗಾರ, ಬೇಕಾದ್ದು. ಎಲ್ಲರಿಗೂ ಈ ಮಾತು ಹೇಳು."

"ಆಯಿತು ಅಣ್ಣಾವರೆ, ಹೇಳೋದಾಗತದೆ. ದಣಿಯಾರೂಂತ ಕಾಣದೇನೆ ಇದ್ರೆ ಎದುರಿಗೆ ಬಂದಾಗ ತಿಳಿಯೋದು ಹೆಂಗೆ ?"

"ಯಾಕಯ್ಯಾ ಹಿಂಗೆ ಕೇಳ್ತೀಯ ? ಹತ್ತು ಕಡೆಯಿಂದ

ಬಂದಿರೋ ನಮ್ಮ ಜನ ಒಬ್ಬರನ್ನೊಬ್ಬರು ಮುಖ ಕಂಡೇ ಮಾತಾಡಿ ಸ್ತಾರೇನು? ಸನ್ನೆ ಮಾತು ಕಲಿತಿಲ್ಲ ? "

"ಹೋ ! ಹಂಗಾದ್ರೆ ದಣಿಗಳೂ ಆ ಮಾತು ಹೇಳ್ತಾರೆ ! "

"ಹೌದ್ಮತ್ತೆ, ಯಾರಿಗೂ ಅದೇ ಸನ್ನೆಮಾತು. ಎದುರಿಗೆ ಬಂದಿ ರೋನು ನಮ್ಮವನೋ ಬೇರೆಯವನೊ ತಿಳಿಯೋಕೆ ನೀನು ಮುಖ ಮುಂದ್ಮಾಡಿ ಮೆಲ್ಲನೆ ಆ ಮಾತು ಹೇಳು. ಅವನೂ ಮುಖ ಮುಂದ್ಮಾಡಿ ಎದುರು ಮಾತು ಹೇಳಿದ್ನೇ, ನಿನ್ನೋನು. ಹೇಳಲಿಲ್ಲ, ಹೆರವ. ಇದ್ನೆಲ್ಲಾರೂ ಮರತೀಯ. ನಿನ್ನ ಮಂದಿ ಮರೆತಾರು. ಹತ್ತಸಲ ಇದನ್ನ ಹೇಳಿಕೊಡಬೇಕು. ಮಾತು ಗುಟ್ಟಾಗಿರಬೇಕು."

"ತಿಳೀತು ಅಣ್ಣಾವರೆ."

"ಮಾತು ಗುಟ್ಟಾಗಿರಬೇಕು, ಬ್ಯಾರೆಯೋರಿಗೆ ತಿಳೀತೂಂದ್ರೆ ದಣಿ . . . "

"ತಲೆ ತೆಗಿಸ್ತಾರೆ ! "

"ಇಲ್ಲ ಒಂದ್ಮಾತಾಡೋದಿಲ್ಲ. ಅಂದ್ರೆ ತಿರಿಗಿ ಆ ಮನುಷ್ಯ ನಮ್ಮ ಹತ್ರ ಹೆಜ್ಜೆ ಇಡೋಹಂಗಿಲ್ಲ."

"ಸಾಲದೆ ಅಣ್ಣಾವರೆ ? ತಲೆ ತೆಗಿಸಿದ್ರೆ ಕೆಟ್ಟದೇನಂತೆ ? "

"ಅದು ಸಮ. ಮುಂದೆ ಹೋಗ್ತೀನಿ. ಇಲ್ಲಿ ಆ ಹೇರು ಬಂತೂಂದ್ರೆ ದಾರಿ ನಡೀತಾ ಕಟ್ಟಣಿ ಕೋಲು ಒಂದು ನುಡಿ ಹಾಡು: ಪಕ್ಕಕ್ಕೆ ಸರಕೊ. ಮುಂದೆ ಅಲ್ಲಿ ನಾವು ಕೆಲಸ ನೋಡ್ಕೋತೀವಿ."

ಹೀಗೆಂದು ಬಸವಯ್ಯ ದಾರಿಯಲ್ಲಿ ಮುಂದೆ ನಡೆದನು. ಸುಬ್ಬ ಅಲ್ಲೆ ಒಂದು ಮರದ ತುಂಡಿನ ಮೇಲೆ ಕುಳಿತನು.

ಎರಡು ಗಳಿಗೆ ಮೂರು ಗಳಿಗೆ ಆಗಿರಬೇಕು. ತೆರವಿಯ ಕಡೆ ಯಿಂದ ಇವನ ಜೊತೆಗಾರನೊಬ್ಬ ಬಂದನು. "ಏನಪ್ಪ, ಇನ್ನೂ ಇಲ್ಲೇ ಇದ್ದೀಯ ? ಯಾರೂ ಬರಲಿಲ್ಲ ? " ಎಂದನು.

ಸುಬ್ಬ, "ಬರಲಿಲ್ಲ. ಬರದೆ ಉಂಟೆ ? " ಎಂದನು. ಅಷ್ಟು ಹೊತ್ತಿಗೆ ದೂರದಲ್ಲಿ ದೊಡ್ಡ ಹೋರಿ ಹೊತ್ತ ಎರಡು ಕತ್ತೆಗಳು ಕಾಣಿ ಸಿದವು.

ಅದೇ ಇವರು ಕಾಯುತ್ತಿದ್ದ ಹೇರು ಕತ್ತೆಗಳ ಸಾಲಿನ ಮುಂಭಾಗ. ಕತ್ತೆ ಹೊರಲಾರದೆ ಹೊರೆಗಳನ್ನು ಹೊತ್ತು ದಾರಿ ನಡೆದು ಬರುತ್ತಿವೆ. ನಾಲ್ಕು ಕತ್ತೆಗೆ, ಐದು ಕತ್ತೆಗೆ, ಕಾವಲಾಗಿ ಒಬ್ಬ ಮನುಷ್ಯ ನಡೆಯುತ್ತಿದಾನೆ. ಎಲ್ಲದರ ಹಿಂದುಗಡೆ ಯಾವನೊ ಕುದುರೆಯ ಮೇಲೆ ಕುಳಿತು ಬರುತ್ತಿದಾನೆ.

ಕತ್ತೆ ಒಂದೊಂದಾಗಿ ಸುಬ್ಬಯ್ಯ ಕುಳಿತಿದ್ದ ಸ್ಥಳವನ್ನು ದಾಟಿ ಮುಂದೆ ಹೋದವು. ಒಂದು, ಎರಡು, ಮೂರು, ನಾಲ್ಕು . . .ಹತ್ತಿರ ಹತ್ತಿರ ಇನ್ನೂರು ಕತ್ತೆ ಹೀಗೆ ನಡೆದವು. ಅವುಗಳ ಹಿಂದೆ ಕುದುರೆಯ ಮೇಲೆ ಕುಳಿತಿದ್ದ ಮನುಷ್ಯ ಸುಬ್ಬಯ್ಯನ ಸಮಕ್ಕೆ ಬಂದನು.

ಅವನೊಬ್ಬ ಪರಂಗಿ. ತಲೆಗೆ ದೊಡ್ಡ ಟೊಪ್ಪಿಯನ್ನು ಹಾಕಿಕೊಂಡಿದ್ದನು. ಹೆಗಲಮೇಲೆ ಒಂದು ತೊಗಲ ಪಟ್ಟಿಯಿಂದ ತೂಗಿ ಒಂದು ಕೋವಿ ಇದ್ದಿತು. ಅವನು ಕುದುರೆಯಮೇಲೆ ಸರಾಗವಾಗಿ ಕುಳಿತು, ದರ್ಪದ ಮುಖದಿಂದ ಮುಂದರಿದನು.

ಸುಬ್ಬಯ್ಯ ಅವನ ಹಿಂದೆ ನಡೆದನು. ಹಳ್ಳಿಯಿಂದ ಬಂದ ಮನುಷ್ಯನೂ ಇವನ ಜೊತೆಗಿದ್ದನು. ಸುಬ್ಬಯ್ಯ ಅವನನ್ನು, "ಇದು ಹಾಂದಿ ಕಡೆಯಿಂದ ಬಂದ ಸಾಮಾನು ದಿಟ ಅಲ್ಲ?" ಎಂದನು.

"ಮೂರು ಪಾಲು ಹಾಂದಿ. ಒಂದು ಪಾಲು ಗೋಣೀ ಬೀಡು. ಎಲ್ಲಾ ಗೋಣೀ ಬೀಡು ಯಾಪಾರಾಂತ ಇವನಾಟ. ಹತ್ತು ಸಲ ಹಿಂಗೆ ಮಾಡಿದ್ದಾನೆ, ಇದೇ ಕೋತಿಮೂತಿ! ನಾವು ಕಳ್ಳರೂಂದ್ರೆ ನಮಗನ್ನ ಕಳ್ಳರು ಬಿಳೀಜನ. ಏನೋ ಅಂದ್ರೆ ಮಾತಿಗೆ ಮುಂಚೆ ಕೋವಿ ತೋರಿಸ್ತಾನೆ."

"ಆಯಿತಲ್ಲ, ಈ ಹೊತ್ತು ದಣಿಗಳು ಕಶಿಮಾಡಿದ್ರೆ ಆಮೇಲೆ ಈ ಆಟ ನಡೆಯೋದಿಲ್ಲ."

"ಹೌದಪ್ಪ. ಹೆಂಗೊ ಅವರು ಮನಸ್ಮಾಡಿ ನಮ್ಮನ್ನ ಕಾಯ್ಬೇಕು. ನಾವೇ ಇವನ್ನ ತೀರಿಸ್ಕೊಂಡೇವು. ಅಂದರೆ, ಊರಾಗೆ ಬಾಳೋರು ಈ ಹೊತ್ತಲ್ಲ ನಾಳೆ ಗುರುತು ಸಿಕ್ಕಿದರೆ ಕಷ್ಟ. ಮರದ ಕೆಳಗಿನ ಮಂದಿ ಯಾರೊ ಮುಗಿಸಿದರೂಂದ್ರೆ ನಮಗೆ ತಾಪತ್ರಯ ಇಲ್ಲ."

ಹೀಗೆ ಮಾತನಾಡುತ್ತ ಇವರು ಕಾಲು ಹರಿದಾರಿ ನಡೆದಿರಬೇಕು. ಆಗ ಸುಬ್ಬಯ್ಯ, "ಕಟ್ಟಾಣಿ ಕೋಲ ಕಟ್ಟ್ಯವಳೆ ನಮ್ಮ ಪಟ್ಟದ ರಾಣಿ ಬತ್ತವಳೆ! ಪಟ್ಟೆಯ ಸೀರೆ ನುಟ್ಟವಳೆ ದುಂಡು ಮಲ್ಲಿಗೆ ತೊಟ್ಟವಳೆ ಕಟ್ಟಾಣಿ ಕೋಲ ಕಟ್ಟ್ಯವಳೆ ನಮ್ಮ ಪಟ್ಟದ ರಾಣಿ ಬತ್ತವಳೆ," ಎಂದು ದನಿಯೆತ್ತಿ ಹಾಡಿದನು. ಇವನು ಇದ್ದದ್ದು ಇದ್ದಂತೆ ದನಿ ಎತ್ತಿದಾಗ, ಮುಂದೆ ಕುದುರೆಯಮೇಲೆ ಹೋಗುತ್ತಿದ್ದ ಪರಂಗಿಯವನು ತಟ್ಟನೆ ಹಿಂತಿರುಗಿ ನೋಡಿದನು. ಸುಬ್ಬಯ್ಯ ಇದನ್ನು ಕಂಡನು. ಆದರೂ ತನ್ನ ಪಾಡಿಗೆ ತಾನು ಹಾಡನ್ನು ನುಡಿದನು. ಪರಂಗಿಯವನು ಮತ್ತೆ ಮುಂದಕ್ಕೆ ಮುಖಮಾಡಿ ಹೇರಿನೊಡನೆ ಸಾಗಿದನು.

ಹಾಡಿನ ನಾಲ್ಕುಪಾದ ಮುಗಿದಮೇಲೆ ಸುಬ್ಬ ಹಾಡನ್ನು ನಿಲ್ಲಿಸಿದನು. ರಸ್ತೆಯಿಂದ ಪಕ್ಕಕ್ಕೆ ಇಳಿಯಬಿದ್ದು ಕಾಡಿನೊಳಗೆ ಬೇಗನೆ ನಡೆದು ಮುಂದೆ ಬಸವ ಇರುವ ಕಡೆ ಅವನನ್ನು ಸೇರಲು ವೇಗವಾಗಿ ಹೆಜ್ಜೆ ಇಟ್ಟನು.

## ೨೩

ಹರಿದಾರಿಯ ದೂರ ಮತ್ತೆ ನಡೆದಿರಬೇಕು. ಹೇರಿನ ಕತ್ತೆ, ಜೊತೆಯ ಮನುಷ್ಯರು ಕಾಡುಮಧ್ಯದ ಸೀಳುದಾರಿಯಲ್ಲಿ ಸಾಲಾಗಿ ಹೋಗುತ್ತ ಇರುವಾಗ, ಮಧ್ಯೆ ಕತ್ತೆ ಒಂದರ ಹಿಂದೆ ಒಂದು ಅದೇಕೋ ನಿಂತವು. ತನ್ನ ಎದುರಿನ ಕತ್ತೆ ಮುಂದಕ್ಕೆ ಹೆಜ್ಜೆ ಇಡದೆ ನಿಲ್ಲಲು ಪರಂಗಿಯವನೂ ಕುದುರೆಯ ಕಡಿವಾಣವನ್ನು ಸೆಳೆದು ಅದನ್ನು ನಿಲ್ಲಿಸಿದನು. ಏನಾಯಿತೊ ಎಂದು ತನ್ನ ಎದುರಿಗೆ ಆರು ಗಜದ ದೂರದಲ್ಲಿ ನಿಂತಿದ್ದ ಆಳನ್ನು ಕೇಳಿದನು. ಅವನಿಗೆ ಇವರ ಭಾಷೆ ಸ್ವಲ್ಪ ಬರುತ್ತಿತ್ತು. ಇಲ್ಲಿ ವ್ಯಾಪಾರಕ್ಕಾಗಿ ಓಡಿಯಾಡಿ ತನ್ನ ಕೆಲಸಕ್ಕೆ ಬೇಕಾದಷ್ಟನ್ನು ಅವನು ಕಲಿತಿದ್ದನು.

ಆಳು, "ಏನೋ ತಿಳಿಯಲಿಲ್ಲಪ್ಪ," ಎಂದನು.

ಪರಂಗಿಯವನು, "ಮುಂದೆ ಹೋಗಿ ಏನು ಸಂಗತಿ ವಿಚಾರಿಸು," ಎಂದನು.

ಇಷ್ಟು ಹೊತ್ತಿಗೆ ದೂರದಲ್ಲಿ ಒಬ್ಬ ಆಳು ಓಡಿಬರುತ್ತಿರುವುದು ಕಂಡಿತು. ಅವನು ಕತ್ತೆಗಳ ಜೊತೆಯಲ್ಲಿ ನಡೆಯುತ್ತಿದ್ದ ಐವತ್ತು ಜನದಲ್ಲಿ ಒಬ್ಬನು. ಬೆಟ್ಟವನ್ನು ಆದಷ್ಟು ಬೇಗನೆ ಏರಿ ಇವನ ಹತ್ತಿರಕ್ಕೆ ಬಂದು "ಸುಂಕ ಸಂದದರ ಚೀಟಿ ಬೇಕಂತೆಪ್ಪ. ಅಟಕಾಯಿಸಿ ಅವರೆ. ಬಂದು ತೋರಿಸು," ಎಂದನು.

"ಯಾರು ತಡೆದವರು? ಇಲ್ಲಿ ಸುಂಕದ ಸ್ಟೇಷನ್ ಇಲ್ಲ."

"ಅದು ಯಾರೋಪ್ಪ, ನಾ ಏನು ಬಲ್ಲೆ? ಸುಂಕ ಸಂದ ಚೀಟಿ ತಾ ಅನ್ನು ನಿಮ್ಮ ದಣೀಗೆ ಅಂದ್ರು. ಯಾರೊ ಸುಂಕದೋರಿರಬೇಕು ಅಂತ ಬಂದಿ."

ಪರಂಗಿಯವನು ಬೇಸರವನ್ನು ಸೂಚಿಸಿ, "ಡ್ಯಾಮ್" ಎಂದು ಬೈದುಕೊಂಡು ಕುದುರೆಯನ್ನು ಮುಂದಕ್ಕೆ ನಡಸಿದನು. ಹೇರಿನ ಮುಂದು ಬೆಟ್ಟದ ಭುಜದಲ್ಲಿ ಸ್ವಲ್ಪ ಅಗಲವಾದ ಸ್ಥಳವನ್ನು ಸೇರಿದ್ದಿತು. ಅಲ್ಲಿ ದಾರಿಗೆ ಅಡ್ಡಲಾಗಿ ಒಬ್ಬ ಮನುಷ್ಯ ನಿಂತಿದ್ದನು. ಪರಂಗಿ ಅಲ್ಲಿಹೋಗಿ, "ಯಾಕೆ ಹೇರು ತಡೆದಿದ್ದೀರಿ?" ಎಂದು ಕೇಳಿದನು.

ದಾರಿಗೆ ಎದುರಿಗೆ ನಿಂತಿದ್ದವನು ಬಸವ. ಅವನು, "ಎಲ್ಲಾ ಹೇರಿಗೆ ಸುಂಕ ಸಂದಾಯ ಆಗಿದೆಯೆ ನೋಡಬೇಕು. ಚೀಟಿ ತೋರಿಸಿ," ಎಂದನು.

"ಇಲ್ಲಿ ಸುಂಕದ ಕಟ್ಟೆ ಇಲ್ಲ. ಚೀಟಿ ನೋಡೋದಕ್ಕೆ ನೀವು ಯಾರು?"

"ನಾವು ಯಾರು ಎತ್ತ ಅನ್ನೋದನ್ನ ನೀನೇನು ಕಟ್ಟಿಕೊಂಡೀಯೆ? ಚೀಟಿ ತೋರಿಸು, ಮುಂದೆ ಸಾಗು."

"ನೀವು ಅದನ್ನ ನೋಡೋ ಸರ್ಕಾರ ಆದರೆ ತೋರಿಸ್ತೇನೆ. ಇಲ್ದೆ ಇದ್ರೆ ತೋರಿಸೋದಿಲ್ಲ."

"ಹಾಗಾದ್ರೆ ನೀ ಮುಂದೆ ಹೋಗೋದಿಲ್ಲ."

ಪರಂಗಿಯವನು ನಾಲ್ಕೈದು ಸಲ ತನ್ನ ಮಾತನ್ನು ಹೇಳಿದನು. ಬಸವಯ್ಯ ಬಹಳ ಮಾತನಾಡಲಿಲ್ಲ. ಉಹ್ಞು, ಉಹ್ಞು ಎಂದು ಅವನ ಮಾತನ್ನು ನಿರಾಕರಿಸಿ ತಲೆಯಲ್ಲಾಡಿಸಿದನು. ತನ್ನ ಸ್ಥಳ ಬಿಟ್ಟು ಕದಲಲಿಲ್ಲ.

ಪರಂಗಿಯವನು ತನ್ನ ಕಿಸೆಯಿಂದ ಒಂದು ಚೀಟಿಯನ್ನು ತೆಗೆದನು. ಆದನ್ನು ದೂರದಿಂದ ಇವನಿಗೆ ತೋರಿಸಿದನು. ಬಸವಯ್ಯ ಅದಕ್ಕೆ ಕೈ ಚಾಚಿದನು. ಪರಂಗಿ ಕೊಡಲಿಲ್ಲ. ಬಸವಯ್ಯ ಸುಮ್ಮನೆ ನಿಂತನು.

"ಚೀಟಿ ತೋರಿಸಿದೆನಲ್ಲ. ದಾರಿ ಬಿಡು."

"ಅದು ಚೀಟಿ ಹೌದೊ ಅಲ್ಲೊ ನಾ ಏನು ಕಂಡೆ?"

ಇವನ ದಿಟ್ಟತನವನ್ನು ನೋಡಿ ಚೀಟಿ ತೋರಿಸದೆ ದಾರಿಯಿಲ್ಲ ಎಂದು ಕಂಡುಕೊಂಡು ಪರಂಗಿ ಆದನ್ನು ಇವನ ಕೈಗೆ ಕೊಟ್ಟನು. ಬಸವಯ್ಯ ಆದನ್ನು ನೋಡಿ, "ಗೋಣೀ ಬೀಡಲ್ಲಿ ಐವತ್ತು ಹೇರಿನ ಸುಂಕ ಕೊಟ್ಟಿದ್ದೀಯ. ಎಷ್ಟಿವೆ ಹೇರು?" ಎಂದನು.

"ನಾನು ಸುಂಕ ಕೊಟ್ಟಿದ್ದು ಈ ಎಲ್ಲಾ ಹೇರಿಗೂನೂ."

"ಹಂಗಾರೆ ಈ ಚೀಟಿ ಹಿಂದಕ್ಕೆ ತೊಗೊಂಡು ಹೋಗಿ ಎಲ್ಲಾ ಹೇರಿನ ಲೆಕ್ಕ ಬರಸಿಕೊಂಡು ಬಾ. ತಗೊ."

ಹೀಗೆಂದು ಬಸವಯ್ಯ ಚೀಟಿಯನ್ನು ಹಿಂದಕ್ಕೆ ಅವನ ಕೈಗೆ ಕೊಡಿಸಿದನು.

ಪರಂಗಿ, "ನಾವು ಇಲ್ಲಿ ಬಹಳ ಸಲ ವ್ಯಾಪಾರ ಮಾಡಿದ್ದೀವಿ. ಯಾವಾಗಲೂ ಹೀಗೆ ತಡೆದಿದ್ದಿಲ್ಲ," ಎಂದನು.

"ಹ್ಞಾ, ಅದೇ ತಪ್ಪಾದದ್ದು. ಕದ್ದು ರುಚಿ ಕಂಡೋರು ಈ ಹೊತ್ತು ಕದೀತಿದ್ದೀರ."

"ಏನು ಹಾಗಂದರೆ? ನಾಲಗೆ ಬಿಗಿ ಹಿಡಿ."

ಬಸವಯ್ಯ ಸುಬ್ಬಯ್ಯನ ಜೊತೆಗೆ ಬಂದಿದ್ದ ಮನುಷ್ಯನನ್ನು ಕರೆದನು. "ಈ ಹೇರು ಎಲ್ಲಿಯವು ಹೇಳು," ಎಂದನು. ಅವನು "ಹಾವಹಳ್ಳಿ, ಆಲ್ದೂರು, ಬಾಳೆಹಳ್ಳಿ, ಹಾಂದಿ ಸುತ್ತಿನೋವು. ಇವರು ಹಾಂದಿ ಚೌಡಿ ಕಾನ್ನಲ್ಲಿ ಕಳ್ಳ ಕಣಜ ಮಾಡಿ ಸೇರಿಸಿ ತಂದಿದ್ದಾರೆ. ಇದರಲ್ಲಿ ಹತ್ತು ಹೇರು ನಮ್ಮ ದಣಿಯೋರವು," ಎಂದನು.

ಬಸವಯ್ಯ ಪರಂಗಿಯವನಿಗೆ, "ಕೇಳಿದೆಯೊ" ಎಂದನು.

ಪರಂಗಿ: ಇವ ಒಬ್ಬ ಹೇಳಿದರೆ ಏನಾಯ್ತು?

ಹಾಂದಿಯ ಮನುಷ್ಯ, "ಹೇರಿನ ಆಳನ ಕೇಳಪ್ಪ. ರಾತ್ರಿ ಎಲ್ಲಿಂದ ಹೊರಟಿರಿ ಅಂತ," ಎಂದನು.

ಬಸವಯ್ಯ ಪರಂಗಿಯವನಿಗೆ, "ಕೇಳೋಣೇನಪ್ಪ?" ಎಂದನು.

ಪರಂಗಿ, "ಏ ಜೋಕೆ. ನನ್ನಾಳನ್ನ ಮಾತಾಡ್ಸೀಯ. ನನ್ನಾದರೂ ತಡೆದೀಯೋ, ಭದ್ರ!" ಎಂದು ಎಚ್ಚರಿಕೆ ಹೇಳಿ, ಹಿಂದುಗಡೆಗೆ ತಲೆ ತಿರುಗಿಸಿ, "ಲೋ ಎಲ್ಲಾ ಹಿಂದೆ ಬನ್ರೊ," ಎಂದು ಕುದುರೆಯನ್ನು ಮುಂದೆ ನಡೆಸಲು ತೊಡಗಿದನು.

ಬಲಗಡೆಯ ಮಲೆಯ ಎತ್ತರದಿಂದ ಒಂದು ಸಿಳ್ಳೆಹಾಕಿದ ಶಬ್ದ ಕೇಳಿಸಿತು. ಬಸವಯ್ಯನ ಹಿಂದೆ ಇದ್ದ ಭಲ್ಲೆಯವರು ಅವನ ಎರಡೂ ಪಕ್ಕಕ್ಕೆ ಸರಿದು ಬಂದರು; ತಮ್ಮ ಭಲ್ಲೆಗಳನ್ನು ಚಾಚಿ ಕುದುರೆಯ ಎದುರಿಗೆ ಹಿಡಿದರು.

ಪರಂಗಿ ತನ್ನ ಕೋವಿಯನ್ನು ತೆಗೆದನು; ಹೊಡೆಯುವಂತೆ ಭುಜದ ನೇರಕ್ಕೆ ನಿಲ್ಲಿಸಿಕೊಂಡನು.

ಮತ್ತೆ ಸಿಳ್ಳೆ ಕೇಳಿಸಿತು. ಕಾಡಿನ ನಾಲ್ಕು ಕಡೆಯಿಂದ ಸರಸರ ಜನ ಬಂದಿತು. ಈ ಶಬ್ದವನ್ನು ಕೇಳಿ ಸ್ವಲ್ಪ ಬೆಗಡುಕೊಂಡಿದ್ದ ಪರಂಗಿಗೆ ಹಿಂದುಗಡೆ ತನ್ನ ಬೆನ್ನಿಗೆ ಅದೇನೊ ಒತ್ತಿದಂತೆ ಭಾಸವಾಯಿತು.

ಅವನು ಇದೇನೆಂದು ಹಿಂತಿರುಗಿ ನೋಡಿದನು. ಸುಬ್ಬಯ್ಯ ಅವನ ಬೆನ್ನಿಗೆ ಸರಿಯಾಗಿ ಒತ್ತಿ ಒಂದು ಕೋವಿಯ ಮೂತಿಯಿಂದ ಅವನನ್ನು ಸೋಕಿದ್ದನು.

ಪರಂಗಿ ಮುಂದಕ್ಕೆ ತಿರುಗಿದನು. ಬಲಗಡೆಗೆ ಮಲೆಯ ಮೇಲುಗಡೆಗೆ ಒಬ್ಬಾತ ನಿಂತಿದ್ದನು. ಅವನು ಇವರ ನಾಯಕನಾಗಿರಬೇಕು.

ಅವನು ಬಹು ದಿಟ್ಟವಾಗಿ ನಿಂತಿದ್ದನು. ಇವರನ್ನು ವಿರೋಧಿಸಿ ಪ್ರಯೋಜನವಿಲ್ಲವೆಂದು ಪರಂಗಿಯವನಿಗೆ ಕಂಡಿತು. ಅವನು ಕೈ ಎತ್ತಿದನು. "ಜಗಳಬೇಡ; ಬೇಕು ಅಂದರೆ ಸುಂಕ ಕೊಡತೇನೆ," ಎಂದನು.

ಬಸವಯ್ಯ ಮಲೆಯಮೇಲೆ ನಿಂತಿದ್ದ ಮನುಷ್ಯನ ಕಡೆಗೆ ನೋಡಿದನು. ಅವನ ಕೈಯಾಡಿಸಿ, "ಬೇಡ, ಸುಂಕ ಕೊಟ್ಟಿರುವ ಹೇರು

ಮುಂದೆ ಹೋಗಲಿ, ಉಳಿದದ್ದು ತೆರವಿಗೌಡರ ವಶಕ್ಕೆ ಹೋಗಲಿ," ಎಂದು ಸನ್ನೆ ಮಾಡಿದನು. ಬಸವಯ್ಯ ಇದನ್ನು ಪರಂಗಿಗೆ ತಿಳಿಸಿದನು.

ಪರಂಗಿ ದಂಡ ಕೊಡುತ್ತೇನೆಂದನು, ಲಂಚ ಕೊಡುತ್ತೇನೆಂದನು, ಏನು ಬೇಕಾದರೂ ಮಾಡುತ್ತೇನೆಂದನು. ಮಲೆಯ ದಣಿ ಒಪ್ಪಲಿಲ್ಲ. ದೂರದಿಂದ ಅವನನ್ನು ನೋಡಿದ್ದರಲ್ಲಿ ಪರಂಗಿಯವನಿಗೆ ಅವನು ಈ ಹಳ್ಳಿಯ ಯಾವ ಮನುಷ್ಯನೂ ಅಲ್ಲ ಎಂದು ತೋರಿತು. ಸುಟಿಯಾದ ಮುಖ. ಹೊಳೆಯುವ ಕಣ್ಣು. ಚುರುಕಿನ ನೋಟ. ಸಾವಿರ ಜನದಲ್ಲಿ ಸಾವಿರ ಮುಖದಲ್ಲಿ ಇಂಥ ಮುಖ ಒಂದು ಇರಬಹುದು. ಅವನು, "ನೀವು ಅನ್ಯಾಯಮಾಡಿದರೆ ನಾವು ಬಿದನೂರಿಗೆ ದೂರು ಒಯ್ತೇವೆ," ಎಂದನು. ದಣಿ, "ಆಗಬಹುದು," ಎಂದು ಸನ್ನೆಮಾಡಿದನು.

ಐವತ್ತು ಹೇರು ಮುಂದೆ ನಡೆದವು; ನೂರೈವತ್ತು ಹಿಂದಿರುಗಿ ದವು. ಪರಂಗಿ ಐವತ್ತು ಕತ್ತೆಯ ಹಿಂದೆ ಹೊರಡಲನುವಾದನು. ಸುಬ್ಬಯ್ಯ, "ಬಿಟ್ಟಹೇರಿಗೆ ಚೀಟಿಬೇಡವೆ ?" ಎಂದನು.

ಪರಂಗಿ, "ಇಲ್ಲೇ ಬಂದು ಕೇಳತೀವೆ," ಎಂದನು.

"ನಿನ್ನ ಹೆಸರೇನು ?"

"ಮಾರ್ಟಿನ್ ಸಾಹೇಬ."

ಉತ್ತರ ಹೇಳಲು ಪರಂಗಿ ಕ್ಷಣ ತಡಮಾಡಿದನು. ಸುಬ್ಬಯ್ಯ, "ಹೇರಷ್ಟೇ ಅಲ್ಲ, ಈ ಮುಂಡೇವು ಹೆಸರೂ ಕದೀತವೆ," ಎಂದನು.

## ೨೪

ಇದಾದ ಮೂರು ತಿಂಗಳ ಸುಮಾರಿಗೆ ಶ್ರಾವಣದ ಕೊನೆಯ ದಿನ ಗಳಲ್ಲಿ ಒಂದು ದಿನ ಸಂಜೆ ಇಬ್ಬರು ಪ್ರಯಾಣಿಕರು ಚಿಕ್ಕಮಂಗಳೂರು ಕಡೆಯಿಂದ ವಸ್ತಾರೆಯನ್ನು ಕುರಿತು ಬರುತ್ತಿದ್ದರು. ವಸ್ತಾರೆ ಹತ್ತಿರ ದಲ್ಲೇ ಇದೆ ಎನ್ನುವಾಗ, ಮೂಗುತಿ ಹಳ್ಳಿಯ ಕಡೆಯಿಂದ ಇವರನ್ನು ಕರೆತಂದ ಆಳು, "ಅಕೊ, ಇನ್ನು ಹತ್ತು ಹೆಜ್ಜೆ, ವಸ್ತಾರೆ ಕಾವಲು ಸಿಕ್ಕುತದೆ. ನಡೀರ," ಎಂದು ಹಿಂದಿರುಗಿದನು. ಪ್ರಯಾಣಿಕರು

ಕುದುರೆಗಳಿಂದ ಇಳಿದರು; ಅವನ್ನು ನಡೆಯಿಸಿಕೊಂಡು ಮುಂದರಿದರು. ಸ್ವಲ್ಪದೂರದಲ್ಲಿ ಅವರು ವಸ್ತಾರೆಯ ಊರಬಾಗಿಲ ಮುಂಭಾಗಕ್ಕೆ ಬಂದರು. ಅಲ್ಲಿ ಗ್ರಾಮದೇವತೆಯ ಗುಡಿ. ಅದರ ಎದುರಿಗೆ ಸಣ್ಣ ಒಂದು ಉರಿಯನ್ನು ಹಾಕಿಕೊಂಡು ಅದನ್ನು ಸುತ್ತಿ ನಾಲ್ಕುಜನ ಕುಳಿತಿದ್ದರು.

ಪ್ರಯಾಣಿಕರಲ್ಲಿ ಹಿರಿಯನು ದಾರಿಯಲ್ಲಿ ನಿಂತು ಇವರನ್ನು ಕುರಿತು, "ಇದು ವಸ್ತಾರೆ ಅಲ್ಲವೇನಪ್ಪ ?" ಎಂದನು.

ಕಾವಲವರಲ್ಲಿ ಒಬ್ಬನು, "ಯಾವ ಊರೂಂತ ಬಂದಿರಿ ?" ಎಂದು ಕೇಳಿದನು. ಮತ್ತೊಬ್ಬನು "ಮೂಡಲ ಸೀಮೆಯೋರು. ತಿಳಿದರೂ ಕೇಳೋದೆ," ಎಂದನು.

ಹಿರಿಯ ಪ್ರಯಾಣಿಕ, "ನಾವು ಬೇಲೂರು ಸೀಮೆಯೋರು. ಈ ರಾತ್ರಿ ವಸ್ತಾರೆಯಲ್ಲಿದ್ದು ನಾಳೆ ಮುಂದೆ ಹೋಗಬೇಕು," ಎಂದನು. ಮೊದಲ ಕಾವಲವನು, "ರಾತ್ರೀಗೆ ತಂಗಬಹುದು," ಎಂದನು. ಎರಡನೆಯವನು, "ಅಂದರೆಮೈಸೂರವರು ಬೇಲೂರನ್ನಬಾರದು," ಎಂದನು.

ಪ್ರಯಾಣಿಕನು ತಾವು ಮೈಸೂರವರು ಎಂಬುದನ್ನು ಮರಸಬೇಕು ಎಂದು ಉದ್ದೇಶಿಸಿರಲಿಲ್ಲ. ಮೈಸೂರು ಎಂದರೆ ತಿಳಿಯುತ್ತದೆಯೋ ಇಲ್ಲವೊ ಎಂಬ ಶಂಕೆಯಿಂದ ಬೇಲೂರು ಎಂದಿದ್ದನು. ಕಾವಲವರನ್ನು ಕುರಿತು, "ಓ, ಹಂಗಾದರೆ ಮೈಸೂರವರೂಂತ ತಿಳೀತದೆ," ಎಂದನು.

ಮೊದಲ ಕಾವಲವನು, "ನಿಮ್ಮ ಯಾಸ ಬೂಸನ ಬಾಸೆ ನೋಡಿ, ರಂಗ ನೀವು ಮೈಸೂರೋರು ಅಂತ ಕಂಡುಕೊಂಡ," ಎಂದನು.

ಈ ಮಾತಿಷ್ಟು ನಡೆಯುವ ವೇಳೆಗೆ ಕಾವಲವರಲ್ಲಿ ಒಬ್ಬ ಊರೊಳಕ್ಕೆ ಹೋಗಿ, ಇವರು ಬಂದಿರುವುದನ್ನು ತಿಳಿಸಿ, ಇವರನ್ನು ಕರೆತರಬಹುದೆಂದು ಅನುಮತಿ ಪಡೆದು ಬಂದನು. ಜೊತೆಯ ಕಾವಲಿಗೆ, "ಹೆಗ್ಗಡೆತೀರು ಚಾವಡ್ಯಾಗಿದ್ದಾರೆ. ಬರಲೀಂದ್ರು," ಎಂದು ಹೇಳಿದನು. ಎರಡಾಳು ಬಂದು ಇವರ ಕುದುರೆಗಳನ್ನು ಹಿಡಿದುಕೊಂಡರು. ಮೊದಲು ಮಾತನಾಡಿದ್ದ ಇಬ್ಬರು ಕಾವಲುಗಾರರು ಇವರನ್ನು ಊರೊಳಕ್ಕೆ ಕರೆದುಕೊಂಡು ಹೋದರು.

ದೊಡ್ಡ ಬೀದಿಯ ಮಧ್ಯದಲ್ಲಿ ಚಾವಡಿ. ಅದರ ಪಕ್ಕಕ್ಕೆ ದೊಡ್ಡ ಮನೆ. ಚಾವಡಿಯ ಬಳಿ ತುಂಬ ಜನ ನೆರೆದಿದೆ. ಅದರ ಒಳಗೆ ಜಗಲಿಯ ಮೇಲೆ ಹೆಗ್ಗಡಿತಿ ಕುಳಿತಿದ್ದಳು. ಪ್ರಯಾಣಿಕರನ್ನು ಕಂಡೊಡನೆ, "ಶಿವಪ್ಪ, ಅವರನ್ನು ಕರೆತನ್ನಿ," ಎಂದು ತನ್ನ ಕರಣಿಕನಿಗೆ ಅಪ್ಪಣೆ ಮಾಡಿದಳು. ಪ್ರಯಾಣಿಕರಿಬ್ಬರೂ ಒಳಗೆ ಹೋಗಿ ಕರಣಿಕ ತೋರಿಸಿದ ಸ್ಥಳದಲ್ಲಿ ಕುಳಿತುಕೊಂಡರು.

ಹೆಗ್ಗಡಿತಿ ಅವರಿಗೆ, "ಮೈಸೂರವರಂತೆ. ರಾತ್ರಿ ಇಲ್ಲಿ ಇರಬೇಕು ಅಂದಿರಂತೆ. ಆಗಬಹುದು. ಈ ವ್ಯವಹಾರ ಮುಗಿಸಿ ಬರತೇವಿ," ಎಂದಳು.

ಪ್ರಯಾಣಿಕರ ಹಿರಿಯ, "ಆಗಬಹುದು," ಎಂದನು.

ವ್ಯವಹಾರ ಜವರ ಮಲ್ಲಿಗೆಯನ್ನು ಕುರಿತದ್ದು. ಆ ದಿನ ಜವರ ಹೆಗ್ಗಡಿತಿಯ ಹತ್ತಿರ ಬಂದು, "ಮಲ್ಲಿಗೆ ಒಲ್ಲೆ ಅಂದರೆ ಬೇಡ. ನನಗೆ ಬೇರೆ ಹೆಣ್ಣೇ ಮಾಡಿಕೊಡಿ. ಮನೆ ಮುದುಕಿ ಬೇಯಿಸೋಕೆ ಮೂಲಗತಾಳೆ. ಸಾಯೋತನಕ ನಿನಗೆ ಅಂಬಲಿ ಕಾಸೋದೆ ಕೆಲಸವೇಂತಾಳೆ. ಯಾವಳೊ ಸೊಸೆ ಬರಲಿ ಎಂತಾಳೆ," ಎಂದಿದ್ದನು. ಆದಕಾರಣ ಹೆಗ್ಗಡಿತಿ ಸಂಜೆ ಮಲ್ಲಿಗೆಯನ್ನು ಚಾವಡಿ ಹತ್ತಿರ ಕರಸಿದ್ದಳು.

ಮಲ್ಲಿಗೆ ತನ್ನ ಹಟವನ್ನು ಬಿಡಲಿಲ್ಲ. "ಬೂದಿ ಸ್ವಾಮಿ ಹೇಳಿ ಆರು ತಿಂಗಳಾಗಲಿಲ್ಲವಲ್ಲ," ಎನ್ನುವುದು ಅವಳು ಹಿಡಿದ ವಾದ. ಹೆಗ್ಗಡಿತಿ ಬೇರೆ ದಾರಿ ಕಾಣದೆ, ಸಗುನನನ್ನು ಕುರಿತು, "ಎಲಾ ಸಗುನ, ನಿನಗೂ ಬುದ್ಧಿ ಇಲ್ಲವೇನೊ? ಮಲ್ಲಿಗೆ ಮದಿವಿಯಾಗತೀನೀ ಅಂದರೆ ಚಿರತೆ ಹಿಡಕೊಂಡ ನಾಯಿ ಹಂಗೆ ಊ್ಙ ಊ್ಙ ಅಂತಾ ಇದ್ದೀಯಾ? ಒಲ್ಲೆ ಅನ್ನೋಕೆ ಬಾಯಿಲ್ಲ?" ಎಂದು ಜರುಬಿದಳು.

ಮಲ್ಲಿಗೆ, "ಅದ್ಯಾಕೆ ಒಲ್ಲೆ ಅಂದಾನು? ನಾ ಏನು ಚಿರತೆ?" ಎಂದಳು.

ಹೆಗ್ಗಡಿತಿ, "ಲೇ ನೀ ಬಾಯಿ ತೆರೀಬೇಡ. ಏನಿಷ್ಟು ಹೆಚ್ಚಿಕೊಂಡೆ? ನಾ ಹೆಗ್ಗಡಿತಿ ಅಂದ್ರೆ ನೀ ನನಗೆ ಹೆಗ್ಗಡಿತಿ ಅನ್ನೋ ಹಂಗೆ ಆಡತೀ! ಅವನು ಮಾತನಾಡಲಿ ಬಿಡು," ಎಂದಳು.

ಸಗುನ: ಅವ್ವ, ಇದು ಗಂಡಸರ ಮಾತಲ್ಲ. ನೀವುಂಟು, ಮಲ್ಲಿಗೆ ಉಂಟು. ಬಲೋದ್ಬಂದ ಮಾಡೋದು ಬೇಡ. ಮಲ್ಲಿಗೆ ಜವರನ್ನ ಆಗಲಿ. ನಾ ಬೇಡಾನ್ನೋದಿಲ್ಲ. ಒಲ್ಲಿ ನಿನ್ನೇ ಆಗ್ತೀನಿ ಅಂದ್ರೂ ಬ್ಯಾಡಾನ್ನೋದು ಸಲ್ಲ. ಊರುತಾಯಿ ನೀವೇ ಹೇಳ್ರಿ.

"ಏನು ನಾ ಹೇಳೋದು? ನಿಮ್ಮಿಷ್ಟದಂತೆ ಮಾಡೀ ಅಂತ ಅಲ್ಲ? ಇದಕ್ಕೆ ನಾನೇನು ಹೆಗ್ಗಡಿತಿ, ನೀ ಏನು ಜೀತ? ಹೆಗ್ಗಡಿತಿ ಬೇಡಾ ಅಂತಾರೆ ಅಂತ ಈ ಮಾತು ನೀನು ಮಲ್ಲಿಗೆ ಇಬ್ಬರೂ ಬಿಡಬೇಕು. ಮಲ್ಲಿಗೇಗೆ ಮರಳು ಹಿಡಿದು ಅವಳು ಬಿಡಲಿಲ್ಲಾ ಅಂದರೆ, ಬುದ್ಧಿ ಉಳ್ಳವ ನೀನಾರ ನನ್ನ ಮಾತು ನಡಸಬೇಕು."

ಸಗುನ ಮರುಮಾತಾಡಲಿಲ್ಲ.

"ನನ್ನ ಮಾತು ಕೇಳಿ ಇಬ್ಬರೂ. ಇದು ಈ ಹೊತ್ತು ನಾ ಹೇಳೋ ಮಾತಲ್ಲ. ಹೆಗ್ಗಡೇರು ಹಾಕಿ ಹೋದ ಶಿಸ್ತು. ಮಲ್ಲಿಗೆ ಒಂದು ಹೆಣ್ಣಾಗಿ ಹುಟ್ಟಿದ ದಿನ ಹೆಗ್ಗಡೇರು ಅವಳನ್ನ ಜವರನಿಗೇ ಅಂತ ಗೊತ್ತುಮಾಡಿದರು. ಜವರನಿಗೆ ಸಣ್ಣೀನ ಮಾಡಿ ಅಂತೀರಿ. ಸಣ್ಣೀನ ಹೆಗ್ಗಡೇರು ಚೌಡನಿಗೆ ಗೊತ್ತುಮಾಡಿದರು. ಮಲ್ಲಿಗೆ ನಿಂಗೆ ಹೆಂಗಾದಾಳು? ಗೌಡ ಅಳಿದರೆ ಜೀತ ಅಳೀತೋ? ನಿಮ್ಮನ್ನ ಹೆತ್ತ ಅಪ್ಪ ಅವ್ವ ನಿಮ್ಮಂತೇ ಆಡಿದರಾ? ಹುಡುಗ ಹುಡುಗಿ ಬಹಳಾ ಮಾತನಾಡಬೇಡಿ; ಹೇಳಿದ ಹಂಗೆ ಕೇಳಿ."

ಮಲ್ಲಿಗೆ: ಅವ್ವ, ನಾವೊಲ್ಲಿ.

ಹೆಗ್ಗಡಿತಿ: ಲೋ ಸಗುನ, ನೀನು ನನ್ನ ಮಾತು ನಡಸದೇ ಇದ್ದರೆ ನಿನ್ನ ಕಾಡಿಗಟ್ಟಿಯೇನು, ಜೋಕೆ, ನಡೀರಿ.

ಮಲ್ಲಿಗೆ: ಅವ್ವ, ನನ್ನೂ ಕಾಡಿಗಟ್ಟಿಬಿಡಿ. ಹೆಂಗಾದ್ರೂ ಆಗ್ತೀವಿ.

ಮಲ್ಲಿಗೆ ಸಾಮಾನ್ಯವಾಗಿ ಒಂದು ಜೀತದ ಹುಡುಗಿ ನಡೆದುಕೊಳ್ಳುವಂತೆ ನಡೆಯುತ್ತಿರಲಿಲ್ಲ. ಇಂಥ ಹುಡುಗಿಯನ್ನು ಹೇಗೆ ನಡಸಿಕೊಳ್ಳಬೇಕು ಎನ್ನುವುದು ಹೆಗ್ಗಡಿತಿಗೆ ತಿಳಿಯಲಿಲ್ಲ. ಅವಳು, "ಸಾಕು ಬಿಡು ನಿನ್ನ ರಾಮಾಯಣ. ಅಟ್ಟಂದರೆ ಅಟ್ಟುತೀವಿ. ಮೂಡಲಿಗೊಂದ, ಪಡವಲಿಗೊಂದ," ಎಂದಳು.

ಇನ್ನು ಮಾತಿಗವಕಾಶವಿಲ್ಲವೆಂದು ಸ್ಪಷ್ಟಪಡಿಸಿ ಹೆಗ್ಗಡಿತಿ ಜಗಲಿಯಿಂದ ಎದ್ದಳು.

೨೫

ಚಾವಡಿಯ ಪಕ್ಕದ ಮನೆಯೇ ಅವಳ ಮನೆ.

ಅದರ ತೊಟ್ಟಿಯ ನಾಲ್ಕು ಕಡೆಯೂ ಎತ್ತರದ ಜಗಲಿ ಇದ್ದಿತು. ಅದರ ಮೇಲ್ಗಡೆಯ ಮೂಲೆಯಲ್ಲಿ ದೊಡ್ಡ ಕಂಬಳಿಯನ್ನು ಹಾಸಿ ದಿಂಬುಗಳನ್ನಿಟ್ಟಿದ್ದರು. ಹೆಗ್ಗಡಿತಿ ಬಂದವರಿಗೆ ಮೊದಲು ಕಾಲಿಗೆ ನೀರು ಕೊಡಿಸಿ, ಅಲ್ಲಿಗೆ ಕರೆದುಕೊಂಡು ಹೋಗಿ ಕುಳ್ಳಿರ ಹೇಳಿ, ತಾನು ಬೇರೆಯಾಗಿ ಹಾಕಿದ್ದ ಕಂಬಳಿಯ ಮೇಲೆ ಕುಳಿತಳು. ಶಿವಪ್ಪನ ಕಡೆ ತಿರುಗಿ, "ಶಿವಪ್ಪ ಇವರಿಗೆ ಊಟಕ್ಕೆ ಹೇಳಬೇಕಲ್ಲ," ಎಂದಳು.

ಶಿವಪ್ಪ, "ಆಗಲೆ ಹೇಳಿ ಕಳಿಸಿದೇನವ್ವ, ತಿರುಗಿ ಹೋಗಿ ನೋಡ, ತೀನಿ," ಎಂದು ಹೊರಕ್ಕೆ ಹೋದನು.

ಹೆಗ್ಗಡಿತಿ ಆಮೇಲೆ ಇವರ ಹೆಸರೇನು ಸ್ಥಳವೇನು, ಇವರು ಬಂದ ಕೆಲಸ ಏನು, ಎಂದು ವಿಚಾರಿಸಿದಳು.

ಪ್ರಯಾಣಿಕರಲ್ಲಿ ಹಿರಿಯನ ಹೆಸರು ವೀರಣ್ಣ, ಮತ್ತೊಬ್ಬನ ಹೆಸರು ಸೂರಪ್ಪ. ಇವರು ಮೈಸೂರವರು; ಬಿದನೂರಿಗಾಗಿ ಹೊರಟಿದ್ದರು. ವಸ್ತಾರೆ ದೊಡ್ಡ ಊರು ಎಂದು ಕೇಳಿ ಆ ಮಾರ್ಗವಾಗಿ ಹೋಗಬೇಕು ಎಂದು ಮನಸ್ಸು ಮಾಡಿದ್ದರು.

ಹೆಗ್ಗಡಿತಿ: ವಸ್ತಾರೆ ಹೆಸರು ನೀವು ಹೆಂಗೆ ಕೇಳಿದಿರಿ?

ವೀರಣ್ಣ: ಹಿಂದಕ್ಕೆ ನಮ್ಮರಸರು ಇಲ್ಲಿ ಬಂದದ್ದುಂಟು. ಆಗ ಇಲ್ಲಿ ಹೆಗ್ಗಡೇರು ಅವರಿಗೆ ಬಹಳ ಚೆನ್ನಾಗಿ ನಡೆದುಕೊಂಡರು. ಆ ಮಾತು ಕೇಳಿದ್ದೆವು. ಆದ್ದರಿಂದ ಬಂದು ಹೋಗೋಣ ಅನ್ನಿಸಿತು.

ಹೆಗ್ಗಡಿತಿ: ಆ ಮಾತಾಡತೀರಾ? ನಮ್ಮ ಹಿರೇರು ದೊಡ್ಡ ರಾಜರನ್ನ ನೋಡಿಕೊಂಡದ್ದುಂಟು. ಅವರ ಹೆಸರು ಹೇಳಿ ಬಂದರಿ ಅಂದ ಮೇಲೆ ನೀವು ಯಾಕೆ ಬಂದಿದ್ದೀರಿ ಅನ್ನೋ ಮಾತನೂ ನಮಗೆ ಹೇಳಬಹುದು. ಬಿದನೂರಿಗೆ ಏನು ಹೊರಟಿರೋದು?

ವೀರಪ್ಪ : ತಿಳಿಸುತೇನೆ. ಬಚ್ಚಿಡೋ ಮಾತೇನೂ ಇಲ್ಲ. ಆದರೆ ಊರಿನಲ್ಲಿ ಎಲ್ಲರಿಗೂ ಹೇಳಬೇಕಾದದ್ದಿಲ್ಲ ಅಷ್ಟೆ.

"ನಮಗೆ ಹೇಳೋಕೆ ನೀವು ಅಂಜೋಣೇ ಬೇಡ. ನಾವು ದೊಡ್ಡ ರಾಜರ ಹೆಸರು ಹೇಳಿದರೆ ಕೈಮುಗಿಯೋ ಜನ. ಒಂದು ಕಾಲಕ್ಕೆ ಪಟ್ಟಣಕ್ಕೆ ಕಾಣಿಕೆ ಕಳಿಸತಾ ಇದ್ದಿವಿ. ಆ ದಣಿಗಳು ಬಿಡತಿ ಕೊಟ್ಟರು. ಅಕೊ ನೋಡಿ, ಅಲ್ಲಿರೋ ಪಟ ನಿಮ್ಮೂರಾಗೆ ನೋಡಿದ್ದೀರಾ ? "

ಹೀಗೆಂದು ಹೆಗ್ಗಡಿತಿ ವೀರಣ್ಣ ಸೂರಪ್ಪ ಕುಳಿತಿದ್ದ ಸ್ಥಳದ ಎಡಗಡೆ ಗೋಡೆಯ ಕಡೆ ತೋರಿಸಿದಳು. ಬೆಳಕು ಸಾಲದು. ವೀರಣ್ಣ ಎದ್ದು ನಿಂತು ಪಟವನ್ನು ನೋಡಿದನು. "ಹೌದು, ನಮ್ಮ ದೊಡ್ಡರಾಜರದು," ಎಂದು ಕೈಮುಗಿದು ಕುಳಿತನು. ಪಟದ ಮೇಲೆ ಘಟ್ಟದ ಕೆಳಗಿನ ರೀತಿ ಯದು ಬೆಂಡಿನಿಂದ ಮಾಡಿದ ಮಾಲೆಯೊಂದನ್ನು ಹಾಕಿತ್ತು.

ಹೆಗ್ಗಡಿತಿ: ಪಟ್ಟಣದ ಕತೆ ನಾವೂ ಅಷ್ಟು ಕೇಳಿದ್ದೀವಿ. ಕೇಳೋ ಕಷ್ಟೇನೂ ಚೆನ್ನಾಗಿಲ್ಲ. ದೊಡ್ಡ ದಣಿಗಳ ವಂಶದಲ್ಲಿ ಇನ್ನಂತಾ ಹುಲಿ ಗಳು ಹುಟ್ಟಲಿಲ್ಲ. ಮನೆತನದ ಬಾಳು ಬೀಳುಗತಿಗೆ ಬಂದದೆ. ಯಾವನೊ ತುರುಕ ದೊರೆಗನ್ನ ಹೆಚ್ಚಾಗಿ ಎದ್ದು ಕುಂತಾನಂತೆ. ಇಂಥಾ ಪಾಡು ಪಡೋಕಿಂತ ಅರಸರು ಹೇಳಿಕಳಿಸಿದ್ದರೆ ನಾವು ಜನಾನ ಕಳಿಸತಾ ಇದ್ದಿವಿ, ಆಗದವರನ್ನ ಅಡಗಿಸತಾ ಇದ್ದಿವಿ. ಈಗೇನೋ ನೀವು ಬಿದನೂರಿಗೆ ಹೊರಟದೀರಿ. ಇಂಥಾದೇ ಮಾತಿಗೆ ಅರಸರು ನಿಮ್ಮನ್ನ ಕಳಿಸಿರಬಹುದು.

ವೀರಣ್ಣ ಹೆಗ್ಗಡಿತಿಯ ಮಾತನ್ನೆಲ್ಲ ಆಶ್ಚರ್ಯದಿಂದಲೂ ಸಂತೋ ಷದಿಂದಲೂ ಕೇಳಿದನು. ಕ್ಷಣ ಬಿಟ್ಟು, "ಪಟ್ಟಣದಿಂದ ಇಷ್ಟು ದೂರ ದಲ್ಲಿರೋ ಮಲೆ ನಾಡಿನ ಮಂದಿ ಇಷ್ಟು ಸಂಗತಿ ತಿಳಕೊಂಡಿರತೀರಿ ಅಂತ ನಮಗೆ ಗೊತ್ತಿರಲ್ಲ. ಹೌದಲ್ಲ, ಹೆಗ್ಗಡಿತಿಯವರು ಈ ಮಾತನ್ನ ಇಷ್ಟು ಬಿಚ್ಚಿ ನಮಗೆ ಹೇಳತೀರೇ, ನಾವು ನವಾಬನ ಕಡೆಯವರಾಗಿದ್ದರೆ ತೊಂದರೆ ಅಲ್ಲವೆ ? " ಎಂದನು.

" ಏನಣ್ಣಾ ಅವರೆ, ನಿಮ್ಮನ್ನ ನೋಡಿದರೆ ಕಾಣೋದಿಲ್ಲವೆ, ಇದು ಉಕ್ಕೋ ಹಾಲಿನ ನೊರೆ ಅಲ್ಲ, ತಗ್ಗೋ ಹಾಲಿನ ನೊರೆ ಅಂತ?

ನವಾಬ ಬಿದನೂರಿಗೆ ಜನಾನ ಕಳಿಸಬೇಕಾದರೆ ಆ ಜನ ನಿಮ್ಮ ಹಂಗೆ ಬರತಾರೇನು? ನಿಮ್ಮ ಹಂಗೆ ಇಷ್ಟು ಮೆದು ಮಾತಾಡತಾರೇನು? ನೀವು ಬಂದಿರೋದು ಅರಸರ ಕಡೆಯಿಂದ. ನೋಡೋಣ, ಈ ವಸ್ತಾರೆ ಜನ ಆದಾರೋ ಆಗರೊ ಅಂತ ಬಂದಿದ್ದೀರಿ. ನಾವು ಆಗೋರು. ಕೆಲಸ ಮುಂದಕ್ಕೆ ಸಾಗಿಸಿ. ಅರಸರಿಗೆ ಒಳ್ಳೇದಾಗಲಿ."

ಇದರ ಮೇಲೆ ವೀರಣ್ಣನಿಗೆ ತಾನು ಬಂದಿದ್ದದ್ದು ಏಕೆ ಎಂಬುದನ್ನು ತಿಳಿಸುವ ವಿಷಯದಲ್ಲಿ ತೀರ ನಿಸ್ಸಂಕೋಚ ಆಯಿತು. ಅವನು, "ಹೌದು ಹೆಗ್ಗಡಿತಿಯವರೆ, ಬಿದನೂರ ನಾಯಕರು ಮೈಸೂರಿಗೆ ಸಾಮಂತರಂತೆ ಇದ್ದು ಒಂದು ಕಾಲಕ್ಕೆ ರಾಜ್ಯಕ್ಕೆ ನೆರವಾಗಿದ್ದರು. ಇತ್ತೀಚೆಗೆ ಸಂಬಂಧ ತಪ್ಪಿದೆ. ನವಾಬರು ದೊಡ್ಡವರಾದರು ಅಂತಲ್ಲ, ಅರಸರ ಪದವಿಯುನ್ನ ಇನ್ನಷ್ಟು ಭದ್ರಮಾಡಬೇಕು ಅಂತ, ಬಿದನೂರ ನಾಯಕರನ್ನ ನೋಡಿ ಕೊಂಡು ಬನ್ನಿ ಅಂತ ಅರಸರೂ ಹಿರಿಯ ರಾಣಿಯವರೂ ನಮ್ಮನ್ನ ಕಳುಹಿಸಿದರು. ಬಿದನೂರಿಗೆ ಹೋಗೋ ಮುನ್ನ, ಹಿಂದಿನ ಮಾತು ನೆನೆದು, ವಸ್ತಾರೆ ಹೆಗ್ಗಡಿತೀರನ್ನ ನೋಡಿ ಹೋಗೋದು ಒಳ್ಳೇದು ಅಂದರು. ನೀವು ವಿಶ್ವಾಸವಾಗಿದ್ದರೆ ಎಲ್ಲಾ ಸಂಗತೀನೂ ಹೇಳಿ ಅಲ್ಲಿ ಹೇಗೆ ನಡೆದುಕೊಳ್ಳುವುದು ಕೇಳಿ ಹೋಗಬೇಕು ಅಂದರು. ಅದಕ್ಕಾಗಿ ನಾವಿಲ್ಲಿ ಬಂದೆವು. ನೀವು ಮೈಸೂರರಸರು ಅಂದರೆ ಇಷ್ಟು ವಿಶ್ವಾಸವಾಗಿರೋದು ನನಗೆ ತುಂಬ ಸಂತೋಷ," ಎಂದನು.

"ಒಂದು ದಿನ ಇದ್ದು ಹೋಗತೀರೊ?"

"ಸಾಧ್ಯವಿಲ್ಲ. ಬಿದನೂರು ಕಾಣಿಕೆ ಕಳಿಸೋದು ಅನ್ನೋ ಮಾತು ಅರಸರಿಗೆ ಅಷ್ಟು ದೊಡ್ಡದಲ್ಲ. ಸದ್ಯ ನಾಯಕರು ಈ ನವರಾತ್ರೀಗೆ ಪಟ್ಟಣಕ್ಕೆ ಬರಬೇಕೂ ಅಂತ ಅವರಿಗೆ ಬಹಳ ಆಸೆ. ದಾರೀಲಿ ನಿಲ್ಲೋದಕ್ಕೆ ದಿನ ಇಲ್ಲ. ಇಷ್ಟಕ್ಕೆ ಹೇಳೋ ಮಾತು ಬಹಳ ಇಲ್ಲ. ನೀವು ಬೆಸಸೋದನ್ನೂ ಕೇಳಿಕೊಂಡು ಬೆಳಗಾಗಲೇ ಹೊರಡಬೇಕು ಅಂತ ನಮ್ಮ ಯೋಚನೆ."

"ಹಾಗೇ ಮಾಡಿರಿ. ಒಳ್ಳೆ ಕೆಲಸದಾಗ ತಳುವೋದು ಬ್ಯಾಡ. ನಮ್ಮ ಜನ ನಾಲ್ವರು ನಮ್ಮ ಕೆಲಸಕ್ಕಾಗಿ ಬಿದನೂರಿಗೆ ಹೋಗೋದಿತ್ತು.

ನಾಡಿದ್ದು ಹೊರಡೋರನ್ನ ನಾಳೆ ಮುಂಜಾನೆ ಹೊರಡು ಅಂತೀವಿ. ನೀವೂ ಜೊತೇಗೆ ಹೊರಡೋರಂತೆ. ನನ್ನ ಕೇಳೋ ಮಾತು ಇದೆ ಅಂದಿರಿ? ಏನು, ಕೇಳಿರಿ."

"ನಾಯಕರಿಗೆ ಪಟ್ಟ ಆಗಿಲ್ಲವಲ್ಲ, ನಾವು ಬಿದನೂರಲ್ಲಿ ಯಾರನ್ನ ಕಾಣಬೇಕು, ಹ್ಯಾಗೆ ನಡದುಕೊಳ್ಳಬೇಕು, ಸ್ವಲ್ಪ ತಿಳಿಸಬೇಕು."

"ಅದೇನು ಬಹಳ? ತಾಯಿ ಮಕ್ಕಳ ಜಗಳ. ಅದರ ತಂಟೆ ನೀವು ಹಚ್ಚಿಕೋ ಬೇಡಿ. ನಾಯಕರು ಗಾದಿ ಏರಿಲ್ಲ, ಅಷ್ಟೆ. ಅಂದರೂ ನಾಯಕರಲ್ಲವೆ? ಗಾದಿ ಏರಲಿಲ್ಲಾ ಅಂತ ತಾಯಿ ಸೂತ್ರ ಹಿಡಿದಿದ್ದಾಳೆ. ಇಷ್ಟಕ್ಕೆ ನೀವು ನಾಯಕರನ್ನ, ರಾಣೀನ ಏನು ಕೇಳತೀರಿ? ಮಂತ್ರೀನಲ್ಲವೆ ಕೇಳತೀರಿ? ಲಿಂಗಣ್ಣಯ್ಯ ಸೆರೆ ಆದಮೇಲೆ ಇಂಥ ಮಾತೆಲ್ಲ ನೇಮಯ್ಯನಿಂದ ನಡೀತಾ ಅದೆ. ನಮ್ಮ ಶಿವಪ್ಪನಿಗೆ ಹೇಳುತೀನಿ. ಅವನು ನಿಮ್ಮನ್ನ ನೇಮಯ್ಯನ ತಾವ ಕರಕೊಂಡು ಹೋಗತಾರೆ. ನೇಮಯ್ಯನಿಗೆ ಮನಸ್ಸು ಒಳ್ಳೆ ಸುದ್ಧ. ಅವರ ಹತ್ತಿರ ಬಿಟ್ಟು ಮಾತಾಡಿರಿ. ಎರಡೂ ಸಂಸ್ಥಾನಕ್ಕೆ ಒಳ್ಳೇದಾಗೊ ಮಾತೇನಿದ್ದರೂ ಅವರು ನೋಡತಾರೆ, ನಡಸಿ ಕೊಡತಾರೆ. ಮತ್ತೇನು?"

"ಅಷ್ಟೇ ಹೆಗ್ಗಡಿತಿಯವರೆ. ಈ ಒಂದು ಮಾತು ನಿಮ್ಮನ್ನ ಕೇಳಬೇಕು ಅಂತ ಇಷ್ಟು ದೂರ ಸುತ್ತಿ ಬಂದೆವು. ಹೆಗ್ಗಡಿತಿ ಎಂಥವರಿರತಾರೊ, ಎಷ್ಟು ಬಳಸಿ ಮಾತಾಡತಾರೊ, ಎಂತ ಬಹಳ ಚಿಂತೆ ಆಗಿತ್ತು. ಏನಿಲ್ಲ, ಬಂದು ಕುಳಿತವರಿಗೇನೆ ನೀವು ಕೆಲಸ ಮಾಡಿಕೊಟ್ಟು ಬಿಟ್ಟಿರಿ. ಇಲ್ಲಿ ಬಹಳ ಜನ ನಿಮ್ಮಂತೆ ಇದ್ದರೆ ಈ ರಾಜ್ಯಕ್ಕೆ ಚಿಂತೆ ಇಲ್ಲ. ಬೆಳಗಾಗ ಜನದ ಜೊತೇಗೆ ನಮ್ಮನ್ನ ಕಳಿಸಿಕೊಟ್ಟು ಬಿಟ್ಟರೆ ಬಹಳ ಉಪಕಾರ ಆಗತದೆ."

ಹೆಗ್ಗಡಿತಿ, "ಶಿವಪ್ಪಾ," ಎಂದು ಕೂಗಿದಳು. ಶಿವಪ್ಪ ಆ ಮೊದಲೆ ಹಿಂದಕ್ಕೆ ಬಂದು ಬಾಗಿಲ ಹೊರಗಡೆ ಜಗಲಿಯ ಮೇಲೆ ಕುಳಿತಿದ್ದನು. ಒಡತಿಯ ಕರೆ ಹೇಳಿ ಒಳಗೆ ಬಂದನು. ಹೆಗ್ಗಡಿತಿ ಅವನಿಗೆ, "ಶಿವಪ್ಪ, ಅಣ್ಣಾವರಿಬ್ಬರಿಗೂನು ಬೇಗನೆ ಊಟ ಮಾಡಿಸಿ, ಮಲಗುವುದು ನೋಡಿಕೊಳ್ಳಿ. ನೀವು ನಾಡಿದ್ದು ಮುಂಜಾನೆ ಹೊರಡೋದಿತ್ತಲ್ಲ,

ನಾಳೆ ಮುಂಜಾನೇನೆ ಹೊರಟು ಬಿಡಿ. ಜೊತೆ ಜನಕ್ಕೆ ಈಗಲೆ ಹೇಳಿ ಕಳಿಸಿಬಿಡಿ. ರಾಣೀಗೆ ಅಂತ ಬರೆದಿದ್ದೋಲೆ ಅದೆಯಲ್ಲ?" ಎಂದಳು.

"ಅದೆ ಒಡತಿಯೋರೆ."

"ಅದನ್ನ ತೆಗೆದುಕೊಂಡು ನೀವೂನು ಅಣ್ಣಾವರನ್ನ ಕರಕೊಂಡು ಬೇಗನೆ ಬಿದನೂರು ಮುಟ್ಟಬೇಕು. ನಾವು ಹೇಳಿದೀವಿ ಅಂತ ಇವರನ್ನ ನೇಮಯ್ಯನ ಹತ್ತಿರ ಬಿಡಬೇಕು. ತಿಳಿತೇನಪ್ಪ?"

ಶಿವಪ್ಪ: "ತಿಳೀತವ್ವ, ಹುಡುಗರಿಗೆ ಹೇಳಿಕಳಿಸ್ತೇನೆ. ಓಲೆ ಬರದದೆ; ಮಾತು ಸ್ವಲ್ಪ ಕಡಿದಾಯ್ತು. ನೀವು ಅದನ್ನ ಇನ್ನೊಮ್ಮೆ ನೋಡಿದರೆ ಇದ್ದಾತು."

"ಆಗಬಹುದು, ತಂದು ಓದಿ. ಕಡದು ಗಿಡದು ಏನೂ ಇಲ್ಲ. ಇರೋದನ್ನ ಇರೋ ಹಂಗೆ ಹೇಳಿದೀವಿ. ಬಿಟ್ಟು ಹೇಳೋಕೆ ಹೋದರೆ ಸುಳ್ಳಾಗತದೇ ಹೇಗೆ? ಇನ್ನೊಮ್ಮೆ ಓದಿ ಹೇಳಿ, ಕೇಳಿದರಾಯ್ತು."

ವೀರಣ್ಣ ಸೂರಪ್ಪ ಎದ್ದರು. ವೀರಣ್ಣ, "ನಾವು ಶಿವಪ್ಪನವರ ಜೊತೆಗೆ ಹೋಗುವುದು ಅಲ್ಲ?" ಎಂದನು.

ಹೆಗ್ಗಡಿತಿ, "ಹೌದು," ಎಂದು ಎದ್ದಳು. ಇವರ ಜೊತೆಗೆ ಬಾಗಿಲ ವರೆಗೆ ಬಂದಳು. ಮನೆಯಿಂದ ಹೊರಡುತ್ತ ವೀರಣ್ಣ, "ನಾವು ಬೆಳಗಾಗ ಎದ್ದು ಹೊರಡುತ್ತೇವೆ," ಎಂದನು.

ಹೆಗ್ಗಡಿತಿ, "ನಾನು ನಿಮ್ಮನ್ನು ಕಾಣತೇನೆ ಅಣ್ಣಾವರೆ. ಇಲ್ಲಿ ಬಂದು ಗುಟುಕು ಹಾಲು ತೆಗೆದುಕೊಂಡು ಹೊರಡಿ," ಎಂದಳು.

ಶಿವಪ್ಪ ಪ್ರಯಾಣಿಕರನ್ನು ಮೊದಲು ಜೋಯಿಸರ ಮನೆಗೆ ಕರೆದು ಕೊಂಡು ಹೋದನು. ಅಲ್ಲಿ ಊಟ ನಡಸಿ ಮಲಗುವುದಕ್ಕೆ ತನ್ನ ಮನೆಗೆ ಕರೆದುಕೊಂಡು ಹೋದನು. ಅವರು ಊಟದಲ್ಲಿದ್ದ ವೇಳೆ ತೋಟಿಯನ್ನು ಕರೆದು ತನ್ನ ಜೊತೆಯಲ್ಲಿ ಬರುವ ಜನರಿಗೆ ಮುಂಜಾನೆ ಹೊರಡಬೇಕು ಎಂದು ತಿಳಿಸುವಂತೆ ಏರ್ಪಾಡು ಮಾಡಿದನು.

## ೨೬

ಮುಂಜಾನೆ ಶಿವಪ್ಪ ಬೇಗನೆ ಎದ್ದು ಪ್ರಯಾಣಕ್ಕೆ ಎಲ್ಲವನ್ನೂ ಸಿದ್ಧಮಾಡಿಕೊಂಡು, ವೀರಣ್ಣನನ್ನೂ ಸೂರಪ್ಪನನ್ನೂ ಎಬ್ಬಿಸಿದನು. ಪುರೋಹಿತರ ಮನೆಯಲ್ಲಿ ಬಿಸಿನೀರಿನಲ್ಲಿ ಸ್ನಾನಮಾಡಿಸಿ, ಅವರನ್ನು ಹೆಗ್ಗಡಿತಿಯ ಮನೆಗೆ ಕರೆದುಕೊಂಡು ಹೋದನು. ಹೆಗ್ಗಡಿತಿ ಎದ್ದಿದ್ದಳು. ಶಿವಪ್ಪನಿಂದ ಇವರಿಗೆ ಹಾಲು ಹಣ್ಣನ್ನು ಒಪ್ಪಿಸಿದಳು. ವೀರಣ್ಣ, "ನಾವು ಬೆಳಗಾಗ ಏನನ್ನೂ ತೆಗೆದುಕೊಳ್ಳುವ ವಾಡಿಕೆ ಇಲ್ಲ," ಎಂದನು. ಹೆಗ್ಗಡಿತಿ, "ಅದು ಬಯಲು ಸೀಮೆಯ ಮಾತು. ಮಲಸೀಮೆಯಲ್ಲಿ ಬರೀ ಹೊಟ್ಟೇಲಿ ಮನೆಯಿಂದ ಹೊರಡಬಾರದು. ಮಂಜು ತಂಡಿ ಮಾಡತದೆ," ಎಂದಳು. ವಿಶ್ವಾಸದ ಒತ್ತಾಯಕ್ಕೆ ಒಪ್ಪಿ ಇವರಿಬ್ಬರೂ ಹಾಲು ಹಣ್ಣನ್ನು ತೆಗೆದುಕೊಂಡರು. ಶಿವಪ್ಪನೂ ಬೇರೊಂದು ತಟ್ಟೆಯಿಂದ ಹಣ್ಣನ್ನು ತೆಗೆದುಕೊಂಡನು; ಹಾಲು ಕುಡಿದನು.

ಇಷ್ಟು ಹೊತ್ತಿಗೆ ಬಾಗಿಲಲ್ಲಿ ಸಗುನ, ಕಲ್ಲ, ರಂಗ ಬಂದು ನಿಂತಿದ್ದರು. ಪ್ರಯಾಣಿಕರು ಹೆಗ್ಗಡಿತಿಯ ಅಪ್ಪಣೆ ಪಡೆದು ಹೊರಟರು. ಶಿವಪ್ಪ ಸ್ವಲ್ಪ ಮುಂದಾಗಿಯೆ ಎದ್ದಿದ್ದನಾದ್ದರಿಂದ ಇನ್ನೂ ಮಸಕು ಮಸಕಾಗಿಯೆ ಇದ್ದಿತು. ಆದ್ದರಿಂದಲೂ ಮತ್ತು ಸ್ವಲ್ಪ ಚಳಿಯಾಗಿಯೂ ಇದ್ದದರಿಂದಲೂ ಮೊದಲು ಸ್ವಲ್ಪ ದೂರ ಎಲ್ಲರೂ ನಡೆಯುವುದು ಎಂದೂ ಆಳುಗಳು ತಟ್ಟುಗಳನ್ನು ನಡಸುವುದು ಎಂದೂ ಗೊತ್ತಾಯಿತು. ದಾರಿ ಅಷ್ಟೇನೂ ಅಗಲ ಇಲ್ಲ. ಇವರು ಒಬ್ಬರ ಹಿಂದೆ ಒಬ್ಬರು ನಡೆದರು.

ಸ್ವಲ್ಪದೂರ ಹೋದಮೇಲೆ ಕರಣೀಕ, "ಈ ಕತ್ತಲು ಹೆಂಗಾದರೂ ತಡಕೋಬಹುದು. ಮಧ್ಯಾಹ್ನದ ಬಿಸಿಲು ಬಹಳಾ ಕಷ್ಟ. ಇನ್ನೂ ಮುಂದಾಗಿ ಹೊರಡೋಣ ಅಂದರೆ ರಂಗ ತಂಟೆ ಮಾಡಿದ," ಎಂದನು.

ರಂಗ: ಇನ್ನೆಂಥಾ ಮುಂದೆ ಹೊರಡೋದು ಶಿವಪ್ಪ?; ಕೂದುವಳ್ಳಿ ಚೌಡೀಬನದ ಕತ್ಲಲ್ಲಿ ಯಾರು ನಡೀಬೇಕು. ಇಲ್ಲೇ ಮರಕ್ಕೊಂದು ದೆಯ್ಯ! ಕೊಳ್ಳಿ ಹಿಡಿದಿದೀವಿ, ಅರುಗಾಗವೆ! ಚೌಡೀ ಏನು ದೆಯ್ಯಾನ ಕೊಳ್ಳೀಗಂಜಾಕೆ?

ಕಲ್ಲ: ಏನೋ ರಂಗ, ದೆಯ್ಯಾ ಬಂದ್ರೆ ಕೊಳ್ಳಿತೋರಿಸ್ತೀಯಲ್ಲ, ಕೊಳ್ಳಿದೆಯ್ಯಾನೆ ಬಂದ್ರೆ ಏನ್ಮಾಡ್ತೀಯಾ?

ಇದು ನಿಜವಾಗಿಯೂ ಬದ್ಧಿವಂತನ ಪ್ರಶ್ನೆ. ಎಲ್ಲರೂ ನಕ್ಕರು. ಆದರೆ ನಗುವಿನ ಜೊತೆಯಲ್ಲಿ ಮನಸ್ಸಿನಲ್ಲಿ ಭಯವಿಲ್ಲದೆ ಇರಲಿಲ್ಲ. ವೀರಣ್ಣ ಸೂರಪ್ಪ ಇವರಿಗೂ ಈ ಮಾತು ರುಚಿ ಇಲ್ಲ. ಆದರೆ ಅವರಿಗೆ ದೆವ್ವ ಈ ಜನಕ್ಕೆ ಎಷ್ಟು ನಿಜ ಎಂಬುದನ್ನು ನೋಡಿ ಆಶ್ಚರ್ಯವಾಯಿತು.

ಕರಣೀಕ: ಎಲಾ, ಆ ಮಾತು ಹಂಗಿರಲಿ. ಕೊಳ್ಳಿದೆಯ್ಯ ಹಾಳಾಯ್ತು. ಪೀಠಕ್ಕೆ ಯಾರೋ ಬಂದಿದ್ದಾನಂತೆ. ಏನು ಸಮಾಚಾರ?

ರಂಗ: ಅಪ್ಪಾ ಶಿವಪ್ಪ, ಕೊಳ್ಳಿದೆಯ್ಯಾನ ಇಲ್ಲಿ ಬಯ್ಬೇಡ. ಊರಾಗೆ ಬಯ್ದರೆ ತಪ್ಪಿಲ್ಲ. ಇಲ್ಲಿ ಬೈದದ ಕೇಳಿ ಅದು, ಏನಂದೆ ಅಂತ ಬಂದರೆ ತಂಟೆ.

ವೀರಣ್ಣ: ಆದರ ಮನೇಗೆ ಬಂದು ಅದನ್ನ ಬಯ್ಯಬಾರದು ಅಲ್ಲ?

ಕಲ್ಲ: ಎಲ್ಲ್ಯೂ ಬಯ್ಯಾಬಾರ್ದು ಒಡೇರೆ. ನಿಮ್ಮ ಸಹವಾಸ ಬ್ಯಾಡಾಂತಿರಬೇಕು. ದೆಯ್ಯನ್ ಕಿವಿ ಬಾಳ ಉದ್ದ.

ಕರಣೀಕನಿಗೆ ಇವರು ಇಷ್ಟುಸಲ ದೆಯ್ಯ ದೆಯ್ಯ ಎನ್ನುತ್ತಿದ್ದದ್ದು ರುಚಿಸಲಿಲ್ಲ. ಆ ಮಾತನ್ನು ಮರಸುವುದಕ್ಕಾಗಿಯೆ ಅವನು ಪೀಠದ ಮಾತನ್ನು ಎತ್ತಿದ್ದನು. ಮತ್ತೆ ಈಗ, "ಪೀಠದ ಸುದ್ದಿ ಯಾರೂ ಕಾಣಿರೇನೋ?" ಎಂದನು.

ರಂಗ: ಕಂಡೀವಿ ಶಿವಪ್ಪ. ಆಗ ಗವೀಲಿ ಕುಂತಿದ್ದನಲ್ಲ ಒಬ್ಬ ಸ್ವಾಮಿ, ಅವನ ಜೊತೇಗೆ ಈಗೊಬ್ಬ ತುರುಕ ಬಂದು ಕುಂತವನಂತೆ.

ಕರಣೀಕ: ಆ ಸ್ವಾಮಿ ಇಲ್ಲ, ಈಗ ಇವನೊಬ್ಬನೇ ಇದ್ದಾನೆ ಅಂದರಲ್ಲೊ?

ರಂಗ: ಇರಬಹುದು ಶಿವಪ್ಪ; ಈ ಬೂದಿಜನಕ್ಕೇನಂತೆ, ಮನೆ ಆದ್ರೆ ನಮ್ಮದು ನಿಮ್ಮದು. ದೇವರು ಮಾಡಿದ ಗವಿ; ಯಾರಿದ್ದರೆ ಅವರದು.

ಕರಣೀಕ: ಬಂದ ಬೈರಾಗಿಗಳು ಈ ಬೇರೆ ಜಾತೀನೂ ಒಪ್ಪುತಾರೇನು?

ರಂಗ: ಅವರಿಗೆ ಜಾತಿ ಇದ್ದರಲ್ವ? ಇವನ ಜಾತಿ ಕೇಳೋದು!

ಕರಣೀಕ: ಇವನು ಬೂಂದ್ ಬೀಜದಾಗೆ ರಸಮಾಡಿಸ್ತಾ ನಂತೆಲ್ಲೊ?

ರಂಗ: ಆ್ಞ, ಆ ರಸಾನೆ ಇಷ್ಟೆಲ್ಲ ಮಾಡಿದ್ದು. ಎಲ್ಲರಿಗೂ ಕುಡಿಸಿದ; ರಾಮರಸಕ್ಕನ್ನ ಜೋರಾಗಿತ್ತು! ಮೌಲವೀಗೆ ಸಮಾನ ಇಲ್ಲ ಅಂದ್ರು ಬೂದಿಸ್ವಾಮಿಗಳೆಲ್ಲ.

ಕರಣೀಕ: ಅದೇನು ಬಗಿನೀ ಹೆಂಡಕ್ಕನ್ನ ಜೋರು ಅಂತೀಯ ರಂಗ?

ರಂಗ: ಅಯ್ಯೋ, ಶಿವಪ್ಪ, ಬಗಿನೀಹೆಂಡ ಗೌಡುಗೊಳಿಗೆ ಜೀತಕ್ಕೆ. ಸ್ವಾಮಿ ಆದೋನಿಗೆ ರಾಮರಸ, ಬೂಂದುರಸ.

೨೭

ಇಷ್ಟುಹೊತ್ತಿಗೆ ಇವರು ಕೂದುವಳ್ಳಿಯ ಚೌಡೀಬನದ ಹತ್ತಿರಕ್ಕೆ ಬಂದಿದ್ದರು. ಈ ಚೌಡೀಬನ ಎನ್ನುವುದು ದಟ್ಟವಾದ ಕಾಡು. ದಾರಿ ಬಹು ಕತ್ತಲು. ಕಲ್ಲ ಎಲ್ಲರಿಗೂ ಮುಂದಾಗಿ ನಡೆಯುತ್ತಿದ್ದನು. ದಾರಿ ಎಡಕ್ಕೆ ತಿರುಗಿತು. ಅವನು ಅದರಲ್ಲಿ ನಾಲ್ಕು ಹೆಜ್ಜೆ ಇಟ್ಟು, "ಅಯ್ಯಪ್ಪ, ಅಗೋ ನೋಡು?" ಎಂದು ಹಿಂದಿರುಗಿ ಓಡಿಬಂದನು.

ಉಳಿದವರು ತಾವು ತಾವು ಇದ್ದಲ್ಲೆ ನಿಂತರು. ಕರಣೀಕನಿಗೆ ಬಹಳ ಭಯ. ಅವನು "ಏನೋ ಅದು?" ಎಂದನು.

ಕಲ್ಲ, "ಕೊಳ್ಳಿದೆಯ್ಯ," ಎಂದನು.

ಕರಣೀಕ: ಲೋ ಕಲ್ಲ, ಏನ್ಮಾತಿದು? ಇಷ್ಟುಹೊತ್ನಲ್ಲಿ ಕೊಳ್ಳಿ ದೆಯ್ಯ ಎಲ್ಲೊ ಬರುತ್ತದೆ?

ರಂಗ: ಅದಕ್ಕೆ ಹೊತ್ತೇನು ಶಿವಪ್ಪ? ಆ ಮಾತು ನಾವಾಡ್ದಾಗ್ಲೇ ಅಂದ್ಕೊಂಡೆ. ಅದರ ಕಿವಿಗೆ ಬೀಳ್ತದೆ, ಅದು ಬಂದರೂ ಬಂತೇಂತ.

ಕರಣಿಕ: ಏನ್ಮಾಡೋದು?

ರಂಗ: ಇರೋಕಡೆ ಇರೋದಪ್ಪ. ಅದೂ ಬೆದರಿಸಿದ ಹಂಗೆ ಮಾಡಿ ತನ್ನ ಹಂಗೆ ಹೋಗ್ತದೆ.

ಇರುವ ಕಡೆ ಇರಿ ಎಂದು ಹೇಳಬೇಕಾಗಿರಲಿಲ್ಲ; ಯಾರಿಗೂ ಕಾಲು ಆಡುತ್ತಿರಲಿಲ್ಲ. ವೀರಣ್ಣ ಈ ಜನರ ಭಯವನ್ನು ತಿಳಿದನು; ತಾನು ಮುಂದಕ್ಕೆ ನಡೆದು ಕಲ್ಲನ ಪಕ್ಕದಲ್ಲಿ ಹೋಗಿ ನಿಂತನು.

ಮುಂದೆ ಐವತ್ತು ಗಜದಲ್ಲಿ ಯಾರೋ ನಿಂತಿರಬಹುದು: ಕೈಯಲ್ಲಿ ಒಂದು ಕೊಳ್ಳಿ. ಕತ್ತಲಲ್ಲಿ ಮತ್ತೇನೂ ಕಾಣುವಂತಿರಲಿಲ್ಲ. ವೀರಣ್ಣ, "ಯಾರಾದರೂ ಪ್ರಯಾಣಿಕರಿರಬಹುದೊ? ನಮ್ಮ ಕಡೆ ಬರತಾ ಇಲ್ಲ," ಎಂದನು.

ಕಲ್ಲ: ಅಯ್ಯೊ, ಇತ್ತ ಓಡಿಬರ್‍ತಾ ಇತ್ತು. ಅದಕ್ಕೇ ನಾನು ಕೂಗಿಕೊಂಡಿ.

ಕರಣೀಕ: ಈಗ ಏನು ಮಾಡೋಣ?

ವೀರಣ್ಣ: ಮುಂದೆ ಹೋಗಿ ನೋಡೋಣ.

ಕರಣೀಕ: ಅಣ್ಣಾವರೆ, ಪರೀಕ್ಷೆ ಬೇಡ.

ರಂಗ: ಹಂಗಾದ್ರೆ ನಿಂತೇ ಬಿಡೋಣೆ ಶಿವಪ್ಪ? ಅಯ್ಯೊ ನಮ್ಮಪ್ಪ, ಕೊಳ್ಳಿದೆಯ್ಯ ಇಲ್ಲದ ಕಾಡೈತಾ? ಬನ್ನಿ ಸೋಮಿ ಹೋಗೋಣ.

ಕರಣೀಕ: ಏನಂತೀಯೊ ಸಗುನ?

ಸಗುನ: ಅದೇನ್ಮಾಡ್ತದೆ ದಣಿಗೋಳೆ? ಕಾಣದಂಗೆ ನಡೀರಿ ಪಕ್ಕಕ್ಕೆ ಹೋಗ್ತದೆ.

ಕರಣೀಕ: ಹಂಗಾರೆ ನೀ ಮುಂದೆ ನಡಿ. ಹೆಗ್ಗಡಿತಿಯೋರು ಹೇಳಲಿಲ್ಲವೇನೊ, ನೀನು ಎಲ್ಲರನ್ನೂ ಕರಕೊಂಡು ಹೋಗಬೇಕೂ ಅಂತ?

ಸಗುನ: ಆಗಲಿ ನನ್ನೊಡ್ಯಾ. ಬನ್ನಿ ಹೋಗುವ.

ಹೀಗೆಂದು ಸಗುನ ಮುಂದೆ ನಡೆದನು. ಉಳಿದವರು ಅವನನ್ನು ಹಿಂಬಾಲಿಸಿದರು. ಅದಕ್ಕೆ ತಕ್ಕಂತೆ ಕೊಳ್ಳಿಯೂ ದಾರಿಯಲ್ಲಿ ಮುಂದು ಮುಂದಕ್ಕೆ ನಡೆಯುತ್ತಿತ್ತು. ಯಾರಿಗೂ ಅಷ್ಟೇನೂ ಧೈರ್ಯವಿಲ್ಲ. ವೀರಣ್ಣ ಮಾತ್ರ, "ಇದು ಒಂದೇ ಸಮನಾಗಿ ಮುಂದಕ್ಕೆ ಹೋಗುತ್ತಿದೆ. ಯಾರೋ ನಡೆಯುತ್ತಿರಬೇಕು. ಆದರೆ ಈ ಹೊತ್ತಿನಲ್ಲಿ ಇದೇ ದಾರಿಯಲ್ಲಿ ಬೇರೆ ಯಾರು ಒಬ್ಬರೇ ಹೋಗುವವರು?" ಎಂದುಕೊಂಡನು.

ಅಷ್ಟರಲ್ಲಿ ಕೊಳ್ಳಿ ಇದ್ದಕಡೆಯಿಂದ ಏನೊ ಕೂಗು ಕೇಳಿಸಿತು. ಇವರು ಅತ್ತ ನೋಡಿದರೆ ಕೊಳ್ಳಿ ಇವರ ಕಡೆಗೆ ರಭಸದಿಂದ ಸಾಗಿ ಬರುತ್ತಿರುವುದು ಕಂಡಿತು.

ಸಗುನ ಒಂದು ಹೆಜ್ಜೆ ಹಿಂದಕ್ಕಿಟ್ಟನು. ಕಲ್ಲ ಹೆಜ್ಜೆಯ ಲೆಕ್ಕ ಮಾಡಲಿಲ್ಲ: ಹಿಂದಕ್ಕೇ ಓಡಿದನು. ರಂಗ, "ಅಣ್ಣಾವರೆ, ಒಟ್ಟಾರೆ ನಿಂತುಕೊಳ್ಳಿರ. ಅದಕ್ಕೆ ದಾರಿ ಕೊಡಿರ," ಎಂದನು. ವೀರಣ್ಣ, "ರಾಮರಾಮ, ನೀನೇ ಗತಿ," ಎಂದುಕೊಂಡನು.

ಕೊಳ್ಳಿ ತೀರ ಹತ್ತಿರಕ್ಕೆ ಬಂದಿತು. ಸಗುನ, 'ಏ' ಎಂದು ದರ್ಪದಿಂದ ಗರ್ಜಿಸಿದನು.

ಎಲ್ಲರೂ ಭಯದಿಂದ ಆಕಡೆ ನೋಡುತ್ತ ಇದಾರೆ, ವೀರಣ್ಣನಿಗೆ ಅದು ಯಾರೊ ಹೆಂಗಸು ಓಡಿಬರುತ್ತಿದಾಳೆ ಎಂದು ತೋರಿತು. ಅವಳು ಹತ್ತು ಗಜದಷ್ಟು ಹತ್ತಿರಕ್ಕೆ ಬಂದಾಗ ಅವನು, "ರಘುರಾಮ, ರಾಮಚಂದ್ರ," ಎಂದುಕೊಂಡು, "ಏ, ಯಾರದು ? ನಿಲ್ಲು," ಎಂದು ಕೂಗಿದನು.

ಕೊಳ್ಳಿ ಅಲ್ಲಿಯೆ ನಿಂತಿತು. ಕತ್ತಲಿಂದ ಒಂದು ಧ್ವನಿ, "ಯಾಕಪ್ಪಾ, ನಾ ಮಲ್ಲಿಗೆ," ಎಂದು ಹೇಳಿತು. ಸಗುನ ಧ್ವನಿಯನ್ನು ಗುರುತಿಸಿ ಹತ್ತಿರ ಹೋದನು. ಮಲ್ಲಿಗೆಯನ್ನು ನೋಡಿ ನಕ್ಕನು. "ಅಯ್ಯೊ ಕೈನೆ, ಹಿರೇರನ್ನ ಆದೇಸು ಭಯ ಬೀಳಿಸಿ ಬಿಟ್ಟೆ," ಎಂದನು.

೨೮

ಕೊಳ್ಳಿಯ ಪಿಶಾಚ ಮಲ್ಲಿಗೆ ಎಂದು ತಿಳಿದು ಶಿವಪ್ಪನಿಗೆ ಸ್ವಲ್ಪ ಸಂತೋಷ, ಸ್ವಲ್ಪ ಕೋಪ. ಕೋಪಕ್ಕೆ ಕಾರಣ ತಾನು ಎಂತ ಅಂಜು ಪುರಕ ಎಂದು ಇವರಿಗೆಲ್ಲ ಗೊತ್ತಾಯಿತಲ್ಲ ಎನ್ನುವುದು. ಅವನು ಮಲ್ಲಿಗೆಯನ್ನು ಕುರಿತು, "ಏನೇ ಇದು ನಿನ್ನ ಆಟ ? ಊರಲ್ಲಿ ಮಾಡಿದ ತಂಟೆ ಸಾಲದೂ ಅಂತ ಕಾಡಿಗೆ ಬಂದಿದ್ದೀಯಾ ?" ಎಂದನು.

ಮಲ್ಲಿಗೆ: ಏನು ಶಿವಪ್ಪ ನಾನು ತಂಟೆ ಮಾಡಿದ್ದು? ಮುಂದೆ ನಡೀತಾ ಇದ್ದಿನಿ, ಯಾತರದೊ ತುಳಿದಿನಿ. ಮಿಲಮಿಲ ಅಂತು. ಭಯ ಬಿದ್ದು, ನೀವಿದ್ದೀರಲ್ಲಾ ಅಂತ ಹಿಂದಕ್ಕೆ ಓಡಿ ಬಂದಿನಿ.

ರಂಗ: ಒಳ್ಳೇ ಓಡಿಬಂದಿ ಅವ್ವ. ನೀ ಕೊಳ್ಳಿದೆಯ್ಯಾಂತ ನಾವು ಥರಥರ ನಡುಗಿದಿವೇ?

ಮಲ್ಲಿಗೆ: ನಾ ಯಾಕೆ ದೆಯ್ಯ ಆಗ್ಲಿ? ನೀನಾಗು ದೆಯ್ಯ!

ಕರಣೀಕ: ಲೇ, ಎಷ್ಟ್ ಮಾತಾಡ್ತಿ? ಸಾಕು ಬಿಡು.

ಮಲ್ಲಿಗೆ: ಊ್ಞ, ದೆಯ್ಯ ಅಂತೆ ದೆಯ್ಯ.

ಕರಣೀಕ: ದೆಯ್ಯ ಆಗೋದು ಬ್ಯಾಡ ಅನ್ನೋಳು ಯಾಕೆ ಕಾಡ ನಡೀತಿದ್ದಿ?

ಮಲ್ಲಿಗೆ: ನನ್ನ ಯಾಕೆ ತಿರಗ ತಿರಗ ದೆಯ್ಯ ಮಾಡ್ತೀರಿ ಶಿವಪ್ಪ? ನಾನೂ ನಗರಕ್ಕೆ ಹೊಂಟೇನಿ. ನಿಮ್ಮ ಜೊತೀಗೆ ಬರ್ತೀನಿ.

ಕರಣೀಕ: ಯಾಕೆ ನೀನು ನಗರಕ್ಕೆ?

ಮಲ್ಲಿಗೆ: ನಾ ನಗರ ನೋಡ್ಬೇಕು.

ಕರಣೀಕ: ನಗರ ನೋಡೋ ಜಾಣೆ ಜೊತೀಲಿರಬೇಕು. ಮುಂದ್ಯಾಕೆ ಹೋದಿ?

"ಜೊತೀಗೆ ಹೊಂಟಿದ್ದರೆ ನೀವು ನನ್ನ ಕರತರ್ತಿದ್ದಿರಾ ಶಿವಪ್ಪ? ಹೆಗ್ಗಡಿತಿಯೋರ್ಗೆ ಒಪ್ಪಿಸೋರಿ."

"ಈಗ ಮಾತ್ರ ಏನ್ಮಾಡ್ತೇನೆ. ನಡಿ ಹಿಂದಕ್ಕೆ."

"ನಾ ನಡೀಗಿಡಿಯೋದಿಲ್ಲ. ಹೆಗ್ಗಡಿತಿ ಬಂದು ಜವರನ್ನ ಕಟ್ಕೊಕೋ ಅಂತಾರೆ. ಸಗುನನ್ನ ಮದುವಿ ಆಗೋದು ಬ್ಯಾಡಾಂದ್ರೆ ನಾ ದೇಸಾಂತ್ರ ಹೋಗ್ತೀನಿ."

ರಂಗ: ಆದೇನು ಮಲ್ಲಿಗೆ, ನೀನು ಸಗುನನಿಗೆ ಅಂಟ್ಬಟಿದ್ದೀಯಾ? ನಾವೆಲ್ಲ ಇಲ್ವೆ? ಏನ್ಲಾ ಸಗುನ? ಮಾಟ ಮಾಡಿದ್ದೀಯೇನೊ?

ಸಗುನ: ಅಕ್ಕನ ಮಾತು ತಂಗೀ ಮಾತು; ಯಾಕಪ್ಪ ಹಾಸ್ಯಾವು? ನನ್ನ ಮದಿವ್ಯಾಗ್ತೀನಂತಾಳೆ: ಅವಳುಂಟು, ದಣಿಯೋರುಂಟು.

ಮಲ್ಲಿಗೆ: ಊ್ಞ, ನೀನು ದಣೀ ದಣೀ ಅಂತಾಲೇ ಇರು. ನಿನ್ನ ದಣಿ ಕತ್ತು ಕೊಯ್ತಾರೆ. ಸಾಕು ದಣೀಗಿಣಿ. ಆಯಿತು ಆಯ್ತಾರ, ಆಗಲಿಲ್ಲ ಸೋಮಾರ, ಅಂದ್ರೆ ದಣಿ ದಾರೀಗೆ ಬರ್ತಾರೆ.

ಕರಣೀಕ: ಹಂಗಾದ್ರೆ ಏನು ನೀನು ವಸ್ತಾರೆ ಹೆಗ್ಗಡತೀರನ ಬಿಟ್ಟು ನಡೆದ್ಯಾ ಹೆಣ್ಣೆ?

ಮಲ್ಲಿಗೆ: ಅದ್ಯಾಕೆ ಬಿಡ್ತೀನಿ? ನೀವು ನಗರಕ್ಕೆ ಹೊಂಟೀರಿ. ನಾ ಜೊತೆಗೆ ಬರ್ತೀನಿ. ಹೆಗ್ಗಡ್ತೀನ ಎಂತಾ ಬಿಟ್ಟೆ?

ಕರಣೀಕ: ಹಂಗಾರೆ ನಾವು ತಿರುಗಿ ಬರ್ತಾ ನೀನೂ ಬರ್ತೀಯಲ್ಲ!

ಸಗುನ: ಶಿವಪ್ಪ, ಅದು ಕಾಣದ ಹೆಣ್ಣು. ಯಾಕ ಕಾಡಿಸ್ತೀರಿ? ನಗರ ನೋಡ್ತೀನಿ ಅಂತಾಳೆ. ನೋಡ್ಲಲ್ಲ.

ರಂಗ: ಸ್ಯೆ ಸಗುನ; ನೀ ಒಳ್ಳೆ ಕಲ್ತೆ. ಹೆಗ್ಗಡಿತಿ ಮಾತು ಬೇಡ ನಿಂಗೆ? ಈ ಹಸು ಹೆಣ್ಣಿನ ಮಾತು ದೊಡ್ಡಾತು. ದ್ಯೇಸಾಂತ್ರ, ಅಪ್ಪ, ಇದೇನು ಜೀತದ ಮಾತಾ? ಎಲ್ಲಿಗೆ ಹೋಗೋದು ಜೀತ? ಹಿಡಿಸಿ ತರೋದಿಲ್ಲ? ಕಶೆ ಹೊಡೆಯೋದಿಲ್ಲ?

ಮಲ್ಲಿಗೆ ಕರಣೀಕನನ್ನು ಬಹಳ ಬೇಡಿಕೊಂಡಳು. "ನಗರ ನೋಡಬೇಕೂಂತ ಬಹಳ ಆಸೆ ಆಗ್ತದೆ. ಜೊತೇಗೆ ಬಂದ್ಬಿಡ್ತೀನಿ," ಎಂದಳು. ಕರಣೀಕನಿಗೂ ಏನೋ ಮನಸ್ಸು ಕರಗಿತು. "ಹೆಣ್ಣು ಒಬ್ಬಳೇ ಊರಿಗೆ ಹಿಂದಕ್ಕೆ ಹೋಗುವುದೆ?" ಎಂದು ಅವನು ಯೋಚಿಸಿರಬೇಕು. ಕೊನೆಗೆ ಅವನು, "ಒಳ್ಳೇದು. ನಗರಕ್ಕೆ ಬಾ. ಜೊತೇಲೆ ಹಿಂದಕ್ಕೆ ಬಂದು ಬಿಡು" ಎಂದನು.

ಮಲ್ಲಿಗೆ ಉತ್ತರ ಹೇಳಲಿಲ್ಲ. ಎಲ್ಲರೂ ಮುಂದಕ್ಕೆ ನಡೆದರು. ಅಲ್ಲಿಂದ ಇನ್ನೂರು ಗಜದಲ್ಲಿ ಒಂದು ಎಮ್ಮೆ ಸತ್ತುಬಿದ್ದಿತ್ತು. ಅದನ್ನು ತುಳಿದೇ ಮಲ್ಲಿಗೆ ಭಯಪಟ್ಟು ಹಿಂದಕ್ಕೆ ಓಡಿದ್ದಳು. ಸ್ವಲ್ಪದರಲ್ಲೆ ಮೆಲ್ಲನೆ ಕತ್ತಲು ಹರಿಯಿತು. ಎಲ್ಲರಿಗೂ ಎರಡು ಗಳಿಗೆಯ ಹಿಂದಿನ ತಮ್ಮ ಭಯವನ್ನು ನೆನೆದುಕೊಂಡು ನಗೆ ಬಂದಿತು. ಕರಣೀಕನೂ ನಕ್ಕನು. ಆಮೇಲೆ ಪ್ರಯಾಣ ಸಂತೋಷವಾಗಿಯೆ ನಡೆಯಿತು. ನಾಲ್ಕು ದಿನ ದಾರಿ ನಡೆದು ಇವರು ಬಿದನೂರನ್ನು ಮುಟ್ಟಿದರು.

೨೯

ಬಿದನೂರನ್ನು ಮುಟ್ಟಿ ಶಿವಪ್ಪ ಮೈಸೂರಿನ ನಿಯೋಗಿಗಳನ್ನು ಮೊದಲು ತಾನು ವಾಡಿಕೆಯಾಗಿ ಇಳಿದುಕೊಳ್ಳುತ್ತಿದ್ದ ಮುದುಕಿಯ ಮನೆಗೆ ಕರೆದುಕೊಂಡು ಹೋದನು. ಬಂದ ಕೆಲಸವನ್ನು ಆದಷ್ಟು ಬೇಗನೆ ಮುಗಿಸಬೇಕೆಂದು ವೀರಣ್ಣ ಸೂರಪ್ಪ ಬಯಸುತ್ತಿದ್ದರು. ಆದ್ದರಿಂದ ಶಿವಪ್ಪ ಒಡನೆಯೇ ನೇಮಯ್ಯನ ಮನೆವಾರ್ತೆಗೆ ಸಗುನನ ಕೈಯಲ್ಲಿ ಒಂದು ಚೀಟಿಯನ್ನು ಕಳುಹಿಸಿದನು. "ಅಯ್ಯಾ ಅವರನ್ನ ಮೈಸೂರಿನ ಹಿರೇರು ಯಾವಾಗ ಕಾಣಬಹುದು ತಿಳಕೊಂಡು ಬರಬೇಕು ಸಗುನ," ಎಂದು ಹೇಳಿದನು. ಅವನು ಬರುವ ವೇಳೆಗೆ ವೀರಣ್ಣ ಸೂರಪ್ಪ ಇವರ ಸ್ನಾನ ಊಟಕ್ಕೆ ಹತ್ತಿರದ ಹಾರುವರ ಮನೆಯಲ್ಲಿ ಏರ್ಪಾಡು ಮಾಡಿದನು.

ನೇಮಯ್ಯನ ಮನೆವಾರ್ತೆ, "ಯಜಮಾನರು ಇವರನ್ನು ಈಗಲೆ ನೋಡಬಲ್ಲರು. ದಾರಿ ನಡೆದು ಸಾಕಾಗಿದ್ದರೆ ಆಮೇಲೆ ಬೇಕಾದರೆ ಬರಬಹುದು. ಇಲ್ಲವಾದರೆ ಒಡನೆಯೇ ಬರಬಹುದು," ಎಂದು ಹೇಳಿ ಕಳುಹಿಸಿದನು. ವೀರಣ್ಣ, "ಈಗಲೆ ಹೋಗೋಣ," ಎಂದು ಹೇಳಿದ್ದರ ಮೇಲೆ ಎಲ್ಲರೂ ಹೊರಟು ನೇಮಯ್ಯನ ಮನೆಗೆ ಬಂದರು.

ಇವರು ಅಲ್ಲಿಗೆ ಬರುವ ಹೊತ್ತಿಗೆ ಸರಿಯಾಗಿ ಆ ಮನೆಯಿಂದ ಶಾಂತವ್ವ ಅರಮನೆಗೆ ಹೋಗಲು ಹೊರಟಿದ್ದಳು. ಪಂಜಿನ ಜನ, ಹಿಂದೆ ಒಬ್ಬ ಮುಂದೆ ಒಬ್ಬ, ದೂರಹಲ್ಲಿದ್ದರು. ಹಿಂದಿನ ಪಂಜಿನವನ ಜತೆಗೆ ಎರಡು ಆಳು ಇದ್ದರು. ಮಧ್ಯೆ ಶಾಂತವ್ವನ ಬದಿಯಲ್ಲಿ ಜತೆಗೆ ಕೆಂಚವ್ವೆ ಇದ್ದಳು.

ಇವರೆಲ್ಲ ಮುಂದಕ್ಕೆ ಸಾಗುವವರೆಗೆ ಶಿವಪ್ಪ, ವೀರಣ್ಣ, ಸೂರಪ್ಪ, ಪಕ್ಕಕ್ಕೆ ನಿಂತಿದ್ದು ಇವರು ಮುಂದರಿದ ಮೇಲೆ ಬಾಗಿಲ ಬಳಿಗೆ ಬಂದರು. ನೇಮಯ್ಯ ಮಗಳನ್ನು ಕಳುಹಿಸುವುದಕ್ಕೆ, ಇವರನ್ನು ಬರಮಾಡಿಕೊಳ್ಳುವುದಕ್ಕೆ, ಎಂದು ಬಾಗಿಲಲ್ಲಿ ನಿಂತಿದ್ದನು. ಶಿವಪ್ಪನನ್ನೂ ಜೊತೆಯ ಇವರನ್ನೂ ಕಂಡು "ಬನ್ನಿ, ಶಿವಪ್ಪ, ಬರಬೇಕು ಯಜಮಾನರೆ," ಎಂದು

ಮೂವರನ್ನೂ ನಗೆ ಮುಖದಿಂದ ಬರಮಾಡಿಕೊಂಡನು. ಇವರೆಲ್ಲರೂ ಒಳಕ್ಕೆ ಹೋದರು.

ಮನೆ ತಕ್ಕಷ್ಟು ದೊಡ್ಡದು. ದೊಡ್ಡತೊಟ್ಟಿ; ಸುತ್ತ ಜಗಲಿ; ಅದರಲ್ಲಿ ಉತ್ತರದ ಬಲಮೂಲೆಯಲ್ಲಿ ದೊಡ್ಡ ಒಂದು ಬಿಳಿಯ ಕಂಬಳಿ ಹಾಸಿತ್ತು; ಅದರ ಮೇಲೆ ಒಂದು ರತ್ನ ಕಂಬಳಿ. ಗೋಡೆಗೆ ಒರಗಿಸಿ ಒಂದು ಕಡೆಗೆ ಮೂರು, ಇನ್ನೊಂದು ಕಡೆಗೆ ಮೂರು, ದಿಂಬು ಇದ್ದವು. ಇವಕ್ಕೆ ಎದುರಾಗಿ ಉದ್ದನೆಯ ಎರಡು ಸುರುಳು ದಿಂಬು ಇದ್ದವು. ನೇಮಯ್ಯ ಅತಿಥಿಗಳನ್ನು ಒಯ್ದು ರತ್ನ ಕಂಬಳಿಯ ಮೇಲೆ ಕುಳ್ಳಿರಿಸಿದನು. ಸೇವಕನೊಬ್ಬನು ತಟ್ಟೆಗಳಲ್ಲಿ ಹಾಲು ಹಣ್ಣು, ತುಪ್ಪ, ಬೆಲ್ಲ, ಎಲೆ ಅಡಕೆ ಕಾಯಿ ಪತ್ರೆಗಳನ್ನು ತಂದು ಇವರೆದುರಿಗೆ ಇರಿಸಿದನು. ನೇಮಯ್ಯ, "ತೆಗೆದು ಕೊಳ್ಳಬೇಕು," ಎಂದನು. ಇವರು, "ಈಗತಾನೆ ಎಲ್ಲ ಆಯಿತು," ಎಂದು ಎರಡು ಏಲಕ್ಕಿಕಾಯಿ ಚೂರು ಅಡಕೆಯನ್ನು ತೆಗೆದುಕೊಂಡು ಸತ್ಕಾರವನ್ನು ಸ್ವೀಕರಿಸಿ ಮುಗಿಸಿದರು.

ನೇಮಯ್ಯ ಕರಣೀಕನಿಗೆ, "ನೀವೆಲ್ಲ ಈಗತಾನೆ ಬಂದಿರಂತೆ," ಎಂದು ಹೇಳಿದನು.

ಕರಣೀಕ ನೇಮಯ್ಯನಿಂದ ವಾಡಿಕೆಯಾಗಿ ಸ್ವತಃ ಇಷ್ಟು ಮರ್ಯಾದೆ ಪಡೆಯುತ್ತಿದ್ದವನಲ್ಲ. ಹೊರಗಿನ ಜನವನ್ನು ಕರೆತಂದಿದ್ದನಾದದರಿಂದ ತನಗೆ ಈ ಗೌರವ ದೊರೆತಿದೆಯೆಂದು ಅವನು ಬಲ್ಲನು. ಅವನು ನೇಮಯ್ಯನ ಮಾತಿಗೆ, "ಹೌದು! ಅಯ್ಯನವರೆ," ಎಂದು ಉತ್ತರ ಕೊಟ್ಟನು.

ನೇಮಯ್ಯ ವೀರಣ್ಣನನ್ನು ಕುರಿತು, "ತಾವು ವಸ್ತಾರೆಗೆ ಬಂದದ್ದು ಯಾವಾಗ?" ಎಂದನು.

ವೀರಣ್ಣ: ನಾಲ್ಕು ದಿನ ಆಯಿತು.

ನೇಮಯ್ಯ: ಪಟ್ಟಣದಿಂದ ದಯಮಾಡಿಸಿದೀರಂತೆ; ಅರಸರ ಪರವಾಗಿ.

ವೀರಣ್ಣ: ಹೌದು, ಸ್ವಾಮಿ.

ನೇಮಯ್ಯ: ಏನು ಸಂಗತಿ, ಅಪ್ಪಣೆ ಕೊಡಬಹುದು.

ವೀರಣ್ಣ: ಗೌರಮ್ಮ ಹೆಗ್ಗಡಿತಿಯವರು ನಾವು ಬಂದ ಕೆಲಸಕ್ಕೆ ತಮ್ಮನ್ನು ಕಾಣಬೇಕೆಂದು ಸೂಚಿಸಿದರು.

ನೇಮಯ್ಯ: ಸರಿ.

ವೀರಣ್ಣ, "ಈ ಪತ್ರಿಕೆಯನ್ನು ಪರಾಂಬರಿಸಬೇಕು," ಎಂದು ನೇಮಯ್ಯನ ಕೈಗೆ ಒಂದು ಕಾಗದವನ್ನು ಕೊಟ್ಟನು. ನೇಮಯ್ಯ ಅದನ್ನು ತೆಗೆದುಕೊಂಡು ಕರಣೀಕರನ್ನು ಕುರಿತು, "ಶಿವಪ್ಪ, ನೀವು ಒಳಗೆ ಹೋಗಿ ಈ ಯಜಮಾನರಿಗೆ ಊಟದ ಏರ್ಪಾಡು ಮಾಡಬೇಕೆಂದು ಮನೆವಾರ್ತೆಗೆ ಹೇಳಿ; ಎಲ್ಲವನ್ನೂ ನೋಡಿಕೊಳ್ಳಿ. ಆ ವೇಳೆಗೆ ನಾನು ಇವರೊಂದಿಗೆ ಈ ಮಾತನ್ನು ಆಡಿರುತ್ತೇನೆ," ಎಂದನು. ಇವರು ಮಾತನಾಡುವಾಗ ತಾನು ಇರಕೂಡದು ಎಂಬುದು ನೇಮಯ್ಯನ ಉದ್ದೇಶವೆಂದು ಕರಣೀಕ ತಿಳಿದುಕೊಂಡನು. ಎದ್ದು, "ಆಯಿತು," ಎಂದು ಒಳಗೆ ಹೋದನು.

ವೀರಣ್ಣ ಕೊಟ್ಟ ಕಾಗದವನ್ನು ನೇಮಯ್ಯ ಓದಿದನು. ಅದು ಇಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿಗೆ ಸಂಬಂಧಿಸಿದ ತಮ್ಮ ಎಲ್ಲ ರಾಜ್ಯದ ನಗರ, ಪುರ, ಗ್ರಾಮಗಳ ಮತ್ತು ಗಡಿಗಳ ಸಮಸ್ತ ಅಧಿಕಾರಿಗಳಿಗೆ ಬರೆಯಿಸಿದ್ದ ಆಜ್ಞಾಪತ್ರ. "ನಮ್ಮ ರಾಜ್ಯದ ಕೆಲಸದ ನಿಮಿತ್ತವಾಗಿ ರಾಯಸದ ವೀರಣ್ಣ, ಸೂರಪ್ಪ ಹೊರಟಿದ್ದಾರೆ. ಗೌಡ, ಹೆಗ್ಗಡೆ ಕರಣೀಕ ಮುಂತಾಗಿ ಎಲ್ಲರೂ ಇವರಿಗೆ ದಾರಿಕೊಡಿಸಿ ಸರಿಯಾಗಿ ನೋಡಿಕೊಳ್ಳಬೇಕು," ಎಂದು ನಿರೂಪಿಸಿತ್ತು. ನೇಮಯ್ಯ, "ತಮ್ಮ ಹೆಸರು ವೀರಣ್ಣ ಎಂದು ಹೇಳಿದಾಗಲೆ ತಾವು ರಾಯಸದ ವೀರಣ್ಣನವರಿರಬೇಕೆಂದು ನನಗೆ ತೋರಿತು. ತಾವು ದಯಮಾಡಿಸಿರುವುದು ತುಂಬ ಸಂತೋಷ," ಎಂದನು.

ವೀರಣ್ಣ, "ತಮ್ಮ ಅಭಿಮಾನ ದೊಡ್ಡದು," ಎಂದು ಹೇಳಿ, "ಪ್ರಭುಗಳು ಬಿದನೂರಿನ ಹಿರಿಯನಾಯಕರು ತೀರಿಕೊಂಡ ಸಂಗತಿ ಕೇಳಿ ತುಂಬ ವ್ಯಥೆಪಟ್ಟರು. ಈಚೆಗೆ ಅವರ ಕುಮಾರರಿಗೆ ಪಟ್ಟವಾದೀತು ಎಂಬ ನಿರೀಕ್ಷೆಯಲ್ಲಿದ್ದರು ಅದು ಆಗಲಿಲ್ಲವೆಂದು ತಿಳಿಯಿತು. ಅದಕ್ಕೆ ಬಹುಜನ ಬಹು ವಿಧದ ಕಾರಣಗಳನ್ನು ಹೇಳುತ್ತಿದ್ದಾರೆ. ಬಿದನೂರು

ಒಂದು ಕಾಲಕ್ಕೆ ಮೈಸೂರಿಗೆ ಕಾಣಿಕೆ ಸಲ್ಲಿಸುತ್ತಿದ್ದ ರಾಜ್ಯ. ಇತ್ತೀಚೆಗೆ ಇಲ್ಲಿಂದ ಕಾಣಿಕೆ ಬರುತ್ತಿಲ್ಲ; ಆದರೂ ಪ್ರಭುಗಳು ಈ ಸಂಸ್ಥಾನದ ವಿಷಯದಲ್ಲಿ ಪೂರ್ವದಂತೆಯೇ ಅಭಿಮಾನ ತಳೆದೇ ಇದ್ದಾರೆ. ತರುಣ ನಾಯಕರಿಗೆ ಪಟ್ಟ ಕಟ್ಟಿಸುವ ಕಾರ್ಯದಲ್ಲಿ ತಾವು ಪ್ರವೇಶಿಸುವುದು ಅವಶ್ಯಕ ಎಂದು ಕಂಡುಬಂದಲ್ಲಿ ಇಲ್ಲಿಯ ಪ್ರಮುಖರಾದ ತಮ್ಮಿಂದ ಸೂಚನೆಯನ್ನು ಬಯಸುತ್ತಾರೆ. ಇದು ಒಂದು ಸಂಗತಿ," ಎಂದನು.

ನೇಮಯ್ಯ : ಅಪ್ಪಣೆ.

ವೀರಣ್ಣ : ಈಗಿನ ಸ್ಥಿತಿಯಲ್ಲಿ ಮೈಸೂರಿಗೆ ದಕ್ಷಿಣದಿಂದ, ಉತ್ತರ ದಿಂದ, ಹಗೆಗಳ ಶಂಕೆ ಇದೆ; ಬಿದನೂರಿಗೆ ಉತ್ತರದಿಂದ ಹಗೆಗಳ ಶಂಕೆ ಇದೆ. ಪೂರ್ವದ ಸಂಬಂಧದಂತೆ ಮರಳಿ ನಡೆದುಕೊಂಡರೆ ಎರಡು ಸಂಸ್ಥಾನಕ್ಕೂ ಕ್ಷೇಮ. ಈ ವಿಷಯವನ್ನು ಕುರಿತು ಮಾತನಾಡುವುದಕ್ಕೆ ನಾಯಕ ಕುಮಾರರು ಪಟ್ಟಣಕ್ಕೆ ಬಂದರೆ ಅರಸರಿಗೆ ಬಹಳ ಸಂತೋಷ ವಾಗುತ್ತದೆ. ನವರಾತ್ರಿ ಉತ್ಸವದಲ್ಲಿ ಇಷ್ಟರಾದವರು ಬಂದು ಭಾಗ ವಹಿಸುವುದು ಮೈಸೂರಿನ ಅರಮನೆಯ ಪದ್ಧತಿ. ನಾಯಕ ಕುಮಾರರು ಈಸಲ ಉತ್ಸವಕ್ಕೆ ಬಿಜಯಮಾಡಿಸಿ ಪ್ರಭುಗಳ ಮನಸ್ಸನ್ನು ಸಂತೋಷ ಪಡಿಸಬೇಕು ಎಂದು ರಾಜಕುಟುಂಬದ ಅಪೇಕ್ಷೆ.

ನೇಮಯ್ಯ : ಆಯಿತು.

ವೀರಣ್ಣ : ಇಲ್ಲಿಯ ಗಡಿಯಲ್ಲಿ ಆಂಗ್ಲ ವ್ಯಾಪಾರಿಗಳಿಗೆ ತೊಂದರೆ ಆಗಿವೆಯಂತೆ. ಸುಂಕ ತೆಗೆದುಕೊಳ್ಳುವುದಕ್ಕೆ ಪ್ರತಿಯಾಗಿ ಸಂಸ್ಥಾನದ ಅಧಿಕಾರಿಗಳು ಹೇರುಗಳನ್ನೇ ಕಸಿದುಕೊಂಡು ದರೋಡೆ ಮಾಡಿದ್ದುಂಟು ಎಂದೂ, ಆ ವಿಷಯದಲ್ಲಿ ಮಂಗಳೂರಿನ ಪರಂಗಿ ಜನ ಇಲ್ಲಿ ದೂರು ತಂದಾಗ ಇಲ್ಲಿಯ ಹಿರಿಯರು ತಾವು ಅಧಿಕಾರಿಗಳ ಪಕ್ಷವನ್ನೇ ವಹಿಸಿ ವ್ಯಾಪಾರಿಗಳಿಗೆ ಪರಿಹಾರ ಕೊಡಿಸದೆ ಕೈಬಿಟ್ಟರೆಂದೂ, ಆ ಜನ ಅರಸರಲ್ಲಿ ವಿಜ್ಞಾಪನೆ ಮಾಡಿದ್ದಾರೆ. ಇಂಥ ವಿಷಯ ಸಂಸ್ಥಾನಕ್ಕೆ ಸಂಬಂಧ ಪಟ್ಟದ್ದು; ಆದರೂ ಸುಂಕದ ಅಧಿಕಾರಿಗಳು ಹೇರು ಕಸಿದುಕೊಳ್ಳುವುದು ಎನ್ನುವುದು ಅತ್ಯಾಚಾರ. ಆ ಹೇರುಗಳಿಗೆ ಬೇಲೂರಲ್ಲಿ ಸುಂಕ ತೀರಿಸಿತು ಎಂದು ಆ ಜನ ಹೇಳುತ್ತಾರೆ. ಇಂಥ ವ್ಯಾಪಾರಕ್ಕೆ ಮೈಸೂರ ಅಧಿಕಾರಿ

ಗಳು ರಕ್ಷಣೆ ಒದಗಿಸಬೇಕು. ಈ ವಿಷಯದಲ್ಲಿ ಎರಡು ಸಂಸ್ಥಾನಗಳ ಮಧ್ಯೆ ಒಂದು ವ್ಯವಸ್ಥೆ ಏರ್ಪಡುವುದು ಒಳ್ಳೆಯದು. ಈ ಭಾಗವನ್ನೂ ಇಲ್ಲಿ ತಾವುಗಳು ಯೋಚಿಸಬೇಕು.

ನೇಮಯ್ಯ: ಸರಿ.

ವೀರಣ್ಣ: ಇಷ್ಟನ್ನೆ ತಮಗೆ ಅರಿಕೆ ಮಾಡುವುದಕ್ಕೆ ಎಂದು ನಾವು ಇಲ್ಲಿಗೆ ಬಂದೆವು. ಈ ಮಾತುಗಳಲ್ಲಿ ಯಾವುದನ್ನು ಅರಮನೆಯಲ್ಲಿ ತಿಳಿಸಬಹುದು, ಯಾವುದನ್ನು ತಿಳಿಸಬಾರದು, ಎಂಬ ಬಗ್ಗೆ ಎಲ್ಲವನ್ನೂ ಬಲ್ಲ ತಾವೇ ತೀರ್ಮಾನಿಸಬೇಕು. ಮುಖ್ಯವಾಗಿ ಮೈಸೂರಿಗೆ ಬಿದನೂರು ಒಂದು ಸೋದರ ರಾಜ್ಯವಾಗಿ ಜೊತೆ ಆಗಬೇಕು ಎನ್ನುವುದು ಉದ್ದೇಶ. ಈ ಉದ್ದೇಶವನ್ನು ಸಾಧಿಸುವಂತೆ ಹೇಗೆ ನಡೆಯಬೇಕೆಂದು ತಾವು ತಿಳಿಸಿದರೆ ನಾವು ಹಾಗೆ ನಡೆದುಕೊಳ್ಳುವವರು.

ನೇಮಯ್ಯ: ಮತ್ತೇನೂ ಇಲ್ಲವಲ್ಲ.

ವೀರಣ್ಣ: ಇಲ್ಲ.

ನೇಮಯ್ಯ: ರಾಜ್ಯದಲ್ಲಿ ಅವ್ಯವಸ್ಥೆಯಾಗಿದೆ, ತಾವು ಬಂದು ಸರಿಪಡಿಸಬೇಕು, ಎಂದು ಇಲ್ಲಿಂದ ಯಾರೂ ಅರಸರಿಗೆ ಪ್ರಾರ್ಥನೆ ಕಳುಹಿಸಿ ಇಲ್ಲವಷ್ಟೆ?

ವೀರಣ್ಣ: ಅಂಥ ಮಾತೇನೂ ಕಾಣಲಿಲ್ಲ.

ನೇಮಯ್ಯ: ಈ ವಿಷಯದಲ್ಲಿ ಅರಸರು ನಿರೂಪವೇನನ್ನಾದರೂ ಕಳುಹಿಸಿ ಕೊಟ್ಟಿದ್ದಾರೆಯೆ?

ವೀರಣ್ಣ: ಕಳುಹಿಸಿದ್ದಾರೆ. ಅದನ್ನು ಯಾರಲ್ಲಿ ಒಪ್ಪಿಸುವುದು ಎನ್ನುವುದು ಅಪ್ಪಣೆ ಆದರೆ ಅಲ್ಲಿ ಒಪ್ಪಿಸುತ್ತೇವೆ.

ನೇಮಯ್ಯ: ಸಂತೋಷ, ವೀರಣ್ಣನವರೆ, ಮೈಸೂರಿನ ಪ್ರಭುಗಳು ಈ ಸಂಸ್ಥಾನದ ವಿಷಯದಲ್ಲಿ ಇಂಥ ಅಭಿಮಾನ ತಳೆದಿರುವುದು ಬಹು ಸಂತೋಷ. ಮೈಸೂರಿನಲ್ಲಿ ವಿಧರ್ಮಿ ಒಬ್ಬಾತ ಅತಿ ಪ್ರಬಲನಾಗಿದ್ದಾನೆ ಎಂದು ನಾವು ಕೇಳಿದ್ದೇವೆ. ಇಂಥ ಸಮಯದಲ್ಲಿ ಜೊತೆಯ ರಾಜ್ಯವಾದ ಬಿದನೂರು ಮೈಸೂರ ರಾಜಮನೆತನಕ್ಕೆ ಒತ್ತಾಸೆ ಮಾಡುವುದು ನ್ಯಾಯವಾಗಿದೆ. ಸದ್ಯ ಇಲ್ಲಿ ನಾಯಕ ಕುಮಾರರಿಗೆ ಪಟ್ಟವಾಗಿಲ್ಲ,

ನಿಜ. ಆದರೆ ಪ್ರಭುಗಳು ಈ ವಿಷಯವಾಗಿ ತೊಂದರೆ ತೆಗೆದುಕೊಳ್ಳ ಬೇಕಾದದ್ದಿಲ್ಲ. ವಿಚಾರ ಇಷ್ಟರಲ್ಲೆ ಸರಿಹೋಗುತ್ತದೆ. ಮೈಸೂರಿಗೆ ಕಾಣಿಕೆ ಸಲ್ಲಿಸುವ ಮಾತು, ನಾಯಕರು ಪಟ್ಟಣಕ್ಕೆಉತ್ಸವಕ್ಕೆ ದಯ ಮಾಡಿಸುವ ಮಾತು, ತಾವು ನಮ್ಮ ಒಡತಿಯವರ ಮತ್ತು ಅವರ ಕುಮಾರರ ಸನ್ನಿಧಿಯಲ್ಲಿ; ಪ್ರಸ್ತಾಪ ಮಾಡಬಹುದು. ಮಂಗಳೂರಿನ ಪರಂಗಿ ಜನ ಹೊತ್ತಿರುವ ದೂರಿನ ವಿಷಯದಲ್ಲಿ ಕೆಲವು ತಿಂಗಳ ಹಿಂದೆ ಅವರ ಪ್ರತಿನಿಧಿ ಒಬ್ಬಾತ ಇಲ್ಲಿಗೆ ಬಂದದುಂಟು. ನಾವು ಸಂಗತಿಯನ್ನೆಲ್ಲ ವಿಚಾರಿಸಿ ತೀರ್ಪುಕೊಟ್ಟಿದ್ದೇವೆ. ಅದರಲ್ಲಿ ಆಡಳಿತದ ತಪ್ಪು ಏನೂ ಇಲ್ಲ. ಇವರು ಕದ್ದು ಒಯ್ಯುತ್ತಿದ್ದ ಹೇರುಗಳನ್ನು ಸ್ಥಳದ ಹಿರಿಯರು ತಡೆದು ನಿಲ್ಲಿಸಿದರು. ಇದನ್ನು ರಾಣಿಯವರಲ್ಲಿ ಬಿನ್ನಯಿಸ ಬೇಕಾದದಿಲ್ಲ ಎಂದು ಕಾಣುತ್ತದೆ. ತಾವು ರಾಣಿಯವರನ್ನು ಸಂದರ್ಶಿ ಸುವ ವಿಚಾರದಲ್ಲಿ ನಾವು ಏರ್ಪಾಡು ಮಾಡಿ ತಿಳಿಸುತ್ತೇವೆ. ಪ್ರಭುಗಳ ನಿರೂಪವನ್ನು ಆಗ ಸನ್ನಿಧಿಯಲ್ಲಿ ಒಪ್ಪಿಸುವುದಾಗಲಿ.

ವೀರಣ್ಣ : ಅಪ್ಪಣೆ.

ನೇಮಯ್ಯ: ಒಳ್ಳೆಯದು. ಇನ್ನು ತಾವು ಸ್ನಾನ ಭೋಜನ ಮಾಡಿಕೊಂಡು ವಿಶ್ರಾಂತಿ ತೆಗೆದುಕೊಳ್ಳಿರಿ. ಬೆಳಗಾಗ ಕೆಲಸದ ವಿಷಯ ಯೋಚನೆ ಮಾಡಬಹುದು.

ಹೀಗೆಂದು ನೇಮಯ್ಯ, "ಶಿವಪ್ಪಾ," ಎಂದು ಕೂಗಿದನು. ಕರಣೀಕ ಒಳಮನೆಯಿಂದ ಹಿಂತಿರುಗಿ ಬಂದನು; "ಎಲ್ಲ ಏರ್ಪಾಡೂ ಆಗಿದೆ," ಎಂದು ಅರಿಕೆ ಮಾಡಿದನು. ನೇಮಯ್ಯ ಎದ್ದು ವೀರಣ್ಣ ಸೂರಪ್ಪ ಇವರಿಗೆ ಇವರು ಕುಳಿತಿದ್ದ ತೊಟ್ಟಿಯ ಒಂದು ಪಕ್ಕದ ಕೋಣೆ ಯನ್ನು ತೋರಿಸಿದನು. ಅದರಲ್ಲಿ ಎರಡು ಮಂಚ ಇದ್ದವು; ಅತಿಥಿ ಗಳಿಗೆ ಬಿಡಾರವಾಗಿಯೆ ಕೋಣೆ ಸಜ್ಜಾಗಿದ್ದದ್ದು ಕಂಡಿತು. ಅದರ ಎದುರಿಗೆ ಒಂದು ಕೋಣೆ; ಅದು ಸ್ನಾನದ ಮನೆ. ಪಕ್ಕದಲ್ಲಿ ಪೂಜೆಯ ಮನೆ, ಊಟದ ಮನೆ ಇದ್ದವು. ವೀರಣ್ಣ ಸೂರಪ್ಪ ಆ ರಾತ್ರಿಯನ್ನು ನೇಮಯ್ಯನ ಅತಿಥಿಗಳಾಗಿ ಸುಖದಿಂದ ಕಳೆದರು.

## ೩೦

ಮರುದಿನ ಬೆಳಗ್ಗೆ ನೇಮಯ್ಯ ರಾಣಿಯನ್ನು ಕಾಣಲು ಅರಮನೆಗೆ ಹೋದನು. ವೀರಮ್ಮಾಜಿ ಶಿವಪೂಜೆ ಮುಗಿಸಿಕೊಂಡು ದೊಡ್ಡ ತೊಟ್ಟಿಯಲ್ಲಿ ಕುಳಿತಿದ್ದಳು. ಹತ್ತಿರ ಒಬ್ಬ ಪರಿಚಾರಿಕೆ ನಿಂತಿದ್ದಳು. "ರಾತ್ರಿ ಚಿಕ್ಕರಾಣಿ ಅರಮನೆಗೆ ಬಂದರು," ಎಂದು ತಿಳಿಸಿದಳು.

ವೀರಮ್ಮಾಜಿ, "ನಾಯಕರು ರಾತ್ರಿ ಬಂದರೇನೇ ?" ಎಂದಳು.

"ಹೌದು ತಾಯಿ! ಆಮೇಲೆಯೇ ಚಿಕ್ಕರಾಣಿಯವರು ದಯಮಾಡಿದರು."

"ಎಲೆ, ನಾಯಕರು ಬಂದ ಸಂಗತಿಯನ್ನು ಯಾರೂ ನನಗೆ ಹೇಳಬೇಡವೆ ?"

"ಹೇಳಾಕೆ ಬಂದೆ, ಅವ್ವ" ಎಂದು ಹೇಳಿ ಪರಿಚಾರಿಕೆ ಬಾಯಿ ದುಡುಕಿದವಳಂತೆ ತಟ್ಟನೆ ಸುಮ್ಮನಾದಳು.

"ಹೇಳೋಕೇ ಬಂದವಳು ಯಾಕೆ ಹೇಳಲಿಲ್ಲ ?"

ಪರಿಚಾರಿಕೆ ಬಾಯಿ ತೆರೆಯಲಿಲ್ಲ; ಸುಮ್ಮನೆ ಇದ್ದಳು.

"ಏನೆ ಇದು ? ಮೂಗಿಯಾದೆಯಾ ?"

"ಅವ್ವ, ಯಾರೋ ಮಾತಾಡ್ತಾ ಇದ್ದರು. ಬಾಗಿಲು ಸರಿಸಿತ್ತು. ಮತ್ತೆ ಹೇಳೋದು ಅಂತ ಹೊರಟು ಹೋದೆ."

"ಮಾತಾಡುತಿದ್ದದ್ದು ಕೇಳಿತು, ಸರಿ. ಬಾಗಿಲೇನು ಸರಿಸಿತ್ತು, ನಿನ್ನ ತಲೆ! ಅವ್ವ ಅಂದಿದ್ದರೆ ಏನು ಅಂತ ಕೇಳತಿರಲಿಲ್ಲವೆ? ನೀವು ಎಲ್ಲ ಹೀಗೆಯೇ ಆಗಿಬಿಟ್ಟರಿ. ಕೆಟ್ಟ ಜಂತುಗಳು."

ಪರಿಚಾರಿಕೆ ಬಾಯಿ ಬಿಡದೆ ಇದ್ದದಕ್ಕೂ ವೀರಮ್ಮಾಜಿ ಕೋಪಿಸಿಕೊಂಡದ್ದಕ್ಕೂ ಕಾರಣ ಒಂದೆ. ನಾಯಕರು ಬಂದರೆಂದು ತಿಳಿಸುವುದಕ್ಕೆ ಪರಿಚಾರಿಕೆ ಬಂದಾಗ ರಾಣಿ ತನ್ನ ತೊಟ್ಟಿಯ ಒಳಮನೆಯಲ್ಲಿ ಕುಳಿತಿದ್ದಳು. ನಂಬಯ್ಯ ಅವಳೊಂದಿಗೆ ಮಾತಾಡುತ್ತಿದ್ದನು. ಪರಿಚಾರಿಕೆ ಒಳಗೆ ಹೋಗುವುದಕ್ಕೆ ಸಂಕೋಚಪಟ್ಟಳು; ಹಿಂತಿರುಗಿದಳು. ತಾನು ಏನೂ ತಪ್ಪು ಮಾಡುತ್ತಿಲ್ಲ, ಓಲೆಕಾರ ಹರಿಕಾರ ಇರುವಂತೆ ಈ ಸೇವಕ

ನಂಬಯ್ಯ ಹತ್ತಿರ ಇದ್ದಾನೆ, ಎಂದು ತೋರಿಸಿಕೊಳ್ಳಬೇಕು ಎಂಬುದು ರಾಣಿಯ ಅಪೇಕ್ಷೆ. ಉಳಿದವರು ಇರುವುದಕ್ಕೂ ನಂಬಯ್ಯ ಇರುವುದಕ್ಕೂ ಏನೊ ವ್ಯತ್ಯಾಸ ಇದೆ ಎಂದು ಪರಿಚಾರಿಕೆಯರೆಲ್ಲ ಬಲ್ಲರು. ಇಲ್ಲ ಎಂಬಂತೆ ನಡೆದುಕೊಂಡು ಇದೇ ಪರಿಚಾರಿಕೆ ಬೈಗಳನ್ನು ಕೇಳಿದ್ದುಂಟು.

ಈ ಪರಿಚಾರಿಕೆ ಇನ್ನೂ ಹುಡುಗಿ. ರಾಣಿಯ ಪ್ರೀತಿಯನ್ನು ಸಂಪಾದಿಸಬೇಕೆಂದು ಅವಳಿಗೆ ಆಸೆ. ಮಾತೋ ಇಕ್ಕಟ್ಟಿಗೆ ಬಂದಿತು. ಕಣ್ಣಲ್ಲಿ ನೀರು ಕೂಡಿ ಅವಳು ಮುಖ ತಗ್ಗಿಸಿಕೊಂಡು ನಿಂತಳು.

ಇಷ್ಟುಹೊತ್ತಿಗೆ ಸೇವಕ ಬಂದು, "ನೇಮಯ್ಯನವರು ಬಂದಿದಾರೆ," ಎಂದನು. ರಾಣಿ, "ಬರಬಹುದು ಎನ್ನು," ಎಂದು ಅಪ್ಪಣೆ ಮಾಡಿದಳು. ಅವನು ಹೋಗಿ ತಿಳಿಸಿದ್ದರ ಮೇಲೆ ನೇಮಯ್ಯ ಒಳಕ್ಕೆ ಬಂದು ಬಾಗಿಲ ಬಳಿಯಿಂದಲೇ ನಮಸ್ಕಾರ ಮಾಡಿದನು. ರಾಣಿ ಪ್ರತಿಯಾಗಿ ಕೈಮುಗಿದು "ಬನ್ನಿ, ನೇಮಯ್ಯ," ಎಂದು ಕರೆದು ಹತ್ತಿರ ಒಂದು ಸ್ಥಳವನ್ನು ತೋರಿಸಿದಳು.

ನೇಮಯ್ಯ ಮರ್ಯಾದೆಯಿಂದ ನಡೆದು ಬಂದು ಮತ್ತೆ ರಾಣಿಗೆ ಕೈಮುಗಿದು ಅವಳು ತೋರಿಸಿದ ಸ್ಥಳದಲ್ಲಿ ಕುಳಿತನು. ರಾಣಿ, "ಏನ ನೇಮಯ್ಯ ಬಹಳ ಮುಂದಾಗಿ ಬಂದಿದೀರಿ," ಎಂದಳು.

ರಾಣಿಯ ಮುಖದ ರೀತಿಯಿಂದ ಅವಳು ಏನೋ ಅಸಮಾಧಾನ ದಲ್ಲಿದ್ದಾಳೆ ಎಂಬುದನ್ನು ಕಂಡು ನೇಮಯ್ಯ, "ಅರಿಕೆ ಮಾಡುವ ವಿಚಾರ ಇತ್ತು, ಅನುಕೂಲವಲ್ಲದಿದ್ದರೆ ಮತ್ತೆ ಬರುತ್ತೇನೆ," ಎಂದನು.

ವೀರಮ್ಮಾಜಿ: ನಮ್ಮ ಅನುಕೂಲ ಯಾತರದು ನೇಮಯ್ಯ, ಅದನ್ನು ಯಾರು ಕೇಳತಾರೆ? ಏನು ಹೇಳೋಕೆ ಬಂದಿರೋ ಹೇಳಿ, ಕೇಳೋಣ.

"ಅವಸರ ಇಲ್ಲ, ಅಮ್ಮಾಜಿಯವರೆ. ಬೇಸರ ಬೇಡವಲ್ಲ."

"ನೀವು ಒಬ್ಬರು ಬೇಸರ ಬೇಡ ಅಂದರೆ ಈ ಬಾಳಿಗೇನಾಯ್ತು ನೇಮಯ್ಯ? ಕಣ್ಣಂತೆ ನೋಡಿಕೊಳ್ಳತಿದ್ದ ನಾಯಕರನ್ನ ನೀಗಿಕೊಂಡೆವು. ಕಣ್ಣಂತೆ ಕಾಯಬಹುದು: ಆ ಮಗನಿಗೆ ನಾವು ಒಲ್ಲದೆ ಹೋದೆವು. ತಿಂಗಳು ಅಲೆಯತಾರೆ, ಮೂರು ದಿನಕ್ಕೆ ಬರತಾರೆ. ಅವರು ಹೋಗೋ

ದನೂ ನಾವು ಕಾಣೆವು ಬರೋದನೂ ನಾವು ಕಾಣೆವು. ನಾಯಕರು ಹಾಕಿದ ಪಂಕ್ತಿ ನೋಡಿ ಮನೆ ಸೊಸೆ ಅದನ್ನೇ ಮಾಡತಾ ಇದಾರೆ."

"ಹರೆಯದ ಮಕ್ಕಳು; ಅರಿಯರು; ಅಮ್ಮಾಜಿ ಬಹಳ ಬೇಸರ ಮಾಡಿಕೊಳ್ಳಬಾರದು."

"ಬೇಸರಾನ ಮಾಡಿಕೊಳ್ಳೋದು ಏನು ನೇಮಯ್ಯ? ಸಾಕು ಅಂದರೂ ತಾನೆ ಆಗತದೆ. ಹೆಸರಿಗೆ ರಾಣಿ ನಾವು: ನಿಜಕ್ಕೆ ಈ ಚತ್ರದ ಅಜ್ಜಿಯಾದೆವು."

"ಹೌದು ಹಾಗೆ ಅನ್ನಿಸುವುದೆ. ಕಿರಿಯವರು ಇನ್ನು ಸ್ವಲ್ಪ ಅನುಸರಿಸಿ ನಡೆದುಕೊಳ್ಳಬೇಕು."

ಈಗ ನೋಡಿ ನಿಮ್ಮ ಮಗಳು ಅರಸ ಊರಿಗೆ ಬಂದರು ಅಂತ ರಾತ್ರಿ ಇಲ್ಲಿಗೆ ಬಂದರು. ಏನು ಎತ್ತ ಅಂತ ಅವರನ್ನ ಕೇಳೋರು ಇಲ್ಲ. ಅತ್ತೆ ಒಲ್ಲಳು ಅಂತ ಹೆಸರು. ಅರಮನೆ ಕಿರುಮನೆ, ಒಂದೇ ಆಚ್ಚಾಯ್ತು. ನೀವು ನಮ್ಮನ್ನ ಏನೆಂದುಕೊಳ್ಳಬೇಕು?"

"ನಿಮ್ಮ ಸೊಸೆ ನಿಮ್ಮ ಮನೆ ಮಗಳು ಅಂದುಕೊಳ್ಳುತೇನೆ, ಒಡತಿಯೋರೆ. ನಿಮ್ಮ ಹೊಟ್ಟೇಲಿ ಹುಟ್ಟಿದ್ದು ಅಂತ ನೀವು ನೋಡಿ ಕೊಳ್ಳತೀರಿ. ಮಗಳು ಮಾಡಿದ್ದರೆ ತಪ್ಪಿಲ್ಲ. ಸೊಸೆ ಮಾಡಿದರೂ ಅಷ್ಟೆ. ತಿಳಿಯದ ಮಕ್ಕಳು ಅಂತ ಮನ್ನಿಸತೀರಿ."

"ಮನ್ನಿಸಬಹುದು; ಅಂದರೆ ಮನ್ನಿಸಿದಳೆ ಅಂತ ಕೇಳೋರಿಲ್ಲ."

ನೇಮಯ್ಯ ಇದಕ್ಕೆ ಏನು ಉತ್ತರ ಹೇಳಬೇಕಾಗಿತ್ತೊ. ಅಷ್ಟರಲ್ಲಿ ನೀಟಾಗಿ ಬಟ್ಟೆಹಾಕಿಕೊಂಡಿದ್ದ ಪ್ರಾಯದ ಮನುಷ್ಯ ಒಬ್ಬ ಬಾಗಿಲಿಂದ ಒಳಗೆ ಬಂದನು. ಅವನು ನಂಬಯ್ಯ. ಆಗ್ಗೆ ಅವನಿಗೆ ಸುಮಾರು ಮೂವತ್ತು ವರ್ಷ ವಯಸ್ಸು. ಆಳು ಸ್ವಲ್ಪ ಎತ್ತರ; ಅದಕ್ಕೆ ತಕ್ಕಂತೆ ತುಂಬಿದ ಮೈ ಮುಖ ಅಂದವಾಗಿತ್ತು. ಆದರೆ ಅದು ಒಂದು ತೆರದ ಹೆಣ್ಣ ಅಂದ. ಮುಖ ಚೌಕ; ಕಣ್ಣು ಅಗಲ, ಸ್ವಲ್ಪ ಉದ್ದ; ಬಾಯಿ ಸ್ವಲ್ಪ ದೊಡ್ಡದು; ತುಟಿ ದಪ್ಪ. ಕಪ್ಪನೆಯ ತಲೆಗೂದಲು, ಹುಬ್ಬು, ಮೀಸೆ. ಆಳಿನ ಮೂಲಕ ತಿಳಿಸದೆ ಒಳಕ್ಕೆ ಬಂದುಬಿಟ್ಟವನು ನೇಮಯ್ಯನನ್ನು ಕಂಡು ಒಳಗೆ ಬರುವುದೆ ಬಿಡುವುದೆ ತಿಳಿಯದೆ ಬಾಗಿಲ ಬಳಿ ನಿಂತನು.

ರಾಣಿ ನೇಮಯ್ಯನಿಗೆ, "ನೋಡಿ ಇವ ಬರುವುದನ್ನ. ಬರಲೇ ಅಂತ ಕೇಳದೆ ಒಳಕ್ಕೆ ಬರತಾನೆ. ಇಷ್ಟೆ ನಮ್ಮ ರಾಣಿತನ. ಯಾರೇ ಕೂತಿರಲಿ, ಏನೇ ಮಾಡತಿರಲಿ, ನಾವಿರೊ ಅಲ್ಲಿಗೆ ಬೇಕಾದವರು ಬರಬಹುದು," ಎಂದಳು. ಹೀಗೆಂದವಳೆ ನಂಬಯ್ಯನಿಗೆ 'ಬಾ' ಎಂದು ಸಂಜ್ಞೆಮಾಡಿದಳು.

ದೂರುವ ನೆವದಲ್ಲಿ ಇಷ್ಟರಾದವರನ್ನು ಒಲಿಯುವ ಒಂದು ರೀತಿ ಇದು ಹೆಣ್ಣಿನಲ್ಲಿ. ನೇಮಯ್ಯ ಇದನ್ನು ಬಲ್ಲನು. ಅವನು ಪ್ರತಿ ಹೇಳಲಿಲ್ಲ. ನಂಬಯ್ಯನಿಗೆ ಇದೆಲ್ಲ ವಾಡಿಕೆ; ಅವನು ಮೆಲ್ಲನೆ ಬಂದು ಸ್ವಲ್ಪ ದೂರದಲ್ಲಿ ಕಂಬದ ಬಳಿ ಕುಳಿತನು.

ರಾಣಿಗೆ ಪ್ರತಿ ಹೇಳದಿದ್ದರೂ ನೇಮಯ್ಯ ಅವಳ ಈ ಸಲಿಗೆಯಿಂದ ಒಂದು ತೆರನ ಹೇವವನ್ನು ಅನುಭವಿಸಿದನು. ರಾಣಿ ನಂಬಯ್ಯನೊಂದಿಗೆ ಸರಸದಿಂದ ನಡೆದರೆ ಇವನಿಗೆ ಅಡ್ಡಿ ಇಲ್ಲ. ಆದರೆ, ವಯಸ್ಸಾದ ಮನುಷ್ಯ, ತಾನು ಆ ಸರಸದಲ್ಲಿ ಭಾಗಿಯಾಗುವುದು ಅವನಿಗೆ ರುಚಿಸಲಿಲ್ಲ.

## ೩೧

ಮೈಸೂರಿಂದ ನಿಯೋಗ ಬಂದಿರುವ ವಿಷಯವನ್ನು ರಾಣಿಗೆ ಅರಿಕೆ ಮಾಡಬೇಕು. ನಂಬಯ್ಯ ಇರುವವೇಳೆಗೆ ಈ ಮಾತನ್ನು ಹೇಗೆ ಎತ್ತುವುದು ಎಂದು ನೇಮಯ್ಯ ಕ್ಷಣ ಚಿಂತಿಸಿದನು. ವೀರಮ್ಮಾಜಿ ಇದನ್ನರಿತುಕೊಂಡಳು. "ಏನೋ ಹೇಳುವುದಕ್ಕೆ ಬಂದಿರಿ, ನೇಮಯ್ಯ; ಹೇಳಿರಲ್ಲ," ಎಂದಳು.

ನೇಮಯ್ಯ: ಮನೆವಾರ್ತೆ ಮುಗಿಯಲಿ. ನನ್ನ ಮಾತು ಆಮೇಲೆ ಆಗಬಹುದು.

ನಂಬಯ್ಯ: ಮನೆವಾರ್ತೆ ಬಹಳ ಇಲ್ಲ. ವಸ್ತಾರೆ ಹೆಗ್ಗಡಿತಿಯವರು ಒಡತಿಯರಿಗೊಂದು ಓಲೆ ಕಳಿಸಿದ್ದಾರೆ. ಅದನ್ನು ಆಮೇಲೆ ನೋಡಬಹುದು.

ವೀರಮ್ಮಾಜಿ: ಆಗಬಹುದಲ್ಲ; ನಿಮ್ಮಾತು ಹೇಳಿ, ನೇಮಯ್ಯ.

ನೇಮಯ್ಯ ನಂಬಯ್ಯನ ಕಡೆ ನೋಡಿ ಒಂದು ಕ್ಷಣ ತಡೆದನು. ವೀರಮ್ಮಾಜಿ, "ನಂಬಯ್ಯ ಇರಬಹುದು, ಹೇಳಿ ನೇಮಯ್ಯ; ಅವನು ಅಂತ ಬುದ್ಧಿವಂತನಲ್ಲ; ಅಂದರೂ ಉಂಡಮನೆಗೆ ಎರಡು ಬಗೆಯೋನು ಅಲ್ಲ," ಎಂದಳು.

ಇದು ಲಿಂಗಣ್ಣಯ್ಯನನ್ನು ದೂರುವ ಮಾತು, ಅವನ ಪಕ್ಷವಹಿಸಿದ ವರಮೇಲೆ ಸ್ವಲ್ಪ ಅಸಮಾಧಾನ ಕಾರುವ ಉದ್ದೇಶದಿಂದ ಆಡಿದ್ದು. ನೇಮಯ್ಯ ಇದಕ್ಕೆ ಮನಸ್ಸು ಕೊಡಲಿಲ್ಲ. ರಾಣಿಗೆ, "ಅಪ್ಪಣೆ, ಅಮ್ಮಾಜಿಯವರೆ. ಮೈಸೂರ ಅರಸರ ಕಡೆಯಿಂದ ಇಬ್ಬರು ವಾರ್ತೆ ತಂದಿದ್ದಾರೆ. ರಾಣಿಯವರನ್ನು ಕಾಣಿಸಿಕೊಳ್ಳಬೇಕು ಅಂತಾರೆ. ನಾಯಕರೂ ಜೊತೆಗಿದ್ದರೆ ಸಂತೋಷ ಎಂದರು. ಯಾವಾಗ ಕಾಣಬಹುದು, ಅಪ್ಪಣೆ ಮಾಡಿದರೆ ಅವರಿಗೆ ತಿಳಿಸುತೇನೆ," ಎಂದನು.

ವೀರಮ್ಮಾಜಿ: ಅವರು ಯಾವಾಗ ಬಂದರು? ನಮಗೆ ತಿಳೀಲಿಲ್ಲ.

ನೇಮಯ್ಯ: ನಿನ್ನೆ ಸಂಜೆ ಬಂದರಂತೆ. ರಾತ್ರಿ ಕಂಡರು. ಸಜ್ಜೆ ಹೊತ್ತು ಎಂತ ರಾತ್ರಿ ತಿಳಿಸಲಿಲ್ಲ.

ವೀರಮ್ಮಾಜಿ: ಒಳಿತು ಈಗಲೇ ಬರಲಿ. ಏನು ಸಂಗತಿ ಕೇಳಿದಿರೊ?

ನೇಮಯ್ಯ ನಿಯೋಗಿಗಳು ಬಂದಿದ್ದ ಉದ್ದೇಶವನ್ನು ಸಂಕ್ಷೇಪವಾಗಿ ಹೇಳಿ, "ಅಪ್ಪಣೆಯಾಯಿತು ಎಂದು ಅವರಿಗೆ ಹೇಳಿಕಳಿಸುತೇನೆ. ನಾಯಕರೂ ದಯಮಾಡಿದರೆ ಆದೀತು," ಎಂದನು.

ಮೈಸೂರ ಅರಸರ ಕಡೆಯಿಂದ ಬಂದ ಮಾತನ್ನು ಕೇಳುವುದಕ್ಕೆ ತನ್ನೊಂದಿಗೆ ಮಗನೂ ಇರಬೇಕು ಎಂದು ನೇಮಯ್ಯ ಸೂಚಿಸಿದ್ದು ರಾಣಿಗೆ ರುಚಿಸಲಿಲ್ಲ. ತನ್ನನ್ನು ಮಗನಿಂದ ಬೇರೆಯೆಂದು ಇವರು ಏಕೆ ಕಾಣುತ್ತಾರೆ ಎಂದು ಅವಳ ಯೋಚನೆ. ತಾನೆ ರಾಜ್ಯದ ಒಡತಿ ಎಂಬಂತೆ ನಡೆದುಕೊಂಡು ಮಗನನ್ನು ಏನೂ ಅಲ್ಲವೆಂಬಂತೆ ತಾನು ಮಾಡಿದೇನೆ ಎಂದು ವೀರಮ್ಮಾಜಿ ಬಲ್ಲಳು, ಅದು ತನ್ನ ಇಷ್ಟ, ಅದರ ಮಾತು ಇವರಿಗೇಕೆ, ಎಂದು ಅವಳ ದರ್ಪ. ಕ್ಷಣ ತಡೆದು ಅವಳು ನೇಮಯ್ಯನಿಗೆ, "ನಿಮ್ಮ ಇಷ್ಟ," ಎಂದಳು; ಪರಿಚಾರಿಕೆಯನ್ನು ತೋರಿಸಿ, "ಹೇಳಿಕಳುಹಿಸಿ," ಎಂದಳು.

ನೇಮಯ್ಯ ಪರಿಚಾರಿಕೆಗೆ, "ನಮ್ಮ ಮನೆಗೆ ಬಂದಿರುವ ಜನ ಕಾಣಿಸಿಕೊಳ್ಳಬರಬಹುದು ಎಂತ ಆಳು ಹೋಗಿ ಕರೆಯಲವ್ವ; ಅವರು ಬಂದ ಸಮಯ ನಾಯಕರು ಇಲ್ಲಿಗೆ ದಯಮಾಡಿಸಲಿ ಎಂದು ಅಮ್ಮಾಜಿಯವರು ಅಪ್ಪಣೆ ಮಾಡಿದ್ದಾರೆ; ಅರಿಕೆ ಮಾಡು," ಎಂದನು. ಹೀಗೆಂದು ಎದ್ದು "ಅಪ್ಪಣೆಯಾದರೆ ಬಾಗಿಲಲ್ಲಿದ್ದು ಆ ಹಿರಿಯರನ್ನು ಕರೆದು ತರುತ್ತೇನೆ," ಎಂದು ರಾಣಿಗೆ ಬಿನ್ನವಿಸಿ ಹೊರಬಾಗಿಲ ಕಡೆಗೆ ಹೊರಟನು.

## ೩೨

ಪರಿಚಾರಿಕೆ ಬಂದು ರಾಣಿ ಕರೆಯುತ್ತಾರೆ ಎಂದು ತಿಳಿಸಿದಾಗ ಚೆನ್ನಬಸವನಾಯಕನು ಬೆಳಗಿನ ಉಪಹಾರಕ್ಕೆ ಕುಳಿತಿದ್ದನು. ನಾಯಕನ ದಿನಚರಿ ತುಂಬ ನಿಯತವಾದದ್ದು. ಅರಮನೆಯಲ್ಲಿದ್ದಾಗ ಅವನು ಉದಯಕ್ಕೆ ಮುನ್ನಎದ್ದು ಗರಡಿಯಲ್ಲಿ ಓಜನೊಂದಿಗೆ ಸಾಧನೆ ಮಾಡುವನು. ಸಾಧನೆ ಮುಗಿದಮೇಲೆ ಸ್ವಲ್ಪ ಎಣ್ಣೆ ಹಚ್ಚಿಕೊಂಡು ಬಿಸಿನೀರಿಲ್ಲಿ ಮೀಯುವನು. ಇದಾದಮೇಲೆ, ತಂದೆ ಮಾಡುತ್ತಿದ್ದನೆಂಬ ಕಾರಣದಿಂದ ಮತ್ತು ಅರಮನೆಯ ಪದ್ಧತಿ ಆದದರಿಂದ, ಸ್ವಲ್ಪಹೊತ್ತು ದೇವರ ಮನೆಯಲ್ಲಿ ಕುಳಿತು ಶಿವಪೂಜೆ ಮಾಡುವನು. ಅದರ ನಂತರ ಉಪಹಾರ. ಈದಿನ ಅವನು ಏಳುವುದು ಸ್ವಲ್ಪ ಹೊತ್ತಾಗಿದ್ದಿತು. ರಾಣಿ ಬರಹೇಳುತ್ತಾರೆ, ನೇಮಯ್ಯ ಅಲ್ಲಿದಾರೆ, ಎಂದು ತಿಳಿದು ಅವನು ಬೇಗನೆ ಉಪಹಾರವನ್ನು ಮುಗಿಸಿದನು; ದೊಡ್ಡತೊಟ್ಟಿಗೆ ಹೋಗಲು ಅನುವಾದನು.

ಅವನು ತೊಟ್ಟಿಗೆ ಬರುವ ವೇಳೆಗೆ ವೀರಣ್ಣ ಸೂರಪ್ಪ ಇವರೊಂದಿಗೆ ನೇಮಯ್ಯ ಬಾಗಿಲಿಂದ ಒಳಕ್ಕೆ ಹೊಕ್ಕನು. ಅವರು ಮೂವರೂ ನಾಯಕನಿಗೆ ನಮಸ್ಕಾರ ಮಾಡಿದರು. ನಾಯಕ ಅವರಿಗೆ ಪ್ರತಿಯಾಗಿ ನಮಸ್ಕಾರ ಮಾಡಿದನು. ಅಲ್ಲಿಂದ ಮುಂದಕ್ಕೆ ನಡೆದು ವೀರಣ್ಣ ಸೂರಪ್ಪ ರಾಣಿಗೆ ನಮಸ್ಕಾರ ಮಾಡಿದರು.

ಅವಳು ಈ ನಮಸ್ಕಾರವನ್ನು ನೋಡಿದಂತೆ ಕಾಣಲಿಲ್ಲ. ಏನೋ ಕೋಪದಲ್ಲಿದ್ದಂತೆ ಇದ್ದಿತು. ಇದು ನಾಯಕನಿಗೆ ನೇಮಯ್ಯನಿಗೆ ಅಲ್ಲದೆ ವೀರಣ್ಣ ಸೂರಪ್ಪ ಇವರಿಗೆ ಕೂಡ ಸ್ಪಷ್ಟವಾಗಿ ಕಂಡಿತು. ಇವರೆಲ್ಲ

ತೀರ ಹತ್ತಿರಬಂದಮೇಲೆ ರಾಣಿ ಇವರಿಗೆ ಮುಖ ಕೊಟ್ಟಳು. "ಕರೆತನ್ನಿ, ನೇಮಯ್ಯ, ಕುಳ್ಳಿರಿ, ಕುಳ್ಳಿರಿ," ಎಂದಳು. ಎಲ್ಲರೂ ಬಂದು ತಕ್ಕ ಸ್ಥಳಗಳಲ್ಲಿ ಕುಳಿತರು.

ನಂಬಯ್ಯ ಕೈಯಲ್ಲಿ ಒಂದು ಕಾಗದ ಹಿಡಿದಿದ್ದನು. ಅದು ವಸ್ತಾರೆಯ ಹೆಗ್ಗಡಿತಿ ಕಳುಹಿಸಿದ ಓಲೆ ಇರಬೇಕೆಂದು ನೇಮಯ್ಯ ಗ್ರಹಿಸಿದನು. ತಾನು ಹೊರಗೆ ಇದ್ದಾಗ ಅದನ್ನು ನಂಬಯ್ಯ ಓದಿ ಹೇಳಿರಬೇಕು, ಅದರಿಂದ ರಾಣಿಗೆ ಮುಖ ಕೆಟ್ಟಿದೆ, ಎಂದು ಊಹಿಸಿದನು.

ರಾಣಿ ನಂಬಯ್ಯನಿಗೆ, "ಆ ಓಲೇನ ಅಯ್ಯನವರ ಕೈಗೆ ಕೊಡು. ನೋಡಲಿ," ಎಂದಳು. ನೇಮಯ್ಯ ಅದನ್ನು ತೆಗೆದುಕೊಂಡು ಓದಿ ನೋಡಿದನು. ಅದರ ಒಕ್ಕಣೆ ಹೀಗೆ ಇದ್ದಿತು:

"ಬಿದನೂರು ಸಂಸ್ಥಾನದ ರಾಣಿಯವರು ಅಕ್ಕ ವೀರಮ್ಮಾಜಿ ಇವರಲ್ಲಿ ವಸ್ತಾರೆಯ ಹೆಗ್ಗಡಿತಿ ಮಾಡುವ ಶರಣು. ತಮ್ಮ ಯಜಮಾನರು ಶಿವಾಧೀನರಾದ ಈಚೆಗೆ ಸಂಸ್ಥಾನದ ಮತ್ತು ನಮ್ಮ ಈ ಮಂದೆಯ ಸಂಬಂಧದಲ್ಲಿ ನಾಲ್ಕಾರು ಮಾತು ಹೆಚ್ಚು ಕಡಮೆಯಾಗಿ ನಮಗೆ ತೊಂದರೆ ಆಗಿದೆ. ಈ ವಿಷಯಕ್ಕೆ ನಾವು ಈ ಮೊದಲೆ ತಮ್ಮಲ್ಲಿ ಬಿನ್ನಹ ಮಾಡಿಕೊಂಡಿದ್ದೆವು. ಆ ಬಗ್ಗೆ ನಮಗೆ ಸರಿಯಾದ ಯಾವ ಉತ್ತರವೂ ಬಂದಿಲ್ಲ. ನಮ್ಮ ಮಂದೆಯಿಂದ ಸಂಸ್ಥಾನಕ್ಕೆ ಮುಟ್ಟಬೇಕಾದ ವರ್ಷದ ಕಾಣಿಕೆ ನಾವು ತಪ್ಪದೆ ಕ್ರಮವಾಗಿ ಕಳುಹಿಸಿದ್ದೇವೆ. ಅದನ್ನು ನಿಮ್ಮ ಕಡೆಯ ಅಧಿಕಾರಿಗಳು ತೆಗೆದುಕೊಂಡದ್ದಕ್ಕೆ ನಮ್ಮಲ್ಲಿ ಲಿಖಿತ ಇದೆ. ಹೀಗಾದರೂ ಮತ್ತೆ ಈಗ 'ಮೂರು ವರ್ಷದ ಕಾಣಿಕೆ ಬಂದಿಲ್ಲ, ಅದನು ಶೀಘ್ರದಲ್ಲಿ ಮುಟ್ಟಿಸಬೇಕು' ಎಂದು ನಿಮ್ಮ ಕಡೆಯಿಂದ ಆಜ್ಞೆಬಂದಿದೆ. ಅದನ್ನು ಸರ್ವಾಧಿಕಾರಿ ನಂಬಯ್ಯನವರ ಅಪ್ಪಣೆಯಂತೆ ಕಳುಹಿಸಿದೆಯೆಂದು ಅದರಲ್ಲಿ ಉಕ್ತವಾಗಿದೆ.

"ನಾಯಕರು ಶಿವಾಧೀನರಾದಮೇಲೆ ಈ ನಂಬಯ್ಯನವರನ್ನು ಸರ್ವಾಧಿಕಾರಿಯನ್ನಾಗಿ ಮಾಡಿದೆಯೆಂದು ನಮಗೆ ಯಾರೂ ತಿಳಿಸಿಲ್ಲ. ಇವರು ಯಾರು, ಇವರಿಗೆ ಸಂಸ್ಥಾನಕ್ಕೆ ಏನು ಸಂಬಂಧ, ಈ ಬಗ್ಗೆ ತಮ್ಮಲ್ಲಿ ವಿಶ್ವಾಸವಿಟ್ಟು ನಿರೂಪ ಕಳುಹಿಸಿಕೊಡಬೇಕಾಗಿ ಬೇಡುತ್ತೇವೆ.

"ನಂಬಯ್ಯ ಎಂಬುವರು ಸರ್ವಾಧಿಕಾರಿಗಳಾಗಿರುವುದು ನಿಜವಾದರೆ ಅವರು ಈ ಮೊದಲು ನಮ್ಮಿಂದ ಸಂದಾಯವಾದ ಕಾಣಿಕೆ ಲೆಕ್ಕದಲ್ಲಿ ಬಂದಿರುವುದನ್ನು ನೋಡಿ, ನಿಜವಾಗಿ ಸಲ್ಲಬೇಕಾಗಿರುವುದೆಷ್ಟೊ ಅಷ್ಟಕ್ಕಾಗಿ ಮಾತ್ರ ನಮಗೆ ನಿರೂಪ ಬರಸತಕ್ಕದ್ದು ಎಂದು ಅವರಿಗೆ ಅಪ್ಪಣೆ ಆಗಬೇಕು.

"ನಮ್ಮನ್ನೆಲ್ಲ ತಂದೆಯಂತೆ ನೋಡಿಕೊಳ್ಳುತ್ತಿದ್ದ ನಾಯಕರು ಶಿವನ ಸನ್ನಿಧಿಗೆ ತೆರಳಿದ ನಂತರ ನಿಮ್ಮ ಮಕ್ಕಳು ನಾಯಕ ಗದ್ದುಗೆಯನ್ನು ಏರಿ ಸಂಸ್ಥಾನವನ್ನು ಹೊರೆಯುವರೆಂದು ನಾಡು ಮಂದೆಗಳ ಗೌಡ ಹೆಗ್ಗಡೆ ಎಲ್ಲ ನಿರೀಕ್ಷಿಸುತ್ತ ಇದ್ದಿದಾರೆ. ಅವರ ಈ ಆಸೆ ಕೈಗೂಡಿಲ್ಲ. ವಯಸ್ಸಿನಿಂದ ಹಿರಿಯರಾಗಿ ವಾವೆಯಿಂದ ದೊಡ್ಡಮ್ಮ ಆದ ನಾವು ಚಿರಂಜೀವಿಗಳಾದ ನಿಮ್ಮ ಕುಮಾರರಿಗೆ ಈ ಮಾತನ್ನು ಹೇಳಿದ್ದೇವೆಂದು ತಿಳಿಸುವುದಾಗಲಿ. ಚಿಕ್ಕವಯಸ್ಸಿನಲ್ಲಿ ನಾಯಕತನದ ಹೊರೆ ಬೇಡ ವೆನ್ನಿಸುವುದು ಆಟಪಾಟದಲ್ಲಿ ಆಸೆ ಇರುವುದು ಸಹಜ. ಆದರೆ ಇದು ಈ ಸ್ಥಿತಿಯಲ್ಲಿ ಸಾಧ್ಯವಲ್ಲ. ಅವರಿಗೆ ಗದ್ದುಗೆ ಏರುವುದು ಇಷ್ಟವಿಲ್ಲದಿದ್ದರೂ ನಾಡು ಜನ ಬಯಸುತ್ತಿರುವುದರಿಂದ ಅವರು ಈ ಹೊಣೆಯನ್ನು ಒಪ್ಪಿಕೊಳ್ಳಬೇಕು.

"ತಾವಾದರೂ ತಮ್ಮ ಮಕ್ಕಳಿಗೆ ಇದೇ ಬುದ್ಧಿವಾದವನ್ನು ಹೇಳಿ ಬೇಗನೆ ಅವರಿಗೆ ಪಟ್ಟವನ್ನು ಕಟ್ಟೋಣಾಗಲಿ. ಸಂಸ್ಥಾನ ವ್ಯವಸ್ಥೆಯಿಂದ ನಡೆಯುವುದಕ್ಕೆ ಇದು ಆವಶ್ಯಕ.

"ಅಕ್ಕತನದ ಸಲುಗೆಯಿಂದ ಈ ಓಲೆಯನ್ನು ಬರಸಿದ್ದಾಗಿದೆ. ರಾಣಿಯರ ವಿಷಯಕ್ಕೆ ಇದು ಅಪಚಾರವೆನ್ನಿಸೀತು ಎಂದು ನಮಗೆ ಭಯವುಂಟು. ಆದರೂ ವಯಸ್ಸಿನಿಂದ ಹಿರಿಯರು ಎನ್ನುವುದನ್ನು ಸ್ಥಾನದ ದೃಷ್ಟಿಯಿಂದ ತಂಗಿಯಾದರೂ ವಾವೆಯಿಂದ ಅಕ್ಕ ಎನ್ನುವುದನ್ನು ಮನಸ್ಸಿಗೆ ತಂದುಕೊಂಡು ನೀವು ನಮ್ಮ ತಪ್ಪನ್ನು ಒಪ್ಪಿಕೊಳ್ಳಬೇಕು. ಶರಣು."

ನೇಮಯ್ಯ ಕಾಗದವನ್ನು ಓದುತ್ತಿದ್ದ ಹಾಗೆ ಅದನ್ನು ನೆನೆದು ರಾಣಿಯ ಮುಖ ಕೆಂಪೇರಿ ಬೆವತಿತು. ಅವಳ ಕಣ್ಣಿನ ನೋಟ ಕ್ರೂರ

ವಾಯಿತು. ನೇಮಯ್ಯನ ಮನಸ್ಸಿನಲ್ಲಿ ಈ ಮಾತು ಎಲ್ಲಿಗೆ ಮುಟ್ಟುತ್ತದೆ ಎಂಬ ಭಯ, ಆ ಭಯಕ್ಕಿಂತ ಮಿಗಿಲಾಗಿ ಈ ಹೆಗ್ಗಡಿತಿಯ ಧೈರ್ಯವನ್ನು ಕುರಿತ ಆಶ್ಚರ್ಯ, ಮೂಡಿದುವು.

ಎರಡು ಕ್ಷಣಬಿಟ್ಟು ರಾಣಿ, "ಹೇಗಿದೆ ಓಲೆ" ಎಂದಳು.

"ದಣಿಗಳ ಚಿತ್ತಕ್ಕೆ ಬಾರದ ಮಾತು ಏನಿದೆ?"

ಹೆರವರೆದುರಲ್ಲಿ ಇದರ ಮಾತನಾಡುವುದು ನೇಮಯ್ಯನಿಗೆ ಇಷ್ಟವಿಲ್ಲ. ಆದರೆ ರಾಣಿಗೆ ಹಾಗೆ ಮಾತನಾಡುವುದರ ಅನೌಚಿತ್ಯ ಕಂಡಿತೆನ್ನುವಂತಿರಲಿಲ್ಲ. ಅವಳು ಮಾತನ್ನು ಮುಂದುವರಿಸಿದಳು. ನೇಮಯ್ಯ ಹೊರತು ಉಳಿದವರಿಗೆ ಅದರ ಸಂದರ್ಭವೇನೆಂದು ತಿಳಿಯಲಿಲ್ಲ.

"ನಾಯಕರು ತೀರಿಕೊಂಡು ನಾವು ದಿಕ್ಕುಗೆಟ್ಟೆವು ಎಂದಮಾತ್ರಕ್ಕೆ ನಮ್ಮ ಗೌಡ ಗೌಡಿಯರು ನಮಗೆ ಇಂಥ ಓಲೆಗಳನ್ನು ಬರಸಬಹುದೆ? ಗಂಡ ತೀರಿಕೊಂಡರೆ ಹೆಂಗಸನ್ನು ಕಾಪಾಡುವ ಜನ ಬೇರೆ ಇಲ್ಲವೆ?"

ರಾಣಿಯ ಅರ್ಥ ಮಗನಿದ್ದಾನೆ, ಮಂತ್ರಿಗಳಿದ್ದಾರೆ, ಎಂದು. ಕೇಳುವ ಜನಕ್ಕೆ ಮಾತು ವಿಪರೀತ ಅರ್ಥವಾಗುವಂತೆ ಇದ್ದಿತು. ನೇಮಯ್ಯ ತಲೆತಗ್ಗಿಸಿಕೊಂಡು ಸುಮ್ಮನಿದ್ದನು. ನಾಯಕ ಕೆಳತುಟಿಯನ್ನು ಕಚ್ಚಿಕೊಂಡು ಮುಖವನ್ನು ಕೆಳಗೆ ಹಾಕಿದನು. ಉಳಿದ ಒಬ್ಬರಿಬ್ಬರ ಮುಖದ ಮೇಲೆ ವಿಧಿಯಿಲ್ಲದೆ ನಗೆಯ ಮಿಂಚು ಹೊಳೆದು ಒಡನೆ ಮರೆಯಾಯಿತು.

ತನ್ನ ಮಾತು ಕವಲುನುಡಿಯಾಯಿತೆಂದು ರಾಣಿ ಅರಿತುಕೊಂಡಳು. ಹೆಗ್ಗಡಿತಿ ನಂಬಯ್ಯನ ವಿಷಯಕ್ಕೆ ಬರೆದಿದ್ದ ವಾಕ್ಯಗಳು ಕೊಂಕು ಎಂದು ಅವಳು ಬಲ್ಲಳು. ಇಂಥ ಮಾತನ್ನು ಹೇಳುವುದಕ್ಕೆ ಈ ಹೆಗ್ಗಡಿತಿಗೆ ಎಷ್ಟು ಧೈರ್ಯ ಎಂದು ಅವಳಿಗೆ ಕೋಪ. ಇಂಥ ಮಾತನ್ನು ಜನ ಹೇಳುವಂತೆ ತಾನು ನಡೆದುಕೊಂಡದ್ದು ತನ್ನಲ್ಲಿ ಅವಿವೇಕ ಎಂದೂ ಅವಳಿಗೆ ಕಾಣಬೇಕಾಗಿತ್ತು: ಹೆರವರ ಮೇಲಿನ ಕೋಪದಲ್ಲಿ ಈ ತಿಳಿವು ಮೂಡುವಂತಿರಲಿಲ್ಲ. ಎರಡು ಕ್ಷಣಬಿಟ್ಟು ಮತ್ತೆ ಅವಳೆ ಮಾತನಾಡಿದಳು. "ಸ್ವಂತದ ಮಾತು ಹಾಗಿರಲಾಗಿ ಇವರ ವರ್ಷದ ಸಂದಾಯದ ಮಾತು ಏನೂ ಅಂತ ನೋಡಬೇಕಲ್ಲ; ವರ್ಷವರ್ಷ ಸರಿಯಾಗಿ ಕಾಣಿಕೆ

ಕಳುಹಿಸಿದೀವಿ ಅಂತಾರೆ. ಇಲ್ಲಿ ಅದನ್ನು ತಕೊಂಡವರು ಯಾರು? ತಕೊಂಡಿದ್ದರು: ತಿರಿಗಿ ಅದನ್ನು ಕೊಡಬೇಕೂ ಅಂತ ಯಾಕೆ ನಿರೂಪ ಹೋಯಿತು? ವಿಚಾರಿಸಬೇಕು."

ನೇಮಯ್ಯ, "ಹೌದು. ಇದು ವಿಚಾರಿಸಬೇಕಾದ ಮಾತು," ಎಂದನು.

ಮಾತು ಮುಂದುವರಿಯುವಂತಿರಲಿಲ್ಲ. ಯಾರು ವಿಚಾರಿಸಬೇಕು? ರಾಣಿ. ಯಾರನ್ನು ವಿಚಾರಿಸಬೇಕು? ನಿರೂಪವನ್ನು ಕಳುಹಿಸಿದ ಸರ್ವಾಧಿಕಾರಿಯನ್ನು. ರಾಣಿ ಇದನ್ನು ಮಾಡುವುದಕ್ಕೆ ಯಾರ ಅಪ್ಪಣೆಯನ್ನೂ ಕೇಳಬೇಕಾಗಿರಲಿಲ್ಲ. ಆದರೆ ತಾನಾಗಿ ಅದನ್ನು ಮಾಡುತ್ತೇನೆ ಎಂದು ಹೇಳಲಿಲ್ಲ. ಅವಳು ಹೇಳದಿದ್ದರೆ ನೇಮಯ್ಯನಾಗಲಿ ಉಳಿದವರಾಗಲಿ ಕೇಳುವಂತಿರಲಿಲ್ಲ. ಅಥವಾ ನಾಯಕ ಒಬ್ಬ ಕೇಳಬೇಕು. ಅವನು ಇನ್ನೂ ಗದ್ದುಗೆ ಏರಿರಲಿಲ್ಲ; ಹೇಗೆ ಈ ಸ್ವಾತಂತ್ರ್ಯವನ್ನು ವಹಿಸಬಹುದು?

ಮತ್ತೆ ಕೆಲವು ಕ್ಷಣ ಕಳೆದ ಮೇಲೆ ರಾಣಿ, "ಒಳಿತಾಯಿತು. ಇವರಿಗೆ ಆಮೇಲೆ ಸರಿಯಾದ ನಿರೂಪ ಮಾಡೋಣಂತೆ. ಈಗ ಮೈಸೂರ ರಾಯಸದ ಸಂಗತಿ ಕೇಳಿ," ಎಂದಳು.

೩೩

ನೇಮಯ್ಯ ವೀರಣ್ಣನ ಕಡೆಗೆ ತಿರುಗಿ, "ಅರಿಕೆ ಮಾಡಿ, ಹಿರಿಯರೆ," ಎಂದನು.

ವೀರಣ್ಣ ನಾಲ್ಕು ಕಡೆಗೂ ಕಣ್ಣುಹಾಯಿಸಿ, ನೇಮಯ್ಯನ ಮುಖವನ್ನು ನೋಡಿದನು. ನೇಮಯ್ಯ ಅವನ ಇಂಗಿತವನ್ನರಿತು ರಾಣಿಯನ್ನು ಕುರಿತು, "ಇಲ್ಲಿ ಉಳಿದ ಜನ ಇರುವುದು ಬೇಡವೇನೊ? ರಾಣಿಯವರ ಚಿತ್ತ," ಎಂದನು. ರಾಣಿ, "ಒಳಿತು, ಸರಿಯಲಿ," ಎಂದಳು.

ನೇಮಯ್ಯ ಹತ್ತಿರಿದ್ದ ಉಳಿದ ಎಲ್ಲ ಜನಕ್ಕೂ ದೂರಕ್ಕೆ ಸಾರುವಂತೆ ಸನ್ನೆಮಾಡಿದನು. ಅವನು ನಿಜವಾಗಿ ನಂಬಯ್ಯನನ್ನೂ ದೂರಕ್ಕೆ

ಕಳುಹಿಸಬೇಕು; ಆದರೆ ಇದನ್ನು ರಾಣಿ ಮಾಡುವುದು ಚೆನ್ನ. ಆದ್ದರಿಂದ ಅವನು ಆ ಅಪ್ಪಣೆಯನ್ನು ಅವಳೇ ಮಾಡಲಿ ಎಂದು ಸುಮ್ಮನಿದ್ದನು. ರಾಣಿ ಇವರಿಗೆಲ್ಲ ಈ ಬಡಪಾಯಿಯ ಮೇಲೆ ಏನು ಕಣ್ಣು ಎಂಬ ತಪ್ಪು ಹಟದಿಂದ ತಾನಾಗಿ ಈ ಕೆಲಸವನ್ನು ಮಾಡಳು. ಎರಡು ಕ್ಷಣ ಆಯಿತು; ನಾಲ್ಕು ಕ್ಷಣ ಆಯಿತು. ವೀರಣ್ಣ ಬಾಯಿ ತೆರೆಯಲಿಲ್ಲ. ಕೊನೆಗೆ ನೇಮಯ್ಯ ಅವನನ್ನು ಕುರಿತು, "ನಂಬಯ್ಯನವರು ಇದ್ದರೆ ನಿಮಗೇನೂ ಅಡ್ಡಿ ಇಲ್ಲವಲ್ಲ? ಇರುವುದು ಬೇಡ ಎಂದರೆ ಅಪ್ಪಣೆಯಾಗಲಿ," ಎಂದನು.

ವೀರಣ್ಣ, "ಅದು ತಮ್ಮಗಳ ಚಿತ್ತ. ಹೇಳುವ ಮಾತು ಸನ್ನಿಧಾನದಲ್ಲೆ ನಿಲ್ಲಬೇಕು. ಅಷ್ಟು ಹೊರತು ಬೇರೆ ಸಂಕೋಚವಿಲ್ಲ," ಎಂದನು.

ಆಗಲೂ ರಾಣಿ ಮಾತನಾಡಲಿಲ್ಲ. ಇದರ ಮೇಲೆ ಇವರ ಇಷ್ಟ ಎಂದು ವೀರಣ್ಣ ತಾನು ತಂದಿದ್ದ ನಿರೂಪವನ್ನು ರಾಣಿಯ ಎದುರಿನಲ್ಲಿ ಇಟ್ಟು ತಾವು ಬಂದ ಸಂಗತಿಯನ್ನು ವಿವರಿಸಿದನು.

"ಮೈಸೂರಿನ ಅರಸರು ನಗರದ ನಾಯಕರನ್ನು ತಮ್ಮ ಕಿರಿಯ ಸೋದರರೆಂದು ಭಾವಿಸಿದ್ದಾರೆ. ಪೂರ್ವಕ್ಕೆ ಇಲ್ಲಿಂದ ಶ್ರೀರಂಗಪಟ್ಟಣಕ್ಕೆ ವರ್ಷಂಪ್ರತಿ ದೇಶಾದಾಯ ಬರುತ್ತಿದ್ದಿತು. ಈಗ ಕೆಲವು ವರ್ಷದಿಂದ ಅದು ಬಂದಿಲ್ಲ. ಇದರ ವಿಷಯವನ್ನು ಅರಸರು ಸೇನಾನಿ ಹೈದರ್ ನವಾಬರಿಗೆ ಒಪ್ಪಿಸಿದ್ದರು. ಅವರು ಈ ವಿಷಯದಲ್ಲಿ ಸಕಾಲದಲ್ಲಿ ಸಂಸ್ಥಾನಕ್ಕೆ ತಿಳಿವಳಿಕೆ ಕೊಡದೆ ಇದ್ದುಬಿಟ್ಟರು. ಇತ್ತೀಚೆಗೆ ನವಾಬರು ಬಹು ಪ್ರಬಲರಾಗುತ್ತಿದಾರೆಂದು ಜನ ಎಣಿಸಿದಂತೆ ಕಾಣುತ್ತಿದೆ. ರಾಜಮನೆತನಕ್ಕೆ ಭಯವೇನೂ ಇಲ್ಲ; ಆದರೂ ಸಂಸ್ಥಾನದ ನಾಯಕರು ಅರಸರಿಗೆ ನೆರವಾಗುವರು ಎನ್ನುವುದು ಸ್ಪಷ್ಟವಾದರೆ ಒಳಿತು. ಇದಕ್ಕಾಗಿ ನಾಯಕರು ಈಸಲದ ನವರಾತ್ರಿ ಉತ್ಸವಕ್ಕೆ ಪಟ್ಟಣಕ್ಕೆ ಬಿಜಯಮಾಡಿಸಿ ಅರಮನೆಯ ಹಬ್ಬದಲ್ಲಿ ಭಾಗವಹಿಸಬೇಕು ಎಂದು ಅರಸರೂ ಅವರ ತಾಯಿ ಮಹಾಮಾತೃಶ್ರೀಯವರೂ ಬಯಸುತ್ತಾರೆ. ಬಿಜಮಾಡುತ್ತ ರಾಷ್ಟ್ರವೆಲ್ಲ ಒಂದು ಎನ್ನುವ ಭಾವನೆಯಲ್ಲಿ ಸಂಸ್ಥಾನದಿಂದ ಮೈಸೂರ ಅರಸರಿಗೆ ಸಲ್ಲುವುದೆನ್ನುವ ದೇಶಾದಾಯದ ಉಳಿಕೆ ಬಿದ್ದಿರುವ ಮೊತ್ತದಲ್ಲಿ ಎಷ್ಟೇ ಸ್ವಲ್ಪ ಆದರೂ ಒಂದು ಭಾಗವನ್ನು ತಂದು ಸಂದಾಯ

ಮಾಡಿದರೆ ಮುಂದಕ್ಕೆ ಎರಡು ರಾಷ್ಟ್ರಕ್ಕೂ ಶ್ರೇಯಸ್ಸು. ಇದಿಷ್ಟು ಮಾತನ್ನೂ ಅರಸರೂ ಮಹಾಮಾತೃಶ್ರೀಯವರೂ ಪ್ರೀತಿಯಿಂದ ಹೇಳಿದ್ದಾರೆ. ಇದರಲ್ಲಿ ಹಿರಿತನದ ಅಥವಾ ಆಜ್ಞೆಯ ಮನೋಧರ್ಮ ಇಲ್ಲ. ಎರಡು ಮನೆತನ ಒಂದಕ್ಕೊಂದು ನೆರವಾಗಿ ಬೆಳೆಯಬೇಕು, ಪೂರ್ವದಿಂದ ಬಂದ ಮನೆತನಕ್ಕೆ ಹಿರಿಯ ಸೋದರರು ಎಂಬ ಒಂದು ವಿಶ್ವಾಸದ ಮರ್ಯಾದೆಯನ್ನು ನಾಯಕರು ತೋರಿಸಬೇಕು. ಎನ್ನುವುದಿಷ್ಟೆ. ನಾವು ರಾಜಧಾನಿಯಿಂದ ಹೊರಡುವ ವೇಳೆ ನಾಯಕರಿಗೆ ಇನ್ನೂ ಪಟ್ಟವಾಗಿಲ್ಲ ಎನ್ನುವ ವಿಷಯ ಸುದ್ದಿಯಾದರೂ ಸ್ಪಷ್ಟವಾಗಿರಲಿಲ್ಲ. ಅದು ಹೌದು ಎನ್ನುವುದಾದರೆ ಇವರು ಬೇಗನೆ ಗದ್ದುಗೆಯನ್ನೇರುವುದು ದೇಶಕೆ ಕ್ಷೇಮ ಎನ್ನುವುದು ಅರಸರ ಮತ್ತು ಮಹಾಮಾತೃಶ್ರೀಯವರ ಅಭಿಪ್ರಾಯ ಎಂದೂ ಅಪ್ಪಣೆ ಆಯಿತು. ಇಷ್ಟನ್ನು ಸನ್ನಿಧಾನದಲ್ಲಿ ಬಿನ್ನಯಿಸಿದ್ದೇವೆ. ಇಲ್ಲಿ ತಾವೆಲ್ಲ ಯಾವುದು ಸೂಕ್ತವೆಂದು ಬೆಸಸಿದರೆ ಅದನ್ನು ಶಿರಸಾವಹಿಸಿ ರಾಣಿಯವರ ಅನುಮತಿಯಿಂದ ನಾವು ಹಿಂದಿರುಗುತ್ತೇವೆ. ನಮ್ಮ ಪ್ರಭುಗಳಿಗೆ ಬಿನ್ನಯಿಸುತ್ತೇವೆ."

ವಸ್ತಾರೆಯ ಹೆಗ್ಗಡಿತಿಯಂಥ ಕೆಳಪಟ್ಟ ಮಂದಿಯ ಮಾತಿಗೆ ಹೇಗೊ ಹಾಗೆ ಮೈಸೂರರಸರಂಥ ಮೇಲ್ಪಟ್ಟವರೆಂಬವರ ಮಾತಿಗಾದರೂ ಇಲ್ಲಿ ಅಧಿಕಾರದಿಂದ ಉತ್ತರ ಹೇಳುವ ವ್ಯಕ್ತಿ ಇರಲಿಲ್ಲ. ಮಗನಿಗೆ ಪಟ್ಟ ಕಟ್ಟದೆ ಬಹುಕಾಲ ತಳ್ಳುವುದು ಸಾಧ್ಯವಲ್ಲ ಎನ್ನುವುದನ್ನು ರಾಣಿ ಈಗ ಚೆನ್ನಾಗಿ ಮನಗಂಡಳು. ಬೆಳೆದ ಮಗ ಇರುವಾಗ ಇವಳು ಏಕೆ ರಾಜ್ಯಸೂತ್ರ ಹಿಡಿದಿದ್ದಾಳೆ ಎಂದು ಊರೆಲ್ಲ ಕೇಳುತ್ತಿದೆ. ಹಿಡಿದಿಲ್ಲ ಎಂದಾಳೆ, ಮಗನಿಗೆ ಪಟ್ಟಕಟ್ಟದೆಯಾ ಎಂಬ ಪ್ರಶ್ನೆ ಬರುತ್ತದೆ. ಕಟ್ಟಲಿಲ್ಲ: ಯಾಕೆ? "ನಾನು ಕಟ್ಟತಕ್ಕದ್ದೇನಿದೆ? ಅವನಿಗೆ ಪ್ರಾಯ ಬಂದಿದೆ, ಅವನು ಸಮರ್ಥನಾಗಿದ್ದಾನೆ. ಅವನು ಕಟ್ಟಿಕೊಳ್ಳಲಿ." "ಉಳಿದ ಕಡೆ ಹೀಗೆಯೇ ಆಗುತ್ತದೆಯೆ? ಪಟ್ಟಕಟ್ಟಿಕೊ ಎಂದು ಹೇಳುವುದಕ್ಕೆ ತಾಯಿಯಾದ ನೀನು ಏಕೆ ತಡೆಯುತ್ತೀಯೆ?" ಇದಕ್ಕೆ ಸರಿಯಾದ ಉತ್ತರ ಇಲ್ಲ ಎಂದು ರಾಣಿ ವೀರಮ್ಮಾಜಿ ಚೆನ್ನಾಗಿ ಬಲ್ಲಳು. ಏನು ಮಾಡುವುದು, ಮಗನಿಗೆ ಪಟ್ಟಕಟ್ಟು ಎಂದು ಒಂದು ಮಾತನ್ನು

ಇಂದೊ ನಾಳೆಯೊ ಹೇಳಿಬಿಡುವುದು, ಎಂದು ಅವಳು ಯೋಚಿಸಿ ಕೊಂಡಳು. ನೇಮಯ್ಯನನ್ನು ಕುರಿತು, "ಏನು ಹೇಳುತ್ತೀರಿ, ನೇಮಯ್ಯ," ಎಂದು ಕೇಳಿದಳು.

ನೇಮಯ್ಯ, "ಇದು ಯಾವ ಮಾತೂ ಧಣಿಗಳ ಚಿತ್ತದಂತೆ ನಡೆಯ ತಕ್ಕದ್ದು. ತಾವು ಅಪ್ಪಣೆ ಕೊಡಿಸೋಣವಾಗಲಿ. ಕುಮಾರರು ಪರಸ್ಥಳ ಹೋಗಿ ಬರುವ ಮಾತು ಇರುವುದರಿಂದ ಅನುಕೂಲ ನೋಡಿಕೊಂಡು ಉತ್ತರ ಹೇಳಬೇಕಾಗುತ್ತದೆ. ವೀರಣ್ಣನವರು ಮೂರು ನಾಲ್ಕು ದಿನ ಇಲ್ಲಿ ಇದ್ದು ಪ್ರಯಾಣದ ಶ್ರಮವನ್ನು ಹರಿಸಿಕೊಂಡಮೇಲೆಯೆ ಹಿಂದಿರುಗ ಬೇಕು. ಉತ್ತರವನ್ನು ನಾಳೆ ನಾಡಿದ್ದರಲ್ಲಿ ಹೇಳಿದರೂ ಆದೀತು," ಎಂದು ಹೇಳಿ, "ಅಲ್ಲವೆ, ವೀರಣ್ಣನವರೆ?" ಎಂದು ವೀರಣ್ಣನನ್ನು ಕೇಳಿದನು

ವೀರಣ್ಣ, "ಧಣಿಗಳು ವಿಷಯವನ್ನು ಸಾವಧಾನವಾಗಿ ಪರ್ಯಾ ಲೋಚಿಸಿ ನಿಶ್ಚಯವನ್ನು ತಿಳಿಸಬಹುದು. ನಾವು ಸನ್ನಿಧಿಯಲ್ಲಿ ಕಾದಿರುತ್ತೇವೆ," ಎಂದನು.

ರಾಣಿ, "ಒಳಿತು. ನಾಳೆ ನಾಡಿದ್ದರಲ್ಲಿ ತಿಳಿಸೋಣ," ಎಂದು ಎದ್ದಳು. ಉಳಿದವರೂ ಎದ್ದು ನಿಂತರು. ನಾಯಕ ಹೊರತು ಉಳಿದ ವರು ರಾಣಿಗೆ ನಮಸ್ಕಾರ ಮಾಡಿದರು. ಅವಳು ಪ್ರತಿ ನಮಸ್ಕಾರ ಮಾಡಿ ಒಳಕ್ಕೆ ಹೋದಳು. ನಾಯಕನೂ ಇವರಿಗೆಲ್ಲ ನಮಸ್ಕಾರ ಮಾಡಿ ತನ್ನ ನಿವಾಸದ ಕಡೆಗೆ ತಿರುಗಿದನು. ನಂಬಯ್ಯ ಅಲ್ಲೇ ನಿಂತನು. ನೇಮಯ್ಯನೂ ಇತರರೂ ಸಭಾಂಗಣದಿಂದ ಹೊರಟು ಬಂದರು.

## ೩೪

ಅರಮನೆಯಿಂದ ನೇಮಯ್ಯ ಅತಿಥಿಗಳೊಂದಿಗೆ ನೇರವಾಗಿ ಮನೆಗೆ ಬಂದನು. ಅವನಿಗೆ ಸೇವಕ, "ರಾಮಾಶಾಸ್ತ್ರಿಗಳು ಅಯ್ಯನವರು ಮನೆಯಲ್ಲಿ ಇದ್ದಾರೆಯೇ ಎಂತ ವಿಚಾರಿಸಿ ಹೇಳಿಕಳುಹಿಸಿದ್ದರು," ಎಂದು ತಿಳಿಸಿದನು. ನೇಮಯ್ಯ, "ಅರಮನೆಯಿಂದ ಈಗ ಬಂದೆವು

ಎಂದು ತಿಳಿಸಿ ಶಾಸ್ತ್ರಿಗಳನ್ನು ಕಾಣಲು ಬರಬಹುದೆ, ಇಲ್ಲ ಅವರು ಇಲ್ಲಿಗೆ ಬರುತ್ತಾರೆಯೆ, ತಿಳಿದುಕೊಂಡು ಬಾ," ಎಂದು ಅವನನ್ನು ಕಳುಹಿಸಿದನು. ಆಳು ಹೋಗಿ ಮತ್ತೆ ಬರುವವರೆಗೆ ನೇಮಯ್ಯ ವೀರಣ್ಣನವರ ಬಿಡಾರದಲ್ಲಿ ಮಾತನಾಡುತ್ತ ಕುಳಿತನು. ಸಹಜವಾಗಿಯೆ ಆ ಮಾತು ರಾಣಿ ಮತ್ತು ಅವಳ ಮಗನನ್ನು ಕುರಿತಿದ್ದಿತು. ವೀರಣ್ಣ, "ತಮ್ಮ ಧಣಿಗಳು ತುಂಬ ದಕ್ಷರಾಗಿ ಕಾಣುತ್ತಾರೆ. ನಾಯಕರು ಸುಟಿಯಾಗಿದ್ದಾರೆ. ಆದರೆ ಬಾಯೇ ತೆರೆಯುವುದಿಲ್ಲ. ಅವರ ಮನಸ್ಸನ್ನು ತಿಳಿಯುವುದು ಕಷ್ಟವಾಗಬೇಕು. ಹೇಗೂ ಇವರಿಬ್ಬರೂ, ಹಾಗೆಯೇ ತಾವೂ ತಮ್ಮ ಜೊತೆಯ ಹಿರಿಯರೂ, ಮನಸ್ಸು ಮಾಡಿದರೆ ಅರಸರ ನಾಯಕರ ಸಂಬಂಧ ಚೆನ್ನಾಗಿ ಬೆಳೆದು ಎರಡು ಸಂಸ್ಥಾನಕ್ಕೂ ಶುಭ ವಾಗುತ್ತದೆ," ಎಂದನು. ನೇಮಯ್ಯ, "ನಮ್ಮಲ್ಲಿ ಎಲ್ಲರಿಗೂ ತಮ್ಮ ಅರಸರೊಂದಿಗೆ ಸ್ನೇಹ ಬೆಳಸಬೇಕೆಂದೇ ಅಪೇಕ್ಷೆ. ಆದರೆ ಕಾಣಿಕೆ ಕೊಡುವ ಮಾತು ಸದ್ಯ ನಮ್ಮ ಧಣಿಗಳಿಗೆ ಒಪ್ಪಿಗೆ ಆದಂತೆ ಕಾಣಲಿಲ್ಲ. ಇತ್ತೀಚೆಗೆ ತಮ್ಮ ಸಂಸ್ಥಾನಕ್ಕೆ ನಮ್ಮ ಸಂಸ್ಥಾನಕ್ಕೆ ಆ ರೀತಿಯ ಸಂಬಂಧ ಇದ್ದಿಲ್ಲ. ಈ ವಿಷಯದಲ್ಲಿ ತಾವು ಯಾವ ಖಂಡಿತವಾದ ಉತ್ತರವನ್ನೂ ಬಯಸುವುದು ಬೇಡ. ನಾಯಕರು ಪಟ್ಟಣಕ್ಕೆ ಬಿಜ ಮಾಡಿಸಿದರೆ ಅಲ್ಲಿ ಇದರ ಮಾತನ್ನು ಬೇಕೆಂದರೆ ಅರಸರು ಮುಖತಃ ಆಡಿ ನೋಡಬಹುದು. ಸಂಗತಿ ಬಹು ಮುಖ್ಯವಾದದ್ದು. ಒಂದು ಮಾತಿನಲ್ಲಿ ಉತ್ತರ ಬೇಕು, ಎಂದು ಬಯಸಲಾಗದು. ಇದು ತಮಗೆ ತಿಳಿದೇ ಇದೆ," ಎಂದನು.

ನೇಮಯ್ಯನ ಮಾತಿನಲ್ಲಿ ರಾಣಿ ನಾಯಕರನ್ನು ಕುರಿತ ವ್ಯಕ್ತಿಪರ ವಾದ ಅಭಿಪ್ರಾಯಕ್ಕೆ ಉತ್ತರವಿಲ್ಲದ್ದನ್ನು ವೀರಣ್ಣ ತಿಳಿದನು. ಈ ಮನುಷ್ಯ ಹೆಜ್ಜೆ ಹೆಜ್ಜೆಗೂ ಎಷ್ಟು ವಿವೇಕದಿಂದ ನಡೆದುಕೊಳ್ಳುತ್ತಾನೆ ಎಂದು ಅವನಿಗೆ ಬಹುಮೆಚ್ಚಿಕೆಯಾಯಿತು. ನಿಸ್ವಾರ್ಥಬುದ್ಧಿ, ಶುದ್ಧಮನಸ್ಸು, ರಾಜಭಕ್ತಿ, ದೇಶಪ್ರೇಮ, ನೇಮಯ್ಯನ ದಿನದ ನಡೆಯನ್ನು ಯಾವ ವಿವರ ದಲ್ಲೂ ಕುಂಟದಂತೆ ಸುಸ್ಸೂತ್ರವಾಗಿ ಮಾಡಿದ್ದವು. ಮನಸ್ಸು ಚೆನ್ನಾಗಿರು ವಾಗ ಮಾತು ತಪ್ಪುವುದು ಸಾಧ್ಯವಿಲ್ಲ. ನೇಮಯ್ಯ ಲೋಕದ ಎಲ್ಲ

ಜೀವಗಳ ವಿಷಯದಲ್ಲಿಯೂ ಮನಸ್ಸನ್ನು ಚಿನ್ನಮಾಡಿಕೊಂಡಿದ್ದನು. ಆದ್ದರಿಂದ ಯಾರು ಯಾವ ಮಾತನ್ನು ಹೇಳಿ ಇವನು ಅದಕ್ಕೆ ಉತ್ತರ ಕೊಟ್ಟರೂ ಅದು ನಿರ್ದುಷ್ಟವಾಗಿ, ಸುಷ್ಮುವಾಗಿ, ಬರುವುದು. ಶ್ರುತಿ ಯಾಗಿರುವ ವಾದ್ಯವನ್ನು ಚೇಷ್ಟೆಗೆಂದು ಮುಟ್ಟಿದರೂ ಸ್ವರ ಶ್ರುತಿಯಲ್ಲಿಯೇ ಹೊರಡುವಂತೆ ಸ್ವಭಾವ ಪರಿಶುದ್ಧವಾದ ಮೇಲೆ ಮನುಷ್ಯನ ಮಾತು ಎಂಥ ಹೊತ್ತಿನಲ್ಲೂ ಶುದ್ಧವಾಗಿಯೇ ಇರುತ್ತದೆ.

ವೀರಣ್ಣ, "ನಾಯಕರು ಪಟ್ಟಣಕ್ಕೆ ಬಿಜಯಮಾಡುವುದೆಂದಾದರೆ ತಾವೂ ಅವರೊಂದಿಗೆ ದಯಮಾಡಿದರೆ ಚೆನ್ನವಾದೀತು," ಎಂದನು.

"ಅದು ಸಾಧ್ಯವಾಗಲಾರದು. ಅಷ್ಟು ಸರಿಯೂ ಆಗಲಾರದು. ನಾಯಕರಿಗೆ ಮನೆ ಮಗಳನ್ನು ಕೊಟ್ಟದೇವೆ. ಜನರು ಏನೆಂದುಕೊಂಡಾರು ಎಂದು ಯೋಚಿಸಿ ನಡೆಯಬೇಕಾಗಿದೆ"

ಇವರು ಈ ಮಾತನ್ನು ಆಡುತ್ತಿರುವ ವೇಳೆಗೆ ಶಾಸ್ತ್ರಿಗಳು ಬಂದರು ಎಂದು ಸೇವಕ ತಿಳಿಸಿದನು. ನೇಮಯ್ಯ ಬಾಗಿಲಿಗೆ ಹೋಗಿ ಶಾಸ್ತ್ರಿಯನ್ನು ಬರಮಾಡಿಕೊಂಡು, "ಮೈಸೂರಿಂದ ಬಂದಿರುವ ರಾಯಸ ದವರನ್ನು ಕಾಣುವಿರಾ? ಇಲ್ಲ ಬೇರೆ ಕುಳಿತು ಮಾತಾಡೋಣವೆ?" ಎಂದು ಕೇಳಿದನು. ರಾಮಾಶಾಸ್ತ್ರಿ, "ಬೇರೆ ಮಾತನಾಡುವುದೂ ಇದೆ. ಅದನ್ನು ನಮ್ಮ ಮನೆಗೆ ಹೋಗಿ ಆಡೋಣ. ಈಗ ಈ ನಿಮ್ಮ ರಾಯಸ ದವರನ್ನು ನೋಡೋಣ. ಏನು ಸತ್ಯವಂತರೊ? ಇಲ್ಲ ಹದಿನಾರು ಬುದ್ಧಿ ಮನುಷ್ಯರೋ?" ಎಂದನು. ನೇಮಯ್ಯ ನಗುತ್ತ, "ನೀವೇ ನೋಡಿ ಗೊತ್ತುಮಾಡಿ. ಇದನ್ನೆಲ್ಲ ತಿಳಿಯುವುದಕ್ಕೆ ನನ್ನ ಹತ್ತಿರ ಒರೆಬುದ್ಧಿ ಇಲ್ಲ," ಎಂದನು. ಶಾಸ್ತ್ರಿ, "ನಿಮಗಿಲ್ಲದ ಬುದ್ಧಿ ಅನ್ನೋದೊಂದು ಲೋಕ ದಲ್ಲಿ ಉಂಟೇ? ಅದನ್ನೆಲ್ಲ ನೀವು ಹೊರಕ್ಕೆ ತೆಗೆಯೋದಿಲ್ಲ; ತೆಗೆದು ನಮ್ಮಂಥವರು ಕೆಟ್ಟವರಾಗತೇವೆ," ಎಂದನು. ನೇಮಯ್ಯ ಉತ್ತರ ಹೇಳಲಿಲ್ಲ. ನಗೆಮೂಡಿದ ಮೊಗದಿಂದಲೆ ಶಾಸ್ತ್ರಿಯನ್ನು ಒಳಕ್ಕೆ ಕರೆದು ಕೊಂಡು ಹೋದನು.

## ೩೫

ಇವರು ಬಂದಾರೆಂದು ವೀರಣ್ಣ ಸೂರಪ್ಪ ಎದ್ದು ನಿಂತಿದ್ದರು. ಶಾಸ್ತ್ರಿ ಕಣ್ಣಿಗೆ ಬಿದ್ದೊಡನೆಯೆ ಇಬ್ಬರೂ ಕೈಮುಗಿದರು. ಶಾಸ್ತ್ರಿ ನೇಮಯ್ಯನಿಗಿಂತ ವಯಸ್ಸಿನಿಂದ ಸ್ವಲ್ಪ ಕಿರಿಯವನೆನ್ನುವುದು ಕಾಣುತ್ತಿದ್ದಿತು. ಅವನೂ ನೇಮಯ್ಯನಂತೆಯೇ ವರ್ಚಸ್ವಿ. ಆದರೆ ಆ ವರ್ಚಸ್ಸಿನಲ್ಲಿ ದರ್ಪ ಬೆರೆತಿದ್ದಿತು. ಶಾಸ್ತ್ರಿ ಇವರಿಗೆ ಪ್ರತಿ ನಮಸ್ಕಾರ ಮಾಡಿ ಹತ್ತಿರಕ್ಕೆ ಬಂದನು, ನೇಮಯ್ಯ ಸೂಚಿಸಿದ್ದರ ಮೇಲೆ ಒಂದು ಸ್ಥಳದಲ್ಲಿ ಕುಳಿತನು. ಉಳಿದವರು ಆಮೇಲೆ ಕುಳಿತುಕೊಂಡರು. ಶಾಸ್ತ್ರಿ ವೀರಣ್ಣನ ಕಡೆಗೆ ತಿರುಗಿ, "ನೀವು ರಾಯಸದ ವೀರಣ್ಣನವರು. ಇವರು ಸೂರಪ್ಪನವರು. ತಮ್ಮ ಹೆಸರುಗಳನ್ನು ಕೇಳಿದೆವು. ನೋಡಿಕೊಂಡು ಹೋಗೋಣ ಎಂದೇ ಬಂದೆವು," ಎಂದು ಹೇಳಿದನು.

ವೀರಣ್ಣ: ನಾವು ತಮ್ಮಲ್ಲಿ ಬರಬೇಕೆಂದಿದ್ದೆವು. ಅಷ್ಟರಲ್ಲಿ ತಾವೇ ದಯಮಾಡಿದಿರಿ. ಮನೆಯಲ್ಲಿದ್ದು ನಮಗೆ ಹೇಳಕಳುಹಿಸಿದ್ದರೆ ಅನುಗ್ರಹ ಆಗುತ್ತಿತ್ತು.

"ನೀವು ಹಾಗೆ ತಿಳಿಯುತ್ತೀರೆಂದು ಕೇಳಿಯೆ ನಮಗೆ ಸಂತೋಷ. ಆದರೆ ನೀವು ದೊಡ್ಡರಾಜರ ಕಡೆಯಿಂದ ಬಂದಿರುವವರು, ನಾವು ಸ್ಥಳದವರು. ಆದಕಾರಣ ನಮ್ಮಲ್ಲಿ ಎಲ್ಲರೂ ನಿಮಗೆ ವಿಶ್ವಾಸವನ್ನೂ ಗೌರವವನ್ನೂ ತೋರಿಸಬೇಕು. ನಾವೇ ಬಂದದ್ದನ್ನು ತಾವು ಈ ಅರ್ಥದಲ್ಲಿ ತೆಗೆದುಕೊಳ್ಳುವುದಾಗಲಿ."

"ಅಪ್ಪಣೆ."

"ತಾವು ಇಲ್ಲಿಗೆ ಬಂದಿರುವ ಸಂದರ್ಭದಲ್ಲಿ ಶೃಂಗೇರಿಗೆ ದಯಮಾಡಿ ಗುರುಗಳ ದರ್ಶನಮಾಡಿಕೊಂಡು ಹೋಗುವ ಉದ್ದೇಶವೇನಾದರೂ ಉಂಟೊ ?"

"ಆ ವಿಷಯ ಒಡೆಯರು ಏನೂ ಅಪ್ಪಣೆ ಮಾಡಲಿಲ್ಲ. ಸದ್ಯ ಅದಕ್ಕೆ ಅವಕಾಶ ಇಲ್ಲ. ನಾವು ಇಲ್ಲಿಂದ ಬೇಗನೆ ಹೊರಟು ಕ್ಷಿಪ್ರವಾಗಿ ಪ್ರಯಾಣ ಮಾಡಿ ಪಟ್ಟಣವನ್ನು ಮುಟ್ಟಿದರೂ ಒಂದಷ್ಟು ಕೆಲಸ ಕೈಗೆ

ಕಾದಿರುತ್ತದೆ. ಗುರುಗಳ ದರ್ಶನಕ್ಕೆ ಮತ್ತೆ ಅವಕಾಶ ಮಾಡಿಕೊಂಡು ಬರಬೇಕು."

"ಸಂತೋಷ. ತಮ್ಮ ಅರಸರು ಅವರ ಬಂಧುಬಳಗ ಎಲ್ಲ ಸೌಖ್ಯವಾಗಿರುವರಷ್ಟೆ ?"

"ಭಗವದನುಗ್ರಹ, ಎಲ್ಲ ಸೌಖ್ಯವಾಗಿದ್ದಾರೆ."

"ತಮ್ಮ ಅರಸರ ಕಡೆಯಿಂದ ಶೃಂಗೇರಿ ಗುರುಪೀಠಕ್ಕೆ ವಾಡಿಕೆಯ ಮರ್ಯಾದೆಗಳು ಸಲ್ಲುತ್ತಿವೆಯಷ್ಟೆ."

"ಆ ವಿಚಾರ ನಮಗೆ ಚೆನ್ನಾಗಿ ತಿಳಿಯದು; ವಾಡಿಕೆ ಎಂದಮೇಲೆ ಅದು ಯಾವುದೂ ನಿಂತಿರಲಾರದು."

"ತಾವು ಅನ್ಯಥಾ ಭಾವಿಸಬೇಡಿ. ವಾಡಿಕೆಯ ಮರ್ಯಾದೆಯನ್ನು ಅರಮನೆಯ ಹಿರಿಯರು ಉದ್ದೇಶಪೂರ್ವಕವಾಗಿ ನಿಲ್ಲಿಸಿದರೆಂದಲ್ಲ. ಕಾರುಬಾರಿನಲ್ಲಿ ಈಚೆಗೆ ನವಾಬರು ಪ್ರಬಲರಾದ್ದರಿಂದ ಕೇಳಿದೆವು."

"ಆ ವಿಚಾರ ಶಂಕೆ ಇಲ್ಲ. ನವಾಬರು ಅರಮನೆಯ ವಾಡಿಕೆಯ ದಾನಧರ್ಮದಲ್ಲಿ ಒಂದು ಚಿಕ್ಕಕಾಸಿನ ಧರ್ಮವನ್ನೂ ತಪ್ಪಿಸಿಲ್ಲ. ಅವರ ರೀತಿಯನ್ನು ನೋಡಿದರೆ ಎಂದಿಗೆ ಆಗಲಿ ತಪ್ಪಿಸುವವರೂ ಅಲ್ಲ."

"ನವಾಬರು ಹಾಗಿರಬಹುದು. ಅವರ ಆಧೀನದಲ್ಲಿ ಕೆಲಸ ನಡೆಸುವ ಕಾರುಭಾರಿಗಳು ?"

"ಅವರೆಲ್ಲರ ಮನಸ್ಸೂ ನವಾಬರ ಮನಸ್ಸಿನಷ್ಟು ನಿಷ್ಕಪಟ ಅಲ್ಲ. ಆದರೆ ಇದುವರೆಗೆ ಯಾರಾಗಲಿ ನವಾಬರ ಮಾತನ್ನು ಮೀರಿ ಅರಮನೆಯ ವಿಷಯಕ್ಕೆ ತಪ್ಪಿ ನಡೆದದ್ದಿಲ್ಲ. ಹಾಗೆ ನಡೆದವರನ್ನು ನವಾಬರು ನಿರ್ದಾಕ್ಷಿಣ್ಯವಾಗಿ ದಂಡಿಸುವರು. ಇದನ್ನು ಎಲ್ಲರೂ ಬಲ್ಲರು."

"ಇದು ನಮಗೆ ಬಹಳ ಸಂತೋಷ. ನೀವು ನಮ್ಮ ನಾಯಕರನ್ನು ನವರಾತ್ರಿಯ ಉತ್ಸವಕ್ಕೆ ಕರೆಯುವುದಕ್ಕೆ ಬಂದಿದ್ದೀರಿ ಎಂದು ತಿಳಿಯಿತು. ಈ ರೀತಿಯ ಬಾಂಧವ್ಯ ಈ ಮೊದಲೆ ಆರಂಭವಾಗಬೇಕಾಗಿತ್ತು. ತಮ್ಮ ಅರಸರು ಈಗಲಾದರೂ ಈ ವಿಷಯವನ್ನು ಕುರಿತು ಯೋಚನೆ ಮಾಡಿರುವುದು ಸಂತೋಷ."

"ತಮ್ಮಂಥ ಹಿರಿಯರು ಸೂಚಿಸಿದ್ದರ ಮೇಲೆಯೇ ಒಡೆಯರೂ ಮಹಾಮಾತೃಶ್ರೀಯವರೂ ನಮ್ಮನ್ನಿಲ್ಲಿಗೆ ಈ ಕೆಲಸಕ್ಕಾಗಿ ಕಳುಹಿಸಿ ಕೊಟ್ಟರು. ಇಲ್ಲಿಯೂ ತಮ್ಮಂಥ ಹಿರಿಯರ ಒಪ್ಪಿಗೆ ದೊರೆತು ನಾಯಕರು ಪಟ್ಟಣಕ್ಕೆ ಬಿಜಯಮಾಡಿಸಿದರೆ ಒಡೆಯರು ಅವರನ್ನು ಹೆಮ್ಮೆಯಿಂದ ಬರ ಮಾಡಿಕೊಳ್ಳುತ್ತಾರೆ."

ಶಾಸ್ತ್ರಿ, "ಓಹೋ, ಅದೆಲ್ಲ ಆದೀತು," ಎಂದು ಹೇಳಿ, ನಾನಿನ್ನು ಬರುತ್ತೇನೆ ನೇಮಯ್ಯ, "ಇವರನ್ನು ನೋಡಿಕೊಂಡು ಹೋಗೋಣ ಎಂದೇ ಬಂದೆ," ಎಂದು ಎದ್ದನು. ವೀರಣ್ಣ ಸೂರಪ್ಪ ಎದ್ದು ಅವನನ್ನು ಬೀಳ್ಕೊಟ್ಟರು. ನೇಮಯ್ಯ ಜೊತೆಗೆ ಹೋಗಿ, "ಮಾತಾಡುವುದಿದೆ ಯಲ್ಲ, ಈಗಲೆ ಬರಲೆ?" ಎಂದು ಕೇಳಿದನು. ಶಾಸ್ತ್ರಿ, "ಬನ್ನಿ ಹೋಗೋಣ," ಎನ್ನಲಾಗಿ, ನೇಮಯ್ಯ ಒಳಕ್ಕೆ ಹೋಗಿ, "ಅರಿಗಳಿಗೆ ಯಲ್ಲಿ ಬಂದೆ," ಎಂದು ವೀರಣ್ಣನಿಗೆ ಹೇಳಿ ಶಾಸ್ತ್ರಿಯೊಡನೆ ಅವನ ಮನೆಗೆ ಹೋದನು.

೩೭

ರಾಮಾಶಾಸ್ತ್ರಿಯ ಮನೆಯೂ ತೊಟ್ಟಿಯ ಮನೆ, ತಕ್ಕಷ್ಟು ದೊಡ್ಡದೆ. ಅವನ ಮನೆತನ ಶೃಂಗೇರಿ ಮಠದ ಪ್ರತಿನಿಧಿಯಾಗಿ ನಗರದಲ್ಲಿ ಅರಸರಲ್ಲಿ ಬಹುಕಾಲದಿಂದ ಬಾಳಿದ್ದಿತು. ತಕ್ಕಷ್ಟು ಉಪಪನ್ನವಾಗಿದ್ದಿತು.

ಶಾಸ್ತ್ರಿ ನೇಮಯ್ಯನನ್ನು ಕರೆದುಕೊಂಡು ಹೋಗಿ ಚೌಕದಲ್ಲಿ ಕುಳ್ಳಿರಿಸಿಕೊಂಡು, "ನಮಗೆ ಸಾಕಾಗಿದೆ ನೇಮಯ್ಯ. ಎರಡು ವರ್ಷ ಆಗತಾ ಬಂತು ಈ ಅವ್ಯವಸ್ಥೆ ಮೊದಲಾಗಿ. ಆಯಿತು, ಇಂದಲ್ಲ ನಾಳೆ ಸರಿಹೋಗುತ್ತೆ ಎಂತ ಇದ್ದರೆ ಈ ಕಥೆ ಈಗ ಹೊರಗಿನ ಜನಕ್ಕೆ ತಿಳಿಯುವ ಸ್ಥಿತಿಗೆ ಬಂದಿದೆ. ಸಂಸಾರ ಗುಟ್ಟು ಎನ್ನುವ ಮಾತು ನಮ್ಮ ದಣಿಯಾದ ಹೆಣ್ಮಗಳಿಗೆ ತಿಳಿಯಲಿಲ್ಲವಲ್ಲ. ಇದುವರೆಗೆ ನಗರದಲ್ಲಿದ್ದ ಮಾತು ಈಗ ಪಟ್ಟಣಕ್ಕೆ ವಲಸೆ ಹೋಗಿದೆ," ಎಂದನು.

ನೇಮಯ್ಯ, "ಹೌದು," ಎಂದನು.

"ಹೌದು, ಹೌದು, ಎಂದು ಪ್ರಯೋಜನವಿಲ್ಲ ನೇಮಯ್ಯ; ಬೇರೆ ಏನಾದರೂ ಮಾಡಬೇಕು."

"ಹೇಳಿ ನೋಡೋಣ."

"ನಿಮ್ಮ ರಾಣಿಯಮ್ಮನವರೊಂದಿಗೆ ಸ್ವಲ್ಪ ಖಂಡಿತವಾಗಿ ಮಾತ ನಾಡಿ ಅವರನ್ನು ತಿದ್ದಬೇಕು."

"ನೀವು ಇದನ್ನೇ ಮಾಡಿದಿರಲ್ಲ."

"ಮಾಡಿದರೇನಾಯಿತು? ಅವರು ನನ್ನ ಯಾವ ಮಾತಿಗೂ ಕರೆಯು ವುದನ್ನು ಬಿಟ್ಟುಬಿಟ್ಟರು."

"ಯಾಕೆ? ಕರೆದಿದ್ದರಲ್ಲ."

"ಯಾವಾಗ ?"

"ಮಗನ ಮದುವೆ ಮಾಡಿಸಿ ಎಂತ."

"ಮದುವೆ ಕೆಡಿಸಿ ಎಂತ. ಅಪರಕರ್ಮದ ಶಾಸ್ತ್ರಿ ಎಂತ ಮನೆ ಹಾಳುಮಾಡಿ ಕೊಡು ಎನ್ನುವುದಕ್ಕೆ ಕರೆದರು."

"ಈಗ ಏನು ಮಾಡೋಣ ಹೇಳಿ."

"ನಾಯಕರಿಗೆ ಒಡನೆ ಪಟ್ಟ ಕಟ್ಟಬೇಕು, ಇಲ್ಲದೆ ಇದ್ದರೆ ಸಂಸ್ಥಾನ ಕೈಯಲ್ಲಿ ನಿಲ್ಲುವುದಿಲ್ಲ, ಎಂತ ರಾಣಿಯಮ್ಮನವರಿಗೆ ಖಂಡಿತ ಹೇಳಿ. ನಾನು ಈ ಮಾತನ್ನು ಸುಮ್ಮನೆ ಹೇಳತಾ ಇಲ್ಲ. ಕಾರಣ ಇದೆ."

"ಅದನ್ನು ಒಪ್ಪಿದೆ ಶಾಸ್ತ್ರಿಗಳೆ. ಆದರೆ ನಾನು ಖಂಡಿತವಾಗಿ ಹೇಳಿ ಆಗುವುದೇನು ? ಎಷ್ಟಾದರೂ ಸೊಸೆಯನ್ನು ಸಾಕಿದವನು. ಅವಳು ರಾಣಿಯಾಗಲಿ ಎಂತ ಹೇಳತಿದಾನೆ ಅಂತ ಆಗತದೆ. ಪ್ರಯೋಜನ? ನಾನು ಕೆಟ್ಟವನಾದೆ, ದೇಶಕ್ಕೆ ಒಳಿತಾಗಲಿಲ್ಲ."

"ಹಾಗಾದರೆ ನೋಡಿ ಏನು ಮಾಡುತೀರೊ. ರಾಣಿ ಬೇರೆ ಸೊಸೇನ ಮಾಡಿಕೊಳ್ಳುತಾರಂತೆ ಎನ್ನುವ ಮಾತು ಹ್ಯಾಗೋ ಹೊರಕ್ಕೆ ಬಂದು ನಮ್ಮ ಪಾಳೆಯಗಾರ ಅವರ ದಣಿಗೆ ಹೇಳಿಕಳುಹಿಸಿದನಂತೆ ಆತ ಈಹೊತ್ತು ನಗರಕ್ಕೆ ಬಂದಿದಾರೆ ಅಥವಾ ಬರುತ್ತಾರೆ. ಅದೇನೇನೋ ಮಾತು ನಡೆಯುವಂತೆ ಕಾಣುತ್ತದೆ."

"ಎಷ್ಟು ದಿನದ ಮಾತು, ಈಗ ಆತನಿಗೆ ಮುಟ್ಟಿತೊ ? "

"ಆತ ಎಲ್ಲೆಲ್ಲಿದ್ದನೋ; ಈಗ ಮುಟ್ಟಿತು; ಬರತಾನಂತೆ."

"ಯಾರು ಹೇಳಿದರು ?"

"ಪಾಳೆಯಗಾರನೇ ಹೇಳಿದ. ನಾನು ಹೇಳಿದೆ: ಮದುವೆ ಮಾತು ಸದ್ಯಕ್ಕೆ ನಿಂತಂತೆ ಇದೆ ಅಯ್ಯ ಅಂತ. ಅವನು, ಮದುವೆ ಮಾತು ಒಂದು ನಿಂತರೇನು, ಈ ಹೆಂಗಸು – ಅವನು ಹೆಂಗಸು ಅನ್ನಲಿಲ್ಲ, ಒಂದು ಅಪಶಬ್ದ ಪ್ರಯೋಗಿಸಿದ – ಗಂಡಸು ವೇಷ ಹಾಕಿ ಆಡುತಿರೋ ನಾಯಕ ನಾಟಕ ನಿಲ್ಲಬೇಕು, ಎಂದ. ಹತ್ತಿರಲೇ ಇದಾನೆ; ಕರಸಲೇನು? ಮಾತನ್ನು ನೀವೇ ಕೇಳಿ."

ನೇಮಯ್ಯ ಒಡನೆ ಉತ್ತರ ಹೇಳಲಿಲ್ಲ. ಎರಡು ಕ್ಷಣ ಯೋಚನೆ ಮಾಡಿದನು.

ಈ ಪಾಳೆಯಗಾರ ಎನ್ನುವವನು ಸಂಸ್ಥಾನದ ಜೀವನದಲ್ಲಿ ಎರಡು ಮೂರು ಸಲ ತೊಡಕಿಗೆ ಕಾರಣನಾಗಿದ್ದನು. ತಾನು ಹೊಂಬುಚ್ಚದ ಪಾಳೆಯಗಾರ ಎಂದು ಇವನು ಹೇಳಿಕೊಳ್ಳುತ್ತಿದ್ದನು. ಆದರೆ ಇವನು ಎಂದೂ ಪಾಳೆಯಗಾರನಾಗಿ ಪಾಳೆಯಪಟ್ಟನ್ನು ಆಳಿದ್ದಿಲ್ಲ. ನಗರದ ಅರಸರ ಮುಂದೆ ಇದಕ್ಕೆ ಇಪ್ಪತ್ತು ವರುಷದ ಹಿಂದೆ ಈ ವಿಷಯ ವಿಚಾರಣೆಗೆ ಬಂದು ಇವನಿಗೆ ಪಾಳೆಯದ ಮೇಲೆ ಅಧಿಕಾರ ಏನೂ ಇಲ್ಲ ಎಂದು ತೀರ್ಮಾನವಾಯಿತು. ಆ ತರುಣದಲ್ಲಿ ನೇಮಯ್ಯನ ತಮ್ಮ ಅರಮನೆಗೆ ವಿರೋಧವಾಗಿ ನಡೆದುಕೊಂಡಾಗ ಇವನು ಅವನಿಗೆ ಜೊತೆಯಾಗಿದ್ದನು. ಅವನು ಊರು ಬಿಟ್ಟು ಹೋದಾಗ ಇವನೂ ಅಡಗಿ ಕಣ್ಮರೆಯಾದನು. ಆದರೂ ಆಗಾಗ ನಗರಕ್ಕೆ ಬರುತ್ತಿದ್ದನು. ಇತ್ತೀಚೆಗೆ ಬಹುಭಾಗ ನಗರದಲ್ಲೇ ಇರುವನು. ನಿಶ್ಚಯವಾದ ವರಮಾನ ಇಲ್ಲ; ಪಾಳೆಯಗಾರ ಪದವಿ; ಇವನು ಜೂಜಿಗೆ ಶರಣು ಹೋದನು. ಉಳಿದ ವ್ಯವಹಾರದಲ್ಲಿ ಇವನನ್ನು ಕೈಬಿಟ್ಟ ಅದೃಷ್ಟ ಇದರಲ್ಲಿ ಇವನಿಗೆ ಪ್ರಸನ್ನವಾಯಿತು. ಇವನು ದುಬಾರಿ ತಿಟ್ಟಿನ ಹಿರಿಯ, ದೊರೆ, ಆದನು. ಅಲ್ಲಿಯವರಿಗೆ ಯಾರಿಗೂ ಇಂಥ ದೊಡ್ಡ ಮನುಷ್ಯನ ಗೆಳೆಯರೆನ್ನಿಸಿಕೊಳ್ಳುವುದು ಒಂದು ಹೆಮ್ಮೆ. ಇವನ ಜೊತೆಗೆ ಹೋಗುವುದು ಬರುವುದು ಹೀಗೆ ಇವನನ್ನು ಮರ್ಯಾದೆಯಿಂದ ನಡೆಸಿಕೊಂಡರು.

ಇವರಲ್ಲಿ ಕೆಲವರು ಗರಡಿಗಳಿಗೆ ಸಂಬಂಧಪಟ್ಟವರು. ಇದರಿಂದ ಇವನ ಅನುಯಾಯಿಗಳು ಒಂದು ಪಡೆಯಂತೆಯೂ ಆದರು. ಇವನು ಪಾಳೆಯಗಾರನೆನ್ನಿಸಿಕೊಳ್ಳುವುದಕ್ಕೆ ಅರಮನೆ ಒಪ್ಪುತ್ತಿರಲಿಲ್ಲ. ತರುಣ ನಾಯಕ ಗರಡಿಗಳಿಗೆ ನಾಯಕನಾಗಿದ್ದನು. ಈ ಕಾರಣದಿಂದ ಇವರು ವೀರಮ್ಮಾಜಿ ನಾಯಕರ ಮಧ್ಯದ ವಿವಾದದಲ್ಲಿ ನಾಯಕನ ಪರವನ್ನು ವಹಿಸಿದರು. ನಾಯಕನು ಮಾವನ ಜೊತೆಗಾರ ಎಂಬದೂ ಈ ನಿಲುವಿಗೆ ಸಹಾಯವಾಯಿತು. ಇವನೇ ಈಗ ನಾಯಕನಿಗೆ ಬೇಗನೆ ಪಟ್ಟ ಆಗಬೇಕು ಎಂದು ಹೇಳುತ್ತಿದ್ದವನು. ಇವನೊಂದಿಗೆ ತಾನು ಮಾತ ನಾಡುವುದು ಎಷ್ಟು ಉಚಿತ?

ಶಾಸ್ತ್ರಿ, "ಬೇಡ ಅಂದರೆ ಬೇಡ. ಎದುರಿಗೆ ಮಾತನಾಡೋಣ ಎಂದರೆ ಕರಸೋಣ," ಎಂದನು.

ನೇಮಯ್ಯ, " ನೀವು ಯೋಚನೆ ಮಾಡಿ ಶಾಸ್ತ್ರಿಗಳೆ. ನಾಯಕರ ಪಕ್ಷವಹಿಸಿದೆ ಎಂಬಂತೆ ನಾನು ನಡೆಯಲಾರೆ. ಇವನೊಂದಿಗೆ ಈಗ ಮಾತನಾಡಿ ನಾಳೆ ಇವನು ಮಲೆತು ಎದ್ದರೆ ಅದಕ್ಕೆ ನನ್ನ ಪ್ರೋತ್ಸಾಹ ಇದ್ದಿತು ಎಂದು ತೋರಬಾರದು. ನೋಡೋಣವೆ, ಬೇಡವೆ?"

"ನೋಡಿ. ಇದರಿಂದ ಆಗುವುದೇನು? ನೋಡಿ, ಮಾತಾಡಿ, ಸಮಾಧಾನವಾಗಿ ನಡೆದುಕೊ ಎನ್ನಿ. ಜನಕ್ಕೆ ಸಮಾಧಾನವಾಗುವ ಭರವಸೆಯನ್ನು ಕೊಡಿ. ತೋರಿಕೆಗಾಗಿ ಏನೇನನ್ನು ಬಿಡೋಣ? ಸತ್ಯ ವಂತರಾಗಿದ್ದೇವೆ. ಈ ಧೈರ್ಯ ಸಾಕು."

"ಅದು ನಿಜ ಅನ್ನಿ. ಅಂದರೂ ಸತ್ಯವಂತಿಕೆ ಅನ್ನೋದು ಇರಲೂ ಬೇಕು, ತೋರಲೂ ಬೇಕು. ಕರೆಸಿ. ಸಮಾಧಾನದ್ದು ಅನ್ನೋ ಅಷ್ಟು ಮಾತು ಮಾತ್ರ ಹೇಳೋಣ."

## ೩೭

ಶಾಸ್ತ್ರಿ ಹೊರಕ್ಕೆ ಹೋಗಿ ಪಾಳೆಯಗಾರ ಆ ದಿನ ಬಂದು ಇಳಿದಿದ್ದ ಮನೆಗೆ ಆಳಿಂದ ಅವನನ್ನು ಬರಹೇಳಿ ಕಳುಹಿಸಿದನು. ಒಳಕ್ಕೆ ಬಂದು,

"ಲಿಂಗಣ್ಣಯ್ಯನ ತಮ್ಮನೂ ಬಂದಿದಾನೆ. ಅವನು ಅಲ್ಲಿದ್ದರೆ ಅವನನ್ನೂ ಬರಹೇಳು ಎಂದೆ," ಎಂದನು.

ಕೆಲವು ನಿಮಿಷದಲ್ಲಿ ಅವರಿಬ್ಬರೂ ಬಂದರು. ಪಾಳೆಯಗಾರ ಉದ್ದನೆಯ ತೆಳ್ಳನೆಯ ಮನುಷ್ಯ. ಅವನ ಮುಖ್ಯ ಲಕ್ಷಣ ಮೂಗಿನ ಕೆಳಗೆ ನೇರ ನಿಂತಿದ್ದ ಹುರಿಮೀಸೆ. ಭಾಸ್ಕರಯ್ಯ – ಲಿಂಗಣ್ಣಯ್ಯನ ತಮ್ಮ – ಗಿಡ್ಡ, ತುಂಬು ಮುಖದ ಮನುಷ್ಯ; ಅವನ ಮುಖದಲ್ಲಿ ಚಿಂತೆ ಸ್ಪಷ್ಟವಾಗಿ ಕಾಣುತ್ತಿದ್ದಿತು.

ಶಾಸ್ತ್ರಿ ಅವರನ್ನು ಒಳಗೆ ಬರಹೇಳಿದನು. ಇಬ್ಬರೂ ಬಂದು ನೇಮಯ್ಯನಿಗೆ ಶಾಸ್ತ್ರಿಗೆ ನಮಸ್ಕಾರ ಮಾಡಿದರು; ಶಾಸ್ತ್ರಿ ತೋರಿಸಿದ ಸ್ಥಳದಲ್ಲಿ ಕುಳಿತರು. ಶಾಸ್ತ್ರಿ, "ನೇಮಯ್ಯನವರು ದಯಮಾಡಿಸಿದ್ದರು ಪಾಳೇಗಾರರೆ. ನೀವು ಚಿಂತೆ ಮಾಡುತಾ ಇದ್ದ ಸಂಗತಿಯನ್ನ ಅವರಿಗೆ ತಿಳಿಸಿದೆ. ಅವರು, ಚಿಂತೆಗೆ ಕಾರಣ ಇಲ್ಲ, ಇಷ್ಟರಲ್ಲೆ ಎಲ್ಲಾ ವಿಷಯ ಇತ್ಯರ್ಥಕ್ಕೆ ಬರುತ್ತದೆ, ಎಂತ ಅಪ್ಪಣೆ ಕೊಡಿಸಿದರು ನೀವೇ ಅದನ್ನು ಕೇಳಿ ತಿಳಿದುಕೊಳ್ಳಲಿ ಎಂತ ನಿಮ್ಮನ್ನ ಕರೆಸಿದೆ," ಎಂದನು.

ಪಾಳೆಯಗಾರ, "ಸಂತೋಷ, ಸ್ವಾಮಿ; ಪಟ್ಟದ ಉತ್ಸವ ಯಾವಾಗ ನಡೆದೀತು? " ಎಂದನು.

ನೇಮಯ್ಯ: "ಇಂಥ ದಿನ ನಡೆಯುವುದು ಅಂತ ಗೊತ್ತಾಗಿಲ್ಲ. ಬೇಗನೆ ನಡೆಯುತದೆ."

"ಅದಕನ್ನ ಮೊದಲು ಬೇರೆ ಏನೋ ಒಂದು ಕೆಲಸ ನಡೆಯೋದು ಎಂತ ಮಾತು ತಿಳೀತು: ಅದರ ಮಾತೇನು?"

"ಸದ್ಯ ಅಂತ ಮಾತೇನೂ ಇಲ್ಲ."

"ಇದು ಖಂಡಿತವೇ ಸ್ವಾಮಿ?"

"ಈಗ ಅದರ ಮಾತು ಇಲ್ಲ. ಅದು ಇದೆ ಅಂತ ತಿಳಿದು ನಾವು ಯಾರೂ ಅಸಮಾಧಾನಪಡಬೇಕಾದ್ದಿಲ್ಲ."

ಪಾಳೆಯಗಾರ ಶಾಸ್ತ್ರಿಯ ಮುಖವನ್ನು ನೋಡಿದನು. ಶಾಸ್ತ್ರಿ, "ಹೌದು; ಈ ವಿಷಯದಲ್ಲಿ ನೀವು ನಿಮ್ಮವರು ಎಲ್ಲರಿಗೂ ಧೈರ್ಯ ಹೇಳಬಹುದು," ಎಂದನು.

ಪಾಳೆಯಗಾರ, "ಒಳ್ಳೇದು ಸ್ವಾಮಿ. ನಮ್ಮ ಹುಡುಗರು ಇದನ್ನ ಕೇಳಿ ತುಂಬಾ ಸಂತೋಷಪಡತಾರೆ. ಈಸಲ ನವರಾತ್ರಿ ಕಾಳಗಕ್ಕೆ ಅಂತ ಕಲಿಕೆ ಆರಂಭಿಸಿದರು.. ಆದರ ಮುನ್ನ ಜೋಡಿಗಳನ್ನ ಆರಿಸೋಕೆ ನಾಯಕರನ್ನ ಕೇಳಬೇಕು ಎಂದರು. ನಾಯಕರು ಇದಕ್ಕೆ ಹಿಂದಿನ ಸಲ ಒಪ್ಪಲಿಲ್ಲ. ಈಸಲ ಒಪ್ಪಿದಾರೆ. ಹುಡುಗರಿಗೆ ಬಹಳ ಸಮಾಧಾನ. ಪಟ್ಟ ಆಗುವುದು ಹಿರಿಯರದು ಈಸಾರಿ ದಿನ ಕಳೆಯಬೇಕು ಅಂತ ಯಾರೋ ಅಂದರಂತೆ. ಅದಕ್ಕೆ ಅಡ್ಡಿ ಇಲ್ಲ. ಆದರೆ ಆಮೇಲೆ ತಡ ಆಗಬಾರದು. ಇಷ್ಟಾದರೆ ನಮ್ಮ ಮಂದಿ ಎಲ್ಲ ಸಮಾಧಾನ ಆಗತದೆ ಸ್ವಾಮಿ," ಎಂದನು.

ನೇಮಯ್ಯ, "ಇಷ್ಟು ಆದೀತು. ಇದನ್ನ ಶಾಸ್ತ್ರಿಗಳೂ ಬೇರೇ ಹಿರಿಯರೂ ನೋಡಿಕೊಳ್ಳುತ್ತಾರೆ," ಎಂದನು.

ಪಾಳೆಯಗಾರ, "ಹೌದಲ್ಲ ಸ್ವಾಮಿ," ಎಂದು ಶಾಸ್ತ್ರಿಯನ್ನು ನೋಡಿದನು.

ಶಾಸ್ತ್ರಿ, "ನೇಮಯ್ಯನವರು ಹೇಳಿದ್ದನ್ನು ನಾವು ಯಾರೂ ಮಾಡು ವುದೆ," ಎಂದನು. ಪಾಳೆಯಗಾರ ಸುಮ್ಮನಿದ್ದನು.

ಶಾಸ್ತ್ರಿ, "ನಿಮ್ಮ ಮಾತು ಹೇಳಿ ಭಾಸ್ಕರಯ್ಯ," ಎಂದನು.

ಭಾಸ್ಕರಯ್ಯ, "ಯಜಮಾನರಿಗೆ ತಿಳಿಯದ ಸಂಗತಿ ಏನಿದೆ ಸ್ವಾಮಿ ನಾ ಹೇಳೋಕೆ? ಅಣ್ಣನ ಸಂಸಾರ ನೋಡಿಕೊಳ್ಳೋರಿಲ್ಲ. ಅವರನ್ನು ತೀರಾ ಕಠಿನವಾಗಿ ಕಾಣುತಾ ಇದಾರೆ. ನಾವು ಯಾರೂ ಅವರನ್ನು ನೋಡೋ ಹಾಗಿಲ್ಲ, ಮಾತನಾಡಿಸೋ ಹಾಗಿಲ್ಲ. ಅಪ್ಪನ ತಿಥಿಮಾಡೋಕೆ ಅವಕಾಶ ಕೊಡಲಿಲ್ಲ. ಸೆರೇಲಿ ಅವರು ಒಣಗಿಕೊಂಡಿದಾರಂತೆ. ಹೀಗೇ ನಡೆದರೆ ಅವರೇನು ಇನ್ನೊಂದು ವರುಷ ಜೀವದೊಂದಿಗಿರುವಂತೆ ಕಾಣಲಿಲ್ಲ. ಏನಾದರೂ ಮಾಡಿ ಅವರನ್ನ ಬಿಡಿಸಿದರೆ ಸಂಸಾರ ಬದುಕಿ ಕೊಳ್ಳುತ್ತೆ ಸ್ವಾಮಿ," ಎಂದನು.

ಅಷ್ಟುಹೊತ್ತಿಗೆ ಬಾಗಿಲಲ್ಲಿ ಒಬ್ಬ ಸುಮಂಗಲಿ ಹೆಂಗಸು ಕಾಣಿಸಿ ಕೊಂಡಳು. ಅವಳ ಕಂಕುಳಲ್ಲಿ ಒಂದು ಮಗು ಇದ್ದಿತು; ಪಕ್ಕದಲ್ಲಿ ಒಂದು ಹುಡುಗಿ ನಡೆಯುತ್ತಿದ್ದಿತು.

ಭಾಸ್ಕರಯ್ಯ, "ನಿಮ್ಮ ಹತ್ತಿರ ಪ್ರಾರ್ಥನೆ ಮಾಡೋಕೆ ನಮ್ಮ ಅತ್ತಿಗೆ ಬರತೀನೆ ಅಂದರು; ಅವರನ್ನು ಕರೆತಂದೆ; ಅವರೇ ಬರತಾ ಇದಾರೆ," ಎಂದನು.

ಹೆಂಗಸು ಇವರ ಹತ್ತಿರಕ್ಕೆ ಬಂದು ಮಗುವನ್ನು ಕೆಳಗಿಳಿಸಿ ಶಾಸ್ತ್ರಿಗೆ ನೇಮಯ್ಯನಿಗೆ ಜೊತೆಯಾಗಿ ಎಂಬಂತೆ ಮಂಡಿಯೂರಿ ನಮಸ್ಕಾರ ಮಾಡಿ ಎದ್ದು, "ನನ್ನ ಹಣೆ ಕುಂಕುಮಾನ ಉಳಿಸಿಕೊಡಬೇಕು. ಈ ಮಕ್ಕಳು ತಬ್ಬಲಿ ಆಗದಂತೆ ಕಾಪಾಡಬೇಕು," ಎಂದು ಹೇಳಿದಳು. ಕಣ್ಣಿಂದ ಸುರಿದ ನೀರನ್ನು ಸೆರಗಿನಿಂದ ಒರಸಿಕೊಂಡಳು.

ಪಾಳೆಯಗಾರ ಇವಳ ದುಃಖವನ್ನು ನೋಡಲಾರದೆ ಕಣ್ಣೀರು ಹಾಕಿದನು; ಭಾಸ್ಕರಯ್ಯ ಬಿಕ್ಕಿ ಅತ್ತನು.

ಏನೂ ತಿಳಿಯದೆ ಮಗು ಅತ್ತಿತು. ಹೆಂಗಸು ಅದನ್ನು ಎತ್ತಿಕೊಂಡಳು.

ನೇಮಯ್ಯನ ಕಣ್ಣು ತೇವವಾಯಿತು. ಅವನು ಶಾಸ್ತ್ರಿಗೆ, "ಈ ಸಂಗತಿ ಎಲ್ಲ ತಮಗೆ ತಿಳಿದೇ ಇದೆ; ಪಟ್ಟ ಆದರೆ ಉಳಿದ ಮಾತೆಲ್ಲಾ ತಾನೇ ಸರಿಹೋಗುತ್ತೆ. ಸ್ವಲ್ಪ ಸಹಿಸಿಕೊಳ್ಳಬೇಕು," ಎಂದನು.

ಹೆಂಗಸು, "ಅಯ್ಯೋ ಪಟ್ಟವಾಗೋವರೆಗೆ ಅವರನ್ನು ಉಸಿರೊಂದಿಗೆ ಉಳಿಸತಾರೇನಪ್ಪಾ ಇವರು? ಈಗ ಬಿಡಿಸಿದರೆ ಬದುಕಿದರು; ಬಿಡಿಸಲಿಲ್ಲ, ನನ್ನ ಮಾಂಗಲ್ಯಕ್ಕೆ ಊನ," ಎಂದಳು.

ಶಾಸ್ತ್ರಿ, "ಈಗಲೇ ಏನಾದರೂ ಪ್ರಯತ್ನ ಮಾಡಬೇಕು ನೇಮಯ್ಯನವರೆ," ಎಂದು ಹೇಳಿದನು.

ನೇಮಯ್ಯ, "ಮಾಡೋಣ. ನಾವು ಏನೋ ಮಾಡೋಕೆ ಹೋಗಿ ಅವರಿಗೆ ಮತ್ತಷ್ಟು ಕಷ್ಟವಾದರೆ ತಪ್ಪಾಗುತದೆ. ಸುಳಿವು ನೋಡಿ ನಡೆಯಬೇಕು," ಎಂದನು.

ಶಾಸ್ತ್ರಿ, "ನೀವು ಅಷ್ಟು ಭರವಸೆ ಹೇಳಿದರೆ ಸಾಕು," ಎಂದು ಉಳಿದವರಿಗೆ, "ಆಯಿತಲ್ಲ. ನೀವಿನ್ನು ಹೋಗಿಬನ್ನಿ," ಎಂದನು.

ಅವರೆಲ್ಲ ಹೊರಟು ಹೋದರು. ನೇಮಯ್ಯ ಇನ್ನೆರಡು ನಿಮಿಷ ಇದ್ದು ಇನ್ನು ತಾನು ಹೊರಡುತ್ತೇನೆ ಎಂದನು.

ಶಾಸ್ತ್ರಿ ಕೈಮುಗಿದು, "ಹೋಗಿ ಬನ್ನಿ ನೇಮಯ್ಯ. ಮೈಸೂರಿನವರು ಕಾದಿದಾರೆ. ಇದು ಕೊನೆಯ ಮಾತು. ನಾಯಕರಿಗೆ ಮಾವ ಎನ್ನುವದನ್ನು ಮರೆತು ಅವರಿಗೆ ಪಟ್ಟ ಕಟ್ಟುವ ವಿಷಯವನ್ನು ಮುಂದರಿಸಿ. ಸ್ವಂತಕ್ಕೆ ಅಂತ ಆತುರ ಪಡೋದು ತಪ್ಪು. ಹಾಗೆಯೆ ಸ್ವಂತ ಅಂತ ಒಳ್ಳೆಯದನ್ನು ಮಾಡದೆ ಸಂಕೋಚ ಪಡೋದು ತಪ್ಪು. ನಾಯಕರನ್ನ ಬೇಗನೆ ಗದ್ದುಗೆ ಮೇಲೆ ಕೂಡಿಸಿ: ಈ ತೊಡಕೆಲ್ಲ ಹರಿಯುತದೆ, ಸಂಸ್ಥಾನಕ್ಕೆ ಒಳ್ಳೆಯದಾಗುತದೆ," ಎಂದನು. ನೇಮಯ್ಯ ಮನೆಗೆ ಹೊರಟು ಬಂದನು.

೩೮

ಕರಣೀಕ ಶಿವಪ್ಪ ಪೇಟೆಯಲ್ಲಿ ತನ್ನ ಸ್ವಂತದ ಕೆಲಸ ಸ್ವಲ್ಪವನ್ನು ನೋಡಿಕೊಳ್ಳಬೇಕಾದದ್ದಿತ್ತು. ಹಾಗೆಯೇ ಗೌರಮ್ಮ ಹೆಗ್ಗಡಿತಿಯ ಅಡಕೆಯ ಸಾಹುಕಾರನಿಂದ ಲೆಕ್ಕ ತಿಳಿದು ರೊಕ್ಕವನ್ನು ಪಡೆಯುವುದಿತ್ತು. ಆ ಕೆಲಸಕ್ಕೆ ಹೋಗುವ ಮೊದಲು ಅವನು ನೇಮಯ್ಯನ ಮನೆಗೆ ಬಂದು ವೀರಣ್ಣನನ್ನು ಕಂಡನು. ಸದ್ಯಕ್ಕೆ ಬೇರೆ ಕೆಲಸ ಇಲ್ಲ, ಈ ಪ್ರಾಂತದ ವ್ಯಾಪಾರದ ರೀತಿಯನ್ನು ತಿಳಿಯೋಣ, ಎಂಬ ಯೋಚನೆಯಿಂದ ವೀರಣ್ಣನೂ ಸೂರಪ್ಪನೂ ಪೇಟೆಯನ್ನು ನೋಡುವುದಕ್ಕೆ ಎಂದು ಅವನೊಡನೆ ಹೊರಟರು.

ನೇಮಯ್ಯ ಶಿವಪ್ಪನನ್ನು ಕುರಿತು, "ಏನು ಶಿವಣ್ಣ, ಜೊತೆಗೆ ಯಾರನ್ನಾದರೂ ಕಳುಹಿಸಿಕೊಡಲೊ ?" ಎಂದನು.

ಶಿವಪ್ಪ, "ತಮ್ಮ ಚಿತ್ತ ಧಣಿಗಳೆ. ಯಾರಾದರೂ ಬಂದರೂ ಸಮ. ಇಲ್ಲಂದ್ರೆ ನನಗೆ ತಿಳಿದಂತೆ ನೋಡಿಕೋತೀನಿ," ಎಂದನು.

"ನೇಮಯ್ಯ, ನಿಮಗೆ ತಿಳಿದಂತೆ ಎಂದಮೇಲೆ ಏನೂ ಚಿಂತೆ ಇಲ್ಲ ಬಿಡಿ," ಎಂದು ಅತಿಥಿಗಳನ್ನು ಅವನೊಂದಿಗೆ ಕಳುಹಿಸಿ ಕೊಟ್ಟನು.

ಮೊದಲು ಇವರು ಶಿವಪ್ಪನ ಸಾಹುಕಾರನ ಅಂಗಡಿಗೆ ಹೋದರು. ಶಿವಪ್ಪ ವರ್ಷದಲ್ಲಿ ಒಂದಷ್ಟು ಭತ್ತ, ಅಷ್ಟು ಅಡಕೆ, ಒಂದಷ್ಟು ಏಲಕ್ಕಿಯನ್ನು ಆಗಾಗ ನಗರಕ್ಕೆ ಪ್ರಯಾಣ ಹೊರಟ ಜನರೊಂದಿಗೆ ಸಾಹುಕಾರ

ನಿಗೆ ತನ್ನ ಲೆಕ್ಕದಲ್ಲಿ ಕಳುಹಿಸಿಕೊಟ್ಟಿದ್ದನು. ಸಾಹುಕಾರನು ಅದನ್ನು ಲೆಕ್ಕದಲ್ಲಿ ಗುರುತು ಹಾಕಿಕೊಂಡು, ವ್ಯಾಪಾರವಾದಂತೆ ಕರಣೀಕನಿಗೆ ಸಲ್ಲಬೇಕಾದದ್ದು ಇಷ್ಟು ಹಣ ಎಂದು ನಿಶ್ಚಯಿಸಿದ್ದನು. ಶಿವಪ್ಪ ತಾನು ಕಳುಹಿಸಿಕೊಟ್ಟಿದ್ದ ಸಾಮಾನೆಲ್ಲ ಲೆಕ್ಕಕ್ಕೆ ಬಂದಿದೆ ಎನ್ನುವುದನ್ನು ನೋಡಿ ಕೊಂಡು ಲೆಕ್ಕವನ್ನು ಒಪ್ಪಿಕೊಂಡನು. ತನಗೆ ಬರಬೇಕಾಗಿದ್ದ ಹಣ ದಲ್ಲಿ ಸ್ವಲ್ಪವನ್ನು ತೆಗೆದುಕೊಂಡು ಉಳಿದದ್ದನ್ನು ಸಾಹುಕಾರನಲ್ಲಿ ಚುಂಗಡಿಗೆ ಬಿಟ್ಟನು. ಹಿಂದಿನ ವರ್ಷದವರೆಗೆ ಅವನು ಹೀಗೆ ಸಾಹುಕಾರ ನಲ್ಲಿ ಬಿಟ್ಟಿದ್ದ ಹಣ ತಕ್ಕಷ್ಟು ವರಹ ಆಗಿತ್ತು. ಎಷ್ಟು ಎನ್ನುವುದನ್ನು ಸಾಹುಕಾರ ಅವನಿಗೆ ತಿಳಿಸಿದನು. ಶಿವಪ್ಪ ಅಲ್ಲಿಂದ ಹೊರಟು ತನ್ನ ಗುರುತಿನ ಒಂದು ಅರಿವೆ ಅಂಗಡಿಗೆ ಹೋಗಿ ಮನೆ ಮಕ್ಕಳಿಗೆಂದು ಎರಡು ಬಣ್ಣದ ಬಟ್ಟೆಗಳನ್ನು ಕೊಂಡುಕೊಂಡನು. ಆಮೇಲೆ ಇವರು ಹೆಗ್ಗಡಿತಿಯ ಸಾಹುಕಾರನ ಅಂಗಡಿಗೆ ಹೋದರು. ಹೋಗುತ್ತ ದಾರಿ ಯಲ್ಲಿ ವೀರಣ್ಣ ಶಿವಪ್ಪನನ್ನು, "ಇದು ಯಾಕೆ ಶಿವಣ್ಣನವರೆ, ನಿಮ್ಮ ವ್ಯಾಪಾರಾನ ನೀವು ಹೆಗ್ಗಡಿತಿಯ ಸಾಹುಕಾರರಿಗೆ ಕೊಡದೆ ಈ ಬೇರೆಯ ವರಿಗೆ ಕೊಟ್ಟಿದ್ದೀರಿ ?" ಎಂದು ಕೇಳಿದನು.

ಶಿವಪ್ಪ, "ನೋಡಿ ಬುದ್ಧಿಗಳೆ, ನಾನು ಕೊಡೋದು ಪಡಿ, ಮೂರು ಪಡಿ. ತುದಾ ಅಂದರೆ ಹತ್ತುಪಡಿ. ಹೆಗ್ಗಡಿತೀರು ಅಂಗಡೀಗೆ ಒಂದು ಸಲಕ್ಕೆ ಹಾಕತಾರೆ ಖಂಡಿ, ಎರಡು ಖಂಡಿ. ಈ ಎರಡು ಖಂಡಿ ಕೊಳ್ಳೋ ಸಾಹುಕಾರ ನನ್ನ ಮೂರು ಪಡೀನ ಮೂಸಿಯಾನೆ? ಇವರ ಗಾಳಕ್ಕೆ ದೊಡ್ಡ ಮೀನೇ ಬೇಕು. ಇದೂ ಇರಲಿ. ಇವ ತಗೊಂಡಾ ಅಂದ್ರೂನೂ ನಾನು ಇವನ ಹತ್ತಿರ ಹಾಕತಿರಲಿಲ್ಲ. ಯಾಕಂತೀರೊ ? ನಾನು ನಿಜ ವಾಗಿ ಹತ್ತು ಕೊಳಗ ಹಾಕಿ ನನ್ನ ಲೆಕ್ಕಕ್ಕೆ ಹತ್ತು ಕೊಳಗದ ಹಣ ಬಂತು. ಯಾವುದೋ ದಿನ ಹೆಗ್ಗಡಿತೀರು ಲೆಕ್ಕ ನೋಡಿದಾಗ ಶಿವಣ್ಣನ ಲೆಕ್ಕಕ್ಕೆ ಸಾಹುಕಾರರು ಹತ್ತು ಕೊಳಗ ಸೇರಿಸಿದ್ದಾರೆ ಅಂದರೆ, ಶಿವಣ್ಣ ನಮ್ಮ ಲೆಕ್ಕದಲ್ಲಿ ಏನೊ ತರಗು ತಗೊಂಡಿದ್ದಾನೆ ಅಂತ ಒಡತೀರು ಅಂದು ಕೊಳ್ಳಬಹುದು. ಅವರು ಕೇಳೋದಿಲ್ಲ; ನಾನು ಹೇಳೋದಿಲ್ಲ. ಮನಸ್ಸು ಕೆಟ್ಟಿತು; ಮನೆ ಹಾಳಾಯಿತು. ಯಾಕಿದರ ಗ್ರಹಚಾರ ? ಖಂಡಿಯೋರು

ಖಂಡಿಯೋರ ತಾವ ಹೋಗಲಿ. ಪಡಿಯೋರು ಪಡಿಯೋರ ತಾವ ಹೋಗೋದು," ಎಂದನು.

ಶಿವಪ್ಪನ ವ್ಯವಹಾರ ಜ್ಞಾನ ವೀರಣ್ಣನಿಗೆ ತುಂಬ ಮೆಚ್ಚಿಗೆಯಾಯಿತು.

## ೩೯

ಹೆಗ್ಗಡಿತಿಯ ಸಾಹುಕಾರನ ಅಂಗಡಿಯಲ್ಲಿ ಶಿವಪ್ಪ ತನ್ನ ಅಂಗಡಿಯಲ್ಲಿ ಹೇಗೊ ಹಾಗೆ ಬಂದುಹೋದ ವಿವರದ ಲೆಕ್ಕವನ್ನೆಲ್ಲ ಕ್ರಮವಾಗಿ ಶೋಧಿಸಿದನು. ಪದಾರ್ಥಕ್ಕೆ ವ್ಯಾಪಾರದಲ್ಲಿ ಬಂದಿತು ಎಂಬ ದರವನ್ನು ಕಣ್ಣಿಟ್ಟು ನೋಡಿ, ಚರ್ಚೆಮಾಡಿ ಒಪ್ಪಿಕೊಂಡನು. ಒಟ್ಟಿನಲ್ಲಿ ತನ್ನ ಅಂಗಡಿಯಲ್ಲಿ ತನ್ನ ಬರಹೋಗಿನ ವಿವರವನ್ನು ಕುರಿತು ಮಾಡಿದ ಪರೀಕ್ಷೆಗಿಂತ ಒಡತಿಯ ಬರಹೋಗಿನ ವಿಷಯದಲ್ಲಿ ಹೆಚ್ಚು ಕಠಿನವಾದ ವಿಚಾರಣೆಯನ್ನು ನಡೆಸಿದನು. ಸಾಹುಕಾರನಾದರೂ ಇದು ಯಾವ ಮಾತಿಗೂ ಬೇಸರ ತೋರಿಸಲಿಲ್ಲ. ಶಿವಪ್ಪ ಕೇಳಿದ ಎಲ್ಲ ಪ್ರಶ್ನೆಗೂ ಲೆಕ್ಕವನ್ನು ತೆರೆದು ವಿವರವನ್ನು ನೋಡಿ ಸಮಾಧಾನ ಹೇಳಿದನು. ಇಂಥ ದಿನ ಇಷ್ಟು ವ್ಯಾಪಾರ ಆಯಿತು; ಅದರ ದರ ಹೀಗೆ; ಅದು ಅದೇ ದಿನವೇ ಆದ ಬೇರೆ ಒಂದು ವ್ಯಾಪಾರಕ್ಕಿಂತ ಇಷ್ಟು ಹೆಚ್ಚು ಬೆಲೆಯನ್ನು ತಂದಿತು, ಅಥವಾ ಇಷ್ಟು ಕಡಮೆಯನ್ನು ತಂದಿತು; ಇದಕ್ಕೆ ಕಾರಣ ಇದು: ಇತ್ಯಾದಿ ಇತ್ಯಾದಿ. ಲೆಕ್ಕವನ್ನು ನೋಡಿ ಆದಮೇಲೆ ಶಿವಪ್ಪ, "ನಿಮಗೆ ಬಹಳ ಕಷ್ಟಮಾಡಿದೆ ಧಣಿಗಳೆ," ಎಂದನು. ಸಾಹುಕಾರ, "ನೀವು ಕಷ್ಟಮಾಡಬೇಕು ಕರಣೀಕರೆ. ನನಗೆ ಕಷ್ಟ ಆಗಬಾರದೂ ಅಂತ ಸುಮ್ಮನೆ ಇದ್ದರೆ ನೀವು ಹೆಗ್ಗಡಿತೀರ ಉಪ್ಪುತಿಂದ ಸಾಲ ತೀರಿಸಲಿಲ್ಲ. ನೀವು ದುಡಿದಲ್ಲವೆ ನನ್ನ ದುಡಿಸಿದಿರಿ. ಇದು ನಮಗೆ ಒಪ್ಪಿಗೆ," ಎಂದನು.

ಶಿವಪ್ಪ, "ಇದನ್ನೇನು ನೀವೇ ಮಾಡಬೇಕಾಗಿರಲಿಲ್ಲ. ನಿಮ್ಮ ಕರಣೀಕರಿಗೆ ಹೇಳಿದ್ದರೆ ಅವರು ಲೆಕ್ಕ ತೋರಿಸತಾ ಇದ್ದರು," ಎಂದನು.

ಸಾಹುಕಾರ: ಈ ಲೆಕ್ಕಾನ ತೋರಿಸಬೇಕಾದರೆ ಕರಣೀಕರು ನನ್ನ ಅದು ಇದು ಕೇಳಬೇಕಾಗತದೆ. ಅವರು ಮಾಡಲೀ ಅಂತ ಬಿಟ್ಟರೆ ನನಗೆ ತಪ್ಪೋದಿಲ್ಲ. ನಾನೇ ಮಾಡಿಬಿಟ್ಟೆ; ಅವರು ಬೇರೆ ಕೆಲಸ ನೋಡಿಕೋತಿದಾರೆ.

ಶಿವಪ್ಪ: ಅದೂ ಸರಿ ಅನ್ನಿರಿ. ನೀವೇ ಲೆಕ್ಕ ಹೇಳಿದಿರಿ ಅಂದರೆ ಹೆಗ್ಗಡಿತೀರು ಬಹಳ ಸಂತೋಷಪಡತಾರೆ.

"ಹೌದಪ್ಪ: ನಿಮ್ಮ ಹೆಗ್ಗಡಿತೀರು ಒಪ್ಪಿದರೆ ನೂರು ಜನ ಒಪ್ಪಿದ ಹಂಗೆ. ನಿಮ್ಮ ಒಡತೀರಿಗೆ ಕತ್ತಲಲ್ಲೆ ಕಣ್ಣು ಕಾಣಿಸತದೆ."

"ಹಂಗೇ ಅಂತ ಹಗಲಲ್ಲಿ ಕಾಣೋದಿಲ್ಲ ಅನ್ನಬ್ಯಾಡಿ."

ಎಲ್ಲರೂ ನಕ್ಕರು. ಮಾತಿನ ಧ್ವನಿಯಲ್ಲಾಗಲಿ ತನ್ನ ಒಡತಿ ಯನ್ನು ಗೂಬೆ ಎಂದು ಹೇಳುವುದಾದರೆ ಈ ಕರಣೀಕನಿಗೆ ಒಪ್ಪಿಗೆ ಇಲ್ಲ. ಸಾಹುಕಾರನು, "ನನ್ನ ಅಪ್ಪ, ನಿಮ್ಮ ಹೆಗ್ಗಡಿತೀರನ್ನ ಹಾಗಂದು ಉಳೀಬೇಕು ಯಾವ ಗಂಡು? ಅವನ ಮನೇನ ಉರುವಲು ಮಾಡಿ ಸುಟ್ಟುಬಿಟ್ಟಾರು ನಿಮ್ಮ ಒಡತಿ," ಎಂದನು.

ಲೆಕ್ಕವೆಲ್ಲ ಮುಗಿದ ಮೇಲೆ ಶಿವಪ್ಪ, "ಈಸಲ ಹೆಗ್ಗಡಿತೀರ ಲೆಕ್ಕದಲ್ಲಿ ಹಿರೀಮಠಕ್ಕೆ ಎರಡುಹೊನ್ನು ಕಾಣಿಕೆ ಒಪ್ಪಿಸಬೇಕು. ನಗರೇಶ್ವರನ ದೇವಸ್ಥಾನದಲ್ಲಿ ಅವರ ಹೆಸರಲ್ಲಿ ಅರ್ಚನೆ ನಡಸಬೇಕು," ಎಂದನು. ಸಾಹುಕಾರ, "ಹ್ಯಾಗೂ ಬಂದಿದ್ದೀರಲ್ಲ, ಕಾಣಿಕೇನ ನೀವೇ ಅಯ್ಯ ಗಳಲ್ಲಿ ಒಪ್ಪಿಸಿಬಿಡಿ. ದೇವಸ್ಥಾನದಲ್ಲಿ ಅರ್ಚನೇನೂ ನಿಂತು ನಡಸಿ ಬಿಡಿ. ಸಾಹುಕಾರರು ಮಾಡಿಸಿದರು ಅಂತ ಸುದ್ದಿ ಅಷ್ಟೇ ಕೇಳೋಕೆ ಬದಲು 'ನಾನೇ ಸೇವೆ ನಡಸಿದೇ' ಅಂತ ನೀವು ಒಡತೀರಿಗೆ ಹೇಳ ಬಹುದು," ಎಂದನು.

ಆ ದಿನ ಮಾರನೆಯ ದಿನ ಹೇಗೂ ನಗರದಲ್ಲಿರಬೇಕು ಎಂದು ಬಂದದ್ದರಿಂದ ಶಿವಪ್ಪ ಈ ಗುರುಸೇವೆ ದೇವರ ಸೇವೆಯನ್ನು ತಾನೇ ನಡೆಸುವುದಾಗಿ ನಿರ್ಧರಿಸಿದನು. ಆಗಲಿ ಎಂದು ಸಾಹುಕಾರನಿಗೆ ಒಪ್ಪಿಗೆ ಇತ್ತನು.

## ೪೦

ಮನೆಗೆ ಹಿಂದಿರುಗಿ ಬರುತ್ತ ವೀರಣ್ಣ ಶಿವಪ್ಪನನ್ನು, "ವರ್ಷದ ಲೆಕ್ಕವನ್ನೆಲ್ಲ ಹೀಗೆ ನೋಡುವುದರಲ್ಲಿ ಕೆಲಸ ಕಷ್ಟ ಆಗುವುದಿಲ್ಲವೆ?" ಎಂದು ಕೇಳಿದನು.

"ಏನು ಅಂತಾ ಕಷ್ಟ ಆಗೋದಿಲ್ಲ. ಅಂದರೆ ಲೆಕ್ಕವನ್ನು ನೋಡುವುದು ವರ್ಷಕ್ಕೆ ಒಂದೇಸಲ ಎಂತ ಏನೂ ಇಲ್ಲ. ಈಸಲ ಹಿಂಗಾಯಿತು. ಒಂದೊಂದು ವರ್ಷ ಬೇರೆ ಕೆಲಸಕ್ಕೆ ಎಂತ ಎರಡು ಮೂರು ಸಾರಿ ನಗರಕ್ಕೆ ಬರತೀವಿ. ಆಗಲೂ ಲೆಕ್ಕ ನೋಡೋದುಂಟು. ಬಂದು ಕೇಳಿದಾಗ ಸಾಹುಕಾರರು ಈಹೊತ್ತು ಹೇಳಿದ ಹಾಗೇನೆ ಲೆಕ್ಕ ಹೇಳಿ ಬಿಡತಾರೆ."

"ಯಾವಾಗಲೇ ಆಗಲಿ ಆದದ್ದೊಂದು ಬರದದ್ದೊಂದು ಅನ್ನೋ ಮಾತು ಬಂದಿಲ್ಲವೊ?"

"ಎಂದರೆ?"

"ಹತ್ತು ಹೊನ್ನು ಬಂದಾಗ ಒಂಬತ್ತು ಬಂತೂ ಅಂತ ತೋರಿಸೋದು ಅಂತ ಇಟ್ಟುಕೊಳ್ಳಿ."

"ಎಂದೂ ಆಗಿಲ್ಲ. ಒಂದು ಕವಡೆ ಕಾಸು ಹೆಚ್ಚು ಕಡಮೆ ಆಯಿತೂ ಅಂತ ಸಾಹುಕಾರನಿಗೆ ತೋರಿಸಿದರೆ ಆ ಹೊತ್ತು ಅವರು ವಿಷ ತಗೊಂಡು ಪ್ರಾಣ ಬಿಟ್ಟಿರತಾರೆ."

"ಇದು ಹೇಗೆ ಇಷ್ಟು ಖಂಡಿತವಾಗಿ ನಡೆಯುತ್ತಿದೆ?"

"ಶಿವಪ್ಪನಾಯಕರ ಶಿಸ್ತು. ಅವರು ಮಾಡಿದ ಶಿಸ್ತೆ ಈಗಲೂ ನಡೀತಿದೆ. ಸಾಹುಕಾರರದು ಒಂದು ಕೇರಿ. ಅದಕ್ಕೆ ಒಬ್ಬ ಶೆಟ್ಟಿ ಇದಾನೆ. ಚಿಳ್ಳೆಪಿಳ್ಳೆ ದೊಡ್ಡಗೊಡ್ಡ ಎಲ್ಲ ಅವನ ಮಾತಿನಂತೆ ನಡೆಕೊಳ್ಳಬೇಕು. ಯಾವೋನಾಗಲಿ ನೂರು ವ್ಯಾಪಾರದಲ್ಲಿ ಒಂದರಲ್ಲಿ ತಪ್ಪಿತೂ ಅಂದರೆ ಅವನು ತಿರುಗಿ ಇಲ್ಲಿ ಬಾಳೋ ಹಂಗಿಲ್ಲ. ಅಂಗಡಿ ಎತ್ತಿ ನಡೀತಿರಬೇಕು. ಒಬ್ಬ ಮಾಡಿದ ತಪ್ಪಿಗೆ ನೂರು ಜನದ ನಂಬಿಕೆ ಕೆಟ್ಟರೆ ಅವನ್ನೇನು ಉಳಿಸ್ತಾರೆ? ಗರತಿ ಹೆಣ್ಣುಮಗಳ

ಮರ್ಯಾದೆ ಕಾಯಿಕೊಳ್ಳೋ ಹಂಗೆ ಸಾಹುಕಾರರು ತಮ್ಮ ಹೆಸರು ಕಾಯಿಕೊಳ್ಳುತಾರೆ."

ಹೀಗೆಯೆ ವಿಚಾರಿಸಿದ್ದರಲ್ಲಿ ಶಿವಪ್ಪ ಈ ಕೆಲವು ವಿವರಗಳನ್ನು ಹೇಳಿದನು. ಒಬ್ಬೊಬ್ಬ ಸಾಹುಕಾರನೂ ತನ್ನ ತನ್ನ ಕುಳಗಳ ಲೆಕ್ಕವನ್ನು ಪ್ರಾಯಶಃ ತಾನು ವ್ಯಾಪಾರ ಪ್ರಾರಂಭಿಸಿದ ಕಾಲದಿಂದಲೂ ಇಟ್ಟು ಕೊಂಡಿರುವನು. ಭೂಮಿ ಒಬ್ಬರ ಕೈಯಿಂದ ಮತ್ತೊಬ್ಬರ ಕೈಗೆ ಹೋಗ ಬಹುದು; ಆದರೆ ಅದರ ಬೆಳೆ ಹೊಸ ಧಣಿಯಿಂದಲೂ ಅದೇ ಸಾಹುಕಾರನ ಬಳಿಗೆ ಬರುವುದು. ಹೊಸ ಧಣಿ ಬೇರೆ ಒಬ್ಬ ಸಾಹುಕಾರನ ಬಳಿ ಹೋಗುವುದಕ್ಕೆ ಅಡ್ಡಿ ಇಲ್ಲ; ಆದರೆ ಯಾರೂ ಸಾಮಾನ್ಯವಾಗಿ ಹಾಗೆ ಹೋಗುವುದಿಲ್ಲ. ಹೋದರು; ಆ ಹೊಸ ಸಾಹುಕಾರ, ಇದುವರೆಗೆ ನಿಮಗೆ ಯಾರು ಈ ಸೇವೆ ಮಾಡುತ್ತಿದ್ದರು, ಎಂದು ವಿಚಾರಿಸುವನು; ತಾನು ಆ ಕುಳವನ್ನು ಒಪ್ಪಿಕೊಳ್ಳುವ ಮೊದಲು ಹಿಂದಿನ ಸಾಹುಕಾರನನ್ನು ಕೇಳಿ ಅವನ ಒಪ್ಪಿಗೆ ಪಡೆಯುವನು. ಒಪ್ಪಿಗೆ ಸುಸೂತ್ರವಾಗಿ ಬಾರದೆ ಇದ್ದರೆ ಕಾರಣವೇನೊ ಇರಬೇಕು; ಅಂಥ ಸಂದರ್ಭದಲ್ಲಿ ವಿಷಯ ತರಗುಪೇಟೆಯ ಶೆಟ್ಟಿಗಳ ಮುಂದೆ ಹೋಗುವುದು; ಅವರು ಸಂಗತಿ ಏನೆಂದು ವಿಚಾರ ಮಾಡಿ ತೀರ್ಪು ಕೊಡುವರು.

ಹೀಗೆ ವರ್ತಕರಲ್ಲಿ ಪರಸ್ಪರ ಈರ್ಷೆ ಹುಟ್ಟದಂತೆ ಹಿರಿಯರು ನೋಡಿಕೊಳ್ಳುತ್ತಿದ್ದರು. ಇಷ್ಟೆಲ್ಲ ಕಟ್ಟುಪಾಡಿನ ತಳಹದಿ ವರ್ತಕನ ಸತ್ಯ. ಧಣಿ ಹೊಸಬನಾದರೂ ವ್ಯವಹಾರ ಹಳೆಯದು ಎಂದು ಅವನು ಕಾಣುವಂತೆ ಸಾಹುಕಾರ ಒಬ್ಬನು ತೀರಿಕೊಂಡರೆ ಅವನ ಮಗ ಅಥವಾ ಮನೆತನ ಲೆಕ್ಕವನ್ನು ಲವಲೇಶ ತಪ್ಪದಂತೆ ಒಂದು ದಿನ ಸಾವಕಾಶ ವಾಗದಂತೆ ಹಾಗೆಯೇ ನಡೆಸಿಕೊಂಡು ಬರುವುದು ಒಂದು ಸಂಪ್ರದಾಯ ವಾಗಿದ್ದಿತು. ಕೆಲವು ವೇಳೆ ಕುಳವಾಗಿದ್ದವನು ತೀರಿಹೋಗಿ ಅವನ ಉತ್ತರಾಧಿಕಾರಿಗಳು ಚಿಕ್ಕವರಾದ ಕಾರಣದಿಂದಲೊ ದೂರದಲ್ಲಿರುವುದ ರಿಂದಲೊ ಒಡನೆ ಬಂದು ಲೆಕ್ಕ ಕೇಳದೆ ಇದ್ದರೂ ವರ್ಷಾಂತರ ಬಿಟ್ಟು ಬಂದಾಗ ಸಾಹುಕಾರ ಲೆಕ್ಕವನ್ನು ಒಪ್ಪಿಸುವನು. ಮಧ್ಯೆ ಹಣವನ್ನು ಚುಂಗಡಿಗೆ ಕೊಟ್ಟಿದ್ದಂತೆ ಲೆಕ್ಕಹಾಕಿ ಆ ಉತ್ತರಾಧಿಕಾರಿಗಳಿಗೆ ಸಲ್ಲ

ಬೇಕಾದ ಹಣವನ್ನು ನಿರ್ಣಯಿಸುವನು. ವ್ಯವಹಾರಕ್ಕೆಲ್ಲ ಸೂರ್ಯ ಚಂದ್ರರು ಸಾಕ್ಷಿ ಎನ್ನುವ ಮಾತನ್ನು ಈ ಜನರು ಅಕ್ಷರಶಃ ನಂಬಿದ್ದರು; ಅದರಂತೆ ನಡೆದುಕೊಳ್ಳುತಿದ್ದರು.

"ಸೂರ್ಯ ಚಂದ್ರರ ಸಾಕ್ಷಿ ಎನ್ನುವುದು ನಮ್ಮ ಕಡೆಗೂ ಉಂಟು. ಅಂದರೆ ಇದರ ಮರೆಯಲ್ಲಿ ಸುಳ್ಳುತಟವಟ ಇಲ್ಲವೇ ಇಲ್ಲವೇನಪ್ಪಾ?" ಎಂದು ವೀರಣ್ಣ ಕೇಳಿದನು.

ಶಿವಪ್ಪ, "ಸುಳ್ಳುತಟವಟ ಇಲ್ಲದೆ ನಗರ ಆಗತದೆಯೆ? ಅದೂ ಅಲ್ಲಿ ನಡೀತಿರತದೆ," ಎಂದು ಒಂದು ಕಡೆಗೆ ಕೈನೀಡಿ ತೋರಿಸಿದನು.

"ಅಲ್ಲೇನಿದೆ?"

"ಅದು ದುಬಾರಿ ತಿಟ್ಟು"

"ಹಂಗಂದರೆ?"

"ಅಲ್ಲಿ, ಈಗ ತೆಗೆದು ಈಗ ಮಾರೋದು, ಏನು ಬಂತು ಏನು ಬಿಟ್ಟಿತು ಅಂತ ಪಣಕಟ್ಟೋದು, ಇಂಥ ವ್ಯಾಪಾರ ನಡೀತದೆ. ಜೂಜಿನ ಆಟದಲ್ಲಿ ಅನ್ನೋಹಂಗೆ ಒಬ್ಬರನ್ನೊಬ್ಬರು ಮುಳಿಗಿಸೋದೇ ಅಲ್ಲೀ ಬೇಹಾರ. ಅಂದರೆ ಅಲ್ಲಿಗೆ ಸಂಪನ್ನರು ಯಾರೂ ಹೋಗೋದಿಲ್ಲ."

"ಹಾಗಾದರೆ ಅಲ್ಲಿ ಜಗಳಗಳಾಗಬೇಕಲ್ಲ."

"ಹೋ, ಆಗತಾವೆ, ಒಂದು ಕಡೆ ಕೋಳಿ ಜಗಳ ಆಗತಾ ಇರತದೆ ಒಂದು ಕಡೆ ಮನುಷ್ಯರ ಜಗಳ ಆಗತಾ ಇರತದೆ. ಹೆಂಡದಂಗಡಿ, ಕಂಡದಂಗಡಿ, ದೊಡ್ಡ ಜಾತ್ರೆ ಇದ್ದಂಗಿರತದೆ."

"ಮತ್ತೆ ಇಷ್ಟೆಲ್ಲ ಕಡಿದಾಟ ಆಗತಿದ್ದರೆ ನೋಡಿಕೊಳ್ಳೋ ಕಾವಲು?"

"ಎಲ್ಲ ಏರ್ಪಾಡೂ ಅದೆ. ತಳವಾರರು, ಗುರಿಕಾರರು, ಪಂಚಾಯಿತರು, ಎಲ್ಲಾ ಸಂಪತ್ತೂ ಉಂಟು. ಹೋಗಿ ನೋಡೋಣ ಅನ್ನಿಸತದೆಯೇನು?"

"ನಾ ಕಾಣೆನಪ್ಪ. ನೇಮಯ್ಯನೋರನ್ನ ಕೇಳೋಣ."

ಹೀಗೆ ಮಾತನಾಡುತ್ತ ಇವರು ಮನೆಗೆ ಬಂದು ಸೇರಿದರು. ನೇಮಯ್ಯ ಆಗ ಮನೆಯಲ್ಲಿರಲಿಲ್ಲ. ಈ ಸಂಗತಿಯನ್ನು ಬಂದಮೇಲೆ ಕೇಳುವುದು ಎಂದು ವೀರಣ್ಣ ಹೇಳಿದ್ದರಮೇಲೆ ಶಿವಪ್ಪ ತನ್ನ ಬಿಡಾರಕ್ಕೆ

ಹೊರಟನು. ಹೊರಡುವ ಮುನ್ನ ಇವರನ್ನು, "ನಾಳೆ ಹಿರೀಮಠಕ್ಕೆ ಬರತೀರಾ," ಎಂದು ಕೇಳಿದನು.

ವೀರಣ್ಣ, "ಹೋಗತಾ ಇತ್ತಲಾಗೆ ಬನ್ನಿ, ನೇಮಯ್ಯನವರನ್ನ ಕೇಳಿರತೇವೆ. ಬರೋದಾದರೆ ಬರತೇವೆ," ಎಂದನು.

೪೧

ನೇಮಯ್ಯ ಆಗ ಅರಮನೆಗೆ ಹೋಗಿದ್ದನೆಂದು ಮನೆಯ ಸೇವಕನಿಂದ ತಿಳಿಯಿತು. ಎರಡು ಗಳಿಗೆ ಬಿಟ್ಟು ಅವನು ಹಿಂದಕ್ಕೆ ಬಂದನು. ವೀರಣ್ಣನನ್ನು ಕಂಡು, "ನಾಯಕರು ನವರಾತ್ರಿಗೆ ಪಟ್ಟಣಕ್ಕೆ ಹೋಗಿ ಬರಬಹುದೂ ಅಂತ ರಾಣಿಯವರು ಅಪ್ಪಣೆ ಮಾಡಿದ್ದಾರೆ. ನಾಯಕರೂ ಒಪ್ಪಿದ ಹಾಗೆಯೇನೇ," ಎಂದು ತಿಳಿಸಿದನು.

ವೀರಣ್ಣ, "ಬಹಳ ಸಂತೋಷ," ಎಂದು ಹೇಳಿ, "ಹಾಗಾದರೆ ನಾವು ನಾಳೆ ಹೊರಡಬಹುದಲ್ಲ?" ಎಂದು ಕೇಳಿದನು.

ನೇಮಯ್ಯ, "ಬಹುದೂರ ಪ್ರಯಾಣ ಬಂದಿದ್ದೀರಿ. ನಾಳೆ ಇದ್ದು ನಾಡಿದ್ದು ಹೊರಡಿ," ಎಂದನು.

ಹಾಗೆಯೇ ಸರಿ ಎಂದು ಗೊತ್ತಾಯಿತು.

ಆ ಮಾತು ಈ ಮಾತು ಆಡುತ್ತ ವೀರಣ್ಣ ತರುಗುಪೇಟೆ, ದುಬಾರಿ ತಿಟ್ಟು, ವಿಷಯ ತಾನು ಕೇಳಿದ್ದನ್ನು ಹೇಳಿ, "ಈ ಏರ್ಪಾಡೆಲ್ಲ ಇಷ್ಟು ಚೆನ್ನಾಗಿ ನಡೆಯುತ್ತಿರುವುದು ಹೇಗೆ?" ಎಂದು ಕೇಳಿದನು.

ನೇಮಯ್ಯ, "ಅದು ನಗರೇಶ್ವರನ ಅನುಗ್ರಹ. ನಮ್ಮ ಅರಸರು ಕಟ್ಟುನಿಟ್ಟಾಗಿ ಧರ್ಮದಲ್ಲೆ ನಡೆದಿದ್ದಾರೆ. ಒಂದೊಂದು ಪೇಟೇಗೂನೂ ನಾಲ್ಕು ಜನ ಸತ್ಯವಂತರು ಶೆಟ್ಟಿಗಳೂ ಅಂತ, ಯಜಮಾನರೂ ಅಂತ, ಗುರಿಕಾರರೂ ಅಂತ, ಪಂಚಾಯಿತರೂ ಅಂತ ಹೊಣೆ ತಕ್ಕೊಂಡಿದ್ದಾರೆ. ಯಾವ ಮಾತೂ ಹೆಚ್ಚುಕಡಮೆ ಆಗದ ಹಾಗೆ ಅವರು ನೋಡಿಕೋತಾರೆ," ಎಂದನು.

"ಪೇಟೆ ಒಳಗಿನ ಮಾತಾದರೆ ಆ ಶೆಟ್ಟರು, ಆ ಯಜಮಾನರು ನೋಡಿಕೋತಾರೆ. ಪೇಟೆ ಪೇಟೆಯ ವಾದ ಆದರೆ?"

"ನಾವಿದ್ದೇವಲ್ಲ? ಯಾರಾದರೂ ಮೂರು ಜನ ಕುಳಿತು ಆ ಹಿರೀ ರನ್ನ ಕರೆದು ಎಲ್ಲ ಕೇಳಿ ಹೀಗೆ ಅಂತೇವಿ. ಹಾಗೂ ಬೇಕೂ ಅಂದರೆ ದಣಿಗಳಿಂದ ಅಪ್ಪು ಅನ್ನಿಸತೇವಿ. ಅಂದರೆ ಅಂಥ ಮಾತು ವರ್ಷಕ್ಕೊಂದಿರೋದಿಲ್ಲ."

"ಈಗೇನು ಈ ಊರಿನಲ್ಲಿ ಲಕ್ಷ ಪ್ರಜೆ ಇರಬೇಕಲ್ಲ?"

"ಅದರ ಲೆಕ್ಕ ಈಚೆಗೆ ಹಿಡಿದಿಲ್ಲ. ಎರಡು ಲಕ್ಷ ಇರಬಹುದೇನೊ."

"ಇಷ್ಟು ಜನದಲ್ಲಿ ಪುಂಡ ಪೋಕರೀನ ತಡೆದು ನಿಲ್ಲಿಸಿರೋದೇ ನಮಗೆ ಆಶ್ಚರ್ಯ."

"ಅವನವನ ಭಯ ಅವನನ್ನ ನಿಲ್ಲಿಸದೇ ಇದ್ದರೆ ಯಾರು ಸ್ವಾಮಿ ನಿಲ್ಲಿಸಬೇಕು ಪುಂಡನ್ನ, ಪೋಕರೀನ? ಮಣೆಗಾರ ಇದ್ದಾನೆ. ತುಂಟರನ್ನ ಹಿಡೀತಾನೆ. ಪಂಚಾಯಿತರ ಮುಂದೆ ನಿಲ್ಲಿಸತಾನೆ. ತೀರ ಅನ್ಯಾಯ ಮಾಡಿದ್ದವನ್ನ ಶೂಲಕ್ಕೇರಿಸತಾರೆ."

"ಆ ಭಯದಿಂದ ಇವರು ಸುಮ್ಮಗಿರತಾರೇ ಅಂತೀರಾ?"

"ಸುಮ್ಮನೆ ಇರತಾರೆಯೇ? ಸಿಕ್ಕಿಬೀಳೋದಿಲ್ಲ. ಸಿಕ್ಕಿದರೆ ನನ್ನಹಂಗೆ ಆಗತೀಯಾ ಅಂತ ಶೂಲ ಏರಿದೋನು ಅ ಬೆಟ್ಟದ ಮೇಗಳಿಂದ ತೋರಿಸತಾ ಇರತಾನೆ."

"ಯಾವ ಬೆಟ್ಟ?"

ನೇಮಯ್ಯ, "ಕೋಟೆ ಗೋಡೆ ಏರಿದರೆ ನೋಡಬಹುದು. ತೀರಾ ಪುಂಡರಾದವರನ್ನು ಈಚೇ ಕಡೇಗಿರೋ ಒಂದು ಬೆಟ್ಟದಮೇಲೆ ಏರಿಸತಾರೆ. ಅದನ್ನ ಶೂಲದ ಬೆಟ್ಟ ಅನ್ನತಾರೆ," ಎಂದನು.

ಇವರು ಈ ಮಾತನ್ನಾಡುತ್ತಿರಬೇಕಾದರೆ ಆಳು ಹತ್ತಿರ ಬಂದು, "ಸಿದ್ಧರು ದಯಮಾಡಿಸಿದ್ದಾರಂತೆ. ದಣಿಗಳನ್ನ ಕಾಣಬಹುದೆ? ಯಾವಾಗ ಬರಬಹುದೂ ಅಂತ ಕೇಳತಾರಂತೆ," ಎಂದನು.

ನೇಮಯ್ಯನ ಮುಖದ ಮೇಲೆ ಏನೋ ಶಂಕೆಯ ಮೋಡ ಹಾಯ್ದು ಮರೆಯಿತು. ಇದು ಎಷ್ಟು ಸೂಕ್ಷ್ಮವಾಗಿ ಎಂದರೆ, ವೀರಣ್ಣನ ಚುರುಕಾದ ನೋಟಕ್ಕೆ ಹೊರತು ಉಳಿದವರಿಗೆ ಅದು ಕಂಡಿರಲಾರದು.

ನೇಮಯ್ಯ, "ಓ ಬರಲಿ. ರಾತ್ರಿ ಇಲ್ಲೆ ಪೂಜೆಮಾಡಿದರೂ ಸಮ, ಅಂತ ಹೇಳು," ಎಂದನು.

ಆಳು ಹೊರಕ್ಕೆ ಹೋಗಿ ಹಿಂದಕ್ಕೆ ಬಂದು, "ರಾತ್ರಿ ಪೂಜೆಗೆ ಪೇಟೇಲಿ ಏರ್ಪಾಡಾಗಿದೆಯಂತೆ. ಪವಡಿಸೋ ಮುನ್ನ ದಣಿಗಳನ್ನ ಕಾಣತಾರಂತೆ," ಎಂದನು.

ಸಿದ್ಧರು ಯಾರು ಎಂದು ತಿಳಿಯಲು ವೀರಣ್ಣ ಬಯಸುವುದು ಸಹಜ. ಆದದ್ದರಿಂದ ನೇಮಯ್ಯ ಅವನಿಗೆ, "ಈ ಸಿದ್ಧರು ದತ್ತಾತ್ರೇಯ ಪೀಠದ ತಾವು ಒಂದು ಗವೀಲಿ ಇದ್ದುಕೊಂಡು ತಪಸ್ಸು ಮಾಡತಾ ಇದ್ದಾರೆ. ನಮ್ಮನ್ನ ಕಂಡವರು. ಆಗಾಗ ಇಲ್ಲಿಗೆ ಬಂದು ಹೋಗತಾರೆ. ಊರ ತುಂಬ ಅವರಿಗೆ ಭಕ್ತರುಂಟು," ಎಂದನು.

ವೀರಣ್ಣ, "ಈ ದಿವಸ ಅವರು ಬಂದದ್ದರಿಂದ ನಮಗೆ ಅನಾಯಾಸ ವಾಗಿ ಮಹಾತ್ಮರ ದರ್ಶನ ಆಯಿತು," ಎಂದನು.

ನೇಮಯ್ಯ, "ಅವರು ದರ್ಶನ ಕೊಡುತಾರೊ ಇಲ್ಲವೊ ನಾವು ಹೇಳುವಂತಿಲ್ಲ, ಬಂದಾಗ ಕೇಳಿ ನೋಡೋಣ. ಅವರು ಸಾಮಾನ್ಯ ವಾಗಿ ಹೊಸಬರು ತಮ್ಮನ್ನು ಕಾಣಬೇಕೂ ಅಂದರೆ ಪೀಠಕ್ಕೆ ಬನ್ನೀ ಅಂತ ಹೇಳತಾರೆ,"

"ಪೀಠಕ್ಕೆ ?"

"ಊ್ಞ, ದತ್ತಾತ್ರೇಯ ಪೀಠ. ಅವರ ಗವಿ ಇರೋ ಬೆಟ್ಟ."

"ಮಹಾತ್ಮರು ಅಂದಮೇಲೆ ಬಹಳ ಜನ ಅಲ್ಲಿಗೇ ಹೋಗಿ ದರ್ಶನ ಮಾಡಿಕೊಂಡು ಬರಬೇಕಲ್ಲ ?"

"ಊ್ಞ, ಅದೂ ಒಂದು ಮನಸ್ಸು. ಹೋಗೊ ಜನ ಹೋಗತಾರೆ."

"ನಮ್ಮನ್ನ ಪೀಠಕ್ಕೆ ಬಾ ಅಂದರೆ ನಮಗೆ ಅದು ಹೇಗೆ ಸಾಧ್ಯ?"

"ಅದನ್ನೇ ಅವರಿಗೆ ತಿಳಿಸಬೇಕು. ದೂರದಿಂದ ಬಂದಿರೋರು ಅನ್ನೋ ಕಾರಣದಿಂದ ಇಲ್ಲಿಯೇ ಮಾತನಾಡಬಹುದು."

೪೨

ರಾತ್ರಿ ಇವರ ಭೋಜನಗಳು ಮುಗಿದು, ಅತಿಥಿಗಳು ತಾಂಬೂಲ ತೆಗೆದುಕೊಳ್ಳುತಿದ್ದಾಗ ಸಿದ್ಧರು ಬಂದರು ಎಂದು ಬಾಗಿಲ ಆಳು ಸುದ್ದಿ ತಂದನು. ನೇಮಯ್ಯ ಎದ್ದು ಕೈಸಾಲೆಗೆ ಹೋಗಿ ಸಿದ್ಧನನ್ನು ಕಂಡು, "ಮೈಸೂರಿಂದ ಬಂದಿರುವ ರಾಯಸದ ಹಿರಿಯರಿಬ್ಬರಿದ್ದಾರೆ. ಅವರು ದರ್ಶನ ಬೇಡತಾರೆ. ಅವರನ್ನ ಕಾಣಬಹುದಾದರೆ ಕರೀತೇನೆ. ಆಮೇಲೆ ನಮ್ಮ ಮಾತಾಡಬಹುದು," ಎಂದನು.

ಸಿದ್ಧ, "ಮೈಸೂರವರೊ? ನೋಡಬೇಕೂ ಅಂತೀರೊ?"

"ಆಗಬಹುದು ಅಂದರೆ ಎರಡು ಮಾತಾಡಬಹುದು. ದೂರದ ಜನ."

"ಸರಿ, ನೋಡೋಣ."

ನೇಮಯ್ಯ ಸಿದ್ಧನನ್ನು ಒಳಸಾಲೆಯ ಮತ್ತೊಂದು ಕಡೆಯ ಒಂದು ಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಅವನನ್ನು ಕುಳ್ಳಿರಿಸಿ, ವೀರಣ್ಣ ಸೂರಪ್ಪ ಇವರ ಹತ್ತಿರ ಬಂದು, "ಬನ್ನಿ, ಸಿದ್ಧರನ್ನು ಕಾಣು ವಿರಂತೆ," ಎಂದು ಅವರನ್ನು ಒಳಕ್ಕೆ ಕರೆದುಕೊಂಡು ಹೋದನು.

ಸಿದ್ಧನು ಕುಳಿತಿದ್ದ ಕೋಣೆಯೊಳಕ್ಕೆ ಹೊಕ್ಕು ವೀರಣ್ಣ ಸೂರಪ್ಪ ಇಬ್ಬರೂ ಅವನಿಗೆ ತಲೆಬಾಗಿ ಕೈಮುಗಿದು ನಮಸ್ಕಾರ ಮಾಡಿದರು. ಅವನು ಸನ್ನೆಮಾಡಿ ಹತ್ತಿರಕ್ಕೆ ಕರೆದು ತೋರಿಸಿದ ಸ್ಥಳದಲ್ಲಿ ಕುಳಿತು ಕೊಂಡರು. ಸಿದ್ಧ ಮಧ್ಯವಯಸ್ಸಿನ ತೇಜಸ್ವಿಯಾದ ಮನುಷ್ಯ. ಮುಖದ ತುಂಬ ಹೊರವಾಗಿ ಕೂದಲು ಬೆಳೆದಿದ್ದಿತು. ನೀಟಾದ ಮೂಗು. ಅದರ ಕೆಳಗೆ ತುಟಿ ಚಿತ್ರದಲ್ಲಿ ಬರೆದ ಒಂದು ಅಂದದಿಂದ ಕಾಣುವುವು. ತುಂಬ ಕೂದಲು ಬೆಳೆದ ಹುಬ್ಬು. ಕಣ್ಣು ದೀಪದ ಬೆಳಕಿನಲ್ಲಿ ಫಳ್ ಎಂದು ಹೊಳೆಯುವುವು. ಒಟ್ಟು ಅವನ ನೋಟ ದರ್ಪದ ನೋಟ. ಯತಿಯ ನೋಟವೆನ್ನುವುದಕ್ಕಿಂತ ಒಬ್ಬ ಲೋಕ ವ್ಯವಹಾರಿಯ ನೋಟ ಎಂದರೆ ಒಪ್ಪುವಂತಿದ್ದಿತು. ಮುಖದ ಮೇಲೆ ದುಂಡನೆಯ ಒಂದು ಚಂದನದ ಬೊಟ್ಟಿನ ಮಧ್ಯೆ ಕುಂಕುಮದ ಬೊಟ್ಟು ಒಂದು ಹೊಳೆಯುತ್ತ

ನೋಡುವ ಜನರಲ್ಲಿ ಸ್ವಲ್ಪ ಭಯವನ್ನೇ ಉಂಟುಮಾಡುವಂತೆ ಇದ್ದಿತು. ವೀರಣ್ಣ ಕೈಮುಗಿದುಕೊಂಡೆ ಯತಿ ಮಾತನಾಡಿಸಲೆಂಬ ಅಪೇಕ್ಷೆಯಿಂದ ಅವನ ಕಡೆ ನೋಡಿದನು.

ನೇಮಯ್ಯ ವೀರಣ್ಣನ ಎದುರು ಗೋಡೆಯ ಬಳಿ ಸಿದ್ಧನ ಎಡೆಗಡೆಗೆ ಕುಳಿತನು. ಕ್ಷಣ ಬಿಟ್ಟು ಸಿದ್ಧ ವೀರಣ್ಣನನ್ನು ಕುರಿತು, "ತಾವು ಮೈಸೂರಿಂದ ಬಂದಿದೀರಂತೆ ?" ಎಂದನು.

ವೀರಣ್ಣ : "ಹೌದು ಗುರುಗಳೆ."

"ನಿಮ್ಮ ಪ್ರಾಂತ್ಯವೆಲ್ಲ ಕ್ಷೇಮವಾಗಿದೆಯೊ ?"

"ತಕ್ಕಮಟ್ಟಿಗೆ ಇದೆ."

"ರಾಜರು ಧರ್ಮಿಷ್ಠರಾಗಿ ನಡೆಯುತ್ತಿದಾರೊ ?" ಕ್ಷಣ ಬಿಟ್ಟು, "ನೀವು ರಾಜರ ಕಡೆಯವರು ಎಂದು ನಾವು ಬಲ್ಲೆವು. ಆದರೂ ಈ ಮಾತನ್ನು ಕೇಳುತ್ತೇವೆ."

"ಸನ್ನಿಧಾನ ಕೇಳಬಹುದಾದ ಮಾತು. ನಾವು ಹೇಳಬಹುದಾದ ಮಟ್ಟಿಗೆ ಮೈಸೂರಿನ ಅರಸರು ಎಂದೂ ಧರ್ಮಿಷ್ಠರಾಗಿಯೆ ನಡೆದಿದ್ದಾರೆ."

"ಸರಿ. ನಿಮ್ಮಿಂದ ವಾಡಿಕೆಯ ಉತ್ತರ ಹೊರತು ಬೇರೆ ಏನನ್ನೂ ನಿರೀಕ್ಷಿಸಬಾರದೆನ್ನುತ್ತೀರಿ. ಒಳಿತು. ನಾವು ಎರಡು ಮಾತನ್ನು ಹೇಳಿದರೆ ಅದನ್ನು ಅಲ್ಲಿ ನಿಮ್ಮ ಅರಸರಿಗೆ ಮುಟ್ಟಿಸಬಲ್ಲಿರಾ? ಅರಸರೆದುರಿಗೆ ಹೇಳುವುದಕ್ಕಾಗದಿದ್ದರೂ ಅವರ ಆಪ್ತರಲ್ಲಿ ತಿಳಿಸಿದರೆ ಸಾಕು."

"ಸನ್ನಿಧಾನ ಏನು ಅಪ್ಪಣೆ ಕೊಟ್ಟರೂ ಅದೊಂದು ಅನುಗ್ರಹ. ಅಂಥ ಮಾತನ್ನು ನಮ್ಮ ಪ್ರಭುಗಳಲ್ಲಿ ನಾವು ಅವಶ್ಯವಾಗಿ ವರದಿ ಮಾಡುತ್ತೇವೆ. ಹಾಗಲ್ಲದಿದ್ದರೆ ಮಹಾಮಾತೃಶ್ರೀಯವರ ಸನ್ನಿಧಿಯಲ್ಲಿ ಒಪ್ಪಿಸುತ್ತೇವೆ."

"ಅಜ್ಜ. ಅವರು ಬಹಳ ಧೈರ್ಯವಂತರೆಂದು ನಾವು ಕೇಳಿದ್ದೇವೆ. ಅವರಲ್ಲೇ ನಮ್ಮ ಮಾತನ್ನು ನಿವೇದಿಸಿರಿ. ಕ್ಷತ್ರಿಯನು ಬ್ರಾಹ್ಮಣನಿಗೂ ಹೆಚ್ಚು ಮೆತುವಾಗಿ ವೈಶ್ಯನಿಗೂ ಹೆಚ್ಚು ಅರ್ಥಪರನಾಗಿ ಈ ದೇಶ ಈ ಮುನ್ನ ಕೆಟ್ಟಿತು; ಈಗ ಕೆಡುತ್ತಿದೆ. ಮೈಸೂರು ಹಿಂದೂ ಧರ್ಮವನ್ನು ಉಳಿಸಬೇಕೆಂದು ಅಪೇಕ್ಷಿಸಿದರೆ ಅದರ ಅರಸು ಕ್ಷತ್ರಿಯನಾಗಿ ನಡೆಯ

ಬೇಕು. ಅರಮನೆಯ ಹೆಣ್ಮಕ್ಕಳು ವೀರಮಹಿಳೆಯರಾಗಿ ಬಾಳಬೇಕು. ಹೀಗಲ್ಲದೆ ಅವರ ಅರಸುತನ ಉಳಿಯುವುದಿಲ್ಲ; ಉಳಿಯಿತು, ಅವರು ಅರಸರಾಗಿರುವುದಿಲ್ಲ. ಇದನ್ನವರಿಗೆ ಹೇಳುತ್ತೀರಾ ?"

"ಹೇಳುತ್ತೇನೆ. ಮಹಾಮಾತ್ಯಶ್ರೀಯವರು ಸ್ವತಃ ಈ ಮಾತನ್ನು ಲೋಕಕ್ಕೆ ಹೇಳುತ್ತಾರೆ. ತಾವದನ್ನು ನಡಸುತ್ತ ಇದಾರೆ."

"ಅವರು ನಡಸುತ್ತಿರಬಹದು. ಅರಸರು ನಡಸುತ್ತಿಲ್ಲ ಎಂದು ಕಾಣುತ್ತಿದೆ. ನಡಸಿದ್ದರೆ ವಿಧರ್ಮಿಯಾದ ಒಬ್ಬ ಸೇನಾಪತಿ ದೇಶದಲ್ಲಿ ಅರಸನಿಗಿಂತ ಒಂದು ಕೈ ಹೆಚ್ಚು ಎಂಬಂತೆ ನಡೆಯುವುದು ಅಸಾಧ್ಯ. ಈಗ ಅವನು ಹಾಗೆ ನಡೆಯುತ್ತಿದಾನೆ. ಅರಸರು ಸೇನಾಪತಿಯನ್ನು ತಮ್ಮ ಪೀಠಕ್ಕೆ ಕರೆಯುವುದು ಬೇಡ."

"ಅಪ್ಪಣೆ. ಈ ಮಾತಾದರೂ ಪ್ರಭುಗಳಿಗೆ ಮಹಾಮಾತ್ಯಶ್ರೀಯವರಿಗೆ ತಿಳಿದ ಮಾತೇ. ಆದರೂ ಇದನ್ನು ಪರಮಾನುಗ್ರಹ ಎಂದು ಅಲ್ಲಿ ಬಿನ್ನೈಸುತ್ತೇನೆ."

"ನೀವು ರಾಯಸದವರು ಎಂದು ಕೇಳಿದೆವು. ಎಂದರೆ ಇತ್ತ ಕಾರಕೂನ ಎನ್ನುತ್ತಾರೆ. ಅಮಾತ್ಯರ ಬಳಿ ಸಹಾಯಕರಾಗಿರುವವರು."

"ಹೌದು ಗುರುಗಳೆ."

"ನೀವು ನಿಮ್ಮ ಅರಸರ ವಿಷಯದಲ್ಲಿ ಭಕ್ತಿ ಉಳ್ಳವರಾಗಿದ್ದೀರಿ. ಮಾತೂ ಚೆನ್ನಾಗಿದೆ. ನಿಮ್ಮಂತೆ ನಿಮ್ಮ ಆಸ್ಥಾನದಲ್ಲಿ ಹತ್ತು ಜನ ಇದ್ದರೆ ಆಳ್ವಿಕೆಗೆ ಬೇಕಾದ ಬುದ್ಧಿಗೇನೂ ಕಡಮೆಯಿಲ್ಲ. ಆದರೆ ಸಾಹಸಬೇಕು; ಕಾರ್ಯವಂತಿಕೆಬೇಕು; ಅದನ್ನು ಸಂಪಾದಿಸಿಕೊಳ್ಳಿ. ಹೋಗಿಬನ್ನಿ."

ನೇಮಯ್ಯ ಎದ್ದನು. ವೀರಣ್ಣ ಸೂರಪ್ಪ ಎದ್ದರು; ಎದ್ದು ಸಿದ್ಧನಿಗೆ ಬಾಗಿ ನಮಸ್ಕಾರ ಮಾಡಿ ಹೊರಕ್ಕೆ ಬಂದರು. ನೇಮಯ್ಯ ಬಾಗಿಲ ಹತ್ತಿರ ಬಂದು ಅವರನ್ನು ಅವರ ಬಿಡಾರದ ಕೋಣೆಗೆ ಕಳುಹಿಸಿ ಬಾಗಿಲನ್ನು ಮುಂದಕ್ಕೆ ಹಾಕಿ ಕೋಣೆಗೆ ಮತ್ತೆ ಹೋಗಿ ತನ್ನ ಸ್ಥಳದಲ್ಲಿ ಕುಳಿತನು.

೪೩

ಒಂದು ಕ್ಷಣ ಬಿಟ್ಟು ಅವನು ಸಿದ್ಧನನ್ನು ಕುರಿತು, "ಸಾಹಸ ಬೇಕು ಎಂತ ಹೇಳಿದೆಯಲ್ಲ. ಅದಕ್ಕಾಗಿ ಈ ಸಾಹಸಮಾಡಿ ಇಲ್ಲಿ ಬಂದೆಯಾಪ್ಪ ಈಹೊತ್ತು?" ಎಂದು ಕೇಳಿದನು.

ಸಿದ್ಧ, "ಇದರಲ್ಲೇನಿದೆ ಸಾಹಸ? ನೀವು ಹಟಮಾಡದೆ ಇದ್ದಿದ್ದರೆ ನಾನು ಊರು ಬಿಟ್ಟು ಕದಲುತ್ತಿರಲಿಲ್ಲ."

"ಆಯಿತು. ನಾನು ಹೇಳಿದೆ ಅಂತಲೆ ದೂರ ಹೋದದ್ದಾಯಿತಲ್ಲ. ಮತ್ತೆ ಯಾಕೆ ಒಳಕ್ಕೆ ಬರಬೇಕು.?"

"ಕೆಲಸ ಇದೆ. ಬಂದೆ. ನಿಮ್ಮನ್ನೂ ಕಾಣಬೇಕಾಗಿತ್ತು."

"ಕೆಲಸ ಇದ್ದರೆ, ನನ್ನ ಕಾಣಬೇಕಾಗಿದ್ದರೆ ಹೇಳಿಕಳುಹಿಸಿದರೆ ನಾನು ಬರತಿರಲಿಲ್ಲವೆ? ಇಲ್ಲಿ ಆಗದ ಜನ ಇದ್ದಾರೆ. ಗುರುತು ಹಿಡಿದು ಅರಮನೆಗೆ ಹೇಳಿದರೆ ತೊಂದರೆಯಲ್ಲ!"

"ತೊಂದರೆ ಏನು? ಒಳ್ಳೇದಾದೀತು. ಇನ್ನಿವರು ಉಳೀಬಾರದೂ ಅಂತ ಜನ ಎದ್ದು ಇವರನ್ನ ಧ್ವಂಸಮಾಡುತ್ತದೆ."

"ಶಿವಾ ಶಿವಾ. ಏನು ಮಾತು! ಧ್ವಂಸಮಾಡಲೆ ಜನ ಶಾಂತವ್ವನ ಮಾಂಗಲ್ಯಾನ? ಅವಳ ಹೊಟ್ಟೇಲಿ ಹುಟ್ಟೊ ಮಗುವಿನ ಭಾಗ್ಯಾನ?"

"ಅಜ್ಜ ಅದನ್ನ ಬೇಡ ಅಂತಲೆ ನಾನು ಗುರುತು ಸಿಕ್ಕದಂತೆ ಬರೋದು; ನಿಮ್ಮನ್ನ ರಾತ್ರಿವೇಳೆ ಕಾಣೋದು. ಆ ಮಗು ಅಂತನ್ನೋದು ಒಂದು ಆಗಲಿ, ಅದು ರಾಜನಾಗಲಿ, ಅನ್ನೋದಕ್ಕಾಗಿಯೆ ಸುಮ್ಮನೆ ಇರೋದು."

"ಹಾಗನ್ನು. ಬಾಯಲ್ಲಿ ಕೆಟ್ಟಮಾತು ಹೇಳಬೇಡ. ನೀನು ಸೌಖ್ಯವಾಗಿದ್ದೀಯಾ?"

"ತಪಸ್ವಿಗೆ ತಪಸ್ಸೇ ಸೌಖ್ಯ. ತಪಸ್ಸುಮಾಡುತ್ತಾ ಇದ್ದೇನೆ."

"ಮುಖ ನೋಡಿದರೆ ಹಿಂದಿನಂತೆ ಬಳಲಿಲ್ಲ; ಸ್ವಲ್ಪ ಆರೋಗ್ಯವಾಗಿದ್ದೀಯ. ಮುಖದಲ್ಲೇನೊ ಬೇರೆ ಲಾಂಛನ ಕಾಣತಾ ಇದೆಯಲ್ಲ. ಏನು ಸಂಗತಿ?"

"ಶೈವ ವೈಷ್ಣವ ಜೈನ ತೇಜಸ್ಸನ್ನ ಸಂಪಾದಿಸಿ ಆಯಿತು. ಈಗ ಶಾಕ್ತಸಾಧನ ಮಾಡುತಾ ಇದ್ದೇನೆ. ಇದು ಈಗಿನ ತಪಸ್ಸಿನ ಲಾಂಛನ. ಗವಿಯಲ್ಲಿ ಮಹಾಕಾಳಿಯನ್ನು ಪ್ರತಿಷ್ಠೆ ಮಾಡಿದ್ದೇನೆ. ದುರ್ಗದ ಹತ್ತಿರ ಭೈರವನ ದೇವಸ್ಥಾನವನ್ನು ಸರಿಮಾಡಿಸಿ ಅಲ್ಲಿ ಪೂಜೆ ನಡಸತಾ ಇದೇನೆ. ಜೊತೇಗೆ ಈಗ ನಾಲ್ಕು ಜನ ಕಾಪಾಲಿಗಳು ಸಾಧನದಲ್ಲಿ ತೊಡಗಿದ್ದಾರೆ."

"ಅಪ್ಪ, ನಿನ್ನದಾರಿ ಇದು ಆಯಿತು. ಇದು ನನ್ನದಾರಿ ಅಲ್ಲ. ನನಗೆ ಇದೊಂದೂ ಗೊತ್ತಾಗೋದಿಲ್ಲ. ಮಾಡು ಅನ್ನೋದಕ್ಕೆ ಬೇಡ ಅನ್ನೋದಕ್ಕೆ ನನಗೆ ತಿಳುವಳಿಕೆ ಇಲ್ಲ. ಆದರೂ ಇದೇನಿದು? ಆರು ವರ್ಷಕ್ಕೆ ಒಂದು ದೇವತೇನ ಎಂಟು ವರ್ಷಕ್ಕೆ ಒಂದು ದೇವತೇನ ಒಂದು ಹಳೇ ಬಟ್ಟೆ ಅನ್ನೋಹಾಗೆ ಕಳೆದು ಬದಿಗಿಡಬಹುದೆ? ಶಿವನ್ನ ಬಿಟ್ಟೆ ಅಂದೆ; ವಿಷ್ಣುವನ್ನ ಹಿಡಿದೆ. ವಿಷ್ಣುವನ್ನು ಬಿಟ್ಟೆ, ಜಿನನನ್ನ ಹಿಡಿದೆ. ಹಿಡಿದಿರು. ಅವರನ್ನೂ ಬಿಟ್ಟು ಈಗ ದುರ್ಗೀನ ಹಿಡಿದಿದ್ದೇನೆ ಅಂತೀಯ. ವಿಷ್ಣು ಶಿವ ಜಿನರಿಗೆ ಪೂಜೆ ಮಾಡಿದ ಕೈ ದುರ್ಗೀಗೆ ಪೂಜೆ ಮಾಡ ಬೇಕಾದರೆ ಕಷ್ಟ ಆಗಬೇಕಲ್ಲ? ಇದಕ್ಕೆ ಯಾಕೆ ಹೋಗಬೇಕು?"

"ಯಾವ ಹೊತ್ತಿಗೆ ಯಾವ ದೈವ ಫಲ ಕೊಡತದೆಯೊ ಆ ಹೊತ್ತಿಗೆ ಅದನ್ನ ಉಪಾಸನೆ ಮಾಡಬೇಕು. ಒಂದು ಕಾಲಕ್ಕೆ ಜೈನರಾಗಿದ್ದೋರು ದೊರೆ ವೀರಶೈವ ಅಂತ ತಾವು ಶಿವಾಚಾರಕ್ಕೆ ಸೇರಲಿಲ್ಲವೆ? ಯಾಕೆ ಸೇರಿದರು? ಯಾವುದೊ ಪ್ರಯೋಜನಕ್ಕೆ; ಮನೇಗೆ, ಮಠಕ್ಕೆ, ಪದವೀಗೆ ಆಶೆಪಟ್ಟು. ಆ ಧರ್ಮ ಅಲ್ಲ ಈ ಧರ್ಮ ಇರಲಿ ಅಂದರು. ನೆಲ ಹೊಲ ಉಳೀಲಿ ಅಂತ ಧರ್ಮ ಬೇರೆ ಇರಲಿ ಅನ್ನಬಹುದಾದರೆ ಲೋಕಕ್ಕೆ ಕಲ್ಯಾಣ ಆಗಲಿ ಅಂತ ಉಪಾಸನೆ ಬೇರೆ ಮಾಡಬಾರದೆ? ಇದರಲ್ಲೇನೂ ತಪ್ಪಿಲ್ಲ."

"ತಪ್ಪಿಲ್ಲ ಅಂದರೆ ತಪ್ಪಿಲ್ಲ; ಅದರ ಮಾತು ನಾನು ಒತ್ತಿ ಹೇಳೋ ನಲ್ಲ. ಈಗ ನನಗೆ ಹೇಳೋ ಮಾತೇನಾದರೊ ಇತ್ತೊ?"

"ಪಾಳೆಯಗಾರರು ಎಲ್ಲ ಸಂಗತಿ ನಿಮಗೆ ತಿಳಿಸಿದರಂತೆ. ನೀವು ಇನ್ನೂ ಅರಮನೇಲಿ ಮಾತುಪರರಾಗಿದ್ದೀರಿ. ನೀವೇ ಹೇಳುತೀರೊ ಯಾರಿಂದ ಹೇಳಿಸುತೀರೊ, ಇನ್ನು ತಿಂಗಳು ತಿಂಗಳೂವರೆ ಒಳಗಾಗಿ

ನಿಮ್ಮ ಅಳಿಯನಿಗೆ ಪಟ್ಟಕಟ್ಟಿಸಿ. ಅದಿಲ್ಲದೆ ಇದ್ದರೆ ಜನ ಒಪ್ಪೋದಿಲ್ಲ. ಸರಿಯಾದ ರಾಜಅನ್ನೋನು ಇಲ್ಲದೆ ಪ್ರಪಂಚ ಬಹಳ ದಿನ ನಡೆಯೋದಿಲ್ಲ. ಇಲ್ಲವೆ ನಮ್ಮಂಥವರು ಮುಂದೆ ಬಂದು ವ್ಯವಹಾರಾನ ಕೈಗೆ ತೆಗೆದುಕೊಳ್ಳಬೇಕು. ಇಲ್ಲವೆ ಆ ಮುಸಲ್ಮಾನ ಅಲ್ಲಿ ಮೈಸೂರನ್ನ ಬಾಯಿಗೆ ಹಾಕಿಕೊಂಡು ಆಮೇಲೆ ನಗರಾನ ಬಾಯಿಗೆ ಹಾಕಿಕೋಬೇಕು. ಇಂಥ ಅನರ್ಥಾನ ನೋಡಿಕೊಂಡು ತಾಳೋದು ನಿಮ್ಮಿಂದ ಆದೀತು. ನಮ್ಮಿಂದ ಆಗೋದಿಲ್ಲ. ಇದನ್ನ ನಿಮಗೆ ತಿಳಿಸಬೇಕು ಅಂತ ತೋರಿತು."

"ಅಪ್ಪ, ತಾಳೋದು ಬಾಳೋದಕ್ಕೆ. ಗದ್ದಿಗೆ ಬರಿದಾಗಿರಲಿ ಅಂತ ನಾವೇನು ಬಯಸಿದೆವೆ? ದುಡುಕಿದರೆ ಕೆಲಸ ಕೆಟ್ಟೀತು ಅಂತ ಸಹಿಸಿಕೊಂಡಿದ್ದೇವೆ. ಅರ್ಧ ಪಾಕದಲ್ಲಿ ಬಡಿಸು ಅಂದರೆ ಏನಾದೀತು? ಮಾಡಿದ್ದು ವ್ಯರ್ಥ, ಹಸಿವು ತೀರಲಿಲ್ಲ."

"ಸರಿ; ಪಾಕ ಪೂರ್ಣ ಆಗಲಿ."

"ಈ ಸಂಜೆ ಅರಮನೇಲಿ ಅಮ್ಮಾಜಿಯವರು ನನಗೆ ಹೇಳಿದರು. ನಾಯಕರು ಮೈಸೂರಿಗೆ ಹೋಗಿ ಬರಲಿ ಅಂತ; ಬಂದದ್ದೇ ಇಲ್ಲಿ ಪಟ್ಟ ಕಟ್ಟೋಣಾ ಅಂತ."

"ಪಟ್ಟ ಕಟ್ಟೋಣ ಅಂತ?"

"ಹ್ಞಾ, ಹಾಗೆ ಅಂತ ನಾನು ತಿಳಿದೆ."

"ನೀವು ತಿಳಿದು ಏನಾಯಿತಣ್ಣ? ಒಳ್ಳೆಯದು. ಮೈಸೂರಿಗೆ ಹೋಗಲೀ ಅಂತ ಒಪ್ಪಿದರೊ? ಅದು ಬರೀ ನೀವು ತಿಳಿದದ್ದಲ್ಲವಲ್ಲ!"

"ಅಯ್ಯ, ಇದೇನು ಮಾತು ಹಿಡೀತಿಯಪ್ಪ ನೀನು? ಎರಡೂ ತಿಳಿದದ್ದೆ. ಎರಡೂ ಅವರು ಹೇಳಿದ್ದೇ. ಅವರು ಹೇಳಲಿಲ್ಲ, ನಾನು ತಿಳಿದೆ, ಅಂತಲ್ಲ ನಾ ಹೇಳಿದ್ದು. ಎಲ್ಲ ಸರಿಹೋಗುತ್ತೆ. ಇಷ್ಟು ದಿವಸ ತಡೆದೆಯಲ್ಲ; ಇನ್ನು ಮೂರು ತಿಂಗಳು; ಏನು ಆತುರ? ದುಡುಕೋದು ಬೇಡ."

"ಅತಿ ತಡೆಯೋದು ಬೇಡ. ಆತುರದ ಪ್ರಾಣಿಗಳು ಮಗನ ಜೀವ ತೆಗೆದರೂ ಆಯಿತೆ ಸೊಸೆ ಜೀವ ತೆಗೆದರೂ ಆಯಿತೆ."

"ಆ ವಿಷಯ ನೋಡಿಕೊಳ್ಳೋಣ. ಮಧ್ಯೆ ನೀನು ಮಾತಿಗೆ ಮುಂಚೆ ನಗರಕ್ಕೆ ಬರೋದು ಬೇಡ."

"ನನ್ನ ವಿಷಯ ನೀವು ಭಯ ಇಟ್ಟುಕೋ ಬೇಡಿ. ನನ್ನ ಪ್ರಾಣ ನನ್ನದಲ್ಲ."

"ನಿನ್ನದಲ್ಲಪ್ಪ. ಆದರೆ ನನ್ನದೂ ಅಲ್ಲವೇನು? ಅಲ್ಲದೆ ನಾ ಹೇಳೋದು ನಿನ್ನ ಪ್ರಾಣದ ಮಾತು ಅಲ್ಲ. ನೀ ಬರತಾ ಇದ್ದರೆ ಇದೇನೋ ಸಂಚು ನಡೀತಾ ಇದೆ ಅಂತ ತೋರಿ ಇವರ ಪ್ರಾಣಕ್ಕೆ ಬಂದೀತು."

ಸಿದ್ಧ ಏನೂ ಹೇಳಲಿಲ್ಲ, ಕೆಲವು ಕ್ಷಣ ಸುಮ್ಮನೆ ಕುಳಿತಿದ್ದು ಮತ್ತೆ ನೇಮಯ್ಯನ ಕಡೆ ನೋಡಿ, "ನಾನಿನ್ನು ಬರುತ್ತೇನೆ," ಎಂದನು.

ನೇಮಯ್ಯ, "ಸ್ವಲ್ಪ ಹಾಲು ತೆಗೆದುಕೊಳ್ಳುತೀಯಾ?" ಎಂದು ಕೇಳಿದನು.

ಸಿದ್ಧ, "ಕೊಡಿ. ನೀವು ಎರೆದ ಹಾಲಿಂದ ನನ್ನಲ್ಲಿ ಸ್ವಲ್ಪ ಒಳ್ಳೇ ಗುಣ ಬೆಳೆಯಲಿ. ಈ ಮೊದಲು ಎರೆದದ್ದು ಬೇವಿನ ಬುಡಕ್ಕೆ ಆಯಿತು," ಎಂದನು.

ನೇಮಯ್ಯ, "ತನ್ನನ್ನು ತಾನು ಹೊಗಳಲೂ ಬೇಡ, ತೆಗಳಲೂ ಬೇಡ. ತಾನು ಅನ್ನುವುದನ್ನ ಮರೆತು ನಡೆಯುವುದೇ ನಡೆ. ಆ ತಂದೇ ಆ ತಾಯೀ ಮಗ ನೀನು ಬೇವು ಹಾವು ಯಾಕೆ ಆದೀಯ? ಒಳ್ಳೆಯವನಾಗಿದ್ದೀಯ," ಎಂದು ಹೇಳಿ, ಬಾಗಿಲ ಹತ್ತಿರ ಹೋಗಿ, "ಸಿದ್ಧರಿಗೆ ಸ್ವಲ್ಪ ಹಾಲು ತನ್ನಿ," ಎಂದು ಹೇಳಿದನು.

ಹಾಲು ಬಂದಿತು. ಸಿದ್ಧನು ಅದನ್ನು ಕುಡಿದು ಹೊರಟನು. ಕೋಣೆಯಿಂದ ಹೊರಕ್ಕೆ ಹೆಜ್ಜೆ ಇಡುವ ಮುನ್ನ ಬಾಗಿ ನೇಮಯ್ಯನ ಪಾದವನ್ನು ಮುಟ್ಟಿ ನಮಸ್ಕಾರ ಮಾಡಿದನು. ನೇಮಯ್ಯ ಅವನ ತಲೆಯ ಮೇಲೆ ಕೈಯಾಡಿಸಿ, "ದೇವರು ನಿನ್ನನ್ನು ಒಳ್ಳೆಯ ದಾರಿಯಲ್ಲಿ ನಡಸಲಿ," ಎಂದು ಹರಸಿದನು.

## ೪೪

ಮರುದಿನ ಕರಣೀಕ ಶಿವಪ್ಪ ನೇಮಯ್ಯನ ಮನೆಗೆ ಬಂದು, ವೀರಣ್ಣ ಸೂರಪ್ಪ ಇವರನ್ನು ಮಠಕ್ಕೆ ಕರೆದುಕೊಂಡು ಹೋದನು. ಮಠದಲ್ಲಿ ಆ ದಿನ ಅದೇನೋ ಸೇವೆ ನಡೆಯುತ್ತಿದ್ದಿತು. ಇವರು ಹೋಗುವ ಹೊತ್ತಿಗೆ ಒಂದು ನೂರು ಸಣ್ಣಮಕ್ಕಳು ಮಠದ ಮುಂದಿನ ಮಂಟಪದಲ್ಲಿ ಗಂಜಿಗಾಗಿ ಕುಳಿತಿದ್ದವು. ಅಯ್ಯ ಅಲ್ಲೆ ಹತ್ತಿರ ನಿಂತು ಅವಕ್ಕೆ ಗಂಜಿಯನ್ನು ಕೊಡಿಸುತ್ತಿದ್ದನು. ಕರಣೀಕ ಮೈಸೂರ ಜನ ಬರುವರೆಂದು ಆ ಮೊದಲೆ ಹೇಳಿಕಳುಹಿಸಿದ್ದನು. ಅಯ್ಯ, "ಅವರು ಬಂದರೆ ಒಂದು ಕಡೆ ಕೂರಿಸಿಕೊಳ್ಳಿ. ನಾವು ಮಕ್ಕಳ ಸೇವೆ ಮುಗಿಸಿ-ಕೊಂಡು ಬರುತ್ತೇವೆ," ಎಂದು ಹೇಳಿದ್ದನು. ವೀರಣ್ಣ, "ನಾವೂ ಸೇವೆಯನ್ನು ನೋಡಬಹುದಲ್ಲ?" ಎಂದು ಹೇಳಿ, ಕರಣೀಕನೊಡನೆ ಅಯ್ಯ ಇರುವ ಕಡೆಗೆ ಹೋದನು. ಅಯ್ಯನನ್ನು ನೋಡಿದೊಡನೆ ಅವನ ಮನಸ್ಸಿನಲ್ಲಿ ಅವ್ಯಾಜವಾಗಿ ಆದರ ಭಕ್ತಿ ಮೂಡಿದುವು. ಮುಪ್ಪಿನ ಮೊದಲ ಮೆಟ್ಟಲನ್ನು ಮುಟ್ಟಿದ್ದ ಆತ ಬಾಳನ್ನು ತುಂಬ ನಿಯಮದಿಂದ ನಡೆಸಿದ್ದದು ಕಾಣುತ್ತಿತ್ತು. ಮೈ ತೆಳ್ಳಗಿತ್ತು. ಮುಖವೂ ತೆಳುವೇ. ಆದರೂ ಅದರಲ್ಲಿ ವರ್ಚಸ್ಸಿತ್ತು. ಕಣ್ಣು ಸೌಮ್ಯವಾದ ರಕ್ಷಕ ದೃಷ್ಟಿಯಿಂದ ಬೆಳಗುತ್ತಿತ್ತು. ಹಣೆಯಲ್ಲಿ ಒಂದೂ ಸುಕ್ಕಿಲ್ಲ. ಜೀವ ಎಂದೂ ಕ್ಷೋಭೆಗೆ ಸಿಕ್ಕಿದ್ದಲ್ಲ. ಎಳೆತನದಲ್ಲೆ ಯಾವುದೊ ಒಂದು ನಿಶ್ಚಯವಾದ ನಂಬಿಕೆಯನ್ನು ಹಿಡಿದು, ಎಲ್ಲ ಹೊತ್ತಿನಲ್ಲೂ ಅದರ ಬೆಳಕಿನಲ್ಲಿ ಬಾಳನ್ನು ನಡೆಸಿದ್ದಿತು. ವರ್ಷದಲ್ಲಿ ಎಷ್ಟು ದಿನ ಸೇವೆ ನಡಸುವ ಜನ ಬಂದರೆ ಅಷ್ಟು ದಿನವೂ ಮಠದಲ್ಲಿ ಸೇವೆ ಸರುವು ಎಂದು ಕರಣೀಕ ಹೇಳಿದನು. ಈ ದಿನ ಯಾರೋ ಪುಣ್ಯವಂತರು ಸೇವೆ ಮಾಡುವೆವೆಂದಿದ್ದರು. ಅಯ್ಯ, "ನಗರದ ಒಂದು ಕೇರಿಗೆ ಹೇಳಿಕಳುಹಿಸಿ; ಎಳೆ ಮಕ್ಕಳೆಲ್ಲ ಬರಲಿ; ಬೆಳಿಗ್ಗೆ ಗಂಜಿ, ಮಧ್ಯಾಹ್ನ ಊಟ ಹಾಕಿ ಕಳಿಸಿ," ಎಂದಿದ್ದನು. ಮಕ್ಕಳಿಗೆ ಗಂಜಿ ಬಡಿಸುವುದನ್ನು ಸ್ವತಃ ನೋಡಿಕೊಳ್ಳುತ್ತ ಅಲ್ಲಿ ನಿಂತಿದ್ದನು.

ಶಿವಪ್ಪ ಅಯ್ಯನ ಹತ್ತಿರ ಹೋಗಿ ಬಗ್ಗಿ ಪಾದವನ್ನು ಮುಟ್ಟಿ ನಮಸ್ಕಾರ ಮಾಡಿದನು. ವೀರಣ್ಣ ಸೂರಪ್ಪ ಸ್ವಲ್ಪ ದೂರದಿಂದ ಬಾಗಿ ಕೈಮುಗಿದರು. ಅಯ್ಯ ಪ್ರತಿಯಾಗಿ ಕೈಮುಗಿದು, ಹಿರೇರು ಮೈಸೂರಿಂದ ಬಂದವರಲ್ಲವೆ? " ಎಂದು ಕೇಳಿದನು.

ಶಿವಪ್ಪ, "ಹೌದು, ಬುದ್ಧಿಯೋರೆ," ಎಂದನು.

"ಈ ಮಕ್ಕಳಿಗೆ ಈ ಗಂಜಿ ಹುಯ್ಯಿಸೋದೆ ಒಂದು ಸಂತೋಷ ನೋಡಿ ಹಿರೇರೆ! ನಮ್ಮಂತಾವರಿಗೆ ಒಂದು ರಾಜ್ಯ ಕೊಡತೀವಿ ಅಂದರೆ ಜೀವ ಇಷ್ಟು ನಲಿಯೋದಿಲ್ಲ. ಈ ಹಸುಮಕ್ಕಳು ಕುಡಿಕೆ ಗಂಜೀಲಿ ಶಿವಾನಂದ ಪಡೀತಾರೆ. ನಾವು ದೊಡ್ಡೋರನ್ನ ಏನೋ ಮಾಡತೀವಿ ಅಂತ ಅದೇನೇನೋ ಪಾಠ ಹೇಳಿ, ನಾವೂ ದಣಿದು ಅವರನ್ನೂ ದಣಿಸ ತೀವಿ. ಶಿವ ಯಾರ ಕೈಗೂ ಸಿಕ್ಕೋದಿಲ್ಲ. ಈ ಮಕ್ಕಳಿಗೆ ಈಸು ಗಂಜಿ ಕೊಟ್ಟರೆ ಅವರ ಮುಖದ ಮೇಲೆ ಮೂಡಿ ಬಿಡತಾನೆ ನೋಡಿ."

ವೀರಣ್ಣ ನಕ್ಕು, "ಹೌದು ಒಡೆಯರೆ, ಸಂತೋಷ ಮೂಡಿಸೋದು ದೇವರ ಪೂಜೇ ಅಂತ ವಚನ ಉಂಟು. ಕಷ್ಟ ಕಡಿಮೆ ಪ್ರಯೋಜನ ಹೆಚ್ಚು ಬಯಸೋರು ಮಕ್ಕಳನ್ನ ನಲಿಸಬೇಕು," ಎಂದನು.

"ಏನು, ಒಂದೊಂದೂ ಒಂದು ಗಣಪ, ಒಂದು ಆರ್ಮುಗ: ಒಂದು ಕೃಷ್ಣ, ಒಂದು ರಾಮ. ಅಂದರೆ ಜಗಳಾನೂ ಮಾಡತಾವೆ ಕಾಣಿರಿ. ನನಗೆ ನಿನಗೆ ಅಂತಾವೆ. ಗಂಜಿ ಬಂತು ಅಂದರೆ ಆ ಪಾತ್ರೆ ಮೇಲೇ ಕಣ್ಣು. ಆಮೇಲೆ ಜಗಳ ಇಲ್ಲ. ಮನಸ್ಸು ಹಸುಮಗುವಿನ ಮನಸ್ಸಾದರೆ ಮನುಷ್ಯ ಬದಿಕಿಕೊಂಡ ನೋಡಿ ಹಿರೇರೆ! ಸ್ವಲ್ಪ ನಿಲ್ಲ ತೀರೋ? ಅಲ್ಲಿ ಜಗತಿ ಮೇಲೆ ಕುಳಿತು ಕಾಯತೀರೋ? "

"ಒಡೆಯರು ಹೇಗೆ ಅಪ್ಪಣೆ ಮಾಡಿದರೆ ಹಾಗೆ."

"ಹ್ಞಾ ಹ್ಞ. ಹಂಗಾದರೆ ಇರಿರ. ಈ ಆಟಾನೂ ಆಸು ನೋಡಿರ."

ವೀರಣ್ಣ ಸೂರಪ್ಪ ಕರಣೀಕ ಅಲ್ಲೇ ನಿಂತರು. ಅಯ್ಯ ಎಲ್ಲ ಮಕ್ಕಳಿಗೂ ತಕ್ಕಷ್ಟು ಬಡಿಸಿದ್ದು ಆಯಿತೆಂಬುದನ್ನು ನಿರ್ಧರಿಸಿಕೊಂಡು, ಮಕ್ಕಳನ್ನು ಕುರಿತು, "ಅಪ್ಪಯ್ಯ, ಇಲ್ಲೆ ಮೈದಾನದ ಮೇಲೆ ಕುಣಿದಾಡತಾ ಇರಿ. ಜಾಗಟೆ ಬಡೀತೀವಲ್ಲ ಆಗ ಜಾಣಾಗಿ ಬಂದು ಊಟಕ್ಕೆ ಕುಂತು

ಕೊಳ್ಳಿ," ಎಂದು ಹೇಳಿ, ಗಂಜಿ ಬಡಿಸುತ್ತಿದ್ದ ತರುಣನನ್ನು ಕರೆದು, "ಲೋ ಶರಣಪ್ಪ, ಈ ಮಕ್ಕಳು ಜಗಳ ಮಾಡ್ತ್ಯಾವು. ಅತ್ತ ಇತ್ತ ಹಾರಿ ಕಾಲು ಮುರಕೊಂಡಾವು. ಇಲ್ಲೇ ಇದ್ದು ನೋಡಿಕೊ," ಎಂದು ಅಪ್ಪಣೆ ಮಾಡಿ, "ಬನ್ನಿ ಹಿರೇರೆ, ಬನ್ನಿ ಶಿವಪ್ಪ," ಎಂದು ಇವರಿಗೆ ಸೂಚಿಸಿ ಮಠದ ಮನೆಯ ಕಡೆಗೆ ನಡೆದನು.

೪೫

ಇವರೆಲ್ಲ ಹೋಗಿ ಜಗಲಿಯಮೇಲೆ ಕುಳಿತಮೇಲೆ ಅಯ್ಯ ಕರಣೀಕನನ್ನು ಕುರಿತು, "ನೀವೆಲ್ಲ ಚೆನ್ನವೆ ಶಿವಪ್ಪ? ಹೆಗ್ಗಡಿತಿಯೋರು ಚೆಂನಾಗಿದ್ದಾರಲ್ಲ?" ಎಂದು ಕೇಳಿದನು.

ಶಿವಪ್ಪ, "ಬುದ್ದಿಗಳ ಹರಕೆ, ಎಲ್ಲ ಚೆಂದವಾಗಿದ್ದೇವಿ. ಹೆಗ್ಗಡಿತಿಯೋರು ಶರಣು ಬೇಡಿದರು," ಎಂದನು.

"ಒಳಿತು. ನೀವು ಇಲ್ಲಿ ಬಂದಿದ್ದ ಕೆಲಸ ಸುಸೂತ್ರ ನಡೀತೊ?"

"ನಡೀತು. ಬುದ್ದಿಯೋರೆ. ಹೊರಡೋ ಮುನ್ನ ಕಾಣಿಕೆ ಒಪ್ಪಿಸಾಕೆ ಬಂದಿನಿರಿ."

ಹೀಗೆಂದು ಶಿವಪ್ಪ ಕೈಯಲ್ಲಿ ಎರಡು ಹೊನ್ನನ್ನು ತೆಗೆದುಕೊಂಡು ಎರಡು ಕೈಯಿಂದ ಮುಂದಕ್ಕೆ ನೀಡಿದನು.

ಅಯ್ಯ ಮಠದ ಒಳಗಡೆ ದನಿಮಾಡಿ, "ಅಯ್ಯಾ ಬಸಪ್ಪ, ಇತ್ತ ಬಾ, ಈ ಹೊನ್ ತಗೊ. ಶೆಟ್ಟರ ಕಡೆಯವರಿಗೆ ಮುಟ್ಟಿಸು," ಎಂದು ಹೇಳಿದನು. ಒಳಗಿಂದ ಮಧ್ಯ ವಯಸ್ಸಿನ ಒಬ್ಬ ಮನುಷ್ಯ ಬಂದು ಕರಣೀಕನ ಕೈಯಿಂದ ಕಾಣಿಕೆಯ ಹೊನ್ನನ್ನು ತೆಗೆದುಕೊಂಡನು, "ದೊಡ್ಡ ಹೊನ್ನು ಎರಡು" ಎಂದನು.

ಅಯ್ಯ, "ಬೇಕಾದ್ದಾಗಲೇಳು. ಅದರ ಹೊಣೆ ನಿಮ್ಮದು. ಸರಿಯಾಗಿ ನೋಡಿಕೊಂಡರೆ ಬದುಕತೀರ. ನೋಡಲಿಲ್ಲ ತೊಳಲತೀರ. ನಮ್ಮ ಮಠದಲ್ಲಿ, ಹಿರೇರೆ, ನಾವು ಉಗ್ರಾಣ ಇಡಿಸಿಲ್ಲ, ಪೆಟ್ಟಿಗೆ ಇರಿಸಿಲ್ಲ. ನಮ್ಮ ಗುರುಗಳು ಇಲ್ಲಿ ಆಳಿದ ಕಾಲಕ್ಕೆ ಹೊತ್ತಿಗೆ ಸಾವಿರ ಜನ ಊಟ ಮಾಡುತಿತ್ತು. ಧರ್ಮ ನಾಲ್ಕು ಕಾಲಾಗ ನಡೀತಾ ಇತ್ತು. ಅವರು

ದೇವರ ಸೇರಿದರು, ನಾವು ಪೀಠಕ್ಕೆ ನಿಂತದ್ದಾಯಿತು. ಎಳೀ ಜನಾ ಅಂತ ಮೊದಲ ಮೂರು ವರ್ಷದಲ್ಲಿ ಮಠ ನಡಸೋರು ಹೆಗ್ಗಣಗಳಾಗಿ ಬಿಟ್ಟರು. ಭಕ್ತ ತಂದುಹಾಕಿ ಭಕ್ತ ಉಂಡರೆ ಶಿವನಿಗೆ ಒಲುಮೆ. ತರೋನಿಗೆ ಉಣ್ಣೋನಿಗೆ ಮಧ್ಯೆ ಮನುಷ್ಯ ಹೆಗ್ಗಣ ಆಗಿ ಬಂದರೆ ಅದರ ಪಾಪ ಯಾರಿಗೆ? ಹೆಗ್ಗಣಾನ ಬಿಟ್ಟವನಿಗೆ. ನಮಗ್ಯಾಕೆ ಇದರ ಪಾತಕಾ ಅಂತ ನಾವಾಗಲೆ ಊರ ಶೆಟ್ಟರನ್ನ ಕರಸಿ ಮಠದ ಉಗ್ರಾಣ ಊರಾಗಿರ ಬೇಕೂ ಅಂತ ಮಾಡಿಬಿಟ್ಟವಿ. ಮಠದ ಪೆಟ್ಟಿಗೆ ಶೆಟ್ಟರ ಮನೇಲಿ. ಮಠ ಏನಿದ್ದರು ಅಡಿಗೆ ಮನೆ, ಊಟದ ಮನೆ, ಪೂಜೇ ಮನೆ. ಈ ಹಸುಮಕ್ಕಳು ಬಂದರೆ ಆಟದ ಮನೆ. ಹೀಗೇ ಅಂತ ಮಾಡಿದಿವಿ, ಹಿರೇರೆ. ಆಗಲಿಂದ ನಮ್ಮ ಮನಸ್ಸಿಗೂ ನಿರಾಳವಾಗಿ ಇದ್ದದೆ. ಉಗ್ರಾಣದಾಗೆ ಏನಿದೆ ಏನಿಲ್ಲ ಅಂತ ನಾವು ಕೇಳೋಹಂಗಿಲ್ಲ. ದಿನಾಗಲು ಜನಾನ ನೋಡಿಕೊಂಡು ಶೆಟ್ಟರು ಸಾಮುಗ್ರಿ ಕಳಿಸತಾರೆ. ನಮ್ಮ ಶರಣಪ್ಪ ಅಡಿಗೆ ನೋಡಿಕೋತಾನೆ. ಬಸಪ್ಪ ಬಡಿಸೋದು ನೋಡಿಕೋತಾನೆ. ನಾವು ಶಿವಾ ಅಂತ ತೆಪ್ಪನೆ ದೇವರನ್ನ ನೆನೀತಿರತೀವಿ. ದೇವರು ನಮ್ಮ ಮನಸ್ಸಿಗೆ ಈ ಏರ್ಪಾಡು ಹೊಳೆಯಿಸಿ ನಮ್ಮನ್ನ ಕಾಪಾಡಿದ."

ವೀರಣ್ಣ: ತುಂಬ ಒಳ್ಳೆಯ ಏರ್ಪಾಡು. ಎಲ್ಲಾ ಮಠಗಳೂ ಹೀಗೆ ಮಾಡಿದರೆ ಚೆನ್ನಾದೀತು.

"ಹೌದಲ್ಲ. ಆದರೆ ಇಂಥ ಶೆಟ್ಟರು ಸಿಕ್ಕೋದೂ ಕಷ್ಟ. ನಮ್ಮ ಲೆಕ್ಕದಾಗೆ ಕಾಸು ಉಂಟಾದರೂ ಇಲ್ಲವಾದರೂ ಶೆಟ್ಟರು ಸೇವೆ ನಡಸಿ ಬಿಡತಾರಲ್ಲ. ದೊಡ್ಡಪೇಟೆ ನಾಲ್ಕು ಬೀದಿ, ಧರ್ಮದ ಕಾಸಿಗೆ ಚಿಂತೆ ಇಲ್ಲ. ಹೆಂಗೊ ತೂಗತಾ ಅವೆ. ಸಣ್ಣ ಊರಾದರೆ ಕಷ್ಟ ಆಗೋದು."

"ಹೌದು, ಒಡೆಯರೆ."

"ನಿಮ್ಮ ಕಡೇಗೂ ಶರಣರು ಬಹು ಮಂದಿ ಆಗಿದ್ದಾರೆ. ನಂಜನ ಗೂಡು ಬಹಳ ಪುಣ್ಯದ ಊರು. ಇಲ್ಲಿಂದ ಜನ ಆಗಾಗ ಅಲ್ಲಿಗೆ ಹೋಗೋದುಂಟು."

"ಹೌದು. ಆದರೆ ಬಹುದೂರ. ಮಧ್ಯೆ ದಾರಿ ಕಷ್ಟ."

"ಬುದ್ಧಿ ಹದವಾಗಲೀ ಅಂತ ದೇವರು ದೂರ ನಿಲ್ಲತಾನರಿ. ನಡೆದುಬಾ ಅಂತಾನರಿ. ದೇವರ ಹತ್ತಿರ ಹೋಗೋದು ಸುಲಭ ಆದರೆ ಈ ಲೋಕ ಅಲ್ಲ, ಕೈಲಾಸ ಆಯ್ತು. ಮೈಕೊಟ್ಟು ಗೆಲ್ಲು ಅಂತಾನೆ; ಆಶೆ ಕೊಟ್ಟು ಸೋಲ ಬೇಡ ಅಂತಾನೆ; ಸಿಕ್ಕಿದ ಅನ್ನೋಹಂಗೆ ಮಾಡಿ ದೂರ ಸಾರತಾನೆ. ನೋಡತಿದ್ದ ಹಂಗೆ ಬೆಟ್ಟ ಏರಿ ಕೂರತಾನೆ. ಸಂಸಾರ ಒಂದು ಗರಡೀ ಮನೆ. ಹಿರೇರು ಹೇಳಿದರು, ಮರ್ತ್ಯಲೋಕ ಕರ್ತಾರನ ಕಮ್ಮಟ, ಅಂತ. ಪಕ್ಕಕೆ ಕಪಿನೀ ಹೊಳೀನೊ?"

"ಹೌದು, ಒಡೆಯರೆ. ಊರಿಗೆ ಮೂರು ಸುತ್ತು ಹರೀತದೆ."

"ಆಹ್ಹಾ. ಪ್ರದಕ್ಷಿಣೆ ಮಾಡತಾಳಿದ್ದೀತು; ತಾಯಿ ಗಂಗವ್ವ. ಬಯಲು ಸೀಮೆ ನದಿ, ತುಂಬ ಅಡ್ಡಗಲ ಇರಬೇಕಲ್ಲ? ಬೆಳ್ಳಗೆ ಮರಳಿರ ಬೇಕು. ಬೇಗೇಲಿ ತಾಯಿ ಇತ್ತಲಾಗಿಂದತ್ತಲಾಗೆ, ಅತ್ತಲಾಗಿಂದಿತ್ತ ಲಾಗೆ, ಬಾಗತ ಬಳಕತ ನಡೀತಾಳಿರಬೇಕು. ಸಪ್ಪಳು ಬಾಳ ಇಂಪು. ತಿಂಗಳ ರಾತ್ರೀಲಿ ಶಿವ ಮರಳ ಮೇಲೆ ಆಡತಾನೆ; ತಾಯಿ ತಪ್ಪಿಸಿ ಕೊಂಡು ತಪ್ಪಿಸಿಕೊಂಡು ಕಿಲಕಿಲ ನಗತಾಳೆ. ನೀವು ಬಹಳ ಸಲ ನೋಡಿದ್ದೀರೊ?"

"ನಂಜನಗೂಡು ನೋಡಿದ್ದೇನೆ. ಇದೆಲ್ಲ ನಮಗೆ ಕಾಣೋದಿಲ್ಲ."

"ಹೌದು, ನೋಡಿರಿ. ಇಂಥಾದೆಲ್ಲ ನೀವು ಮನೆಯಾಗೆ ನೋಡತೀರಿ. ಮನೆ ಬೇಡಾ ಅಂದವರು ಲೋಕದಾಗೆ ನೋಡತೇವಿ. ಎರಡೂ ಚಂದವೆ; ಎರಡೂ ನಿಜವೇ."

"ಆದರೆ ಮನೇಲಿ ನೋಡೋದು ಶಿವನ ಆಟಾ ಅನ್ನೋದು ನಮಗೆ ತಿಳಿಯೋದಿಲ್ಲವಲ್ಲ ಒಡೆಯರೆ?"

"ಅದಕ್ಕಾಗಿಯೆ ಶಿವಾಚಾರ ಆಗಿರೋದು: ಆ ನೋಡೋದನ್ನ ಕಲಿಸಬೇಕು ಅಂತ. ನಮ್ಮ ಸಾಲಾವಳೀಗೆ ಮೊದಲಯ್ಯ ಪ್ರಭುದೇವರ ಪಾದದಿಂದ ಬೆಳೆದರು. ಪ್ರಭು ಇದನ್ನೇ ಹೇಳಿದರು; ಅದನ್ನೇ ಅವರ ಮಾತಾಗಿ ನಾವೂ ಹೇಳತೇವಿ. ಎದುರಿಗೆ ಬರೋದೆಲ್ಲ ಶಿವ ಅಲ್ಲದೆ ಬೇರೆ ಇಲ್ಲ. ಶಿವನ ಜೊತೆಗೆ ಲೋಕ ಎಲ್ಲ ಆಡತಾ ಅದೆ. ಎಲ್ಲ ಆಟಾನೂ ಶಿವ ಆಡತಾ ಇದ್ದಾನೆ. ಇದೇ ಪಾಠ ಆಗಬೇಕು."

"ಇದು ಎಲ್ಲಾದಕ್ಕೂ ಹೊಂದುತದೆಯೆ ಒಡೆಯರೆ?"

"ಓಹೊ, ಏನಡ್ಡಿ ಇಲ್ಲ."

"ಈ ಉಗ್ರಾಣದಲ್ಲಿ ಕಳವು ಮಾಡೊ ಹೆಗ್ಗಣದಂಥ ಮನುಷ್ಯನಿಗೆ ಇದು ಹೊಂದುತದೆಯೆ? ಅದೂ ಶಿವನ ಆಟವೇ?"

"ಹೌದು ಹಿರೇರೆ! ಅದೇ ತಿಳಿಯಬೇಕು. ಸಂಸ್ಕೃತದಾಗೆ ನಮ್ಮ ಶಾಸ್ತ್ರಿಗಳು ಹೇಳತಾರಲ್ಲ, ತೇನ ವಿನಾ, ಅಂತ? ಶಿವ ನಡಸದೆ ಈ ಗೊಂಬೆ ಯಾವುದು ನಡೀತದೆರಿ?"

"ಮತ್ತೆ ದೇವರೇ ಈ ಅನ್ಯಾಯ ಮಾಡೋಕೆ ಹೊರಟರೆ ಮನುಷ್ಯರ ಗತಿ ಏನು?"

"ಮನುಷ್ಯ ಬೇರೆ ಯಾರೂ ಅಂತ? ಎರಡು ಕಾಯಿ ಅವನೇನೆ ನಡಸತಾನೆ."

"ಮತ್ತೆ ನಾವೇನು ಮಾಡಬೇಕು?"

"ಕಾಯಾಗಿ ನಡೀಬೇಕು ಹಿರೇರೆ."

"ಅವನು ಹೆಗ್ಗಣ ಆಗಿ ನಡೆದರೆ ನಾವು . . ."

"ಬೆಕ್ಕಾಗಬೇಡಿರಿ. ಆ ಹೆಗ್ಗಣಕ್ಕೆ ಸಾಮಾನು ಸಿಕ್ಕದ ಹಂಗೆ ಎತ್ತಿ ಇಡಿರಿ."

"ಮತ್ತೇನೊ ಮಾಡಿದರೆ? ಹೊಡೆಯೋಕೆ ಬಂದರೆ?"

"ಹಂದೆ ಆಗದ ಹಂಗೆ ಹಿಂದಕ್ಕೆರಡು ಕೊಡಿರಿ. ಪೆಟ್ಟುತಿಂದು ನಗತಾನೆ; ಗೆದ್ದೆ ಮಗನೆ ಅಂತಾನೆ. ಅರ್ಜುನನ ಕತೆ ಕೇಳಿದ್ದೀರೊ? ಬ್ಯಾಡನಿಗೆ ಎದುರು ಬಿದ್ದಾ ಅಂತಾರಲ್ಲ."

"ಕೇಳಿದ್ದೇನೆ ಒಡೆಯರೆ. ತಮ್ಮಂತೆ ಬಲ್ಲವರಿಗೆ ಇದೆಲ್ಲ ಸರಿ ಹೋಗತದೆ. ನಮ್ಮಂಥ ಜನಕ್ಕೆ ನಡಗೆ ಕಷ್ಟ ಆಗತದೆ. ಇಂಥ ಮಾತು ಹೇಳತಾ ನೀವು ಇಲ್ಲೆ ಬಿಜಯ ಮಾಡಿಸಿದ್ದೀರಿ. ಈ ಎದುರಿಗೆ ಈ ದೊಡ್ಡ ಊರಿನಲ್ಲಿ ದಿನಕ್ಕೆ ಒಂದು ಸಾವಿರ ಅನ್ಯಾಯ ಆಗತಿರತದೆ. ಸಾವಿರ ವರ್ಷ ಪ್ರಭುಗಳ ಮಾತು ಉಪದೇಶ ಆಗಿದೆ; ಅನ್ಯಾಯ ಇನ್ನೂ ಹಾಗೆಯೇ ಇದೆ."

"ಸೂರ್ಯ ಎಷ್ಟು ಸಾವಿರ ವರ್ಷ ಬೆಳಗಿದ್ದಾನೆ ಹಿರೇರೆ. ಇನ್ನೂ ನೋಡಿ ಆರವತ್ತು ಗಳಿಗೇಲಿ ಮೂವತ್ತು ಕತ್ತಲು, ಮೂವತ್ತು ಬೆಳಕು."

"ಅಂದರೆ, ಈ ಅನ್ಯಾಯ ನಿಲ್ಲೋದಿಲ್ಲ."

"ನಿಂತರೆ ಆಟ ಮುಗೀತು. ಕರೀ ಮನೆ ಕೆಂಪಿನ ಮನೆ ಎರಡೂ ಇದ್ದರೆ ಹಾಸಂಗಿ."

"ಹ್ಯಾಗೂ ಅನ್ಯಾಯ ನಿಲ್ಲೋಹಂಗಿಲ್ಲ. ನಾವೂ ಸ್ವಲ್ಪ ಮಾಡೋಣ ಅಂದರೆ?"

"ಮಾಡೋಕಾಗೋದಿಲ್ಲ ಹಿರೇರೆ. ಕರೀಮನೆ ಕಾಯಿ ಕೆಂಪಿನ ದಾಳಕ್ಕೆ ನಡೆಯೋದಿಲ್ಲ. ಕೆಂಪಿನಮನೇ ಕಾಯಿ ಕರೀದಾಳಕ್ಕೆ ನಡೆಯೋದಿಲ್ಲ. ಅದರದರ ಆಶೆ ಅದದನ್ನ ನಡಸತದೆ. ಆಶೇನೂ ದಿನ ದಿನಕ್ಕೆ ಬೇರೆ ಆಗತದೆ. ನಿಮ್ಮನ್ನ ದೇವರು ಅನ್ಯಾಯಕ್ಕೆ ಹೇಸೋವರನ್ನ ಮಾಡಿದ್ದಾನೆ; ಬದುಕಿಸಿದ್ದಾನೆ. ಬದುಕಿಸಿದೇ ಅಂತ ಕೈಮುಗೀರಿ; ಒಳ್ಳೇ ದಾರೀಲಿ ನಡೀರಿ.''

"ಅಪ್ಪಣೆ ಒಡೆಯರೆ."

"ನೀವು ತಿಳಿದೋರು. ನಿಮಗೆ ನಾವು ಹೇಳಬೇಕಾಗಿಲ್ಲ. ಅಂದರೆ ಈ ಚರ್ಚೆ ಬಹಳ ತಾವ ಮಾಡಬೇಡಿರಿ. ಏನು ತಿರುವಿಹಾಕಿದರೂ ಮನಸ್ಸಿನಾಗ ತಿರುವಿ ಹಾಕಿರಿ. ನಡೆಯೋ ನಡೆ ಕೆಡಿಸಬೇಡಿರಿ."

"ಅಪ್ಪಣೆ, ಒಡೆಯರೆ."

ಅಯ್ಯ ಇವರು ಭೋಜನಕ್ಕೆ ಇರುವುದಾದರೆ ಏರ್ಪಾಡು ಮಾಡಿಸೋಣ ಎಂದನು.

ವೀರಣ್ಣ, "ಈಗ ಬೇಡ, ಅಪ್ಪಣೆ ಕೊಡಬೇಕ" ಎಂದು ಬೇಡಿದನು. ಅಯ್ಯ ಬಸಪ್ಪನನ್ನು ಕರೆದು ದೇವರ ಪ್ರಸಾದ ತರಿಸಿ ಇವರಿಗೆಲ್ಲ ಕೊಟ್ಟನು; "ಹೋಗಿ ಬನ್ನಿ", ಎಂದನು.

ಕರಣೀಕನಿಗೆ, "ಹೆಗ್ಗಡಿತೀರಿಗೆ ಮನೆ ಮಕ್ಕಳಿಗೆ ನಮ್ಮ ಹರಕೆ ಹೇಳಿ ಶಿವಪ್ಪ," ಎಂದನು.

ಶಿವಪ್ಪ, "ಹೇಳತೀನಿ, ಬುದ್ಧಿಗಳೆ," ಎಂದನು.

ಇವರು ಹೊರಡಲು ಅನುವಾದರು. ಅಯ್ಯ ಜೊತೆಗೆ ಹೆಜ್ಜೆಯಿಕ್ಕಿ ಮಠದ ಮುಂಬಾಗಿಲವರೆಗೆ ಬಂದು ಇವರನ್ನು ಬೀಳ್ಕೊಟ್ಟನು.

ಅಲ್ಲಿ ಒಂದು ಗುಂಪು ಜನ ಕಾದಿದ್ದಿತು.

ವೀರಣ್ಣ, "ಇವರು ಯಾರು ?" ಎಂದು ಕೇಳಿದನು.

ಶಿವಪ್ಪ, "ಊರಿನ ನಾಡಿನ ಕಾಯಲೆ ಜನ. ಅಯ್ಯನವರು ಔಷಧಿ ಕೊಡೋದುಂಟು. ನಾರು ಬೇರು ಬೆಳಸಿದಾರೆ. ಪ್ರಸಾದ ಕೊಡತಾರೆ. ತುಂಬಾ ಮಂದೀನ ಬದಿಕಿಸಿದಾರೆ," ಎಂದನು.

ಮಠದಿಂದ ಹಿಂದಕ್ಕೆ ಬರುತ್ತ ಅವನು ವೀರಣ್ಣ ಸೂರಪ್ಪ ಇವರಿಗೆ, "ಅಯ್ಯನವರು ಒಂದು ಕಠಿಣವಾದ ಶಬ್ದವನ್ನಾಡದೆ ಊರನ್ನೆಲ್ಲ ತಮ್ಮ ಕೈಯಲ್ಲಿಟ್ಟುಕೊಂಡಿದಾರೆ," ಎಂದು ಹೇಳಿದನು.

ಮಠದ ಹಿರಿಯ ಅಂತ ಅಯ್ಯ, ಮಠ ಎನ್ನುವುದಿಲ್ಲದೆ ನೇಮಯ್ಯ, ಇವರಿಬ್ಬರದೂ ಒಂದು ದಾರಿ ಆಗಿದ್ದಿತು. ನಿಜವಾಗಿ ಇವರಿಬ್ಬರಲ್ಲಿ ಯಾರೆ ಆಗಲಿ ಇಂಥದು ಆಗಬೇಕು ಎಂದು ಅಪೇಕ್ಷಿಸಿದರೆ ನಗರ ನಗರವೆ ಅದನ್ನು ಖಂಡಿತವಾಗಿ ನಡೆಸಿಕೊಡುವುದು. ಇಂಥದರಲ್ಲಿ ಈ ಇಬ್ಬರೂ ಸರಿಯೆ, ಇದು ಹೀಗೆ ಆಗಬೇಕು ಎಂದು ತಮ್ಮ ಇಚ್ಛೆಯನ್ನು ಒಂದು ದಿವಸ ಹೇಳಿದ್ದಿಲ್ಲ. ಹತ್ತು ಜನ ಹೇಳಬೇಕು; ಆಮೇಲೆ ಇವರು ಆಗಬಹುದು ಎನ್ನಬೇಕು. ಹಾಗಿಲ್ಲದಿದ್ದರೆ ಈಗ ನಗರದಲ್ಲಿ ಉಂಟಾಗಿದ್ದ ತೊಡಕು ಇಷ್ಟು ದಿನ ನಿಲ್ಲುತ್ತಿರಲಿಲ್ಲ. ಇವರು ಒಳ್ಳೆಯತನದಲ್ಲಿ ತಾಳಿಕೊಳ್ಳುತಿದ್ದರು. ಊರಿನ ಜನಕ್ಕೆ ಬೇಸರವಾಗುತ್ತಿದ್ದಿತು.

ವೀರಣ್ಣ ಇವರ ಸಾತ್ವಿಕ ಆಲಸ್ಯ ಹೀಗೆ ತಾಮಸದಂತೆ ಕಂಡ ವಿಷಯದಲ್ಲಿ ಆಶ್ಚರ್ಯಪಡಲಿಲ್ಲ. ಎರಡರ ಮುಖವೂ ಒಂದೆ. ಚೀಗು ಬೇರೆ. ಇದನ್ನು ಅವನು ಪಟ್ಟಣದ ಬಾಳಿನಲ್ಲಿಯೆ ನೋಡಿದ್ದನು. ಮನುಷ್ಯ ಒಳ್ಳೆಯವನಾದಷ್ಟೂ ದನಿಯನ್ನು ತಗ್ಗಿಸುವನು. ಬಾಯಿಬಡುಕನ ಮಾತಷ್ಟೆ ಊರಿಗೆ ಸಿಕ್ಕುವುದು. ಇದಕ್ಕೇನು ಪರಿಹಾರವೊ ಎಂದು ಯೋಚಿಸುತ್ತ ಅವನು ಶಿವಪ್ಪನ ಮಾತನ್ನು ಕೇಳುತ್ತ ಬಂದನು.

## ೪೬

ಇವರು ಮನೆಗೆ ಬಂದು ಮುಟ್ಟುವಾಗ್ಗೆ ಮಲ್ಲಯ್ಯ ಇವರ ಬಿಡಾರಕ್ಕೆ ಬಂದು, ಆ ಸಂಜೆ ನಗರೇಶ್ವರನ ಚೌಕದಲ್ಲಿ ಬಹುಒಳ್ಳೆ ನಾಲ್ಕು ಮಲ್ಲಾಟ ನಡೆಯುತ್ತದೆಯೆಂದೂ ಅದರಲ್ಲಿ ಗೆಲ್ಲುವವರಿಗೆ ನಾಯಕರು ಉಚಿತ ನೀಡುತ್ತಾರೆಂದೂ ಇಷ್ಟವಿದ್ದರೆ ಇವರು ಬಂದು ನೋಡಬಹುದೆಂದೂ ತಿಳಿಸಿದನು. ವೀರಣ್ಣನಿಗೆ ಇವರ ಕಾಳಗವನ್ನು ನೋಡಬೇಕೆಂದು ಅಪೇಕ್ಷೆಯಾಯಿತು. ಆದ್ದರಿಂದ ಸಂಜೆ ಇವರೆಲ್ಲ ಚೌಕಕ್ಕೆ ಹೋದರು. ಕರಣೀಕ ಮೊದಲೆ ಹೇಳಿಕಳುಹಿಸಿದ್ದು ತಾನು ವೀರಣ್ಣ ಸೂರಪ್ಪ ಕುಳಿತುಕೊಳ್ಳುವುದಕ್ಕೆ ಒಂದು ಅಂಗಡಿಯ ಮೇಲೆ ಸ್ಥಳ ಏರ್ಪಡಿಸಿ ಕೊಂಡಿದ್ದನು.

ಕಾಳಗವನ್ನು ನೋಡುವುದಕ್ಕೆ ಬಂದ ಜನ, ಸುತ್ತಿನ ದಾರಿ ಕೇರಿ ನೆಲ ಚಾವಣಿ ಮರ ದಿಬ್ಬ ಇದರ ಮೇಲೆ, ಎಲ್ಲಿ ಅಂದರೆ ಅಲ್ಲಿ. ಬೆಲ್ಲಕ್ಕೆ ಇರುವೆ ಮುತ್ತಿದಂತೆ ಮುತ್ತಿ ತುಂಬಿತ್ತು. ಕಾಳಗದ ಮಲ್ಲರು ನಾಲ್ಕು ಜೋಡಿ ಅಲ್ಲೆ ಒಂದು ಅಂಗಡಿಯ ಮುಂದೆ ಕುಳಿತಿದ್ದರು. ನಾಯಕನು ಕುಳಿತುಕೊಳ್ಳುವುದಕ್ಕೆ ದೇವಾಲಯದ ಮುಂಭಾಗದಲ್ಲಿ ಬಲಕ್ಕೆ ಒಂದು ಪೀಠವನ್ನು ಹಾಕಿತ್ತು.

ಇವರು ಹೋಗಿ ತಮ್ಮ ಸ್ಥಳದಲ್ಲಿ ಕುಳಿತ ಎರಡು ನಿಮಿಷಕ್ಕೆ ನಾಯಕನು ಕೋಟೆಯಿಂದ ಹೊರಟು ಬಂದನು. ಅವನ ಹಿಂದೆ ಒಬ್ಬ ಆಳು ಕೊಡೆ ಹಿಡಿದು ನಡೆಯುತ್ತಿದ್ದನು. ಅವನ ಹಿಂದೆ ನಗರದ ಜಟ್ಟಿ ಮನೆಗಳ ಹಿರಿಯರು ನಡೆದುಬಂದರು.

ನಾಯಕನು ಕಣ್ಣಿಗೆ ಬಿದ್ದೊಡನೆ ಎಲ್ಲೆಲ್ಲಿ ಕುಳಿತಿದ್ದವರು ಅಲ್ಲಲ್ಲೆ ಎದ್ದು ನಿಂತರು; ಕೈಮೇಲಕ್ಕೆತ್ತಿ ನಮುಸ್ಕಾರ ಮಾಡಿದರು. ವಯಸ್ಸಾದ ಜನ, "ಶರಣು ನನ್ನಪ್ಪ, ಶರಣು ನನ್ನೊಡೆಯ," ಎಂದು ಕೂಗಿದರು. ಅದೇನು ಯಾರಾದರೂ ಹೇಳಿಕೊಟ್ಟು ಹಾಕಿದ ಕೂಗಲ್ಲ. ನಾಯಕನು ತಲೆ ತಗ್ಗಿಸಿಕೊಂಡು ಬರುತ್ತಿದ್ದನು; ಈ ಕೂಗನ್ನು ಕೇಳಿ ತಲೆ ಎತ್ತಿದನು. ಮುಗಿದು ಎತ್ತಿದ್ದ ಕೈಯ ಹೊಲವನ್ನು ನೋಡಿ ಅವನ ಎದೆ ಹಿಗ್ಗಿತು;

ಅವನು ಕೈಮುಗಿದನು. ದೇವಾಲಯದ ದಿಬ್ಬದ ಹಂತವನ್ನು ಹತ್ತಿ ಹೋಗಿ ತನ್ನ ಪೀಠದ ಮೇಲೆ ಮಂಡಿಸಿದನು.

ಕಾಳಗವನ್ನು ನೋಡುವುದಕ್ಕೆ ನೆರೆದಿದ್ದ ಗುಂಪಿನಲ್ಲಿ ಒಂದು ಪಕ್ಕದಲ್ಲಿ ಮಲ್ಲಿಗೆ ಸಗುನ ನಿಂತಿದ್ದರು. ಇವರಿದ್ದ ಕಡೆಯಿಂದ ನಾಯಕ ಮುಖ ತಗ್ಗಿಸಿ ಪೀಠದಮೇಲೆ ಕುಳಿತ ರೀತಿ ಚೆನ್ನಾಗಿ ಕಾಣುತ್ತಿದ್ದಿತು. ಅದನ್ನು ಹಾಗೆ ನೋಡಿದೊಡನೆ ಮಲ್ಲಿಗೆ, "ಅ, ಸಗುನ ಇವರು ಯಾರ ಹಂಗೆ ಹೇಳು," ಎಂದಳು.

ಸುಗುನ, "ಯಾರಹಂಗೆ?" ಎಂದನು. ಮಲ್ಲಿಗೆಯ ಚುರುಕು ನೋಟಕ್ಕೆ ಚೂಪು ಬುದ್ಧಿಗೆ ಹೊಳೆದ ಯಾವುದೊ ಸಂಗತಿ ಇವನ ಗಂಡು ನೋಟಕ್ಕೆ ಬುದ್ಧಿಗೆ ಹೊಳೆಯಲಿಲ್ಲ. ಮಲ್ಲಿಗೆ ಮತ್ತೆ ಏನೂ ಹೇಳದೆ ನಾಯಕನ ಕಡೆ ನೋಡುತ್ತ ನಿಂತಳು.

ನಾಲ್ಕು ಮಲ್ಲ ಕಾಳಗ ನಡೆದವು. ಕಾಯುವುದು, ಕಲೆಯುವುದು, ಹಿಡಿಯುವುದು, ಬಿಡಿಸಿಕೊಳ್ಳುವುದು, ಬಾಗುವುದು, ದೂಡುವುದು, ಅಪ್ಪುವುದು, ಅಪ್ಪಳಿಸುವುದು, ಇದರಲ್ಲಿ ಯಾವ ಯಾವ ಚಳಕ ಇರಬಹುದು, ಅದು ಎಲ್ಲ ಒಂದಲ್ಲ ಒಂದು ಹೊತ್ತಿನಲ್ಲಿ ಈ ಒಂದೊಂದು ಕಾಳಗದಲ್ಲಿಯೂ ಕಂಡಿತು. ಎಂಟು ಜನ ಜಟ್ಟಿಗಳೂ ಕಾಳಗದಲ್ಲಿ ನಿಪುಣರು; ದೃಢ ದೇಹಿಗಳು; ತಮ್ಮ ತಮ್ಮ ಜಟ್ಟಿಸಾಲೆಗೆ ಪ್ರತಿನಿಧಿಗಳಾಗಿ ಬಂದಿದ್ದರು. ನಾಯಕನು ಒಂದೊಂದು ಕಾಳಗವನ್ನೂ ಎವೆಯಿಕ್ಕಲಿಲ್ಲ ಎಂಬಂತೆ ನಿಟ್ಟಿಸಿ ನೋಡುತ್ತಿದ್ದನು. ಮೊದಲ ಕಾಳಗ ಒಂದು ಅರ್ಧ ಗಳಿಗೆ ನಡೆಯಿತು. ಅದರಲ್ಲಿ ಗೌಡರ ಕೇರಿಯ ಗರಡಿಯ ಜಟ್ಟಿ, ನಾಯಕವಾಡಿಯ ಗರಡಿಯ ಜಟ್ಟಿ, ಸೆಣಸಿದರು. ನಾಯಕವಾಡಿಯ ಜಟ್ಟಿ ಗೌಡರ ಗರಡಿಯ ಜಟ್ಟಿಯನ್ನು ಕೊನೆಗೆ ಕೆಳಕ್ಕೆ ಹಾಕಿ ಬೆನ್ನು ಮಾಡಿದನು. ಅದಕ್ಕೆ ಮೊದಲು ಅವರಿಬ್ಬರೂ ಕುಸಿದು ನೆಲಕ್ಕೆ ಬಿದ್ದು ೀಲಕ್ಕೆ ಏಳದೆ ಬಿದ್ದಂತೆಯೆ ಒಬ್ಬನನ್ನೊಬ್ಬನು ಬೆನ್ನುಮಾಡಲು ನೋಡಿದ್ದರು. ಕೊನೆಗೆ ನಾಯಕವಾಡಿಯವನು ಗೆದ್ದನೆಂದು ಎಲ್ಲರಿಗೂ ಕಂಡಿತು. ಆದರೆ ನಾಯಕನು ಕಣದ ಮೇಟಿಯನ್ನು ಕರೆದು, "ನಾಯಕ ಜಟ್ಟಿ ಹಿಡಿದ ಒಂದು ಹಿಡಿತ ಕಾಳಗದಲ್ಲಿ ನ್ಯಾಯವಲ್ಲ. ಅವನು ಅದನ್ನು

ಹಾಕಿದನೆ ಕೇಳು?" ಎಂದನು. ಅವನು ಹೌದು ಎಂದು ಒಪ್ಪಿಕೊಂಡನು. ಎರಡನೆಯ ಜೊತೆ ಹೊಂಬುಚ್ಚದ ಗರಡಿಯ ಜಟ್ಟಿ, ಹುಲಿಕಲ್ಲಿನ ಗರಡಿಯ ಜಟ್ಟಿ; ಅದರಲ್ಲಿ ಹೊಂಬುಚ್ಚದವನು ಗೆದ್ದನು. ಮೂರನೆಯದು ಕೊಲ್ಲೂರುಕಟ್ಟೆಯ ಕಾವಲೆ ದುರ್ಗದ ಜಟ್ಟಿಗಳದು; ಅದರಲ್ಲಿ ಕಾವಲೆದುರ್ಗದ ಜಟ್ಟಿ ಗೆದ್ದನು. ನಾಲ್ಕನೆಯದು ಕಳಸ ಬಾಳೆಹೊನ್ನೂರಿನ ಗರಡಿಗಳ ಜಟ್ಟಿಗಳದು; ಅವರಲ್ಲಿ ಕಳಸದ ಜಟ್ಟಿ ಗೆದ್ದನು. ನಾಲ್ಕೂ ಕಾಳಗ ಮುಗಿದಮೇಲೆ ಎಂಟು ಜಟ್ಟಿಗಳೂ ನಾಯಕನ ಹತ್ತಿರಕ್ಕೆ ಬಂದರು. ನಾಯಕನು ಅವರಿಗೆ ಒಬ್ಬೊಬ್ಬರಿಗೂ ಒಂದು ಬಣ್ಣದ ಚಲ್ಲಣ, ಒಂದು ಕಂಬಳಿಯನ್ನು ಕೊಟ್ಟನು. ಕಾಳಗವನ್ನು ನೋಡುವುದಕ್ಕೆ ನೆರೆದಿದ್ದ ಪ್ರಜೆಯೆಲ್ಲ ತುಂಬ ಸಂತೋಷದಿಂದ ಹತ್ತಾರು ಸಲ ಜಯಕಾರವನ್ನು ಕೂಗಿತು. ಅಲ್ಲಿನ ಕಾರ್ಯಕ್ರಮ ಬಹು ಚೆನ್ನಾಗಿ ನಡೆಯಿತೆಂದು ವೀರಣ್ಣನಿಗೆ ತೋರಿತು.

ತಾನು ಕುಳಿತಿದ್ದ ಗುಂಪಿನಲ್ಲಿ ನಡೆದ ಮಾತಿನಿಂದ ವೀರಣ್ಣನಿಗೆ ಜನದ ಇಷ್ಟು ಉತ್ಸಾಹಕ್ಕೆ ಕಾರಣವೇನೆನ್ನುವುದು ತಿಳಿಯಿತು. ತಂದೆ ತೀರಿಕೊಳ್ಳುವುದಕ್ಕೆ ಮೊದಲು ಚೆನ್ನಬಸವನಾಯಕನು ತಿಂಗಳಿಗೊಂದು ಸಲ ಚೌಕದಲ್ಲಿ ಕಾಳಗವನ್ನು ನಡೆಯಿಸಿ ತಾನು ಸಂತೋಷಪಟ್ಟು ಜನರನ್ನು ಸಂತೋಷಪಡಿಸಿ, ಗರಡಿ ಮನೆಗಳಿಗೆ ಅಪಾರವಾದ ಪ್ರೋತ್ಸಾಹವನ್ನು ಕೊಡುತ್ತಿದ್ದನು. ತಂದೆ ತೀರಿದಮೇಲೆ ವರ್ಷದದಿನ ಅವನು ಇದನ್ನು ನಡೆಯಿಸಲಿಲ್ಲ. ತಂದೆ ತೀರಿಕೊಂಡ ವರ್ಷ, ಮಕ್ಕಳು ದುಃಖದಲ್ಲಿದ್ದಾರೆ, ಎಂದು ಜನ ತಾವೇ ಹೇಳಿಕೊಂಡರು. ವರ್ಷ ಮುಗಿದೂ ಯಾವಾಗ ಅವನು ಹೊರಕ್ಕೆ ಬಾರದೆ, ಜನರನ್ನು ಕಾಣದೆ, ವೈರಾಗ್ಯದಿಂದ ನಿಂತನೊ ಆಗ ಅನೇಕರಿಗೆ "ಇದು ಏಕೆ?" ಎಂದು ಶಂಕೆಮೂಡಿತು. ರಾಣಿ ಅಡ್ಡಿಮಾಡಿದ್ದಾಳೆ ಎಂದು ಕೆಲವರ ಸೂಚನೆ; ಅವನಿಗೇ ಇಷ್ಟವಿಲ್ಲ ಎಂದು ಇನ್ನು ಕೆಲವರದು. ಎಂತಾದರೂ ಇಂಥ ಒಂದು ಮುಖ್ಯ ಕಾರ್ಯವನ್ನು ಕಡೆಗಣಿಸಬಹುದೆ ಎಂದು ರಾವುತ ಮಾವುತ ಬೋವಿ ಕಾಲಾಳು ಮುಂತಾಗಿ ಗರಡಿ ಮನೆಗಳಲ್ಲಿ ರುಚಿ ಉಳ್ಳ ಎಲ್ಲ ಜನರಿಗೂ ಅತೃಪ್ತಿ. ಇದನ್ನು ತಿಳಿದು ತಿಂಗಳ ಹಿಂದೆ ಊರಿನ ಗರಡಿ ಮನೆಗಳ ಹಿರಿಯರು

ಅವರ ಹಿರಿಯನೆನ್ನಿಸಿಕೊಂಡಿದ್ದ ಪಾಳೆಯಗಾರನನ್ನು ಸಲಹೆ ಕೇಳಿ ನಾಯಕನ ಸನ್ನಿಧಿಗೆ ಹೋಗಿ, "ಹಿಂದಿನಂತೆ ಒಂದು ಕಾಳಗವನ್ನು ಇರಿಸಿ ನೋಡಿ, ನಿಮ್ಮ ಮಕ್ಕಳನ್ನು ಕಾಪಾಡಬೇಕು," ಎಂದು ಕೇಳಿದರು. ನಾಯಕನು ಮೊದಲು ಬೇಡ ಎಂದನು; ಆಮೇಲೆ ಒಪ್ಪಿದನು. ಆದ ಕಾರಣವೇ ಈ ದಿನ ಜನ ಹೀಗೆ ಒತ್ತಡದಲ್ಲಿ ಮುತ್ತಿದ್ದಿತು. ಹೇಗೂ ನವರಾತ್ರಿಯ ಮಲ್ಲಾಟ ಇಲ್ಲ, ಇದನ್ನೇ ಆ ಮಲ್ಲಾಟ ಮಾಡೋಣ, ಎಂದು ಗರಡಿಗಳು ಇದನ್ನೇ ಹಬ್ಬದ ವಿಜೃಂಭಣೆಯಿಂದ ನಡೆಸಿದವು. ಹೋರಿದ ಜಟ್ಟಿಗಳು ಎಂಟೇ ಜನ ಆದರೂ ಸುತ್ತ ಹತ್ತು ಸಾಲು ಪ್ರಾಯಶಃ ಅರ್ಧಕ್ಕೆ ಮೇಲೆ ಜಟ್ಟಿ ಜನಗಳದಾಗಿದ್ದಿತು. ಅವರ ಮೈಕಟ್ಟು, ಅವರ ಕಣ್ಣಿ ಹೊಳಪು, ಅವರ ನಿಲುವಿನ ದರ್ಪ, ಗರಡಿಯ ಮನೆಗಳು ಇವರನ್ನು ಎಂಥ ಆರೋಗ್ಯದಲ್ಲಿ ನಿಲ್ಲಿಸಿದ್ದುವೆಂಬುದನ್ನು ತೋರಿಸುತ್ತಿದ್ದುವು. ಈ ಜನ ಒಬ್ಬೊಬ್ಬರೂ ಬೇಕು ಎಂದರೆ ದಣಿಗಾಗಿ ತಮ್ಮ ಜೀವವನ್ನು ಕೊಡುವವರು; ಅವನು ಅಸಡ್ಡೆಮಾಡಿದರೆ ದೇಶಕ್ಕೆ ಒಂದು ವ್ಯಾಧಿ ಆಗುವವರು. ಸದ್ಯ ಕಾಳಗಕ್ಕೆ ಬರಲು ಒಪ್ಪಿ ನಾಯಕನು ಇವರನ್ನೆಲ್ಲ ಸಂತೋಷಪಡಿಸಿದನು ಎನ್ನುವುದು ಇತರ ಜನರಿಗೆ ಬಹು ಸಮಾಧಾನ.

ವರ್ಷ ಕಳೆದರೂ ಗದ್ದುಗೆಯೇರದೆ ಇದ್ದ ನಾಯಕನು ಈ ಹೊತ್ತು ಗದ್ದುಗೆ ಏರಿದವನಂತೆಯೆ ನಡೆದುಕೊಂಡನು. ಇದು ಅನೇಕರಿಗೆ ಸಂತೋಷ. ಜೊತೆಗೆ ಕಾಳಗದ ವಿವರವನ್ನು ಬಲ್ಲವರು ಅವನು ಮೊದಲ ಕಾಳಗದಲ್ಲಿ ಗೌಡರ ಕೇರಿಯ ಜಟ್ಟಿ ಗೆದ್ದನೆಂದು ನಿರ್ಣಯಿಸಿದ್ದನ್ನು ಬಹಳ ಮೆಚ್ಚಿಕೊಂಡರು. ಇಬ್ಬರು ಜಟ್ಟಿಗಳು ಹೋರಿದರೆ ಎರಡು ಟಗರು ಹೋರುವುದನ್ನು ನೋಡುವಂತೆ ಬರಿಯ ಒಂದು ಕದನವನ್ನು ನೋಡಿ ಮೆಚ್ಚುವವರು ಬಹು ಮಂದಿ. ಕದನದ ವಿವರ ವಿವರವನ್ನೂ ನಿಟ್ಟಿಸಿ ಬರಿಯ ಗೆಲ್ಲುಮಾತ್ರವನ್ನಲ್ಲ, ಅದರ ದಾರಿ ಯಾವುದು ಎಂದೂ, ನಿರುಕಿಸುವುದು ಮಲ್ಲನಿಗೇ ಸಾಧ್ಯ. ನಾಯಕನು ಮಲ್ಲಯುದ್ಧದಲ್ಲಿ ಬುದ್ಧಿವಂತನು; ಅದೂ ಈ ದಿನ ಸ್ಪಷ್ಟವಾಗಿತ್ತು. ನೆರೆದಿದ್ದ ಜನವೂ ಇದನ್ನು ಬಹಳವಾಗಿ ಮೆಚ್ಚಿಕೊಂಡಿತು.

೪೭

ಸೆಣಸಿದ ಜಟ್ಟಿಗಳಿಗೆ ಚಲ್ಲಣವನ್ನು ಕೊಟ್ಟು ಮುಗಿದಮೇಲೆ ಜಟ್ಟಿ ಹಿರಿಯರು ನಾಯಕನ ಸಮ್ಮುಖಕ್ಕೆ ಬಂದು ಬಾಗಿ ಕೈಮುಗಿದು ನಿಂತು ಕೊಂಡರು. ನಾಯಕನು ಎದ್ದನು. ಆ ಹೊತ್ತಿಗೆ ನಗರೇಶ್ವರನ ಆಲಯದ ಅರ್ಚಕರು ಪೂರ್ಣಕುಂಭದೊಡನೆ ನಾಯಕರ ಬಳಿಗೆ ಬಂದರು; "ನಾಯಕರು ಸನ್ನಿಧಿಗೆ ಬಂದು ಪ್ರಸಾದ ತೆಗೆದುಕೊಂಡು ಬಿಜಯ ಮಾಡಬೇಕು," ಎಂದರು.

ನಾಯಕನು, "ಆಗಬಹುದು," ಎಂದು ಅವರೊಡನೆ ಮಂದಿರ ದೊಳಕ್ಕೆ ಹೋದನು. ದೇವರಿಗೆ ಆರತಿ ಆಯಿತು. ನಾಯಕನು ಅದನ್ನು ತೆಗೆದುಕೊಂಡು ಪ್ರಸಾದವನ್ನು ಸ್ವೀಕರಿಸಿ ಹೊರಕ್ಕೆ ಬಂದನು. ಬಹು ಜನ ಇನ್ನೂ ಚೌಕದ ಸುತ್ತ ಕಾದಿದ್ದಿತು. ಹತ್ತಿರ ಇದ್ದವರು ಅವನಿಗೆ ಕೈಮುಗಿದರು. ಅವನು ಅವರಿಗೆ ಪ್ರತಿಯಾಗಿ ನಮಸ್ಕಾರ ಮಾಡುತ್ತ ಮುಂದೆ ನಡೆದು, ಜೊತೆಗೆ ಬಂದಿದ್ದ ಪರಿವಾರದೊಂದಿಗೆ, ಹಿಂದಿರುಗಿ ಕೋಟೆಯೊಳಕ್ಕೆ ಹೋದನು.

ಈ ಸಂಜೆಯ ಎಲ್ಲ ವ್ಯವಹಾರದಿಂದ ವೀರಣ್ಣನಿಗೆ ಈ ಜನರು ತಮ್ಮ ನಾಯಕನಲ್ಲಿ ತುಂಬ ಭಕ್ತಿ ಉಳ್ಳವರು ಎಂದು ಕಂಡಿತು. ನಾಯಕನೂ ಬಹು ದೊಡ್ಡ ರೀತಿಯ ಮನುಷ್ಯ. ಅವನ ಮೌನ ಸ್ವಲ್ಪ ಅತಿ ಎನ್ನಬಹುದೇನೊ. ಆದರೆ ಬಾಯಿ ನುಡಿಯದಿದ್ದ ಭಾವವನ್ನು ಅವನ ಮುಖದ ಒಂದೊಂದು ಸಣ್ಣ ಚರ್ಯೆಯೂ ಸ್ಪಷ್ಟವಾಗಿ ತೋರುತ್ತಿತ್ತು. ಇಂಥ ಮನುಷ್ಯ ಬಾಯಿ ತೆರೆಯದೆಯೆ ಲೋಕವನ್ನು ನಡೆಸಿಕೊಳ್ಳ ಬಲ್ಲನು. ಆ ಕಣ್ಣು ಸಮಾಧಾನದಿಂದ ನೋಡಿದರೆ ಸೇವಕರಾದವರಿಗೆ ಬಹು ಸಂತೋಷ ಹುಟ್ಟಬೇಕು. ಅದು ಅಸಮಾಧಾನದಿಂದ ನೋಡಿದರೆ ಜಾತಿವಂತ ಸೇವಕನಿಗೆ ಸಹಿಸುವುದು ಕಷ್ಟವಾಗಬೇಕು. ಇಂಥ ನೋಟ ವಿರುವ ವ್ಯಕ್ತಿ ಬಾಯನ್ನು ತೆರೆಯಬೇಕು ಏಕೆ?

ದೊರೆಯಾದ ಮೇಲೆ ತೆರೆಯುವುದು ಬೇಕಿಲ್ಲವೇನೊ. ಆದರೆ ಈಗ ತನ್ನ ಸ್ಥಾನವನ್ನು ತಾನು ಭದ್ರಪಡಿಸಿಕೊಳ್ಳದೆ ಇವನು ತನ್ನ ರಾಜ

ವನ್ನೂ ದಿಕ್ಕಿಲ್ಲದೆ ಬಿಟ್ಟಿದಾನೆ ಎಂದು ವೀರಣ್ಣನಿಗೆ ತೋರಿತು. ಜನದ ಪುಣ್ಯ ಹೇಗಿದೆಯೊ! ಇಂಥ ದೊರೆಯನ್ನಿಟ್ಟುಕೊಂಡು ಬಾಳುವುದು ಎಂತಲೋ, ಮತ್ತೇನಾಗುವುದೆಂದೊ!

ನಾಯಕನು ದೇವಾಲಯದಿಂದ ಇಳಿದು ಹೋದಮೇಲೆ, ಶಿವಪ್ಪ ವೀರಣ್ಣನಿಗೆ, "ಗುಡಿ ಒಳಗೆ ಹೋಗಿ ನಾವು ನಡಸಬೇಕಾಗಿರುವ ಸೇವೆ ಯನ್ನು ಮಾಡಿಕೊಂಡು ಬರೋಣ," ಎಂದನು. ವೀರಣ್ಣ ಒಪ್ಪಿದನು. ಮೂವರೂ ದೇವಾಲಯದೊಳಕ್ಕೆ ಹೋದರು. ಹೆಗ್ಗಡಿತಿಯ ಹೆಸರಿನಲ್ಲಿ ಆರತಿ ಮಾಡಿಸಿದರು.

ದೇವಾಲಯದ ಅರ್ಚಕರಿಗೆ ಅದೊಂದು ಸಂಭ್ರಮದ ದಿನ ಎಂದು ಕಂಡಿತು. "ನಾಯಕರು ಗಾದಿ ಏರಿದಂತೆಯೆ. ನಾವು ಅವರಿಗೆ ಎಲ್ಲ ರಾಜ ಮರ್ಯಾದೆಯನ್ನೂ ಒಪ್ಪಿಸಿದೆವು. ಅವರು ಅಡ್ಡಿಮಾಡದೆ ಎಲ್ಲ ವನ್ನೂ ಸ್ವೀಕರಿಸಿದರು. ಇದೇ ಒಂದು ಸಂತೋಷ," ಎಂದು ಒಬ್ಬ ಅರ್ಚಕನು ಹೇಳಿದನು.

ವೀರಣ್ಣ, "ಯಾಕೆ? ಈ ಮುನ್ನ ಮರ್ಯಾದೆ ಒಪ್ಪಿಸಿದಾಗ ಅಡ್ಡಿ ಮಾಡಿದ್ದರೆ?" ಎಂದು ಕೇಳಿದನು.

ಮತ್ತೊಬ್ಬ ಅರ್ಚಕ, "ಎರಡು ತಿಂಗಳ ಹಿಂದೆ ರಾಜ ಮರ್ಯಾದೆ ಯೊಡನೆ ಅರಮನೆಗೆ ಪ್ರಸಾದ ತೆಗೆದುಕೊಂಡು ಹೋದಾಗ ರಾಜಮರ್‍ಯಾದೆ ಯನ್ನು ಆಚೆ ಇಟ್ಟು ಬರೀ ಪ್ರಸಾದವನ್ನು ಒಳಗೆ ತನ್ನಿ ಎಂದು ಹೇಳಿ ದರು," ಎಂದನು.

ವೀರಣ್ಣ, "ಅಂದರೆ ಒಳಿತೇ ಆಯಿತು. ಈಗ ಇನ್ನು ಗದ್ದಿಗೆ ಏರೋದು ಅಂತ ಮನಸ್ಸು ಮಾಡಿರಬೇಕು," ಎಂದನು.

ಇವರೆಲ್ಲ ದೇವರ ಪ್ರಸಾದ ತೆಗೆದುಕೊಂಡು ಹೊರಟು ಬಂದರು.

ಆ ರಾತ್ರಿ ನೇಮಯ್ಯ ವೀರಣ್ಣನಿಗೆ, "ನಾಯಕರು ನವರಾತ್ರಿಗೆ ಮೈಸೂರಿಗೆ ದಯಮಾಡಿಸುತಾರೆ. ತಾವು ಈ ಮಾತನ್ನು ತಮ್ಮ ಪ್ರಭು ಗಳಿಗೆ ಅರಿಕೆಮಾಡಬಹುದು," ಎಂದು ಹೇಳಿದನು.

ವೀರಣ್ಣ, "ನಾವು ನಾಳೆ ಊರಿಗೆ ಹೊರಡಬಹುದು," ಎಂದು ಹೇಳಿದನು. ನೇಮಯ್ಯ "ಆಗಬಹುದು," ಎಂದನು.

ಮರುದಿನ ನೇಮಯ್ಯ ಇವರಿಗೆ ಅರಮನೆಯಿಂದ ಬಂದಿದ್ದ ಎಲೆ ಅಡಿಕೆ ಪಸದನವನ್ನು ನೀಡಿದನು. ಇವರು ಅದೇ ಸಂಜೆ ಇಳಿಹೊತ್ತಿನಲ್ಲಿ ಶಿವಪ್ಪನೊಂದಿಗೆ ಹೊರಟು ದೀಪ ಹಚ್ಚುವ ವೇಳೆಗೆ ತಮ್ಮ ಊರಿನ ಕಡೆಗೆ ಒಂದು ನಡೆ ಪ್ರಯಾಣವನ್ನು ನಡೆದು ಮುಗಿಸಿದರು.

## ೪೮

ಕರಣೀಕ ನಿಯೋಗಿಗಳು ತಮ್ಮ ಕೆಲಸದಲ್ಲಿ ನಿರತರಾಗಿ ಸುತ್ತಾಡುತ್ತಿದ್ದಾಗ ಮಲ್ಲಿಗೆ ಸುಮ್ಮನೆ ಕಾಲಕಳೆಯುತ್ತಿರಲಿಲ್ಲ. ಕೆಸವೆಯ ಹತ್ತಿರ ಆರು ತಿಂಗಳ ಹಿಂದೆ ಕಂಡಾಗ ಅವಳು, ತಿರುಗಿ ಸ್ವಾಮಿಯನ್ನು ಕಾಣಲೇಬೇಕು ಎಂದರೆ ಹೇಗೆ, ಎಂದು ಕೇಳಿದ್ದಳಷ್ಟೆ. ನಗರದಲ್ಲಿ ಬೂದಿ ಬಸವನ ಮಠದಲ್ಲಿ ಹೋಗಿ ವಿಚಾರಿಸಬಹುದು ಎಂದು ಅಯ್ಯ ಆಗ ತಿಳಿಸಿದ್ದನು. ನಾಲ್ಕು ತಿಂಗಳು ತಡೆದ ಹೆಗ್ಗಡಿತಿ ಮತ್ತೆ ಇವಳಿಗೆ ಕಾಟ ಕೊಟ್ಟಾಗ ಮಲ್ಲಿಗೆ, ಯಾರಿಗೂ ಹೇಳದೆ, ಮತ್ತೆ ಹೋಗಿ ಬೂದಿಬಸವನನ್ನು ಮರೆಹೊಗಬೇಕೆಂದು ನಿಶ್ಚಯಿಸಿಕೊಂಡಳು. ಇದಕ್ಕಾಗಿಯೆ ಅವಳು ನಗರಕ್ಕೆ ಹೋಗಲು ಮನಸ್ಸು ಮಾಡಿದ್ದು. ಇವಳು ಮಾಡಿಕೊಂಡ ಈ ನಿಶ್ಚಯ ಸಗುನನಿಗೂ ತಿಳಿಯದು. "ಇದೇನು ನೀನು ನನಗೂ ಹೇಳ್ದೀರ ನಗರಕ್ಕೆ ಹೊರಟೆ," ಎಂದು ಅವನು ಹೇಳಿದಾಗ ಮಲ್ಲಿಗೆ, "ನಿನಗೆ ಹೇಳಿ ನಾನು ಹೆಗ್ಗಡಿತಿ ಕೈಗೆ ಸಿಕ್ಕಿಕೊಳ್ಳಬೇಕು, ಅಲ್ವ? ಗಂಡಸರಿಗೆ ಇದರ ಮಾತೇನು ತಿಳೀತದೆ?" ಎಂದಳು. ಅಂತೂ ನಗರವನ್ನು ಮುಟ್ಟಿದ್ದಾಯಿತು. ಮಠ ಎಲ್ಲಿದೆ ಎಂದು ವಿಚಾರಿಸಿಕೊಂಡು, ಬಂದ ಮಾರನೆಯ ದಿನ ಹುಡುಗಿ ಸಗುನನೊಡನೆ ಸ್ವಾಮಿಯನ್ನು ನೋಡಲು ಹೋದಳು.

ದುಬಾರಿ ತಿಟ್ಟು, ಸಾಹಸದ ವ್ಯಾಪಾರದ, ಜೂಜಾಟದ, ಮೋಸಗಾರಿಕೆಯ ದೊಡ್ಡಕೇರಿ. ಅದರಾಚೆಗೆ ಬಸವನ ಬ್ಯಾಣ. ಅಲ್ಲಿ ಮನೆಗಳಿಲ್ಲ. ಅಲ್ಲಿ ಒಂದು ನಾಲ್ಕು ಮರದ ಮಧ್ಯೆ ಎರಡು ಮೂರು ಸಣ್ಣ ಮಂಟಪಗಳಿದ್ದವು. ದುಬಾರಿ ತಿಟ್ಟನಲ್ಲಿ ಕೇಳಿದಾಗ, ಅದೇ ಬೂದಿ ಬಸವನ ಮಠ ಎಂದು ಯಾರೊ ತೋರಿಸಿದರು.

ಅಲ್ಲಿ ಹೋಗಿ ನೋಡಿದರೆ ಯಾರೂ ಇಲ್ಲ. ಬಾಗಿಲು ಹಾಕಿತ್ತು. ಬೀಗ ಮುಂತಾದ್ದು ಏನೂ ಇಲ್ಲ. ಇಷ್ಟ ಬಂದವರು ಬಾಗಿಲು ತೆಗೆದು ಒಳಕ್ಕೆ ಹೋಗುವಂತಿದ್ದಿತು.

ಮಲ್ಲಿಗೆ, "ಇದೇನಿದು ಸಗುನ, ಮಠ ಅಂತಾರೆ, ಒಂದು ಪಿಳ್ಳೆ ಇಲ್ಲವೆ!" ಎಂದಳು.

ಸಗುನ ಏನೂ ಉತ್ತರ ಹೇಳಲಿಲ್ಲ. ಈ ಹುಡುಗಿಯ ತವಕಕ್ಕಾಗಿ ಅವನು ಸ್ವಲ್ಪ ಮರುಕಗೊಂಡನು. ಸ್ವಲ್ಪಹೊತ್ತು ಕಾದಿದ್ದು ಇವರು ಹಿಂದಕ್ಕೆ ಬಂದರು.

ಮಠದಲ್ಲಿ ಯಾರೂ ಇರಲಿಲ್ಲವಲ್ಲ ಎಂದು ಮತ್ತೆ ವಿಚಾರಿಸಿದ್ದರಲ್ಲಿ ಸಂಗತಿಯನ್ನು ಬಲ್ಲವರು ಎಂಬ ಮಂದಿ, "ಸ್ವಾಮಿ ಒಂದೊಂದು ಸಲ ಅಲ್ಲಿಗೆ ಬರುತ್ತಾರೆ. ಉಳಿದವೇಳೆ ಅಲ್ಲಿ ಒಬ್ಬ ಮನುಷ್ಯ ಕಾವಲಿಗೆ ಇರುವುದುಂಟು. ಮತ್ತೆ ಕೆಲವು ವೇಳೆ ಅವನೂ ಇರುವುದಿಲ್ಲ. ಸ್ವಾಮಿ ಸಿಕ್ಕುತ್ತಾರೆ ಎಂಬ ಭರವಸೆ ಯಾವಾಗಲೂ ಇಲ್ಲ," ಎಂದರು.

ಮಲ್ಲಿಗೆ, "ಸಾವವರನ್ನ ಒಂದ್ಮಾತು ಕೇಳಬೇಕಾಗಿತ್ತೆ. ಹೆಂಗ್ಮಾಡೋದು?" ಎಂದಳು.

"ಅಷ್ಟು ತೀರ ಆತುರ ಆದರೆ ಸಂಗತಿ ಏನೂ ಅಂತ ಯಾರ ಕೈಲಾದರೂ ಬರಸಿ ಮಠದಲ್ಲಿ ಗದ್ದಿಗೆ ಮೇಲೆ ಇಕ್ಕಿ ಒಂದು ಕಲ್ಲು ಹೇರಿ ಹೊರಟು ಬಂದರೆ ದಿನಾ ಎರಡು ದಿನದಲ್ಲಿ ಆದರ ಮೇಲೆ ಹಿಂಗೆಮಾಡು ಅಂತ ಬರೆದಿರತದೆ. ಅಂದರೆ ಇಟ್ಟ ಕಾಗದಕ್ಕೆಲ್ಲ ಬರೆದಿರತದೆ ಅಂತಲ್ಲ. ಹತ್ತು ಕಾಗದ ಇಟ್ಟರೆ ಒಂದಕ್ಕೊ ಎರಡಕ್ಕೊ ಬರೆದಿರತದೆ. ಉಳಿದದ್ದರ ಮೇಲೆ ಬರೀ ಗೆರೆ ಎಳೆದಿರುತದೆ."

ಬೇರೆ ದಾರಿ ಏನೂ ಕಾಣದೆ ಮಲ್ಲಿಗೆ ಈ ಮಾತನ್ನು ಬರೆಯಿಸಿದಳು: "ವಸ್ತಾರೆ ಜೀತ ಮಲ್ಲಿಗೆ ಒಲ್ಲಿ ಅಂದ್ರೂ ಜವರನ್ನ ಮದಿವಿಯಾಗೂ ಅಂತ ಹೆಗ್ಗಡತಿ ಕಟ್ಟು ಮಾಡತಿದ್ದಾರೆ. ಜವರನ್ನ ನಾ ದೇವರಾಣೆ ಒಲ್ಲೆ. ನಾ ಸಗುನನ್ನ ಮದಿವಿಯಾಗ್ಬೇಕು. ಸ್ವಾಮಿ ಹೆಗ್ಗಡತೀಗೆ ಹಿಂಗೆ ಅಂತ ಅಪ್ಪಣೆ ಮಾಡಬೇಕು. ಹತ್ತು ಬಾರಿ ಶರಣು."

ಇದನ್ನು ಬರಸಿದ ಮೇಲೆ "ಇದ್ನಲ್ಲಿ ತಗೊಂಡೋಗಿಟ್ಟು ಸ್ವಾಮಿ ಬರೋ ಹೊತ್ಗೆ ಇದಲ್ಲಿಲ್ದಿರ ಇದ್ರೆ ಏನುಗತಿ?" ಎಂದು ಮಲ್ಲಿಗೆ ಕೇಳಿದಳು. ಬಲ್ಲವರೆಂಬ ಜನ, "ಮಠದೊಳಕ್ಕೆ ಯಾರೂ ಹೋಗೋದಿಲ್ಲ. ಕೆಟ್ಟವರು ಹೆಜ್ಜೆ ಇಟ್ಟರೆ ಕಾಳಿಂಗ ಸರ್ಪ ಎದಿರಿಗೆ ನಿಲ್ಲತದೆ," ಎಂದರು.

ಬರೆದ ಚೀಟಿಯನ್ನು ಜಾತಿಯ ಮನುಷ್ಯ ಒಬ್ಬನಿಂದ ಮಠದೊಳಗೆ ಗದ್ದಿಗೆಯ ಮೇಲೆ ಇರಿಸಿದ್ದಾಯಿತು. ಮರುದಿನ ಸುಮಾರು ಅದೇ ಹೊತ್ತಿಗೆ ಹೋಗಿ ಚೀಟಿಯನ್ನು ನೋಡಿಸಿದ್ದೂ ಆಯಿತು. ಅದನ್ನು ಯಾರೂ ಮುಟ್ಟಿರಲಿಲ್ಲ; ಉತ್ತರವಂತೂ ಇರಲೇ ಇಲ್ಲ.

ಮಲ್ಲಿಗೆ, "ಸ್ವಾಮಿ ದೇಶದಾಗೆ ಓಡಾಡ್ತಾ ಇಲ್ಲ ಅಂದ್ಮೇಲೆ ಮಠದಾಗೆ ದಿಕ್ಕಾಗಿ ಇರಬೇಕಲ್ಲ! ಹಿಂಗೆ ಸುಮ್ಮಗಿದ್ದು ಬಿಟ್ಟರೆ ನಮ್ಮಂಥವರ ಗತಿ ಏನು?" ಎಂದಳು.

ಸಗುನ, "ಕೇಳೋದು ಬ್ಯಾಡಾಂತ ಗೀರು ಹಾಕಿಲ್ಲಲ್ಲ. ಇನ್ನೊಂದಿನ ನೋಡೋವ," ಎಂದನು.

ಮಾರನೆಯ ದಿನ ಇವರು ಮತ್ತೆ ಹೋಗಿ ಚೀಟಿಯನ್ನು ನೋಡಿಸಿದರು. ಅದರ ಮೇಲೆ ಒಂದು ಮಾತು ಬರೆದಿದ್ದಿತು. ಸದ್ಯ ಮೊರೆ ಕಿವಿಗೆ ಬಿದ್ದಿತಲ್ಲ ಎಂದು ಇವರಿಗೆ ಸಂತೋಷ. ಇವರು ಚೀಟಿಯನ್ನು ಓದಿಸಿದರು.

ಬರವಣಿಗೆ ಸ್ವಲ್ಪ ವಿಚಿತ್ರವಾಗಿದ್ದಿತು. ಯಾವುದೊ ಹುಡುಗನ ಬರವಣಿಗೆ. ಅದರಲ್ಲಿ, "ಅರಮನೆ ಮೈಗಾವಲ ಮಲ್ಲಯ್ಯ ಅವರನ್ನ ಹೋಗಿ ನೋಡು," ಎಂದಿದ್ದಿತು.

ಕೇಳಿದ ಮಾತಿಗೂ ಹೇಳಿರುವ ಉತ್ತರಕ್ಕೂ ಸಂಬಂಧ ಕಾಣಲಿಲ್ಲ. ಸ್ವಾಮಿ ಬೇರೆ ಚೀಟಿಗೆ ಬರೆಯುವ ಉತ್ತರವನ್ನು ಇದರಲ್ಲಿ ಬರೆದು ಬಿಟ್ಟನೊ! ಏನು ಸಂಗತಿ?

ಮಲ್ಲಿಗೆ ಸಗುನ ಮತ್ತೆ ಚೀಟಿ ಇಡುವುದೆ ಎಂದು ಯೋಚಿಸಿದರು. ಸಂಗತಿ ಬಲ್ಲವರು, "ಅದೆಲ್ಲ ತಪ್ಪು. ಚೀಟಿಯಲ್ಲಿ ಏನಿದ್ದರೆ ಅದರಂತೆ ಮಾಡಬೇಕು," ಎಂದರು.

ಸಗುನ ಶಿವಪ್ಪನನ್ನು ಬೇಡಿ, ಸರಿಯಾದ ಜನರಿಂದ ಕೇಳಿಸಿ, ಮಲ್ಲಯ್ಯನನ್ನು ಯಾವಾಗ ಕಾಣಬಹುದು ಎಂದು ವಿಚಾರಿಸಿದನು. ಮಲ್ಲಯ್ಯ ಜಟ್ಟಿಕಾಳಗವಾದ ಮಾರನೆಯ ದಿನ ಇವರು ಮನೆಯ ಹತ್ತಿರ ಬರಬಹುದು ಎಂದು ತಿಳಿಸಿದನು.

೪೯

ಆ ದಿನ ಮಲ್ಲಿಗೆ ಸಗುನನೊಡನೆ ಮಲ್ಲಯ್ಯನ ಮನೆಗೆ ಹೋದಳು. ಇವರು ಹೋದಾಗ ಅವನು ಇಲ್ಲದ್ದರಿಂದ ಇಬ್ಬರೂ ಅವನು ಬರುವ ವರೆಗೆ ಕಾದರು. ಬಂದಾಗ ದೂರದಿಂದ ಕೈಮೊಕ್ಕಿ, ಸ್ವಾಮಿಯ ಅಪ್ಪಣೆ ಯನ್ನು ಬರೆದಿದ್ದ ಕಾಗದವನ್ನು ನೆಲದ ಮೇಲಿಟ್ಟು ದೂರದಲ್ಲಿ ನಿಂತು ಕೊಂಡರು.

ಮಲ್ಲಯ್ಯನಿಗೆ ಬರುವ ಓದು ಅಷ್ಟುಷ್ಟೆ. "ಏನವ್ವ ಅದು ಕಾಗದ?" ಎಂದನು.

"ಬೂದಿಸ್ವಾಮಿಗಳು ನಿಮ್ಮತಾವ ಹೋಗು ಅಂದವರೆ," ಎಂದು ಮಲ್ಲಿಗೆ ಉತ್ತರ ಕೊಟ್ಟಳು.

"ಓಹೋ! ನೀವು ವಸ್ತಾರೆ ಜೀತ ?"

"ಹೌದು, ಹಿರಿಯೋರೆ."

"ನೀ ಅದೇನವ್ವ, ಆ ಒಬ್ಬನ್ನೆ ಮದಿವಿಯಾಗ್ತೀನಿ ಅಂತೀಯಂ ತಲ್ಲ ; ಸ್ವಾಮಿ ಅಂತಾರೆ, ಇದು ತುಂಬ ತಪ್ಪು ಅಂತ."

"ತಪ್ಪಾಗೊ ಹೊತ್ಗೇ ಅಪ್ಪನ ಹತ್ತಿರ ಬರಬೇಕಾಯಿತು. ಒಪ್ಪಾ ಗಿದ್ದರೆ ಅಲ್ಲೇ ನಡೀತಾ ಇತ್ತು. ಸ್ವಾಮಿ ತಾವ ಯಾಕೆ ಬರಬೇಕು ? "

"ಒಳ್ಳೆ ಮಾತಂದಿ. ಸ್ವಾಮಿ ಈ ಮಾತು ಕೇಳಬೇಕು."

"ಸ್ವಾಮಿ ಕೇಳದೆ ಏನು ? ಇಲ್ಲೆಲ್ಲೊ ನಿಂತು ಕೇಳ್ತವರೇನೊ ! ಅವರಾಟ ಯಾರು ಕಂಡ? ನಿಮ್ಮನ್ನ ಹೋಗಿ ನೋಡ್ಬೇಕೂ ಅಂತ ಚೀಟಿಮೇಲೆ ಬರದದ್ನು ನೋಡಿ, ಇದ್ಯಾತರದೊ ಮಾತು, ತಪ್ಪು ಗಂಟಾಯ್ತು, ಅಂದುಕೊಂಡಿವಿ. ತಪ್ಪುಗಂಟಿಲ್ಲ; ಸರೀ ಗಂಟು. ಸ್ವಾಮಿ ಚೀಟಿ ನೋಡ್ಯವರೆ, ನಿಮಗೆ ಹೇಳವ್ರೆ. ಮರುಕ ತೋರಿ ದಣಿಗಳೆ.

ಸ್ವಾಮೀನ ಬೇಡಿಕೋತೀವಿ. ನಾನು ಸಗುನ ಮದಿವಿ ಆಗಬಹುದೂ ಅಂದರೆ ಉಸಿರಿರೊಗಂಟ ಬೇಕಾದ್ರೆ ನಾವು ಸ್ವಾಮಿ ಊಳಿಗ ಆಗ್ತೀವಿ. ಅವರು ಹೆಜ್ಜೆ ಇಕ್ಕೋತಾವ್ನ ನಾನು ನನ್ನ ಜಡೆಯಿಂದ ಗುಡಿಸ್ತೀನಿ."

"ಸ್ವಾಮಿ ಅಂತಾರವ್ವ, ಇಂತ ಹಟ ತಪ್ಪು; ಅಂದ್ರೆ ಹೆಣ್ಣು ಸಾವಿರಕ್ಕೊಂದು ಹಿಂಗ್ಮಾಡಿದ್ರೂ ಮನ್ನಿಸಬಹುದು, ಅಂತ ನಿನ್ನ ಹಟಾನ ಸ್ವಾಮಿ ಆಗಬಹುದು ಅಂತಾರೆ. ಸಗುನವ್ನ ಮದಿವಿಯಾಗೋಕೆ ಬಿಡೀ ಅಂತ ಹೆಗ್ಗಡಿತೀಗೆ ಸ್ವಾಮಿ ಬೆಸಸ್ತಾರೆ. ಅಂದ್ರೆ ನೀನು ಸಗುನ ತಿರಿಗಿ ವಸ್ತಾರೇಗೆ ಹೋಗೋ ಹಂಗಿಲ್ಲ."

"ಅಯ್ಯೊ, ನನ್ನ ದೇವರೆ, ಉಣ್ಣಾಕಿಕ್ಕಿ ಬಾಯಿ ಮುಚ್ಚಿರು ಅಂದ ಹಂಗಾಯ್ತು! ವಸ್ತಾರೆ ಬಿಟ್ಟು ನಾವು ಬೇರೆಲ್ಲಿ ಬಾಳೋದು? ದೊಡ್ಡ ವಸ್ತ ನೀಡಿದಿರಿ. ಸಣ್ಣದ್ನೂ ನೀಡಿಬಿಡ್ರಿ. ಮದಿವ್ಯಾಗ್ತೀವಿ. ಸ್ವಾಮಿ ಹೆಸರ್ಹೇಳಿಕೊಂಡು ವಸ್ತಾರೆಯಾಗ ಇರ್ತೀವಿ."

"ತಮ್ಮಾತು ವಿಾರಿದರೂ ಅಂತ ಹೆಗ್ಗಡಿತ್ಯೋರು ಕೋಪಮಾಡೋಲ್ಲ?"

"ಅಯ್ಯೊ ನನ್ನಪ್ಪ! ಹೆಗ್ಗಡ್ತಿ ಮನಸ್ಸು ಬೆಣ್ಣೆಮನಸ್ಸು ದಣಿಗಳೆ; ಕಂಚಿನ ಪಾತ್ರ್ಯಾಗೆ ತುಂಬಿಟ್ಟದು ಬೆಣ್ಣೆ. ಮುಖ ನೋಡೋಕೆ ಪಳಪಳ; ಮನಸ್ಸು ಕೆಟ್ಟ ಅಲ್ಲ. ಕೋಪಯಾತರದು ಹೆಗ್ಗಡ್ತೀರಿಗೆ? ನಾನು ಕೇಳ್ದೆಂತ ಒಪ್ಪಿಕೊಂಡ್ರೆ ಇನ್ನೆಲ್ಲಾರು ಕೇಳ್ತಾರೆ ಅಂತ ಬೆದರಿಸ್ತಾರೆ. ಸ್ವಾಮಿ ಅಪ್ಣೆ ಮಾಡ್ಬಿಟ್ಟರೆ ಹೋಗು ಬದುಕು ಅಂತಾರೆ; ಊರ ಸಿಸು ನಿಂತೇ ಇರ್ತದೆ. ಇಷ್ಟು ಮಾಡಿಕೊಡಿರ. ಮಕ್ಕಳೂಂತ ಕಾಯ್ದುಕೊಳ್ರಿ."

"ಇರಬಹುದು. ಅಂದ್ರೆ ಸದ್ಯ ನೀವು ಊರಿಗೆ ಹೋಗಲಾಗದು. ನಮ್ಮ ಜತೇಗೆ ಚಾಕ್ರೀಗೆ ನಿಲ್ಲಬೇಕು. ಇದಕ್ಕೆ ನಾವೇ ಹೆಗ್ಗಡಿತೀರ ಒಪ್ಪಿಗೆ ತರಿಸಿಕೊಳ್ತೀವಿ."

ಮಲ್ಲಿಗೆಗೆ ತನ್ನ ಆಸೆ ಕೈಗೂಡಿತೆಂದು ಸಂತೋಷ. ಅಷ್ಟೇ ನಿಜವಾಗಿ ತಾನು ಹೆಗ್ಗಡಿತಿಯನ್ನು ಬಿಡಬೇಕಲ್ಲ ಎಂದು ದುಃಖ. ಆದರೆ ವಸ್ತಾರೆಯಲ್ಲಿ ಇರಬೇಕು ಎನ್ನುವುದಕ್ಕಾಗಿ ಅವಳು ಸಗುನನನ್ನು ತೊರೆಯು

ವುದಕ್ಕೆ ಸಿದ್ಧಳಾಗಿರಲಿಲ್ಲ. "ಇಲ್ಲೇ ಇದ್ಬಿಡೋದಲ್ಲ ಸಗುನ?" ಎಂದು ಅವನನ್ನು ಕೇಳಿದಳು.

ಸಗುನ, "ಒಲ್ಲೆ ಅನ್ನಿಸ್ತದೆ. ತಾಯಿ ಬಿಟ್ಟ ಕರು ಆಗಿ ಈ ಕಾಡಾಗೇನು ಬಾಳೋದು? ನಡಿ ಜವರನ್ನ ಕಟ್ಕೊ. ಹೆಂಗಾರೂ ಆಗ್ತದೆ," ಎಂದನು.

ಮಲ್ಲಿಗೆಯ ಮನಸ್ಸಾದರೂ ಈ ಅರ್ಥದಲ್ಲಿ ಒಲೆಯದೆ ಬಿಡಲಿಲ್ಲ. ನಿಜಕ್ಕೆ ಹೆಗ್ಗಡಿತಿ ಎಷ್ಟೇ ಒರಟು ಮಾತನ್ನಾಡಿದರೂ ಜೀತವನ್ನು ತನ್ನ ಮಕ್ಕಳಂತೆ ನೋಡಿಕೊಳ್ಳುತ್ತಿದ್ದದು ನಿಜ. ಮಲ್ಲಯ್ಯ, "ಒಳ್ಳೆಯದು. ತಿರುಗಿ ಬಂದು ಹೇಳಿ," ಎಂದು ಒಳಕ್ಕೆ ಹೋದನು.

ಮಲ್ಲಿಗೆ ಸಗುನ ದಿನವೆಲ್ಲ ಯೋಚಿಸಿದರು. ಕೊನೆಗೆ, "ಸದ್ಯಕ್ಕೆ ವಸ್ತಾರೆಗೆ ಹೋಗೋಣ ಬೇಡ ಎಂತಲ್ವೆ ಹೇಳಿದರು? ತಿಂಗಳು ಬಿಟ್ಟು ಹೋಗ್ತೀವಿ ಅಂದ್ರಾತು. ಇದನ್ನೀಡಿದವರು ಅದ್ನೂ ನೀಡ್ತಾರೆ," ಎಂದು ನಿಶ್ಚಯಿಸಿಕೊಂಡರು.

ಸಂಜೆ ಇಬ್ಬರೂ ಮತ್ತೆ ಹೋಗಿ ಮಲ್ಲಯ್ಯನ ಮನೆಯ ಬಾಗಿಲಲ್ಲಿ ಕಾದಿದ್ದು, ಅವನು ಹೊರಕ್ಕೆ ಬಂದಾಗ ಇವರು ತಮ್ಮ ನಿರ್ಧಾರವನ್ನು ತಿಳಿಸಿದರು.

ಮಲ್ಲಯ್ಯ, "ಒಳಿತು. ಸ್ವಾಮಿಗಳು ಹೆಗ್ಗಡಿತ್ಯೋರಿಗೆ ಮಾತ ಹೇಳಿ ಕಳುಹಿದಾರೆ. ನೀವು ಇಲ್ಲಿ ಎರಡು ದಿನ ಇದ್ದು ತಿರಿಗಿ ಬನ್ನಿರ. ಕೆಲಸ ಹೇಳೋದಾಗತದೆ," ಎಂದನು.

## ೫೦

ಆ ಮೊದಲೆ ಮಲ್ಲಯ್ಯ ಶಿವಪ್ಪನನ್ನು ಕಂಡು, "ನಿಮ್ಮ ಹಳ್ಳಿಯ ಮಲ್ಲಿಗೆ ಅನ್ನುವ ಹೆಣ್ಮಗಳು ಬೂದಿಬಸವ ಸ್ವಾಮಿಗಳನ್ನ ಬಾಳ ಬೇಡಿಕೊಂಡಳಂತೆ, ನಿಮ್ಮ ಜೀತ ಸಗುನನ್ನ ಮದುವೆಯಾಗಬೇಕೂ ಅಂತ. ಸ್ವಾಮಿಗಳು ನಾಯಕರಿಗೆ ಹೇಳಿ ಕಳುಹಿಸಿದ್ದಾರೆ. ಹೆಗ್ಗಡಿತಿಯೋರು ದೊಡ್ಡ ಮನಸ್ಸು ಮಾಡಿ ಈ ಒಂದು ಹುಡುಗೀಗೆ ಅವಳಿಷ್ಟದಂತೆ ಮದುವೆಯಾಗೋಕೆ ಅಪ್ಪಣೆ ಕೊಟ್ಟರೆ ಸಂತೋಷಾ ಅಂತ. ನಾಯಕರು

ಈ ಮಾತ ನಿಮಗೆ ಹೇಳಿ ಹೆಗ್ಗಡಿತಿಯೋರಿಗೆ ತಿಳಿಸಬೇಕೂ ಅಂತ ಬಯಸತಾರೆ. ಇದನ್ನ ಸ್ವಲ್ಪ ನಡಸಿಕೊಡಬೇಕು," ಎಂದನು.

ಶಿವಪ್ಪ, "ಅಯ್ಯೊ, ಇದೇನು ದೊಡ್ಡಮಾತು? ಹೆಗ್ಗಡಿತಿಯೋರು ಹೇಳೋದನ್ನ ನಾನೇ ಹೇಳತೀನಂತೆ. ಸ್ವಾಮಿಗಳು ಆಗಬೇಕೂ ಅಂತ ನಾಯಕರಿಗೆ ಹೇಳಿ, ನಾಯಕರು ಆಗಬೇಕೂ ಅಂತ ಹೆಗ್ಗಡಿತಿಯೋರಿಗೆ ಹೇಳಿದರೆ ಆಗದಂಥ ದೊಡ್ಡಕೆಲಸ ಇಲ್ಲೇನದೆ? ಮಲ್ಲಿಗೆ ಸಗುನನ್ನ ಮದಿವೆಯಾಗಲಿ. ನಾ ಹೋಗಿ ಹೆಗ್ಗಡಿತೀರನ ಬೇಡಿ ಒಪ್ಪಿಸತೀನಿ," ಎಂದನು.

ಮಧ್ಯಾಹ್ನ ಮಲ್ಲಿಗೆ ಸಗುನ ಶಿವಪ್ಪನನ್ನು ಕಂಡಾಗ, ಶಿವಪ್ಪ ಮಲ್ಲಿಗೆಯನ್ನು ಕುರಿತು ಒಂದು ಅಪೂರ್ವವಾದ ಮೆಚ್ಚಿಗೆಯ ಧ್ವನಿಯಿಂದ, "ನೀ ಗಟ್ಟಿಗಾರ ಹೆಣ್ಮಗಳೇ ಮಲ್ಲಿಗೆ, ಅಂತೂ ಗೆದ್ದೆ," ಎಂದನು.

ಮಲ್ಲಿಗೆ ಸಂತೋಷದ ಧ್ವನಿಯಿಂದ, "ಗೆಲ್ಲೋದ್ಯಾತರದು ಶಿವಪ್ಪ? ಬೇಡಿಕೊಂಡಿ. ಆಗಲಿ ಅಂದಿರಿ. ಹೆಗ್ಗಡಿತಿಯೋರು ಸಗುನನ್ನ ಮದಿವಿಯಾಗು ಅಂತ ಹೇಳಿದರೇನೆ ನಾ ಆಗೋದು," ಎಂದಳು.

ಶಿವಪ್ಪನಿಗೆ ಸ್ವಲ್ಪ ಆಶ್ಚರ್ಯವಾಯಿತು. "ನೀ ಇಲ್ಲಿ ಮದುವೆಯಾಗೋದಿಲ್ಲ?" ಎಂದನು.

ಮಲ್ಲಿಗೆ: ಉ ಹ್ಞೂ. ಊರಿಗೆ ಬಂದು ಹೆಗ್ಗಡಿತಿಯೋರ ಪಾದಕ್ಕೆ ಬಿದ್ದು ಅವರೆದುರಾಗೆ ತಾಯಿತಿ ಕಟ್ಟಬೇಕು. ನಾಯೇನು ಸಗುನನ್ನ ಕಾಡ್ನಾಗೆ ಮದುವೆಯಾಗು ಅಂದೆನಾ? ನಮ್ದೂ ಊರ ಮದುವೇನೆ!

ಇದರಲ್ಲಿ ಏನೇನೋ ಮರ್ಯಾದೆ; ಎಷ್ಟೆಷ್ಟೊ ಅಭಿಮಾನ. ಒಂದು ಜಾತಿಯ ಜನದ ಪ್ರತಿಷ್ಠೆಯ ವಿವರ ಆದರ ಹೊರಗಿನ ಜನಕ್ಕೆ ತಿಳಿಯುವಂತಿಲ್ಲ. ಶಿವಪ್ಪನ ಸ್ಥಿತಿ ಇದಾಗಿದ್ದಿತು- ಆದರೂ ಒಟ್ಟಿನಲ್ಲಿ ಮಲ್ಲಿಗೆಯ ನಿಶ್ಚಯ ಅವನ ಮನಸ್ಸಿಗೆ ಒಪ್ಪಿತು. ತನ್ನ ಜೀತ ತನ್ನ ಕೈ ಮೀರಿ ಹೋಗಿ ಯಾರದೊ ಆಜ್ಞೆಯಿಂದ ಸುಖವನ್ನು ಪಡೆಯಿತು ಎನ್ನುವುದು ತಮ್ಮ ಹೆಗ್ಗಡಿತಿಗೆ ರುಚಿಸುವ ಮಾತಲ್ಲ. ಈ ಮದುವೆ ಊರಿನಲ್ಲಿ ಹೆಗ್ಗಡಿತಿಯ ಸಮ್ಮತಿಯಿಂದ ನಡೆಯುವುದೇ ಎಲ್ಲರಿಗೂ ಮರ್ಯಾದೆ ಎಂದು ಶಿವಪ್ಪ ಮನಗಂಡನು.

ರಂಗ ಕಲ್ಲ ಮಲ್ಲಿಗೆಯ ಈ ಗೆಲವಿನ ಮಾತನ್ನು ತಿಳಿದು ಸೋಜಿಗ ಪಟ್ಟರು. ಬೂದಿಸ್ವಾಮಿನ ಹಿಡಿದರೆ ಹೆಗ್ಗಡಿತಿಯನ್ನು ಸೋಲಿಸಬಹುದು ಎಂದು ಇವರಿಗೆ ತೋರಿರಲಾರದು. ಮಲ್ಲಿಗೆ ಇಂಥ ಒಂದು ಉಪಾಯ ವನ್ನು ಕಂಡು ಹಿಡಿದು ಗೆದ್ದಿದ್ದಳು. "ಹೆಂಗಸಿನ ಬುದ್ಧಿ ಒಳ್ಳೆ ಸೂಕ್ಷ್ಮ!" ಎಂದು ಅವರು ಒಬ್ಬರಿಗೊಬ್ಬರು ಹೇಳಿಕೊಂಡರು. ಜೊತೆಗೆ, "ನಗೋ ಅಷ್ಟು ದಿನ ಚೆಂದಾಗಿರತದೆ. ಆಮೇಲೆ ಸಗುನನ ಪಾಡುಬೇಡ," ಎಂದರು.

ಇವರ ಕನಿಕರದ ವಸ್ತುವಾದ ಸಗುನ ಇಂಥ ಯಾವ ಭಯ ದಿಂದಲೂ ತಲ್ಲಣಿಸುತ್ತಿರಲಿಲ್ಲ. ಮಲ್ಲಿಗೆಯ ಅಪೇಕ್ಷೆ ಸಂದದ್ದು ಅವಳಿಗೆ ತಂದಷ್ಟೇ ಸಂತೋಷವನ್ನು ಇವನಿಗೂ ತಂದಿದ್ದಿತು. ಅವನು ಮಲ್ಲಿಗೆಯ ಬುದ್ಧಿಗೆ, ದಿಟ್ಟತನಕ್ಕೆ, ಮರುಳಾಗಿದ್ದನು. ಅವಳನ್ನು ಯಾರೋ ಹೆಣ್ಣು ಎಂದು ಹಂಗಿಸಿದಾಗ, "ಈ ಹೆಣ್ಣು ಜೊತೇಗಿದ್ರೆ ಹತ್ತು ಹುಲೀನ ಹೊಡೀ ಬಹುದು. ಗಂಡಸರು ನಾವು ಬೆನ್ನು ತಿರುಗಿಸಿ ಓಡಿದಾಗ ಮಲ್ಲಿಗೆ ಮುಂದೆ ಹೋಗಿ ಹುಲೀ ಮೀಸೆ ತಿರುವ್ತಾಳು," ಎಂದನು.

ಮೂರು ದಿವಸ ಬಿಟ್ಟು ಇವರು ತಿರುಗಿ ಮಲ್ಲಯ್ಯನನ್ನು ನೋಡಿ ದಾಗ ಅವನು, "ನಾಯಕರು ಮೈಸೂರಿಗೆ ಹೋಗೋದರಾಗಿದಾರೆ. ಜೊತೇಗೆ ಇಪ್ಪತ್ತು ಜನ ಹೋಗಬೇಕು. ಸಗುನ ಬರಲಿ ಅಂದರು. ಹೆಣ್ಮಗಳು ನಿನ್ನ ಮಾತು ತಾನೆ ಗೊತ್ತಿಲ್ಲ ಅಂದರು," ಎಂದನು.

ಮಲ್ಲಿಗೆ, "ನಾನು ಹೆಣ್ಣು ಅಂತ ಹೀನಾಯ ಮಾಡಬೇಡಿ ನನ್ನೊಡೆಯ. ನಾನೂ ಒಂದು ಗಂಡೇ ಅಂತ ಕರಕೊಂಡು ಹೋಗಿರ. ನಾನೂ ಊರು ನೋಡಿತೀನಿ," ಅಂದಳು.

ಸಗುನ, "ಹೌದು ದಣಿಗಳೆ," ಎಂದನು.

ನಾಯಕನ ಉದ್ದೇಶವೂ ಹೀಗೆಯೆ ಇದ್ದಿತೆಂದು ಕಾಣುತ್ತದೆ. ಮಲ್ಲಯ್ಯ ಈ ಮಾತಿಗೆ ಒಡನೆಯೆ ಒಪ್ಪಿದನು. ಇವರಿಬ್ಬರೂ ನಾಯಕನ ಪರಿವಾರದೊಂದಿಗೆ ಮೈಸೂರಿಗೆ ಹೊರಡುವರು ಎಂದು ನಿಶ್ಚಯವಾಯಿತು. ಮೈಸೂರಿಂದ ಬಂದಮೇಲೆ ಊರಿಗೆ ಹಿಂತಿರುಗಿ ಹೆಗ್ಗಡಿತಿಯ ಸಮ್ಮುಖ ದಲ್ಲಿ ಮದುವೆ ಆಗಬೇಕು.

ಸ್ವಾಮಿಯಲ್ಲಿ ಮಾಡಿದ ಬೇಡಿಕೆ ನಾಯಕರ ವೈಗಾವಲ ಮಲ್ಲಯ್ಯನ ಮೂಲಕ ಇತ್ಯರ್ಥಕ್ಕೆ ಬಂದದ್ದರಿಂದ ಮಲ್ಲಿಗೆಗೆ ಕಾಳಗದ ದಿನ ತೋರಿದ ಒಂದು ಊಹೆ ಮತ್ತಷ್ಟು ದೃಢವಾಯಿತು.

೫೧

ವೀರಣ್ಣ ಸೂರಪ್ಪ ಹತ್ತು ದಿನದಲ್ಲಿ ಶ್ರೀರಂಗಪಟ್ಟಣಕ್ಕೆ ಬಂದು ಸೇರಿದರು. ಪಟ್ಟಣವನ್ನು ಸೇರಿದ ವೇಳೆ ಅವರು ಜೊತೆಯಾಗಿ ಒಳಕ್ಕೆ ಹೋಗಲಿಲ್ಲ. ಹಿರೋಡೆಯಿಂದ ವೀರಣ್ಣ ಒಂದು ಬೆಳಗು ಮುಂದಾಗಿ ಹೊರಟನು; ಮಧ್ಯಾಹ್ನಕ್ಕೆ ಮೊದಲು ಪಟ್ಟಣವನ್ನು ಮುಟ್ಟಿದನು. ಸೂರಪ್ಪ ಸಂಜೆಗೆ ಬಂದು ಸೇರಿದನು. ಇಷ್ಟೆಲ್ಲ ಎಚ್ಚರಿಕೆಗೆ ಕಾರಣ ಇದ್ದಿತು. ಇವರಿಬ್ಬರೂ ಜೊತೆಯಾಗಿ ಯಾವುದೊ ಕೆಲಸಕ್ಕೆ ಹೋಗಿದ್ದರು ಎಂಬುದು ಜನಕ್ಕೆ ತಿಳಿಯಬಾರದು. ಇದೇ ಕಾರಣದಿಂದ ಇವರು ಊರನ್ನು ಬಿಟ್ಟಾಗಲೂ ಬೇರೆ ಬೇರೆಯಾಗಿಯೇ ಹೊರಟಿದ್ದರು. ವೀರಣ್ಣ ತನ್ನ ತಟ್ಟನ್ನೇರಿ ಕೋಟೆ ಬಾಗಿಲ ಹತ್ತಿರಕ್ಕೆ ಬಂದು ಅಲ್ಲಿ ಅದರಿಂದ ಇಳಿದು ಅದನ್ನು ನಡೆಸಿಕೊಂಡು ಊರೊಳಕ್ಕೆ ಹೊಕ್ಕನು. ಅವನನ್ನು ಕಂಡ ಗುರುತಿನ ಒಬ್ಬ, "ಯಾತ್ರೆ ಚೆನ್ನಾಗಿ ಆಯಿತೆ ದಣಿಗಳೆ?" ಎಂದು ಕೇಳಿದನು. ಹತ್ತಿರ ಇದ್ದ ಒಬ್ಬನು, "ಎತ್ತ ಹೋಗಿದ್ದರು?" ಎಂದು ಪ್ರಶ್ನೆಮಾಡಿದನು. ಅವನು, "ಮೇಲುಕೋಟೇಲಿ ಹರಕೆ ಇತ್ತು ಅಂತ ಹೋಗಿದ್ದರು," ಎಂದನು. ವೀರಣ್ಣ ಅವರ ಕಡೆ ತಿರುಗಿ, "ಆಯಿತಪ್ಪ ದೇವರ ಕೃಪೆಯಿಂದ," ಎಂದನು; ಎರಡು ಹೆಜ್ಜೆನಡೆದು, "ಬಿಡುವಾದಾಗ ಮನೆ ಹತ್ತಿರ ಬಾ, ಪ್ರಸಾದ ಕೊಳ್ಳುವೆಯಂತೆ," ಎಂದನು. ಈ ಮಾತು ಸರಿಯೂ ಹೌದು; ಹಿಂತಿರುಗಿ ಬರುತ್ತ ಅವನು ಮೇಲುಕೋಟೆಗೆ ಹೋಗಿ ದೇವರ ದರ್ಶನಮಾಡಿಕೊಂಡು ಪ್ರಸಾದವನ್ನು ತಂದೂ ಇದ್ದನು. ಹೀಗೆ ದಾರಿಯಲ್ಲಿ ಕಂಡ ಗುರುತಿನ ಜನದೊಂದಿಗೆ ಒಂದು ಮಾತು ಅರ್ಧ ಮಾತು ಆಡುತ್ತ ಅವನು ತನ್ನ ಮನೆಯನ್ನು ಮುಟ್ಟಿದನು.

ಯಜಮಾನ ಮನೆಯನ್ನು ಮುಟ್ಟಿದೊಡನೆ ಅವನ ತಾಯಿ, ಅವನ ಹೆಂಡತಿ, ಒಬ್ಬ ಮಗಳು ಇಬ್ಬರು ಕಿರಿಯ ಮಕ್ಕಳು, ಒಬ್ಬ ಆಳು, ಎಲ್ಲ

ಅವನಿಗೆ ಮುತ್ತಿಕೊಂಡರು. ತಾಯಿಗೆ ಹೆಂಡತಿಗೆ ಇವನು ಯಾವುದೊ ಮುಖ್ಯವಾದ ಕೆಲಸದ ಮೇಲೆ ಹೋಗಿದ್ದಾನೆ ಎಂದಿಷ್ಟು ಮಾತ್ರ ಗೊತ್ತು. ಹೋದದ್ದು ಎಲ್ಲಿಗೆ, ಕೆಲಸ ಏನು, ಎಂದು ತಿಳಿಯದು. ಇವರು ಬೆಳೆದಿದ್ದ ರೀತಿಯಲ್ಲಿ ಇದು ಇವರಿಗೆ ವಾಡಿಕೆಯಾಗಿ ಹೋಗಿದ್ದಿತು. ಅರಸರ ನಂಬಿಕೆಯ ಸೇವಕ ಹತ್ತುಸಲ ಹತ್ತು ಕಡೆಗೆ ಹೋಗಬೇಕಾಗುತ್ತದೆ; ತಾಯಿ ಹೆಂಡತಿ ಅವನ ಕೆಲಸದ ಸ್ವರೂಪ ಏನೆಂದು ಕೇಳುವುದು ತಪ್ಪು. ಆ ಕೆಲಸದಲ್ಲಿ ಯಾವ ಅಪಾಯ, ಯಾವ ಗಂಡ, ಕಾದಿದೆಯೊ ಎಂದು ಭಯಮಾತ್ರ ಪಡಬಹುದು. ಅವನು ಕಣ್ಣಿಂದ ಮರೆಯಾದ ಮೂವತ್ತು ದಿನದಲ್ಲಿ ದಿನವೂ ದೇವರ ಹತ್ತಿರ ದೀಪಹಚ್ಚಿ, ''ದೇವರೆ, ನಿನ್ನ ಮಗು ವನ್ನು ಕಾಪಾಡಿಕೊ," ಎಂದು ಪ್ರಾರ್ಥಿಸಬಹುದು. ಈ ತಾಯಿ ಹೆಂಡತಿ ಅದನ್ನೆ ಮಾಡಿದ್ದರು. ಮುದುಕಿ ಮಗನನ್ನು ಕಂಡು, "ಸುಖವಾಗಿ ಬಂದೆಯಾ ನನ್ನಪ್ಪ !'' ಎಂದಳು. ವೀರಣ್ಣ ತಾಯಿಗೆ ನಮಸ್ಕಾರ ಮಾಡಿ ದನು; ತಾಯಿಹರಸಿದಳು. ಹೆಂಡತಿ ಏನನ್ನೂ ಹೇಳಲಿಲ್ಲ; ಸ್ನೇಹ ಪೂರ್ಣವಾದ ದೃಷ್ಟಿಯಿಂದ ಅವನನ್ನು ನೋಡಿದಳು; ಬಹು ದೂರ ಹೋಗಿದ್ದಿರಬೇಕು, ತುಂಬಾ ಸೊರಗಿದ್ದಾರೆ, ಎಂದುಕೊಂಡಳು. ಮಗಳು ಬಂದು ಅಪ್ಪನ ಹತ್ತಿರ ನಿಂತಳು; ಚಿಕ್ಕ ಎರಡು ಮಕ್ಕಳು ಒಂದೊಂದೂ ಅವನ ಒಂದು ಮಂಡಿಯನ್ನು ಸ್ವಾಧೀನ ಮಾಡಿಕೊಂಡವು. ಆಳು, "ದಣಿಗಳು ಪೂರ ಸೊರಗಿದ್ದಾರೆ," ಎಂದನು. ವೀರಣ್ಣನಿಗೆ ತಿಂಗಳ ದಿನದ ಪ್ರಯಾಸ ಈ ಸ್ವಾಗತದಿಂದ ಮರೆಯಿತು.

ಮಕ್ಕಳನ್ನು ಮುದ್ದಿಸಿ, "ಎಲ್ಲ ಚೆಂದಾಗಿದ್ದೀರಾ ?" ಎಂದು ಹೆಂಡತಿಯನ್ನು ಕೇಳಿ, ವೀರಣ್ಣ ಪಡಸಾಲೆಯೊಳಕ್ಕೆ ನಡೆದನು. ಹೆಂಡತಿ ಬಂದು, "ಅರಮನೆಯಿಂದ ಹೇಳಿ ಕಳುಹಿಸಿದ್ದರು. ಬಂದರೇ ನೋಡಿ ಕೊಂಡು ಬಾ ಅಂತ. ಅದರ ಮೇಲೆ ನೀವು ಬರಬಹುದು ಅಂತ ಅಂದು ಕೊಂಡಿವಿ," ಎಂದಳು.

ವೀರಣ್ಣ, "ಎಂದು ? ಈ ಹೊತ್ತೆ ?" ಎಂದು ಕೇಳಿದನು.

"ಹೌದು, ಈ ಹೊತ್ತೂ ಬಂದಿದ್ದರು. ಮೊನ್ನೆ ನಿನ್ನೆ ಬಂದು ನೋಡಿಕೊಂಡು ಹೋದರು."

ತಾನು ಬರುವುದು ಎರಡು ದಿನ ಸಾವಕಾಶವಾದದ್ದರಿಂದ ಅರಮನೆಯಲ್ಲಿ ಸ್ವಲ್ಪ ಚಿಂತೆ ಉಂಟಾಗಿರಬಹುದೆಂದು ವೀರಣ್ಣನಿಗೆ ಕಂಡಿತು. ಅವನು ಆಳನ್ನು ಕರೆದು, "ಅರಮನೆಗೆ ಹೋಗಿ ಸಮ್ಮುಖದ ಗುರಿಕಾರರಿಗೆ, ನಾ ಬಂದೆ, ದೇವರ ಪ್ರಸಾದ ತಂದೊಪ್ಪಿಸುತೇನೆ, ಅಂತ ತಿಳಿಸು," ಎಂದನು.

೫೨

ಎರಡು ಗಳಿಗೆ ಬಿಟ್ಟು ಮಡಿಮಾಡಿಕೊಂಡು ಅವನು ಅರಮನೆಗೆ ಹೋದನು. ಅರಸರೂ ಅವರ ತಾಯಿ ದೇವಾಜಮ್ಮಣ್ಣಿಯೂ ಸಮ್ಮುಖದ ತೊಟ್ಟಿಯಲ್ಲಿ ಕುಳಿತು ಇವನಿಗಾಗಿ ಕಾಯುತ್ತಿದ್ದರು. ವೀರಣ್ಣ ಹತ್ತಿರಕ್ಕೆ ಹೋಗಿ ಶಿರ ಬಗ್ಗಿ ಅವರಿಬ್ಬರಿಗೂ ನಮಸ್ಕಾರ ಮಾಡಿದನು. ಅರಸರು, "ಪ್ರಯಾಣ ಸೌಖ್ಯವಾಗಿ ನಡೆಯಿತೆ?" ಎಂದು ಕೇಳಿದರು. ವೀರಣ್ಣ, "ಹಿರಿಯರ ಆಶೀರ್ವಾದದಿಂದ ಎಲ್ಲ ಸುಖವಾಗಿತ್ತು ಮಹಾಸ್ವಾಮಿ," ಎಂದನು. ರಾಜಮಾತೆ ಬಲಗಡೆಗೆ ಒಂದು ಸ್ಥಳವನ್ನು ತೋರಿಸಿ, "ಕುಳಿತುಕೋ ವೀರಣ್ಣ'' ಎಂದಳು; ವೀರಣ್ಣ ಆ ಮಾತು ಕಿವಿಗೆ ಬೀಳದಂತೆ ನಿಂತಿದ್ದನು. ಅರಸರು, "ಕೂಡಬಹುದಲ್ಲಾ," ಎಂದರು. ಆಮೇಲೆ ಅವನು ಮತ್ತೆ ಬಾಗಿ ಕೈಮುಗಿದು ಕುಳಿತುಕೊಂಡನು.

ಅರಸರಿಗೆ ಮಧ್ಯವಯಸ್ಸು. ಅವರ ಮನಸ್ಸು ಸುಖವಾಗಿಲ್ಲ ಎನ್ನುವುದು ಕಾಣುತ್ತಿತ್ತು. ರಾಜಮಾತೆ ಅವರಿಗೆ ಸ್ವಲ್ಪ ಹಿರಿಯಳು; ಹೆತ್ತ ತಾಯಲ್ಲ. ಆಕೆಯ ಮುಖದಲ್ಲಿ ಹೆಚ್ಚಿನ ಧೈರ್ಯ ಕಾಣುತ್ತಿತ್ತು.

ಅರಸರು: ಅಲ್ಲಿ ಏನಾಯಿತು? ದೇವರ ಪ್ರಸಾದ ತರತಾರೆ ಅಂತ ಆಳು ಹೇಳಿದನಂತೆ. ಎಲ್ಲ ಅನುಕೂಲವಾಗಿರಬೇಕು.

ವೀರಣ್ಣ: ಮೂರು ಪಾಲು ಅನುಕೂಲವಾಗಿದೆ, ಮಹಾಸ್ವಾಮಿ. ಮೈಸೂರಿಗೆ ಕಾಣಿಕೆ ಕೊಡಬೇಕು ಅನ್ನುವ ಮಾತಿಗೆ ಅವರು ಯಾರೂ ಒಪ್ಪುವಂತಿಲ್ಲ. ಆದರೆ ಮುಸಲ್ಮಾನರಿಗೆ ವಿರೋಧವಾಗಿ ಒಡೆಯರ ಜೊತೆಗೆ ನಿಲ್ಲಬೇಕು ಅಂದರೆ ಒಪ್ಪುವಂತಿದ್ದಾರೆ.

ರಾಜಮಾತೆ: ಮಗನಿಗೆ ವಿರೋಧವಾಗಿ ತಾಯಿ, ಇಲ್ಲ ತಾಯಿಗೆ ವಿರೋಧವಾಗಿ ಮಗ, ನಮ್ಮ ಸಹಾಯ ಬೇಡಬಹುದಲ್ಲ? ಆಗ ನಮ್ಮ ಸಾಮಂತರು ಅಂತ ಒಪ್ಪಿಕೊಂಡರೆ ಸಹಾಯ ಮಾಡತೇವೆ ಅಂದರೆ?

ವೀರಣ್ಣ: ಆ ತಾಯಿ ಮಗನ ವಿವಾದ ಆತರದ್ದಲ್ಲ, ಮಹಾತಾಯಿ. ನಾಯಕರು ಸ್ವಲ್ಪ ದುಡುಕು, ಯಾವದೋ ಮರ್ಯಾದೇ ಮಾತಿಗೆ ತಾಯಿಗೆ ಎದುರು ಬಿದ್ದರಂತೆ. ಅದಕ್ಕೆ ಅಮ್ಮಾಜಿ ಕೋಪಿಸಿಕೊಂಡಿದ್ದಾರೆ. ಈ ವಾದದಲ್ಲಿ ನಾಯಕರ ಕಡೆ ಲಿಂಗಣ್ಣ ಅನ್ನೋನು ರಾಣಿಗೆ ವಿರೋಧ ಮಾಡಿದ. ಅವನನ್ನ ರಾಣಿ ಸೆರೇಲಿ ಇರಿಸಿದ್ದಾರೆ. ಈ ಮಗ ಅವನ್ನ ಬಿಡದೇ ಇದ್ದರೆ ನಾನು ಗದ್ದಿಗೆ ಏರೋದಿಲ್ಲ ಅಂತ ಕುಳಿತಿದ್ದಾರೆ. ತಾಯಿ, ನಾನು ಅವನ್ನ ಬಿಡೋದಿಲ್ಲ, ಈ ಹೊತ್ತು ನನಗೆ ಇದಿರು ಬಿದ್ದೋನು, ನಾಳೆ ಇವನಿಗೆ ಎದುರು ಬೀಳತಾನೆ, ಪಟ್ಟಕ್ಕೂ ಇದಕ್ಕೂ ಸಂಬಂಧ ಇಲ್ಲ, ಅಂತ ಇದಾರೆ. ಇಷ್ಟೆ ಹೊರತಾಗಿ ಮಗನಿಗೆ ವಿರೋಧ ವಾಗಿ ತಾಯಿ ರಾಜ್ಯಾನ ಬಯಸುತಾ ಇಲ್ಲ.

ರಾಜಮಾತೆ: ಅಲ್ಲ, ಆದೇನೇನೋ ಹೇಳುತಾ ಇದ್ದರಲ್ಲ. ಹೆಂಗಸರು ಹೇಳೋ ಮಾತಲ್ಲ. ಮತ್ತೆ ಯಾರಿಗೋ ಪಟ್ಟ ಕಟ್ಟಬೇಕು ಅಂತ ರಾಣಿ ಯೋಚಿಸಿದ್ದಾಳೆ ಅಂತ. ಅದು ಸುಳ್ಳು?

ವೀರಣ್ಣ: ಹೌದು ಮಹಾತಾಯಿ, ಸುಳ್ಳು. ಆ ನಂಬಯ್ಯ ಅನ್ನೋನು ಮನೆವಾರ್ತೆ ಸೆಟ್ಟಿ ಆಗಿದ್ದಾನೆ. ಅವನು ತಾಯಿಾ ಕೂಡ ಭಯ ತಪ್ಪಿ ನಡೀತಿದ್ದಾನೆ ಅಂತಲೆ ಮಗ ಕೋಪಿಸಿಕೊಂಡರಂತೆ. ಅದರ ಒಳಗುಟ್ಟು ದೇವರಿಗೆ ಗೊತ್ತು. ಜನ ಹತ್ತು ಆಡಿಕೊಳ್ಳತದೆ. ಆದರೆ ನಂಬಯ್ಯನಿಗೆ ಪಟ್ಟ ಕಟ್ಟಬೇಕು ಅಂತ ರಾಣಿ ಅನ್ನುತಾಳೆ ಎಂಬೋದನ್ನ ಅಲ್ಲೀ ಜನ ಕೂಡ ಹೇಳೋದಿಲ್ಲ. ಅದು ಬೇಲೂರಿಂದ ಈಚಿನ ಗಾಳಿ ಸುದ್ದಿ. ಲಿಂಗಣ್ಣಯ್ಯನ ಮಾತು ಈ ಹೊತ್ತು ನಾಳೆ ಇತ್ಯರ್ಥ ಆಗತದೆ. ನಾಯಕರು ಗಾದಿ ಏರತಾರೆ.

ರಾಜಮಾತೆ: ನಮಗಿದು ಬಹಳ ಸಂತೋಷ ಅಪ್ಪ. ಹೊಟ್ಟೇಲಿ ಹುಟ್ಟಿದ ಮಗನ್ನ ತಪ್ಪಿಸಿ ಯಾರಿಗೊ ಪಟ್ಟ ಕಟ್ಟೋ ಮಾತು ಈ ಹೆಂಗಸು

ಹೇಳತಿದ್ದಾಳೆ ಅಂತ ಕೇಳಿ ನಮಗೆ ತಲೆ ತಗ್ಗಿಸೋ ಹಾಗಾಯ್ತು. ಸದ್ಯ ಇದಿಲ್ಲ ಅಂತನ್ನೋದು ಹೆಣ್ಣು ಜಾತಿ ಮರ್ಯಾದೆ ಉಳೀತು.

ಅರಸರು: ಸುದ್ದಿ ನಿಜವಾಗಿದ್ದರೂ ನೀವು ಯಾಕೆ ತಲೆ ತಗ್ಗಿಸ ಬೇಕು, ಅಮ್ಮಾಜಿ? ನಿಮ್ಮಂತೆ ಮಗನ್ನ ನೋಡಿಕೊಳ್ಳೋ ತಾಯಿ ಲೋಕದಲ್ಲಿ ಉಂಟೆ?

ರಾಜಮಾತೆ: ಅಪ್ಪಾಜಿ! ಹೆಣ್ಣಿನ ಬಾಳು ಕೆಟ್ಟದು. ಹೆಂಗಸು ಒಳ್ಳೆಯೋಳಾಗಿರತಾಳೆ. ಹೆಂಗಸರು ಹೀಗೆ ಅಂತ ಮಗ ಕೂಡ ಹೇಳೋ ದಿಲ್ಲ. ಒಬ್ಬ ಹೆಂಗಸು ತಪ್ಪಿ ನಡೀಲಿ, ಮಗನೇ ಹೇಳತಾನೆ, ಹೆಂಗಸರೇ ಹೀಗೆ, ಅಂತ. ಒಳ್ಳೆಯವರು ತರೋ ಕೀರ್ತಿಗಿಂತ ಕೆಟ್ಟೋರು ತರೋ ಅಪಕೀರ್ತಿ ಹೆಚ್ಚು ಅಪ್ಪಾಜಿ. ಅದಕ್ಕಾಗಿ ಹಾಗಂದೆ. ಕಪ್ಪ ಕೊಡೋ ಮಾತು ಹೀಗಾಯ್ತಲ್ಲ, ವೀರಣ್ಣ; ಬೇರೆ ಸಂಗತೀಗೆ ಏನೆಂದರು?

ವೀರಣ್ಣ: ಮೈಸೂರಿಗೆ ಸಹಾಯವಾಗಿ ನಿಲ್ಲತೀವೆ ಅಂತ ತಾಯಿ ಮಗ ಇಬ್ಬರೂ ಒಪ್ಪಿದರಂತೆ. ಉಳಿದ ಮಾತು ಮಗ ತಾವೆ ಇಲ್ಲಿ ಬಂದು ಆಡತಾರೆ.

ರಾಜಮಾತೆ: ಹಾಗಾದರೆ ಮಗ ಬರತಾನೊ?

"ಬರತಾರೆ, ಮಹಾತಾಯಿ. ಕಪ್ಪಾ ಕೊಡು ಅನ್ನೊ ಒಂದು ಮಾತನ್ನು ಬಿಟ್ಟು ಬೇರೆ ಏನು ಅಪ್ಪಣೆ ಮಾಡಿದರೂ ಒಪ್ಪಿಕೊಂಡಾರು. ಅವರೂ ನವರಾತ್ರಿ ಉತ್ಸವ ಮಾಡೊವರೆ. ಆದರೆ ತಂದೆ ಹೋದರೂ ಅಂತ ಮಗ ಹಬ್ಬದ ಸಂತೋಷಾನ ಇಟ್ಟುಕೊಂಡಿಲ್ಲ. ಹಾಗಂತಲೇ, ಹಬ್ಬಕ್ಕೆ ಇಲ್ಲಿಗೆ ಬರತೀವೆ, ಅರಸರನ್ನ ತಾಯಿಯವರನ್ನ ಕಾಣತೀವೆ, ಅಂದರು. ಅವರು ಬಂದಾಗ ಉಳಿದೆಲ್ಲ ಮಾತು ಆದೀತು. ಈ ಸಂಗತಿ ಎಲ್ಲ ಬರೆದು ಬಿನ್ನಹ ಕಳಿಸಿದ್ದಾರೆ. ಅದು ನನ್ನ ಕೈಯಲ್ಲಿರೋದು ಬೇಡಾ ಅಂತ ಸೂರಪ್ಪನ ಕೈಯಲ್ಲಿ ಕೊಟ್ಟೆ; ಅರ್ಧ ಹಗಲು ತಡವಾಗಿ ಬಾ ಅಂದೆ. ಸಂಜೆಗೆ ಇಲ್ಲಿಗೆ ಮುಟ್ಟಬೇಕು. ಆಗ ಸನ್ನಿಧಾನಕ್ಕೆ ಆ ಓಲೆ ಮುಟ್ಟಿತು.

ಅರಸರು: ಸೂರಪ್ಪ ಸೌಖ್ಯವಷ್ಟೆ?

ವೀರಣ್ಣ: ಸೌಖ್ಯವಾಗಿದ್ದಾರೆ, ಮಹಾಸ್ವಾಮಿ.

ರಾಜಮಾತೆ: ಎರಡು ತಿಂಗಳಲ್ಲಿ ಹತ್ತು ಮಾತು ಆಡಿರಲಾರ ಸೂರಪ್ಪ, ಅಲ್ಲ?

ರಾಜರು ನಕ್ಕರು. ವೀರಣ್ಣ ಮುಸಿನಕ್ಕು, "ಹೌದು, ಮಹಾತಾಯಿ. ಊಟ ಮಾಡೋಕೆ ವಿಧಿಯಿಲ್ಲದೆ ಬಾಯಿ ತೆರೀತಾರೆ. ಮಾತು ಅಂತ ಅನ್ನೋದು ಮುತ್ತಿಗಿಂತ ಕಷ್ಟ," ಎಂದನು.

ರಾಜಮಾತೆ: ಅಂತೂ ಸೂರಪ್ಪ ಇಂಥ ಕೆಲಸದಲ್ಲಿ ಒಳ್ಳೆಯ ಜೊತೆ.

ವೀರಣ್ಣ: ಹೌದು, ಮಹಾತಾಯಿ. ನಾಯಕರು ಬರತಾ ಅವರ ಕುಟುಂಬಾನ ಕರೆತರತಾರೆ ಅಂತ ಕಾಣುತ್ತೆ. ಅವರನ್ನ ನೋಡಿಕೊಳ್ಳೋದಕ್ಕೆ ಅಪ್ಪಣೆ ಆದರೆ ಏರ್ಪಾಡು ಮಾಡಸತೇನೆ.

ರಾಜಮಾತೆ: ಮಾಡಿಸು, ವೀರಣ್ಣ. ಮೈಸೂರ ತೊಟ್ಟಿ ಅವರಿಗೆ ಬಿಟ್ಟು ಕೊಟ್ಟರಾಯಿತು. ಬಿಡದೀಜನ ನಾಲ್ಕುಜನ ಅವರ ಕಡೇಗೆ ಇದ್ದುಕೊಳ್ಳಲಿ. ಅವರ ಊಟ ಉಪಚಾರ ನಿನಗೆ ಗೊತ್ತಾಗಿದೆಯಲ್ಲ. ಅದೇನು ಮಾಡಿಸಬೇಕು, ಬಡಿಸಬೇಕು, ಎಲ್ಲ ನೀನೇ ನೋಡಿಕೊ.

ವೀರಣ್ಣ: ಅಪ್ಪಣೆ, ಮಹಾತಾಯಿ.

ರಾಜಮಾತೆ: ಆ ಹುಡುಗಿ ಬರೋದು ಹೆಚ್ಚೆ. ನಮ್ಮನೆ ಮಕ್ಕಳು ಇಂಥಾದ್ದಕ್ಕೆ ಸುಲಭವಾಗಿ ಒಪ್ಪೋದಿಲ್ಲ.

ಅರಸರು: ನಿಮ್ಮ ಸೊಸೆ ತೆರೆ ಆಚೆ ಇದ್ದಾರಲ್ಲ, ಅಮ್ಮಾಜಿ; ಅವರೇನು ಅಂದುಕೊಳ್ಳತಾರೆ?

ರಾಜಮಾತೆ: ಏನೂ ತಪ್ಪು ಅಂದುಕೊಳ್ಳೋದಿಲ್ಲ, ಅಪ್ಪಾಜಿ. ಬಿದನೂರವರು ಇಲ್ಲಿಗೆ ಬರಬೇಕಾದರೆ ತಮ್ಮನ್ನ ಮರ್ಯಾದೆಯಿಂದ ನೋಡಿಕೊಳ್ಳೋರು ಇದ್ದಾರೆ ಅಂತ ಬರತಾರೆ, ನಮಗೆ ಇದೇ ಧೈರ್ಯ ಇದ್ದರೆ ನಾವೂ ಬೇರೆ ಕಡೆ ಹೋದೇವು, ಅಂದುಕೊಳ್ಳುತಾರೆ.

ವೀರಣ್ಣ: ಆ ಹೆಣ್ಣುಮಗುವಿನದು ಬಹಳ ಬುದ್ಧಿ, ಮಹಾತಾಯಿ. ನನ್ನ ಇಳಿಸಿಕೊಂಡಿದ್ದ ನೇಮಿಸೆಟ್ಟರ ತಮ್ಮನ ಮಗಳಂತೆ. ನೇಮಿಸೆಟ್ಟರು ಅದೆಂತ ಮನುಷ್ಯರು, ಹೊಗಳೋಕೆ ನಾಲಗೆ ಸಾಲದು. ಈ ಮಗಳದು ಆ ತಂದೇಗಿಂತ ಹೆಚ್ಚಿನ ಚದುರು. ಅಷ್ಟು ಊರಿನಲ್ಲಿ, ಅಷ್ಟು ಮಾತಿನಲ್ಲಿ,

ಅವಳ ಹೆಸರನ್ನ ಎತ್ತಿದೋರು ಒಬ್ಬರಿಲ್ಲ. ಗಂಡನಿಗೆ ಗ್ರಹಗಳು ಚೆನ್ನಾಗಿಲ್ಲ, ಅಂತ ಹೊತ್ತಿನಲ್ಲಿ ತಾನು ಏನು ಮಾಡಿದರೂ ತಪ್ಪಾಗುತ್ತೆ, ಅಂತಲೊ ಏನೊ ಸುಮ್ಮನೆ ಅವರ ಕಡೆ ನೋಡತಾ ಇದ್ದುಬಿಟ್ಟದಾಳೆ. ಅವನನ್ನ ಕಾಯ್ದುಕೊಳ್ಳುವುದೆಷ್ಟೊ ಅಷ್ಟೇ ಯೋಚನೆ.

ರಾಜಮಾತೆ : ಅಂದಮೇಲೆ ಹುಡುಗಿ ಪುಣ್ಯವಂತೆ. ತನ್ನ ಹೆಸರು ಜನರ ಬಾಯಲ್ಲಿ ಬೀಳದಂತೆ ನೋಡಿಕೊಳ್ಳೋದೆ ಹೆಣ್ಣಿಗೆ ಭೂಷಣ. ಗಂಡನನ್ನ ಕಾಯ್ಕೊಳ್ಳೋದು ತಪಸ್ಸು. ಇದಕ್ಕಿಂತ ಇನ್ನೇನು ಸಾವಿತ್ರಿ, ದಮಯಂತಿ? ಹೆಣ್ಣಾಗಿ ಬಂದರೆ ನಾಲ್ಕು ಜನ ಗೌಡೀರು ತೊಟ್ಟೀಲಿ ಇರಬೇಕು. ಮನೆವಾರ್ತೆಗೆ ಹೇಳಿರಲಿ.

ವೀರಣ್ಣ : ಅಪ್ಪಣೆ, ಮಹಾತಾಯಿ.

ರಾಜಮಾತೆ: ಮತ್ತಿನ್ನು ಮುಂದೆ ಹೇಗೆ ನಡೆಯೋದು ಅಂತ ಗೊತ್ತು ಮಾಡಬೇಕಲ್ಲ? ಭರ್ಕಿ ಹುಡುಗ, ಅಪ್ಪಾಜಿ, ನಂಜರಾಜ, ಶಾಮಯ್ಯ, ಇವರನ್ನ ಕರೆದು ಮಾತನಾಡಬೇಕು. ಇದನ್ನು ನೀವು ಮಾಡತೀರಾ ಅಪ್ಪಾಜಿ ?

ಅರಸರು : ಮಾಡಬಹುದು. ನೀವಿದ್ದರೂ ಆದೀತು. ನೋಡೋಣ. ಅಂದರೆ, ಮೊದಲೆ ಇವರಿಗೆ ಅರ್ಧಮಾತು ತಿಳಿಸಿರೋದು ಒಳ್ಳೇದೇನೊ?

ರಾಜಮಾತೆ: ಅದು ಬೇಡ. ಯಾವ ಮಾತು ಹೇಳಿದರೂ ಇಲ್ಲೇ ಹೇಳೋಣ. ಅವರು ಹೇಳೋದನ್ನೂ ಇಲ್ಲೇ ಹೇಳಲಿ. ಈಗಿನ ಮಾತು ಬೇರೆ ಕಡೆ ಆಡೋದು ಬೇಡ.

ಅರಸರು : ಒಳ್ಳೇದು ಅಮ್ಮಾಜಿ. ಸಂಜೆಗೆ ಓಲೆ ಬರುತದಲ್ಲ, ಅದನ್ನು ನೋಡಿಕೊಂಡು ನಾಳೆ ಇದರ ಮಾತನಾಡೋದು.

೫೩

ಸಂಜೆಯ ಮುನ್ನ ಸೂರಪ್ಪ ಪಟ್ಟಣಕ್ಕೆ ಬಂದು ಮುಟ್ಟಿದನು. ಅವನು ಬೇಲೂರಿಗೆ ದೇವರದರ್ಶನಕ್ಕೆ ಹೋಗಿದ್ದನೆಂದು ಜನರ ತಿಳಿವಳಿಕೆ. ಮನೆಗೆ ಬಂದು ಒಡನೆಯೆ ರಾಜಮಾತೆಗೆ ತಾನು ಬಂದಿರುವ ಸಂಗತಿಯನ್ನು ಹೇಳಿ ಕಳುಹಿಸಿದನು. ಸ್ವಲ್ಪ ಹೊತ್ತಿನಲ್ಲಿ ತಾನೇ ಬಂದನು. ರಾಜ

ಮಾತೆ ಆ ಬೆಳಗ್ಗೆ ವೀರಣ್ಣನನ್ನು ಕಂಡಿದ್ದ ಕಡೆಯಲ್ಲಿಯೇ ಇವನನ್ನೂ ಕಂಡಳು. ಸೂರಪ್ಪ ತಾನು ತಂದಿದ್ದ ಓಲೆಯನ್ನು ಅವಳಿಗೆ ಒಪ್ಪಿಸಿದನು. ರಾಜಮಾತೆ ಅವನ ಕ್ಷೇಮಸಮಾಚಾರವನ್ನು ವಿಚಾರಿಸಿ ಆ ಓಲೆಯನ್ನು ತೆಗೆದುಕೊಂಡು, ಅವನು ಮನೆಗೆ ಹೋಗಬಹುದು, ದಾರಿಯಲ್ಲಿ ವೀರಣ್ಣ ನನ್ನು ಕಂಡು ಸಮ್ಮುಖಕ್ಕೆ ಕಳುಹಿಸಬೇಕು, ಎಂದು ಅಪ್ಪಣೆಮಾಡಿದಳು. ಅವನು ಕೈಮುಗಿದು ಹೊರಟನು; ದಾರಿಯಲ್ಲಿ ವೀರಣ್ಣನನ್ನು ಕಂಡು ರಾಜಮಾತೆಯ ಆಜ್ಞೆಯನ್ನು ತಿಳಿಸಿ ತನ್ನ ಮನೆಗೆ ಹೋದನು.

ವೀರಣ್ಣ ಅರಮನೆಗೆ ಬಂದನು. ಮೊದಲು ದೇವಾಜಮ್ಮಣ್ಣಿ ಒಬ್ಬಳೆ ಬಂದು ಬಿದನೂರ ಓಲೆಯನ್ನು ಅವನ ಕೈಯಲ್ಲಿಟ್ಟು, ಓದು, ಎಂದಳು. ಅದರಲ್ಲಿ ಹೀಗೆ ಬರೆದಿತ್ತು.

"ಸ್ವಸ್ತಿ ಶ್ರೀಮತು ಹಿರಿಯ ಮಹಾರಾಜರು ಮೈಸೂರು ಅರಸರ ಸಂಮುಖದಲ್ಲಿ ಬಿದನೂರಿನ ಕೆಳದಿ ನರಪರ ವಿನಯಾರ್ಥ. ಸಂಸ್ಥಾನಗಳ ಸ್ನೇಹ ಬಾಂಧವ್ಯಗಳ ವಿಷಯವಾಗಿ ಸನ್ನಿಧಾನ ಅಪ್ಪಣೆ ಕೊಡಿಸಿರುವ ನಿರೂಪ ಮುಟ್ಟಿದೆ. ಕೆಳದಿ ನರಪರು ಸರ್ವದಾ ಮೈಸೂರು ಒಡೆಯರ ವಿಶ್ವಾಸವನ್ನು ಬಯಸಿದ್ದಾರೆ, ಅದಕ್ಕೆ ಅನುಗುಣವಾಗಿ ನಡೆದುಕೊಂಡಿದ್ದಾರೆ. ಪರಂಪರೆಯಿಂದ ಬಂದ ಈ ಬಾಂಧವ್ಯವನ್ನು ನಾವಾದರೂ ನಡಸಿಕೊಂಡೇ ಬರುತ್ತಿದೇವೆ. ಮುಂದೆ ಪರಸ್ಪರ ವಿಶ್ವಾಸ ಬೆಳೆಸುವುದಕ್ಕೆ ಮಹಾಸನ್ನಿಧಿ ನಮ್ಮನ್ನು ಪಟ್ಟಣಕ್ಕೆ ಆಹ್ವಾನಿಸಿರುವುದು ತುಂಬ ಸಂತೋಷ. ನಾವು ತಮ್ಮ ಸಂದರ್ಶನ ಪಡೆಯಲು ಬಯಸುತ್ತಾ ಇದ್ದಿದೇವೆ. ಸನ್ನಿಧಾನ ಸೂಚಿಸಿರುವಂತೆ ತಾವು ನವರಾತ್ರಿಯಲ್ಲಿ ರತ್ನ ಸಿಂಹಾಸನವನ್ನು ಏರುವ ಹೊತ್ತಿನಲ್ಲಿ ಅಲ್ಲಿದ್ದು ಕಣ್ಣಿಗೆ ಹಬ್ಬವನ್ನು ಮಾಡಲು ಯೋಚಿಸಿದ್ದೇವೆ. ಕಾವೇರಿ ಕಪಿಲಾ ತೀರ್ಥಗಳಲ್ಲಿ ಮಿಂದು, ರಂಗನಾಥಸ್ವಾಮಿ ನಂಜುಂಡೇಶ್ವರರ ದರ್ಶನ ಮಾಡಿ ಬರುವ ಯೋಚನೆ ಉಂಟು. ಉಳಿದ ಮಾತು ಪ್ರತ್ಯಕ್ಷದಲ್ಲಿ ಬಿನ್ನವಿಸಿಕೊಳ್ಳಲಾಗುತ್ತದೆ. ಇಂತೀ ವಿನಯಾರ್ಥ."

ಓಲೆಯ ಕೊನೆಗೆ ಶ್ರೀ ಚೆನ್ನಬಸವನಾಯಕ ಎಂದು ಬರಹ ಇದ್ದಿತು. ಪಕ್ಕದಲ್ಲಿ ಮುದ್ರೆ ಇದ್ದಿತು.

ಓಲೆಯನ್ನೆಲ್ಲ ಕೇಳಿದ ಮೇಲೆ ರಾಜಮಾತೆ, "ಸರಿ. ನೀನು ಹೇಳಿದ ಮಾತನ್ನೆ ಇದರಲ್ಲಿ ಬರೆದಿದ್ದಾರೆ. ರಾಣಿ ಹೆಣ್ಮಗಳು ಬರುವ ಸೂಚನೆ ಯಿಲ್ಲ, ಅಷ್ಟೆ. ಈಗ ಮುಂದಿನ ಮಾತು ನಡೆಯಬೇಕು. ನಾಳೆಯವರೆಗೆ ಏಕೆ ತಡೆಯುವುದು, ಈಗಲೇ ಹೇಳಿಕಳುಹಿಸಿರಬಹುದಲ್ಲ," ಎಂದಳು.

ವೀರಣ್ಣ, "ಮಹಾತಾಯಿ! ಈಗ ನಾನು ಸೂರಪ್ಪನೊಂದಿಗೆ ಮಾತನಾಡಿದೆ. ಅಪ್ಪಾಜಿ ನಮಗೆ ಅನುಕೂಲವಾಗಿ ನಡೆಯುವಂತಿಲ್ಲ. ರಾಯರು ಹೇಗೊ ಧೈರ್ಯವಾಗಿ ಹೇಳುವಂತಿಲ್ಲ. ಉಳಿದವರನ್ನು ನಾವು ಬಾಯಿ ಬಿಟ್ಟು ಏನಾದರೂ ಕೇಳುವುದು ಕ್ಷೇಮವಲ್ಲ. ಶಾಮಯ್ಯ ನಂಬಿಕೆಯಿಂದ ನಡೆದುಕೊಳ್ಳುತ್ತಾನೆ; ಆದರೆ ಅವನು ವಿಶೇಷ ಸಹಾಯ ಮಾಡುವಂತಿಲ್ಲ. ಯಾವುದನ್ನು ಯೋಚಿಸಿದರೂ ಸದ್ಯ ಅಧೈರ್ಯವೇ ಆಗುವಂತಿದೆ. ಮುಂದೆ ಹೇಗೆ ಎಂದು ಮಹಾತಾಯಿ ಸಾವಧಾನವಾಗಿ ಯೋಚಿಸಿ ಹೆಜ್ಜೆಯಿಡಬೇಕು," ಎಂದನು.

ಅಪ್ಪಾಜಿರಾವ್ ಘಟ್ಟದ ಕೆಳಗಿನ ಬ್ರಾಹ್ಮಣ; ಪಟ್ಟಣದಲ್ಲಿ ಮದರಾಸಿ ನಲ್ಲಿ ಇರುತ್ತ ದ್ವಿಭಾಷಿ ಕೆಲಸ ಮಾಡುತ್ತ ಇದ್ದನು. ಆಗಿನ ದಿನಕ್ಕೆ ಇಂಥ ಜನರದು ಬಹು ಪ್ರಾಬಲ್ಯ. ಇವನಂತೆ ಮೈಸೂರ ಬ್ರಾಹ್ಮಣ ತಿರುಮಲ ರಾವ್ ಎಂಬವನೊಬ್ಬನೂ ದ್ವಿಭಾಷಿಯಾಗಿದ್ದನು. ಬರ್ಕಿ ರಾಯರದು ಎನ್ನುವುದು ಮಹಾರಾಷ್ಟ್ರ ಬ್ರಾಹ್ಮಣ ಮನೆತನ. ಆದರ ಹಿರಿಯ, ಮುದುಕ, ಸೈನ್ಯದಲ್ಲಿ ದುಡಿದು ಈಗ ವಿಶ್ರಾಂತನಾಗಿದ್ದನು; ಆವನ ಮಗ ಈಗ ಸೈನ್ಯದಲ್ಲಿ ದಳಪತಿಯಾಗಿದ್ದನು. ನಂಜರಾಜ ದಳವಾಯಿ ಮನೆತನದ ಅರಸು ತರುಣ. ಶಾಮಯ್ಯ ಕೋಲಾರ ಪ್ರಾಂತ್ಯದ ಬ್ರಾಹ್ಮಣ; ಅಂಚೆ ಯಜಮಾನ. ಹೈದರನ ಪ್ರಾಬಲ್ಯವನ್ನು ಕಡಮೆ ಮಾಡಲು ಅರಮನೆ ಈ ಜನರ ಸಹಾಯವನ್ನು ನಿರೀಕ್ಷಿಸುತ್ತಿದ್ದಿತು.

ದೇವಾಜಮ್ಮಣ್ಣಿ ಸ್ವಲ್ಪಹೊತ್ತು ಹಾಗೆಯೇ ಯೋಚಿಸಿದಳು. "ಹೌದು, ವೀರಣ್ಣ, ನಿನ್ನ ಮಾತು ನಿಜ. ನಂಜರಾಜರು ದೇವರಾಜರು ಇವನನ್ನು ತಡೆಯಲಾಗಲಿಲ್ಲ. ಖಂಡೇರಾಯ ತಡೆದನೇನೊ ಎನ್ನಿಸಿತು; ಆದರೆ ನಮ್ಮ ಅದೃಷ್ಟ ಸರಿಯಾಗಿರಲಿಲ್ಲ, ನಮ್ಮನ್ನು ನಂಬಿ ಅವನು ಕೆಟ್ಟನೆಂದು ಜನ ಹೇಳುವ ಹಾಗಾಯಿತು. ಈಗ ನಮಗೆ ಸಹಾಯ

ನೀಡಬಹುದೆಂದರೆ ಪರಂಗಿಯವರು ಹೊರತಾಗಿ ಬೇರೆ ಯಾರೂ ಕಾಣಲಿಲ್ಲ. ಹೇಗೂ ನವರಾತ್ರಿ ಉತ್ಸವಕ್ಕೆ ಬರಬೇಕೆಂತ ಹೇಳಿ ಕಳುಹಿಸಿರುವುದು ಆಗಿದೆಯಲ್ಲ. ಪಶ್ಚಿಮಘಟ್ಟದ ದಾರಿಯಲ್ಲಿ ಬಿದನೂರಿನವರು ತೊಂದರೆ ಕೊಟ್ಟ ಮಾತಿಗೆ ಮಂಗಳೂರಿನ ಪರಂಗಿಯವರು ಉತ್ಸವದ ವೇಳೆಗೆ ಎದುರಿಗೆ ಬಂದು ಸಂಗತಿ ತಿಳಿಸುತ್ತೇವೆ ಎಂದಿದಾರೆ. ಮಿಕ್ಕವರನ್ನು ಕೇಳುವುದು ಈಗ ಬೇಡ. ಈಗ ಶ್ರೀನಿವಾಸರಾಯರೊಬ್ಬರನ್ನ ಮೆಲ್ಲನೆ ಮಾತನಾಡಿಸೋಣ. ಮುಂದಕ್ಕೆ ಏನು ಮಾಡುವುದು ಅಂತ ವಿಜಯದಶಮಿಯ ಅನಂತರ ಯೋಚಿಸೋಣ," ಎಂದಳು.

## ೫೪

ಈ ವೇಳೆಗೆ ಅರಸರು ಅಲ್ಲಿಗೆ ಬಂದರು. ವೀರಣ್ಣ ಎದ್ದುನಿಂತನು; ಅರಸರು ಕುಳಿತು, "ಕುಳ್ಳಿರು," ಎಂದು ಎರಡು ಸಲ ಅಪ್ಪಣೆಮಾಡಿದ ಮೇಲೆ ತನ್ನ ಸ್ಥಳದಲ್ಲಿ ಕುಳಿತನು. ಅರಸರು ಮತ್ತೆ ಬಿದನೂರಿನ ಓಲೆಯನ್ನು ಓದಿಸಿ ಕೇಳಿದರು; "ಅಮ್ಮಾಜಿ ಮೊದಲೇ ಓದಿಸಿ ಕೇಳಿದ್ದಿರಲ್ಲ?" ಎಂದರು.

ರಾಜಮಾತೆ: ಕೇಳಿದ್ದೆ, ಅಪ್ಪಾಜಿ. ಆದರೆ ತಿರುಗಿ ಯೋಚಿಸಿದ್ದರಲ್ಲಿ ಈ ಮಾತನ್ನು ಸದ್ಯ ಇಲ್ಲಿಗೆ ನಿಲ್ಲಿಸಿರುವುದು ಕ್ಷೇಮ ಎಂತ ವೀರಣ್ಣ ಹೇಳುತಾನೆ. ನನಗೂ ತೋರುತದೆ. ನವಾಬ ಮಾತಿನಲ್ಲಿ ಮೆದುವಾಗಿದ್ದರೂ ನಡತೆಯಲ್ಲಿ ಕಟುಕನಾಗಿದ್ದಾನೆ; ನಾವು ನಾಲ್ಕು ಜನದೊಂದಿಗೆ ಈ ಮಾತನ್ನೆಲ್ಲ ಆಡಿ ನವಾಬನಿಗೆ ಶಂಕೆಯೇನಾದರೂ ಉಂಟಾದರೆ ಆವನು ನಮ್ಮ ಜನ ಇರುವ ನಾಲ್ವರನ್ನು ಕೊಲ್ಲಿಸಿದರೂ ಕೊಲ್ಲಿಸಿದನೆ. ನಂಜರಾಜರಿಗಿಂತ ಇಲ್ಲ. ಅವರ ಪಾಡೇನಾಯಿತು? ಖಂಡೇರಾಯ ಎಂಥ ಸುಟಿ? ಅವನೂ ಈ ಹೊತ್ತು ನಮ್ಮನ್ನ ಶಪಿಸುತಾ ಇದಾನೆ. ಅವರಷ್ಟು ದೊಡ್ಡವರು, ಇವನಂತಹ ಸುಟಿ, ಈಗ ಯಾರಿದ್ದಾರೆ? ಅದರಿಂದ ನಾನಂದೆ, ಸಹಾಯ ಮಾಡಿದರೆ ಪರಂಗಿಯವರು ಮಾಡಬೇಕು, ಹ್ಯಾಗೂ ನವರಾತ್ರಿಗೆ ವ್ಯಾಪಾರದ ಮಾತು ಅದು ಇದ

ಆಡೋಕೆ ಇಲ್ಲಿಗೆ ಬರೋದೇ ವಾಡಿಕೆ, ನಾವು ಹೇಳಿ ಕಳುಹಿಸಿದ್ದೇವೆ, ಬಂದಾಗ ಅವರನ್ನ ಬೇರೆಯಾಗಿ ಮಾತನಾಡಿಸಿ ಏನಾದರೂ ಪ್ರಯೋಜನ ಉಂಟು ಅಂತ ಕಂಡರೆ ಮುಂದೆ ಹೋಗೋಣ ಅಂತ. ಅಪ್ಪಾಜಿಗೆ ಹ್ಯಾಗೆ ತೋರುತ್ತೆ?

ಅರಸರು: ಏನು ತೋರೋದು ಅಮ್ಮಾಜಿ? ನನಗೆ ಬಹಳ ಬೇಸರವಾಗಿದೆ. ಯಾಕಿರಬೇಕು, ರಾಜರು ಅಂತ ಈ ಪಾಡಿನಲ್ಲಿ? ದೇವರು ನನ್ನನ್ನು ಉದ್ದಕ್ಕೂ ಪರೀಕ್ಷೆ ಮಾಡತಾ ಇದ್ದಾರೆ, ಎಷ್ಟು ಸಹಿಸಿ ಕೊಳತೀ ಅಂತ. ಹುಡುಗ, ರಾಜ ಆದೆ. ಪ್ರಾಯದಲ್ಲಿ ಆ ಸರ್ವಾಧಿಕಾರಿ ಕೂಡ ಹೆಣಗಿದ್ದಾಯಿತು. ಅವನ್ನ ಮುಗಿಸಿ ಆ ದಳವಾಯಿ ಕೂಡ ಹೆಣಗಿದ್ದಾಯಿತು. ಅವನ್ನ ಮುಗಿಸಿ ಅವನ ತಮ್ಮನ ಕೂಡ ಹೆಣಗಿ ದ್ದಾಯಿತು. ಈಗ ಈ ಮುಸಲ್ಮಾನನ್ನ ಸರ್ವಾಧಿಕಾರಿ ಮಾಡಿ ಇವನಿಗೆ ಹೆದರಿ ನಡೆಯಬೇಕಾಗಿದೆ. ಯಾಕೆ ಹೆದರಲಿ? ಇವನ ಅಧಿಕಾರ ಏನಿ ದ್ದರೂ ನಾನು ಕೊಟ್ಟದ್ದಲ್ಲವೆ? ಅಧಿಕಾರ ಕೊಟ್ಟವನು ಅದನ್ನ ಹಿಂದಕ್ಕೆ ತಗೋತೇನೆ. ಕರಸೋದು, ಹೇಳೋದು. ಅವನ ಎದರಿಗೇನೆ ಸೈನ್ಯದ ನಾಯಕರು ಯಾರಿದ್ದಾರೆ ಅವರಿಗೆ, ಇನ್ನು ನೀವು ನಮ್ಮ ಮಾತಿನಂತೆ ನಡೆಯತಕ್ಕದ್ದು, ಎಂತ ಬೆಸಸೋದು. ಅವನೇನು ಮಾಡತಾನೆ?

ರಾಜಮಾತೆ: ಏನು ಮಾಡುತಾನೆ ನಾವು ಹೇಳೋ ಹಾಗಿಲ್ಲ. ಅಷ್ಟು ಸುಲಭವಾಗಿ ಅವನು ಪಟ್ಟು ಬಿಡೋದಿಲ್ಲ.

ಅರಸರು: ಬಹಳ ದಿವಸದ ಹಿಂದೆ ಅಲ್ಲ ಅಮ್ಮಾಜಿ, ಇಲ್ಲೆ ಅಲ್ಲಿ ಕುಳಿತು ನವಾಬ ಬಲದ ಕೈಯಿಂದ ಮೀಸೆ ತೀಡಿಕೊಂಡ. ನಾನು, "ಏನೊ ಹೈದರ್, ನಮ್ಮ ಎದುರಿಗೆ ಮೀಸೆ ತೀಡತೀಯಾ?" ಅಂತ ಕೇಳಿದೆ. ಅವನು ಎದ್ದು, ನೆಲ ಮುಟ್ಟಿ ಹಣೆ ಮುಟ್ಟಿಕೊಂಡ; "ಖಾವಿಂದ್, ಮಾಫ್ ಮಾಡಬೇಕು. ಧಣಿಗಳು ಈ ಗುಲಾಮನಿಗೆ ಹಾಕೋ ಅನ್ನದಲ್ಲಿ ತುಪ್ಪ ಹೆಚ್ಚಾಯಿತು. ಅದು ತೊಳಕೊಂಡರೆ ಹೋಗಲಿಲ್ಲ. ಅದಕ್ಕಾಗಿ ಮೀಸೇಗೆ ಒರಸಿಕೊಂಡೆ. ನಾನು ಸನ್ನಿಧಾನಕ್ಕೆ ಐದು ಹಣಕ್ಕೆ ಬಂದ ನೌಕರ. ಈಗಲೂ ನನ್ನ ತಲಬು ಐದು ಹಣ ಮಹಾಸ್ವಾಮಿ. ಉಳಿದದ್ದೆಲ್ಲ ನೀವು ನನ್ನ ಮೇಲೆ ಸುರಿತಿರೊ ಕರುಣೆ," ಎಂದ. ನವಾಬ ಬಹಳ

ಗಟ್ಟಿಗ. ಆದರೆ ನಮಗೆ ಎದರು ಬೀಳೋವನಲ್ಲ. ನನಗೆ ತೋರತ್ತೆ, ಅವನು ನವರಾತ್ರಿಗೆ ಬಂದಾಗ ಎಲ್ಲರ ಎದುರಿಗೆ ಈ ಮಾತು ಎತ್ತೋದೂ ಅಂತ. ಹೆದರಿ ಹೆದರಿ ಸಮ್ಮನೆ ಕುಳಿತು ಹೆಸರಿಗೆ ರಾಜ ಆಗಿರೋದು ನನಗೆ ಸಾಕು ಅನ್ನಿಸಿದೆ.

ರಾಜಮಾತೆ: ಸಾಕು ಅನ್ನಿಸೋದೇ. ಈಹೊತ್ತು ಅಲ್ಲದೆ ಇದ್ದರೆ ಇನ್ನು ತಿಂಗಳಿಗೆ ನಾವು ಅದೃಷ್ಟಾ ಎಂತಿದೇ ಅಂತ ನೋಡಲೇ ಬೇಕು. ಆದರೆ ಹದನೋಡದೆ ದುಡುಕೋದು ಬೇಡಾ ಅಂತ ವೀರಣ್ಣ ಅಂತಿದಾನೆ, ನನಗೂ ಅನ್ನಿಸತಾ ಇದೆ. ನಾ ಹೇಳಿದೆನಲ್ಲ, ನಾವು ಏನೇ ಹೇಳಿದರೂ ನವಾಬ ಗದ್ದರಿಸಿ ಮಾತಾಡೋದಿಲ್ಲ; ಆದರೆ ಪಟ್ಟು ಬಿಟ್ಟುಕೊಡೋದಿಲ್ಲ. ಹಾಗೇನಾದರೂ ಮೊದಲೇ ಮಾತಾಡೋದಾದರೆ ನಾವು ಆಡಿಕೊಳ್ಳತೇವೆ. ಅಪ್ಪಾಜಿ ಇದನ್ನು ಕಂಡರು ಅನ್ನೋ ಮಾತು ಬೇಡ. ಹಾಗೇನಾದರೂ ಮಾತು ಹೆಚ್ಚುಕಡಮೆ ಆಗಿ ಅಥವಾ ಅವನ ಕಿವಿಗೆ ಬಿದ್ದು, ಏನು ಎತ್ತ ಅಂತ ಆಕ್ಷೇಪಣೆ ಬಂದರೆ ಅದರ ಹೊಣೆ ನಮ್ಮ ಮೇಲಿರಲಿ. ರಾಜರನ್ನ ಸೋಕೋದು ಬೇಡ. ಹೀಗಾಗಬಹುದು ಎಂದರೆ ನಾನು ಶ್ರೀನಿವಾಸ ರಾಯರನ್ನ ಕರಸಿ ಮಾತಾಡತೇನೆ. ಇದು ನನ್ನ ಮಾತೂ ಅಂತ ಹೇಳ ತೇನೆ. ನೋಡೋಣ.

ಅರಸರು: ನಮ್ಮ ಮಾತೂ ಅಂದರೆ ನವಾಬ ಚಂಡಿಸಿ ಪ್ರತಿ ಹೇಳಲಾರ. ಬೇರೆಯವರ ಮಾತು ಅಂದರೆ ಉರಿದು ಬೀಳಬಹುದು, ಅವರನ್ನ ದಂಡಿಸತೇನೆ ಅನ್ನಬಹುದು.

ರಾಜಮಾತೆ: ನಮ್ಮನ್ನ ದಂಡಿಸತಾನೆಯೆ? ಆ ಮಾತೆತ್ತೋ ವೇಳೆಗೆ ಅವನು ತನಗೆ ತುಪ್ಪದನ್ನ ಹಾಕಿದ ದೊರೆಯನ್ನು ದಂಡಿಸೋ ಘಟ್ಟಕ್ಕೆ ಬಂದಿರತಾನೆ.

ಅರಸರು: ತಮ್ಮನ್ನಲ್ಲ, ಉಳಿದವರನ್ನ ಹಿಡಿದು ನುಲಿಚಬಹುದು.

ವೀರಣ್ಣ: ಅದು ಹೇಗಾದರೂ ಆಗಲಿ ಮಹಾಸ್ವಾಮಿ, ಈಗ ಇದರಲ್ಲಿ ಪ್ರಭುಗಳ ಹೆಸರು ತೊಡಕೋದು ಬೇಡ. ನಮ್ಮಂತವರು ಸಿಕ್ಕಿಕೊಂಡು ತೊಂದರೆ ಆದರೆ ಆಗ ಬಿಟ್ಟುಕೊಡೋದಿಲ್ಲಾ ಅಂತ

ಮಹಾಸ್ವಾಮಿ ಆಣತಿಮಾಡಬಹುದು. ಈಗ ಮಹಾತಾಯಿಯವರ್ರ ಅಪ್ಪಣೆ ಕೊಡಿಸಿದಂತೆ ನಡೀಲಿ.

ರಾಜಮಾತೆ: ಹೌದು ಅಪ್ಪಾಜಿ, ಈಗ ಹೀಗಿರಲಿ, ಸದ್ಯ ಇದನ್ನ ನಾನು ವೀರಣ್ಣ ಮುಂದರಿಸುತೇವೆ. ಅರಸರಿಗೆ ಈ ಸಂಗತಿ ಗೊತ್ತಿದೆ ಅನ್ನೋ ಮಾತು ಈಗಿಲ್ಲ.

ಅರಸರು ಸುಮ್ಮನೆ ಕುಳಿತು ಮಾತೆಯ ಸೂಚನೆಯನ್ನು ಕುರಿತು ಯೋಚಿಸಿದರು. ಅದು ಅವರಿಗೆ ಸರಿ ಎಂದು ಕಾಣಲಿಲ್ಲ. ಆದರೆ ತಾಯ ಮಾತು. ಆಕೆ ಏನು ಅಜ್ಞರಲ್ಲ. ಇರಲಿ. ಮುಂದೆ ನಿಲ್ಲುವುದೇ ಆದರೆ ಈಗ ನಿಂತರೇನು, ಆಮೇಲೆ ನಿಂತರೇನು? ಆಮೇಲೆಯೆ ಹೊಣೆ ನಮ್ಮದು ಎನ್ನುವುದು ಎಂದು ನಿಶ್ಚಯಿಸಿಕೊಂಡರು. "ಒಳ್ಳೆಯದು ಅಮ್ಮಾಜಿ. ನಿಮಗೆ ಸರಿ ಎಂದು ತೋರಿದಂತೆ ಮಾಡಿರಿ. ಏನಾದರೂ ತೊಡಕು ಬಂದರೆ ಹೊಣೆ ನಮ್ಮದೂ ಅಂತ ನಾವೇ ಆಮೇಲೆ ಹೇಳ ಬಹುದಲ್ಲ? ಹಾಗೂ ಆಗಬಹುದು," ಎಂದರು.

ಇವರ ಮಂತ್ರಾಲೋಚನೆ ಆಗ ಮುಗಿಯಿತು.

೫೫

ರಾಜ ರಾಜಮಾತೆಯರು ತಮ್ಮ ಅಧಿಕಾರವನ್ನು ನಡೆಯಿಸುವ ವಿಷಯದಲ್ಲಿ ಇಷ್ಟು ಆಳದು ಸುರಿದು ಯೋಚನೆ ಮಾಡುವುದಕ್ಕೆ ಕಾರಣ ಇದ್ದಿತು. ಹೈದರ್ ಮೊದಲು ಬರಿಯ ಒಬ್ಬ ಪಡೆವಳನಾಗಿ ಬಂದನು. ಅವನನ್ನೂ ಅವನ ಸೋದರರನ್ನೂ ಸೈನ್ಯಕ್ಕೆ ಸೇರಿಸಿಕೊಳ್ಳಬೇಕೆಂದು ಅವನ ದೊಡ್ಡಪ್ಪ ಅರಸರನ್ನು ಬೇಡಿಕೊಂಡಿದ್ದನು. ಅವನ ತಂದೆ ಮಾಡಿದ ಸಾಲ ಆಷ್ಟಿದೆ, ಅದನ್ನು ತೀರಿಸೆಂದು ಸಾಹುಕಾರರು ಪೀಡಿಸು ತ್ತಿದಾರೆ, ಆ ಸಾಲವನ್ನು ಹರಿಸಿ ಇವರನ್ನು ಸೈನ್ಯಕ್ಕೆ ಸೇರಿಸಿಕೊಂಡು ಕಾಪಾಡಿದರೆ ಆ ಋಣ ಹರಿಯುವಂತೆ ತಮ್ಮ ಸೇವೆ ಮಾಡುತ್ತಾರೆ, ಎಂದು ಅವನು ಅಂಗಲಾಚಿದ್ದನು. ಅಗ್ಗೆ ಸರ್ವಾಧಿಕಾರದಲ್ಲಿದ್ದ ನಂಜರಾಜ ಈ ಪ್ರಾರ್ಥನೆಯನ್ನು ಸಲ್ಲಿಸಿ ಈ ತರುಣನನ್ನು ಸೈನ್ಯದಲ್ಲಿ ಒಬ್ಬ ನಾಯಕ ನಾಗಿ ನಿಲ್ಲಿಸಿದನು. ಹೈದರ್ ಧೀರ, ಚತುರ, ವಿನಯವಂತ. ದೇವನ

ಹಳ್ಳಿಯ ಮುತ್ತಿಗೆಯಲ್ಲಿ ಹೆಸರು ಪಡೆದು, ಸೈನ್ಯದಲ್ಲಿ ಉನ್ನತ ಸ್ಥಾನಕ್ಕೆ ಬಂದನು. ಹತ್ತು ಕಡೆ ಕದನ ಮಾಡಿದಾಗ ಹಣವನ್ನು ಶೇಖರಿಸಿ ತನ್ನ ಸೈನ್ಯವನ್ನು ತೃಪ್ತಿಯಲ್ಲಿ ನಡೆಸಿಕೊಂಡನು; ಈ ವಿವೇಕದಿಂದ ನಡೆಯುದ ಉಳಿದ ದಳಪತಿಗಳಿಗಿಂತ ಒಂದು ವಿಶೇಷದ ಗೌರವವನ್ನು ಗಳಿಸಿದನು. ಮೊದಲು ಇವನು ಹೆಚ್ಚಿಕೊಂಡನೆಂದು ಇವನನ್ನು ತಡೆದ ಸರ್ವಾಧಿಕಾರಿಯನ್ನು ಅಡಗಿಸಿದನು; ಆಮೇಲೆ ಮುಖ್ಯ ಸೇನಾಪತಿ ದಳವಾಯಿ ದೇವರಾಜಯ್ಯನಿಗೆ ಎದುರು ಬಿದ್ದು ಅವನನ್ನು ಅಡಗಿಸಿದನು; ಆಮೇಲೆ ಸರ್ವಾಧಿಕಾರಿ ಕರಾಚೂರಿ ನಂಜರಾಜನಿಗೆ ಎದುರು ಬಿದ್ದು ಅವನನ್ನು ಅಡಗಿಸಿದನು. ತಾನು ಸರ್ವಾಧಿಕಾರಿ ಆಗಿ ನಿಂತನು. ಒಂದೊಂದು ಸಲವೂ ಇವನು ಗೆದ್ದು ಇವನ ವಿರೋಧಿ ಸೋಲುವುದಕ್ಕೆ ಒಂದೇ ಕಾರಣ. ಇವನು ತನ್ನ ಸೈನ್ಯಕ್ಕೆ ಕ್ರಮವಾಗಿ ಸಂಬಳ ಸಲ್ಲಿಸುವನು. ಇದಕ್ಕಾಗಿ ತಾನು ಬೇಕಾದರೆ ಅರೆ ಹೊಟ್ಟೆ ತಿಂದು ದಿನ ಕಳೆಯುವನು. ಇವನ ವಿರೋಧಿ ಮೊದಲು ತನ್ನ ಸುಖವನ್ನು ನೋಡಿಕೊಳ್ಳುವನು; ಸೈನ್ಯದ ಸುಖ ಆಮೇಲೆ ಎನ್ನುವನು. ಒಂದೊಂದು ಸಲವೂ ಸೈನ್ಯ, ತನ್ನನ್ನು ಪ್ರೀತಿಯಿಂದ ಕಾಣುವವನು ಹೈದರ್ ಒಬ್ಬನೇ, ಎಂದು ತಿಳಿಯುವಂತೆ ಇವನು ಏರ್ಪಾಡು ಮಾಡಿದನು. ಎರಡು ವರ್ಷದ ಹಿಂದೆ ರಾಜರ ಸೈನ್ಯ ಸಂಬಳಕ್ಕೆಂದು ದಂಗೆ ಏಳುವಂತೆ ಮಾಡಿ ಇವನು ಅದನ್ನು ಸಮಾಧಾನಪಡಿಸುವಂತೆ ನಟಿಸಿ ಅರಸರಿಂದ ರಾಜ್ಯದ ಎಲ್ಲ ಆಡಳಿತದ ಭಾರವನ್ನೂ ತಾನು ತೆಗೆದುಕೊಂಡಿದ್ದನು. ಅದೂ ಏನು, ಇವನು ತನಗೆ ಸರ್ವಾಧಿಕಾರ ಬೇಡ ಎಂದಂತೆ, ಅವರು ಒತ್ತಾಯ ಮಾಡಿ ಅದನ್ನು ಇವನ ಮೇಲೆ ಹೊರಿಸಿದಂತೆ ಒಂದು ಆಟವನ್ನು ಆಡಿದ್ದನು. ಈಗ ಅರಮನೆಯ ವೆಚ್ಚಕ್ಕೆಂದು ಮೂರು ಲಕ್ಷ ಹೊನ್ನಿನ ನಾಡು ಹೊರತು ಉಳಿದದ್ದೆಲ್ಲ ಸೈನ್ಯದ ಪೋಷಣೆಗಾಗಿ ಸರ್ವಾಧಿಕಾರಿಗೆ ದತ್ತವಾಗಿದ್ದಿತು. ಸರ್ವಾಧಿಕಾರವನ್ನು ವಹಿಸಿಕೊಂಡು ಹೈದರ್ ತನಗೆ ವಿರೋಧಿಯಾಗಿ ಬಂದ ಖಂಡೇರಾಯನನ್ನು ಮೋಸದಿಂದ ಉರುಳಿಸಿದನು; ಅರಸರು ಅವರ ತಾಯಿ ಅವನನ್ನು ತನ್ನ ಕೈಗೆ ಒಪ್ಪಿಸುವಂತೆ ಮಾಡಿದನು. ತಮಗೆ ಒಳ್ಳೆಯದನ್ನು ಮಾಡಲೆಂದು ಈ ಪ್ರಬಲನ ವಿರೋಧವನ್ನು ಕಟ್ಟಿಕೊಂಡ

ಆ ಬಡಪಾಯಿಯನ್ನು ರಾಜ ರಾಜಮಾತೆಯರು ಕಾಪಾಡಲು ಬಯಸಿದರು. ಅವನನ್ನು ಹೈದರನ ಕೈಗೆ ಒಪ್ಪಿಸುವಾಗ, "ನೀನು ಇವನನ್ನು ನಮ ಗೋಸ್ಕರ ಚೆನ್ನಾಗಿ ನೋಡಿಕೊಳ್ಳಬೇಕು," ಎಂದು ಬೇಡಿದರು. ನವಾಬ, "ನಿಮಗೆ ಚಿಂತೆ ಬೇಡಿ. ನಾನು ಇವನನ್ನು ಒಂದು ಗಿಳಿಯಂತೆ ನೋಡಿಕೊಳ್ಳುತ್ತೇನೆ," ಎಂದನು. ಇವರಿಗೆ ಆಗ ಇವನ ಮಾತು ವ್ಯಂಗ್ಯ ವೆಂದು ತೋರಲಿಲ್ಲ. ಅವನು ಅದನ್ನು ವ್ಯಂಗ್ಯವಾಗಿ ಆಡಿದ್ದನು; ಖಂಡೇರಾಯನನ್ನು ಬೆಂಗಳೂರಿನಲ್ಲಿ ತನ್ನ ವಾಸದ ಮಂದಿರದಲ್ಲಿ ಒಂದು ದೊಡ್ಡ ಪಂಜರದಲ್ಲಿ ಕೂಡಿ ಸೆರೆ ಮಾಡಿದ್ದನು; ಅವನಿಗೆ ದಿನವೂ ಹಾಲು ಅನ್ನವನ್ನು ಮಾತ್ರ ಕೊಡುತ್ತಿದ್ದನು. ಕೃಷ್ಣರಾಜರು ರಾಜರು; ಆದರೆ ರಾಷ್ಟ್ರದ ಮುಕ್ಕಾಲು ಭಾಗ ಸರ್ವಾಧಿಕಾರಿಯ ಅಧಿಕಾರದಲ್ಲಿದ್ದಿತು; ಅವನು ಹೇಳದೆ ತೃಣ ನಡೆಯುವಂತಿಲ್ಲ. ಸರ್ವಾಧಿಕಾರಿಗೆ ಅರಮನೆಯ ವಿಷಯದಲ್ಲಿ ಭಯವಿದೆ ಎನ್ನುವುದು ಅವನ ಮಾತಿನಲ್ಲಿ ಕಾಣುತ್ತಿರಲಿಲ್ಲ. ಆದರೆ ಅವನ ನಡತೆಯಲ್ಲಿ ಇದು ಸ್ಪಷ್ಟವಾಗುತ್ತಿದ್ದಿತು. ಹೊಸ ಏರ್ಪಾಡು ಮೊದಲಾದ ದಿನವೇ ಹೈದರ್ ಅರಮನೆಯಲ್ಲಿ ತನ್ನ ಭಾವ ದಳಪತಿ ಮೊಕದಂ ಆಲಿಯನ್ನು ಭಕ್ಷಿಯಾಗಿ ನೇಮಿಸಿದ್ದನು. ಶ್ರೀರಂಗಪಟ್ಟಣದ ಕೋಟೆಯ ರಕ್ಷಣೆಯೂ ಮೊಕದಂ ಆಲಿಗೇ ಸೇರಿದ್ದಿತು. ಈ ಕಾರಣ ದಿಂದ ರಾಜರು ಹೈದರನ ಕೈಕೆಳಗಿನ ದಳಪತಿಯ ಕಾವಲಿನಲ್ಲಿ ಶ್ರೀರಂಗ ಪಟ್ಟಣದಲ್ಲಿ ತಮ್ಮ ಅರಮನೆಯಲ್ಲಿ ಸೆರೆ ಎಂಬ ಹೆಸರಿಲ್ಲದೆ ಒಬ್ಬ ಬಂದಿ ಯಂತೆ ಆಗಿದ್ದರು.

ಹೈದರಾಲಿ ಹೀಗೆ ಸರ್ವಾಧಿಕಾರವನ್ನು ವಹಿಸಿಕೊಂಡು ರಾಜರಿಗೆ ಯಾವ ಸ್ವಾತಂತ್ರ್ಯವೂ ಇಲ್ಲದಂತೆ ಮಾಡಿದ್ದನಾದರೂ ತಾನು ಒಬ್ಬ ನೌಕರ ಎನ್ನುವ ಸಂಗತಿಯನ್ನು ಮರೆತಂತೆ ನಡೆಯಲಿಲ್ಲ. ಅರಸರು ಹೇಳಿದ ತುಪ್ಪದ ಅನ್ನದ ಮಾತನ್ನು ನವಾಬ ಎಷ್ಟುಸಲ ಎಷ್ಟು ಜನದ ಹತ್ತಿರ ಹೇಳುವುದಕ್ಕೂ ಹಿಂತೆಗೆಯುತ್ತಿರಲಿಲ್ಲ. ಯಾರಾಗಲಿ ಏನನ್ನಾಗಲಿ ಬೇಡಿ ದರೆ, ತನ್ನ ಅಧಿಕಾರದ ಕೆಲಸದಲ್ಲಿ ತಾನೇ ಸಹಾಯ ಮಾಡುವನು. ಅದು ಹೊರತು ಉಳಿದ ಮಾತಿಗೆ, "ಒಡೆಯರನ್ನು ಕೇಳಿ ತಿಳಿಸುತ್ತೇನೆ," ಎನ್ನುವನು. ಒಡೆಯರನ್ನು ಕೇಳುವುದು, ಅವರು ಅಪ್ಪಣೆ ಮಾಡುವುದು,

ಎರಡೂ ಬರಿಯ ಉಪಚಾರ. ಹೀಗೆ ಮಾಡಬಹುದು ಎಂದು ಇವನಿಂದಲೆ ಸೂಚನೆ ಬರಬೇಕು; ಅದಕ್ಕೆ ಅವರು ಸಮ್ಮತಿಸಬೇಕು; ಅದನ್ನು ಇವನು ರಾಜರ ಅಪ್ಪಣೆ ಎಂದು ನಡೆಸಬೇಕು. ಇದಕ್ಕೆ ಹೈದರನಿಗೆ ಯಾವುದು ಕಾರಣವಾಗಿದ್ದಿರಬೇಕು, ಅದನ್ನು ಜನ ಕಾಣರು. ಒಂದು ಕಾರಣ, ಅವನು ತಾನೇ ರಾಜನೆಂದರೆ ಜನ ಎದುರು ಬೀಳಬಹುದು ಎಂಬ ಭಯ ಇದ್ದಿರಬಹುದು. ಆದರೆ ನಿಜವಾಗಿ ಆಗ ದೇಶ ಇದ್ದ ಸ್ಥಿತಿಯನ್ನು ತಿಳಿದು ಯೋಚಿಸಿದರೆ ಅವನು ಹೀಗೆ ಭಯಪಡುವುದು ಅನಾವಶ್ಯಕವಾಗಿದ್ದಿತು. ಎಂಥ ಪ್ರಬಲ ವಿರೋಧಿಗಳೂ ಇವನೆದುರಿಗೆ ಸೋತಿದ್ದರು; ಇವನು ಸರ್ವಾಧಿಕಾರಿಯಾದ ಮೇಲೆ ಇವನನ್ನು ವಿರೋಧಿಸುವ ಉಸಿರು ಯಾರಿಗೂ ಇರಲಿಲ್ಲ. ಭಯವಿಲ್ಲದಿದ್ದರೆ ಬೇರೆಯ ಕಾರಣ ಒಂದೇ: ತಿಂದ ಉಪ್ಪಿಗೆ ಎರಡು ಬಗೆಯ ಬಾರದು ಎನ್ನುವುದು. ಪ್ರಾಯಶಃ ಇದೇ ನಿಜವಾದ ಕಾರಣ. ಮುಸ್ಲಿಂ ಸಂಸ್ಕೃತಿಯಲ್ಲಿ ನಮ್ಮ ದೇಶದಲ್ಲಿ ನಮಕ್‌ಹರಾಂ, ನಮಕ್ ಹಲಾಲ್ ಎಂದು ಎರಡು ಶಬ್ದ ವಾಡಿಕೆಯಾಗಿ ಬಂದಿವೆ. ಒಬ್ಬರ ಮನೆಯಲ್ಲಿ ಉಪ್ಪುಹಾಕಿದ ಪದಾರ್ಥವನ್ನು ತಿಂದಮೇಲೆ, ಎಂದರೆ ಆತಿಥ್ಯವನ್ನು ಸ್ವೀಕರಿಸಿ ಸ್ನೇಹವನ್ನು ಬೆಳಸಿದ ಮೇಲೆ, ಆ ಮನೆಗೆ ಕೆಡಕನ್ನುಂಟುಮಾಡಬಾರದು ಎನ್ನುವುದು ನಮಕ್‌ಹಲಾಲಿ. ಇದಕ್ಕೆ ವಿರೋಧವಾದದ್ದು ನಮಕ್‌ಹರಾಮಿ, ಎಂದರೆ ಉಪ್ಪಿಗೆ ತಪ್ಪುವುದು. ಸಾಮಾನ್ಯ ಪಡೆವಳನಾಗಿ ಬಂದ ಹೈದರ್ ಅಷ್ಟು ಸಾವಿರ ಜನವನ್ನು, ಆ ನೂರು ರೀತಿಯ ಹಿರಿಯರನ್ನು, ಒಪ್ಪಿಸಿ ಒಂದು ಸಂಸ್ಥಾನದ ಸರ್ವಾಧಿಕಾರಿಯಾಗಿ ಬರಬೇಕಾದರೆ ಅವನಲ್ಲಿ ಹತ್ತು ಸದ್ಗುಣ ಇದ್ದಿರಬೇಕು. ಅದೆಲ್ಲದರ ಜೊತೆಗೆ ಅವನ ಚೇತನದಲ್ಲಿ ಈ ಕ್ರಿಯೆಯೂ ಇದ್ದಿತೆಂದು ಕಾಣುತ್ತದೆ. ಏನೇ ಆದರೂ ಅರಮನೆ ಅರಮನೆಯೇ; ರಾಜನು ತನ್ನ ದಣಿಯೇ. ತನ್ನ ಕ್ಷೇಮಕ್ಕಾಗಿ, ರಾಜ್ಯದ ಕ್ಷೇಮಕ್ಕಾಗಿ, ಅವನು ಸಾವಿರ ಎಚ್ಚರಿಕೆಯನ್ನು ತೆಗೆದುಕೊಂಡಾನು; ಈ ಎಚ್ಚರಿಕೆ ತೆಗೆದುಕೊಳ್ಳುವುದರಲ್ಲಿ ರಾಜರ ನಿಜವಾದ ಗೌರವಕ್ಕೆ ಹತ್ತುಸಲ ಕುಂದು ತಂದಂತೆ ನಡೆದುಕೊಂಡಾನು.

ಆದರೆ ಅವರನ್ನು ಸಿಂಹಾಸನದಿಂದ ಇಳಿಸಲಾರನು; ಧಣಿಯೆಂದು ಕಾಣದೆ ಬಿಡಲಾರನು; ಹಾಗೆ ಬಿಡುವುದು ನಮಕ್‌ಹರಾಂತನ.

೫೬

ಮೈಸೂರಿನಲ್ಲಿ ಅರಸರೂ ಅವರ ತಾಯಿಯೂ ಈ ಸರ್ವಾಧಿಕಾರಿಯ ಹಿಡಿತದಿಂದ ಹೇಗೆ ಬಿಡಿಸಿಕೊಳ್ಳುವುದು ಎಂದು ಯೋಚಿಸುತ್ತಿದ್ದ ದಿವಸ ದಲ್ಲಿ ಹೈದರ್ ಬೆಂಗಳೂರಿನಲ್ಲಿ ತನ್ನ ಅರಮನೆಯಲ್ಲಿ ಕುಳಿತು ರಾಜ್ಯದ ಆಡಳಿತದ ಕೆಲಸವನ್ನು ನಿಶ್ಶಂಕನಾಗಿ ನಡೆಸುತ್ತಿದ್ದನು. ಹೈದರನಿಗೆ ಓದುಬರಹ ಬರುತ್ತಿರಲಿಲ್ಲವೆಂದು ಹೇಳುತ್ತಾರೆ. ಅವನಿಗೆ ಅಕ್ಷರವೇ ಗೊತ್ತಿರಲಿಲ್ಲ ಎಂದು ಇದರಿಂದ ಅನೇಕರು ಅರ್ಥಮಾಡಿಕೊಳ್ಳುತ್ತೇವೆ. ನಿಜದಲ್ಲಿ ಅವನು ಅಕ್ಷರವನ್ನೇ ಕಲಿಯದ ಗಾಂಪನಲ್ಲ. ಅಂದಿನ ಜನಕ್ಕೆ ಓದುಬರಹ ಎಲ್ಲರಿಗೂ ದಿನದ ಬಳಕೆಯ ವಸ್ತು ಅಲ್ಲ. ಓದು ಬಲ್ಲವ ನಾದರೂ ಪ್ರತಿಯೊಬ್ಬನೂ ದಿನವೂ ಓದುತ್ತಿರಲಿಲ್ಲ. ಬರೆಯ ಬಲ್ಲವನೂ ಹತ್ತು ದಿನಕ್ಕೊಂದು ಸಲವಾಗಲಿ ಒಂದು ಪತ್ರವನ್ನು ಬರೆಯುತ್ತಿರಲಿಲ್ಲ. ವೃತ್ತಿಯಿಂದ ಯೋಧನಾಗಿ ಹತ್ತಿರ ಲೇಖನಕ್ಕೆ ಲೆಕ್ಕಕ್ಕೆ ಹತ್ತು ಜನ ಕರಣಿಕರು ಇರುವಾಗ ಯಜಮಾನ ಅಕ್ಷರಸ್ಥನಾದರೂ ಓದುವ ಬರೆಯುವ ಹವ್ಯಾಸಕ್ಕೆ ಹೋಗುವುದು ಅನಾವಶ್ಯಕವಾಗಿತ್ತು. ಒಬ್ಬನು ಓದಿ ಹೇಳು ವನು; ಮತ್ತೊಬ್ಬನು ಹೇಳಿದ್ದನ್ನು ಬರೆದು ತರುವನು; ಯಜಮಾನ ಅದನ್ನು ಕೇಳಿ ಅದಕ್ಕೆ ತನ್ನ ಸಹಿಯನ್ನು ಹಾಕುವನು. ಹೈದರ್ ಮಾಡುತಿದ್ದದ್ದು ಇದನ್ನೇ. ಬೆಳಗ್ಗೆ ಎದ್ದು ತನ್ನ ಕಚೇರಿಯಲ್ಲಿ ಕುಳಿತ ವನು ಮಧ್ಯೆ ಆಹಾರಕ್ಕೆಂದು ಸ್ವಲ್ಪಹೊತ್ತು ಹೊರತಾಗಿ ಉಳಿದಂತೆ ಹಗಲೆಲ್ಲ ಅಂಚೆ ತಂದ ಪತ್ರವನ್ನು ಓದಿಸಿ ಕೇಳುವುದು, ಅವಕ್ಕೆ ಒಡನೆ ಉತ್ತರ ಕಳುಹಿಸುವುದು, ಮಧ್ಯೆ ಲೆಕ್ಕಗಳನ್ನು ನೋಡಿ ಒಪ್ಪಿಕೊಳ್ಳುವುದು, ಈ ಕೆಲಸದಲ್ಲಿ ಮುಳುಗಿದ್ದನು. ಕಳುಹಿಸುವ ಉತ್ತರ ತನ್ನ ಇಷ್ಟದಂತೆ ಇದೆ ಎನ್ನುವುದನ್ನು ದೃಢಪಡಿಸಿಕೊಳ್ಳುವುದಕ್ಕೆ ಇವನು ಒಬ್ಬ ಬರೆದ ಉತ್ತರವನ್ನು ಬೇರೊಬ್ಬನಿಂದ ಓದಿಸಿ ಕೇಳುವನು. ಅದು ತನ್ನ ನಿರೂಪ

ದಿಂದ ತಪ್ಪಿದಲ್ಲಿ ಅದನ್ನು ಬರೆದವನಿಗೆ ದಂಡನೆ ಮಾಡುವನು. ತಪ್ಪು ಮಾಡಿದವನನ್ನು ತಾನೇ ಛಡಿಯಿಂದ ಹೊಡೆಯುತ್ತಿದ್ದನಂತೆ. ಹೊಡೆದವನನ್ನು ಕೆಲಸದಿಂದ ತೆಗೆಯುತ್ತಿರಲಿಲ್ಲ; ಹತ್ತಿರದಲ್ಲೆ ಇರಿಸಿಕೊಂಡು ಹತ್ತು ಜನದ ಇದಿರಿಗೆ ಅವಮಾನದಿಂದ ಕುಗ್ಗುವಂತೆ ಮಾಡುವನು. ಒಂದರ್ಥದಲ್ಲಿ ಈ ಆಡಳಿತ ರಾಕ್ಷಸಿಕವಾಗಿದ್ದಿತು. ಆದರೆ ಎಲ್ಲ ಹೊತ್ತೂ ಸಂಚು ಹೊಂಚಿನ ಮಧ್ಯೆ ನಡೆಯುತ್ತ ಎಲ್ಲಿ ಹುಸಿ ಉಸುಬು ಎನ್ನುವುದು ಕಾಣದಂಥ ಅಂದಿನ ರಾಜ್ಯ ವ್ಯವಹಾರದಲ್ಲಿ ಇದಕ್ಕಿಂತ ಕಡಮೆಯ ಕಾಠಿನ್ಯ ಸಾಲುತ್ತಿರಲಿಲ್ಲ ಎಂದು ಕಾಣುತ್ತದೆ. ಸ್ವಲ್ಪ ದಾಕ್ಷಿಣ್ಯದಿಂದ ವರ್ತಿಸಿದವರು ಯಾರೂ ಉಳಿಯಲಿಲ್ಲ. ಈ ಕಾಠಿನ್ಯದಿಂದ ವರ್ತಿಸಿದ ಹೈದರ್ ಮಾತ್ರ ಉಳಿದುಕೊಂಡನು. ಹೈದರ್ ತನ್ನ ತಲೆಗೆ ರಟ್ಟೆಗೆ ಮಧ್ಯೆ ತೋಳಿನ ಅಂತರ ಇಲ್ಲ ಎಂದು ಹೇಳುತ್ತಿದ್ದನಂತೆ. ಯಾವನಾದರೂ ದುಷ್ಟ ಎಂದು ಕಂಡರೆ ಒಡನೆಯೆ ಶಿಕ್ಷೆ ಸಿಡಿಲಂತೆ ಎರಗುವುದು. ಇಂಥ ಕಠೋರ ಶಾಸನದಿಂದ ಹಗಲೆಲ್ಲ ಕೆಲಸ ಮಾಡಿದರೂ ಈ ಮನುಷ್ಯ ಸಂಜೆ ಕೂಡ ದಣಿಯದೆ ಇರುವನು. ಆವಶ್ಯಕ ಕಂಡರೆ ರಾತ್ರಿಯೆಲ್ಲ ಎಚ್ಚತ್ತಿದ್ದು ದುಡಿಯಬಲ್ಲನು.

ಆ ದಿನ ಸಂಜೆಗೆ ಮೈಸೂರಿಂದ ಬಂದ ಒಂದು ಕಾಗದದಲ್ಲಿ ಮೊಕದಂ ಆಲಿ ಹೀಗೆಂದು ಬರೆದಿದ್ದನು. "ನವಾಬರ ಸನ್ನಿಧಿಯಲ್ಲಿ, ಸೇವಕ ಮೊಕದಂ ಆಲಿ ಮಾಡುವ ಶರಣಾರ್ಥಿ. ಈಸಲದ ನವರಾತ್ರಿ ಉತ್ಸವಕ್ಕೆ ಬೇರೆ ಕಡೆಗಳಿಂದ ಎಂಟು ಹತ್ತು ಜನ ದೊಡ್ಡವರು ಬರುತ್ತಾರೆ, ಅವರಿಗೆ ತಕ್ಕ ಮರ್ಯಾದೆಯ ಏರ್ಪಾಡುಗಳನ್ನು ಮಾಡಬೇಕು, ಎಂದು ಪ್ರಭುಗಳೂ ಮಹಾತಾಯಿ ಸನ್ನಿಧಾನವೂ ನಿನ್ನೆ ತಿಳಿಸಿದರು. ಅರಮನೆಯ ಲೆಕ್ಕದಲ್ಲಿ ಈಗಾಗಲೆ ಆರು ತಿಂಗಳ ಆಯ ಖರ್ಚು ಬಿದ್ದು ಸ್ವಲ್ಪ ಹಣ ಹೆಚ್ಚಾಗಿಯೆ ವೆಚ್ಚವಾಗಿದೆ. ನವರಾತ್ರಿಯ ವೆಚ್ಚ ವಾಡಿಕೆಯಂತೆ ನಡೆದರೆ ಕೂಡ ವರ್ಷದ ಕೊನೆಗೆ ಒಂದು ತಿಂಗಳ ಕೊಡುಮಾನ ಹೆಚ್ಚುತ್ತದೆ. ಈಗ ಮಹಾಸನ್ನಿಧಾನ ಅಪ್ಪಣೆಮಾಡಿರುವ ವೆಚ್ಚಕ್ಕೆ ಏರ್ಪಾಡು ಮಾಡಿದರೆ ಮತ್ತಷ್ಟು ವೆಚ್ಚ ಹೆಚ್ಚಿ, ಈ ಹೆಚ್ಚಿಗೆಯನ್ನು ಮುಂದೆ ಲೆಕ್ಕದಲ್ಲಿ ಸರಿಪಡಿಸಿಕೊಳ್ಳಬೇಕಾಗುತ್ತದೆ. ಇದನು

ಸರಿಪಡಿಸುವುದು ಸಾಧ್ಯವಲ್ಲ. ವರ್ಷವರ್ಷವೂ ಹೀಗೇ ಆಗಿ ಈಗ ಅರಮನೆಯ ಲೆಕ್ಕದಲ್ಲಿ ಮೂವತ್ತು ಸಾವಿರ ವರಹ ಸಾಲವಿದೆ. ಇದು ಜನಾಬ್‌ರವರ ತಿಳಿವಳಿಕೆಗೆ ಬಂದೇ ಇದೆ. ಈ ಭಾಗದಲ್ಲಿ ಹೇಗೆ ನಡೆಯ ಬೇಕು ಎಂದು ತಮ್ಮಿಂದ ಒಡನೆ ನಿರೂಪ ಬರಬೇಕಾಗಿ ಬೇಡುತ್ತೇನೆ.

"ಈ ಬರುವ ದೊಡ್ಡ ಜನ ಯಾರು ಎಂದು ನಾನು ಸೂಕ್ಷ್ಮವಾಗಿ ಕೇಳಿದೆ. ಅದರ ವಿವರ ಗುರುತು ಹಾಕಿಸಿ ಕೊಡುತ್ತೇವೆ ಎಂದು ಮಹಾ ತಾಯಿ ಅಪ್ಪಣೆ ಮಾಡಿದರು. ಆದ್ದರಿಂದ ಸದ್ಯ ಈ ವಿಷಯದಲ್ಲಿ ಹೆಚ್ಚು ಸಂಗತಿ ಅರಿಕೆಮಾಡಲು ಸಾಧ್ಯವಲ್ಲ. ಅಲ್ಲಿ ಇಲ್ಲಿ ಕಿವಿಗೆ ಬಿದ್ದ ಮಾತಿ ನಿಂದ ಬಿದನೂರಿನ ರಾಜರೊ ನಾಯಕರೊ, ಮತ್ತು ಮದರಾಸಿನ ಮತ್ತು ಭಟ್ಕಳದ ಫರಂಗಿ ಸರದಾರರು ಕೆಲವರೊ ಬರುತ್ತಾರೆ ಎನ್ನುವ ಸೂಚನೆ ಕಂಡಿತು. ಇದು ನಿಶ್ಚಯವಾದ ವರ್ತಮಾನ ಎಂದು ಜನಾಬ್‌ರವರು ಎಣಿಸಬಾರದು. ವಿವರ ಖಚಿತವಾಗಿ ತಿಳಿದೊಡನೆ ಬಿನ್ನವಿಸಿಕೊಳ್ಳುತ್ತೇನೆ."

ನವಾಬನು ಕಾಗದವನ್ನು ಕೈಗೆ ತೆಗೆದುಕೊಂಡು ತೊಡೆಯಮೇಲಿಟ್ಟು ಕೊಂಡು, ಎರಡು ಕ್ಷಣ ಬಿಟ್ಟು ಈ ಉತ್ತರವನ್ನು ಬರೆಸಿದನು: "ಸುಬೇ ದಾರ್ ಮೊಕದಂ ಅಲಿ ಸಾಹೇಬರಿಗೆ, ನವಾಬ್ ಹೈದರಾಲಿಯವರ ನಿರೂಪ. ನಿಮ್ಮ ಪತ್ರ ಬಂದಿದೆ. ಮಹಾಪ್ರಭುಗಳು, ಮಹಾಮಾತೃಶ್ರೀ ಯವರು, ಅಪ್ಪಣೆ ಕೊಡಿಸಿರುವಂತೆ ಆವಶ್ಯಕವಾದ ಏರ್ಪಾಡನ್ನು ಮಾಡಿರಿ. ಉತ್ಸವದ ವಿಷಯದಲ್ಲಿ ಪ್ರಭುಗಳ ಆಜ್ಞೆಯನ್ನು ಪಡೆಯುವುದಕ್ಕೆ ಈ ಮೊದಲೇ ನಾವು ಬರಬೇಕೆಂದು ಇದ್ದೆವು. ಕಾರ್ಯಾಂತರದಿಂದ ಆಗಲಿಲ್ಲ. ಇನ್ನೆರಡು ಮೂರು ದಿನದಲ್ಲಿ ನಾವು ಪಟ್ಟಣಕ್ಕೆ ಬರುವವರಾಗಿದ್ದೇವೆ. ಆಗ ಪ್ರಭುಗಳನ್ನು ಕಾಣಿಸಿಕೊಂಡು ಈಗ ಅರಮನೆಯ ಲೆಕ್ಕದಲ್ಲಿ ಸಾಲ ವಿರುವ ಮೊತ್ತವನ್ನು ಸರಿಪಡಿಸುವ ವಿಷಯ ಆವಶ್ಯಕವಾದ ಆಜ್ಞೆಯನ್ನು ಪಡೆಯುತ್ತೇವೆ. ಬರುವವರು ಯಾರು, ಏನು, ಎಂದು ನೀವು ಪ್ರಭು ಗಳಲ್ಲಿ ವಿವರ ಕೇಳುವುದು ಬೇಡ. ಪ್ರಭು ಸನ್ನಿಧಿಯಲ್ಲಿ ನಾವು ಕೂಡ ಅಂಥ ಪ್ರಶ್ನೆ ಕೇಳುವವರಲ್ಲ. ಪ್ರಭುಗಳ ಸನ್ನಿಧಾನದಲ್ಲಿ ಲವಲೇಶ ಅಮರ್ಯಾದೆಯಿಂದ ನಡೆದಂತೆ ಆಗಬಾರದು. ಈ ವಿಷಯದಲ್ಲಿ ನೀವು ಎಚ್ಚರಿಕೆಯಿಂದ ಇದ್ದು ನಮ್ಮನ್ನು ಸಂತೋಷಪಡಿಸತಕ್ಕದ್ದು."

## ೫೭

ಈ ಉತ್ತರ ಸಿದ್ಧವಾಗಿ ಬಂದಾಗ ಹೈದರನ ಹತ್ತಿರ ಅವನ ಮಗ ಟಿಪ್ಪುಸಾಹೇಬ ಕುಳಿತಿದ್ದನು. ಅವನು ಎರಡು ಕ್ಷಣದ ಹಿಂದೆ ಬಂದು, "ನಿಮ್ಮನ್ನು ನೋಡುವುದಕ್ಕೆ ಮೌಲ್ವಿಯವರು ನಾಲ್ಕು ಜನ ದಯಮಾಡಿ ಸಿದ್ದಾರೆ. ಯಾವುದೊ ಮುಖ್ಯವಾದ ವಿಷಯವನ್ನು ತಮ್ಮಲ್ಲಿ ವಿಜ್ಞಾಪನೆ ಮಾಡಬೇಕಂತೆ. ಅವರನ್ನು ಈಗ ಕಾಣಲು ಸಾಧ್ಯವೆ? ಇಲ್ಲ ನಾಳೆ ಬರಹೇಳಲೆ?" ಎಂದು ತಂದೆಯನ್ನು ಕೇಳಿದ್ದನು. ನವಾಬನು, "ನಾಳೆ ಬನ್ನಿ ಎಂದು ನೀನು ಯಾರಿಗೂ ಹೇಳಬೇಡ, ಸಾಹೇಬ್. ನೋಡುವುದಾದರೆ ನೋಡಬೇಕು. ಸಾಧ್ಯವಲ್ಲದಿದ್ದರೆ ಈಗ ಇಲ್ಲ ಎನ್ನಬೇಕು. ನಾಳೆ ನಾಡಿದ್ದು ಎಂದು ಕಾಲವನ್ನು ಒತ್ತೆಮಾಡಬಾರದು. ಏನು ಸಂಗತಿ? ಅವರನ್ನು ಬರಹೇಳು. ಮಾತನಾಡಿ ಮುಗಿಸೋಣ," ಎಂದನು.

"ಇಲ್ಲ, ಅದು ಅವಸರದಲ್ಲಿ ಮುಗಿಯುವ ಮಾತಲ್ಲ. ಸ್ವಲ್ಪಹೊತ್ತು ಕುಳಿತು ಕೇಳಬೇಕಾಗುತ್ತದೆ," ಎಂದು ಮಗ ನಯವಾಗಿ ತಿಳಿಸಿದನು.

"ಓಹೊ, ಆಗಲಿ ಬರಹೇಳು. ಎಂದಿದ್ದರೂ ಆಡಬೇಕಾದ ಮಾತು. ಇಂದು ಆಡಿ ಮುಗಿಸೋಣ."

ಟಿಪ್ಪು ಚಾವಡಿಯ ಎಡದ ಮೂಲೆಗೆ ನಿಂತಿದ್ದ ಆಳಿಗೆ ಸನ್ನೆಮಾಡಿ ಕರೆದು, "ಕೈಸಾಲೆಯಲ್ಲಿ ಮೌಲ್ವಿ ಸಾಹೇಬರುಗಳು ಮಂಡಿಸಿದ್ದಾರೆ. ಅವರನ್ನು ಇಲ್ಲಿಗೆ ಕರೆದುಕೊಂಡು ಬಾ," ಎಂದು ಕಳುಹಿಸಿದನು. ತಾನು ಎದ್ದು ಚಾವಡಿಯ ಬಾಗಿಲ ಬಳಿಗೆ ನಡೆಯಬೇಕು. ಮಧ್ಯೆ ನವಾಬನು ಮೊಕದಂ ಆಲಿಗೆ ಬರೆದಿದ್ದ ಉತ್ತರವನ್ನು ಓದಿಸಿ ಕೇಳಿದನು. ಅವನು ಅದಕ್ಕೆ ಇನ್ನೇನು ಸಹಿ ಹಾಕಬೇಕು. ಟಿಪ್ಪು ಹತ್ತಿರಕ್ಕೆ ಬಾಗಿ, "ಮೌಲ್ವಿಗಳು ಮಾಡುವ ವಿಜ್ಞಾಪನೆ ಈ ವಿಷಯಕ್ಕೆ ಸಂಬಂಧಿಸಿದೆ. ಇದನ್ನು ಈಗಲೇ ಕಳುಹಿಸುವುದೆ, ಸ್ವಲ್ಪ ತಡೆಯುವುದೆ, ಅವರ ಮಾತನ್ನು ಕೇಳಿ ನಿರ್ಧರಿಸುತ್ತೀರಾ?" ಎಂದನು.

ನವಾಬನು, "ಸಾಹೇಬ್, ಇದು ಏನು ಕಾಗದ ಎಂದು ನೀವು ತಿಳಿದುಕೊಳ್ಳಬಾರದಿತ್ತು. ಇದು ನಮ್ಮ ವಳಿತದ ವಿಷಯ; ನಿಮ್ಮದಲ್ಲ. ಮೌಲ್ವಿಗಳ ಮಾತು ಇದಕ್ಕೆ ಸಂಬಂಧಿಸಿರುವುದಾದರೆ ಅವರನ್ನು ನೀವೆ ಬರಮಾಡಿದ್ದೀರಿ ಎಂದು ಹೇಳಬೇಕಾಗುತ್ತದೆ. ಏಕೆ ಹೀಗೆ ಮಾಡಿದಿರಿ?" ಎಂದನು.

ಹೈದರನಿಗೆ ಕೋಪ ಬಂದಾಗ ಅವನು ಮಗನನ್ನು ಹೀಗೆ ಬಹುವಚನದಲ್ಲಿ ನುಡಿಸುವನು. ತಂದೆಗೆ ಸಮಾಧಾನ ತಪ್ಪಿದೆ ಎಂದು ಮಗನಿಗೆ ಈ ಗೌರವ ಸಂಬೋಧನ ಎಚ್ಚರಿಕೆ ಕೊಡುವುದು. ಟಿಪ್ಪು ತನ್ನ ಮಾತು ತಪ್ಪಾಯಿತೆಂದು ಗ್ರಹಿಸಿದನು. ತಂದೆಗೆ ಪ್ರತಿ ಹೇಳಲಿಲ್ಲ. ಎದ್ದು ಬಾಗಿಲ ಹತ್ತಿರ ಹೋದನು; ಆ ವೇಳೆಗೆ ಅಲ್ಲಿಗೆ ಬಂದು ಕಾದಿದ್ದ ಮೌಲ್ವಿ ಮಹಾಶಯರನ್ನು ಒಳಕ್ಕೆ ಕರೆದು ತಂದನು.

## ೫೮

ನವಾಬನು, ಕುಳಿತಿದ್ದಂತೆಯೆ ನೆಲವನ್ನು ಮುಟ್ಟಿ ಹಣೆ ಮುಟ್ಟಿಕೊಂಡು, ಅವರಿಗೆ ಮರ್ಯಾದೆ ತೋರಿದನು; ಅವರು ಬಾಗಿ ನೆಲಮುಟ್ಟಿ ಹಣೆ ಮುಟ್ಟಿ ಸಲ್ಲಿಸಿದ ವಂದನೆಯನ್ನು ಸ್ವೀಕರಿಸಿದನು. "ನಾವು ಏಳಲಿಲ್ಲ; ತಪ್ಪನ್ನು ಮನ್ನಿಸಬೇಕು; ದಯಮಾಡಿರಿ. ನಮ್ಮಿಂದ ಏನಾಗಬಹುದು? ಇಲ್ಲಿಯವರೆಗೆ ಬಂದು ಅನುಗ್ರಹಿಸಿದ ಕಾರಣವನ್ನು ತಿಳಿಸಬೇಕು," ಎಂದನು.

ಅವನು ಸಾಮಾನ್ಯವಾಗಿ ಯಾರಿಗೂ ಇಷ್ಟು ಮಾತನ್ನು ಹೇಳುವುದಿಲ್ಲ; ಹೇಳುವವನಲ್ಲ. ಮಗನೂ ಇವರೂ ಸೇರಿ ಯೋಚನೆ ಮಾಡಿ ಬಂದಿರುವುದರಿಂದ, ಮತ ವಿಷಯದ ಯಾವುದೊ ಒಂದು ಪ್ರಾರ್ಥನೆಯನ್ನು ಮಾಡಲು ಬಂದಿದ್ದಾರೆ, ಪ್ರಾಯಶಃ ಅದಕ್ಕೆ ಒಪ್ಪುವುದು ಸಾಧ್ಯವಲ್ಲ, ಆದಕಾರಣ ಈಗಲೆ ಸಾಕಾದಷ್ಟು ಮರ್ಯಾದೆಯಿಂದ ಮಾತನಾಡಿಸಿರುವುದು, ಎಂದು ಯೋಚಿಸಿ ಇಷ್ಟು ಮಾತನ್ನು ಬಳಸಿದ್ದನು. ಈ ವೇಳೆಗೆ ಊರಿಗೆಲ್ಲ ಇವನ ಸ್ವಭಾವ ಗೊತ್ತು. ಇಷ್ಟು ನಯವಾಗಿ ಮಾತನಾಡಿದಾಗ ಇವನು ತನ್ನ ನಿಶ್ಚಯವನ್ನು ಪಟ್ಟಾಗಿ

ಹಿಡಿದು ನಿಲ್ಲುವನು. ಟಿಪ್ಪು ಮೌಲ್ವಿಗಳು ಎಲ್ಲರೂ ಇದನ್ನು ಆಗಲೆ ತಿಳಿದುಕೊಂಡರು.

ಮೌಲ್ವಿಗಳು ನಾಲ್ವರೂ ನವಾಬನ ಎದುರಿಗೆ ಕುಳಿತರು. ಟಿಪ್ಪು ಅವನ ಎಡಕ್ಕೆ ಪಕ್ಕದಲ್ಲಿ ಸ್ವಲ್ಪ ಹಿಂದಾಗಿ ಕುಳಿತನು. ಕ್ಷಣ ಬಿಟ್ಟು ಟಿಪ್ಪು ಮೌಲ್ವಿಗಳ ಪ್ರಮುಖನನ್ನು ಕುರಿತು, "ಅಪ್ಪಣೆಯಾಗಲಿ, ಮೌಲ್ವಿ ಸಾಹೇಬ್," ಎಂದನು.

ಮೌಲ್ವಿ, "ಅಪ್ಪಣೆ, ಸಾಹೇಬರೆ. ಅರಿಕೆ ಮಾಡುತ್ತೇನೆ. ಜನಾಬ್ ಸರ್ವಾಧಿಕಾರಿಗಳು ನಾವು ಮಾಡುವ ಒಂದು ವಿಜ್ಞಾಪನೆಯನ್ನು ಲಾಲಿಸ ಬೇಕು. ಇದು ಈ ದೇಶದ ವಿಶಿಷ್ಟ ಮಹಮ್ಮದೀಯ ಪ್ರಜೆಗಳ ಅಪೇಕ್ಷೆ. ನಾವು ಅವರ ಪರವಾಗಿ ಜನಾಬ್‌ರವರಲ್ಲಿ ಈ ಬಿನ್ನಹವನ್ನು ಮಾಡಿಕೊಳ್ಳು ತ್ತಿದೇವೆ, ನವಾಬ್ ಸಾಹೇಬರು ಅಪ್ಪಣೆ ಕೊಟ್ಟರೆ ಸಂಗತಿಯನ್ನು ವಿಶದಪಡಿಸುತ್ತೇನೆ," ಎಂದನು.

ನವಾಬನು, "ಓಹೋ, ಅಪ್ಪಣೆಯಾಗಬೇಕು," ಎಂದನು.

ಮೌಲ್ವಿ: ನವಾಬರು ತಮ್ಮ ಪರಾಕ್ರಮದಿಂದ ಮೈಸೂರ್ ದೇಶ ವನ್ನು ಕಾಪಾಡಿದ್ದಾರೆ. ಸೈನ್ಯಗಳನ್ನು ತೃಪ್ತಿಪಡಿಸಿ ನಡಸಿಕೊಂಡಿದ್ದಾರೆ. ರಾಜರ ಮನೆಯನ್ನು ಉಳಿಸಿದ್ದಾರೆ. ಈಗ ನಾಲ್ಕು ವರ್ಷದ ಹಿಂದೆ ಇವರು ಸರ್ವಾಧಿಕಾರಿಗಳಾದರು. ರಾಜರು ಹೆಸರಷ್ಟಕ್ಕೆ ರಾಜರು ಹೊರ ತಾಗಿ ದೇಶಕ್ಕೆ ಜನಕ್ಕೆ ಯಾವ ಉಪಕಾರವನ್ನೂ ಮಾಡುವಂತಿಲ್ಲ. ಹೀಗೆ ಇರುವವರನ್ನು ರಾಜರು ಎಂದು ಕರೆದು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವರಿಗೆ ನಜರು ಮುಜರೆ ಮಾಡುವುದು ವ್ಯರ್ಥ. ಇಸ್ಲಾಂ ಧರ್ಮದ ಪ್ರಕಾರ ರಾಜರು ಎಲ್ಲರಂತೆ ಸಾಮಾನ್ಯ ಜೀವನವನ್ನು ನಡಸಬೇಕು; ತಮ್ಮ ಕೈಯ ಕಷ್ಟದಿಂದ ತಮ್ಮ ಅನ್ನವನ್ನು ಗಳಿಸಬೇಕು. ಹೀಗಲ್ಲದೆ ರಾಜ್ಯದ ವರಮಾನವನ್ನು ಬರಿಯ ವೈಭವಕ್ಕೆ ಅತಿಯಾಗಿ ವೆಚ್ಚ ಮಾಡು ವವರು ರಾಜರಲ್ಲ. ರಾಜರು ಹೀಗೆ ಮಾಡಿದರೆ ಮಂತ್ರಿಗಳು ಅದಕ್ಕೆ ಒಪ್ಪಬಾರದು. ಸದ್ಯ ಈ ನವರಾತ್ರಿ ಉತ್ಸವ ಎನ್ನುವುದು ಬರುವುದರಲ್ಲಿದೆ. ನವಾಬ್ ಸಾಹೇಬರು ಸರ್ವಾಧಿಕಾರಿಗಳಾದ ವರ್ಷ ಅವರು ನಮ್ಮ ಧರ್ಮವನ್ನು ಮನಸ್ಸಿಗೆ ತಂದುಕೊಂಡು ಈ ಉತ್ಸವವನ್ನು ನಿಲ್ಲಿಸಿಯಾರು

ಎಂದು ನಾವು ನಿರೀಕ್ಷಿಸಿದ್ದೆವು. ಹಾಗೇನೂ ಆಗಲಿಲ್ಲ. ಅದು ಮೊದಲ ವರ್ಷ, ಸ್ವಲ್ಪ ತಡೆಯೋಣ, ಎಂದು ಯೋಚಿಸಿದ್ದಾರೆ ಎಂದು ಸುಮ್ಮ ನಿದ್ದೆವು. ಆದರೆ ಅದು ಇತ್ತೀಚಿಗೆ ಎಂದಿನಂತೆ ನಡೆಯುತ್ತಲೆ ಇದ್ದಿದೆ. ಸಾಲದ್ದಕ್ಕೆ ವರ್ಷ ವರ್ಷ ಅದರಲ್ಲಿ ಹೆಚ್ಚಿನ ಖರ್ಚು ಆಗುತ್ತಿದೆ. ಉತ್ಸವ ದಲ್ಲಿ ನವಾಬರು ರಾಜರ ಎದುರಿಗೆ ನಿಂತು ನೆಲಮುಟ್ಟಿ ನಮಸ್ಕಾರ ಮಾಡುವುದಾಗಿದೆ. ಇದು ದೇಶದ ಮುಸ್ಲಿಂ ಜನರಿಗೆ ರುಚಿಸುತ್ತಿಲ್ಲ. ನವಾಬರು ಈಸಲ ಈ ಉತ್ಸವವನ್ನು ನಿಲ್ಲಿಸುವಂತೆ ಅಪ್ಪಣೆ ಮಾಡ ಬೇಕೆಂದು ನಾವೆಲ್ಲ ಒತ್ತಾಯದಿಂದ ಪ್ರಾರ್ಥಿಸುತ್ತೇವೆ. ತಟ್ಟನೆ ನಿಲ್ಲಿಸು ವುದು ಕಷ್ಟ ಎನ್ನುವುದಾದರೆ ಉತ್ಸವದ ಪಾಡಿಗೆ ಉತ್ಸವ ನಡೆಯಲಿ. ಆದರೆ ಅದು ತೀರ ನೆಪಮಾತ್ರಕ್ಕೆ ನಡೆಯಬೇಕು. ಇದುವರೆಗಿನ ಅದರ ವಿಜೃಂಭಣೆಯೆಲ್ಲ ನಿಲ್ಲಬೇಕು. ಈ ವಿಷಯ ಜನಾಬ್ ಅಪ್ಪಣೆ ಮಾಡಿ ದರೆ ಇನ್ನೊಂದು ಮಾತು ಸೂಚಿಸುವುದಿದೆ.

ಹೈದರ್ : ತಾವು ಅಪ್ಪಣೆ ಕೊಡುವುದನ್ನೆಲ್ಲ ಕೊಟ್ಟು ಮುಗಿಸೋ ಣಾಗಲಿ. ನಾನು ಮಾಡುವ ವಿಜ್ಞಾಪನೆಯನ್ನು ಎರಡು ಮಾತಿನಲ್ಲಿ ಮಾಡುತ್ತೇನೆ. ಅಪ್ಪಣೆಯಾಗಬೇಕು.

ಮೌಲ್ವಿ : ಅಪ್ಪಣೆ. ಹೆಸರಷ್ಟಕ್ಕೆ ಶ್ರೀರಂಗಪಟ್ಟಣದಲ್ಲಿ ಉತ್ಸವ ನಡೆಯುತ್ತಿರಲಾಗಿ ನವಾಬ್ ಸಾಹೇಬರು ಬೆಂಗಳೂರಿನ ಈ ಮಂದಿರ ವನ್ನೆ ಅರಮನೆ ಎಂದು ಕರೆದು ಇಲ್ಲಿ ತಾವು ಒಂದು ದರ್ಬಾರನ್ನು ನಡಸ ಬೇಕು. ಆ ಉತ್ಸವದ ವೇಳೆಯಲ್ಲಿ ಹಿಂದೂ ರೀತಿಯ ಒಂದು ಸಿಂಹಾಸ ನವನ್ನು ಮಾಡಿಸಿಕೊಂಡು ಅದರ ಮೇಲೆ ಮಂಡಿಸಬೇಕು, ರಾಜ್ಯ ನಿಜವಾಗಿ ಮುಸ್ಲಿಂ ರಾಜ್ಯ ಎನ್ನುವುದನ್ನು ಸ್ಪಷ್ಟಪಡಿಸಿ ಮುಸ್ಲಿಂ ಜನರ ಮನಸ್ಸನ್ನು ಆಹ್ಲಾದಗೊಳಿಸಬೇಕು. ಇನ್ನು ತಾವು ರಾಜರ ಅಧೀನದ ಒಬ್ಬ ಅಧಿಕಾರಿಯಂತೆ ನಡೆಯುವುದು ಅನುಚಿತ ಎಂದು ನಮ್ಮ ಅಭಿಮತ.

ಮೌಲ್ವಿ ತನ್ನ ಮಾತನ್ನು ಮುಗಿಸಿದನು. ಹೈದರ್ ಮಾತು ಮುಗಿಯಿತೆನ್ನುವುದನ್ನು ಕಂಡು, "ತಾವು ಅಪ್ಪಣೆ ಕೊಡಿಸಬೇಕೆಂದಿದ್ದ ಸಂಗತಿ ಎಲ್ಲ ಮುಗಿಯಿತೆ ಮೌಲ್ವಿ ಸಾಹೇಬ್ ?" ಎಂದು ಕೇಳಿದನು. ಮೌಲ್ವಿ, "ಮುಗಿಯಿತು ಜನಾಬ್," ಎಂದಮೇಲೆ ತಾನು ಹೀಗೆಂದನು:

"ಮೌಲ್ವಿ ಮಹಾಶಯರೆ, ತಾವು ನನ್ನ ಮೇಲಿನ ಅತ್ಯಂತ ಅಭಿಮಾನದಿಂದ ಪ್ರೇರಿತರಾಗಿ ಈ ಮಾತನ್ನು ಹೇಳುವುದಕ್ಕೆ ದಯಮಾಡಿಸಿದ್ದೀರಿ. ಇದನ್ನು ನಾನು ಬಲ್ಲೆ. ಮುಸಲ್ಮಾನ ಒಬ್ಬ ಇಷ್ಟು ಒಳ್ಳೆಯ ಸ್ಥಿತಿಗೆ ಬಂದಿದ್ದಾನೆ ಎನ್ನುವುದು ತಮಗೆ ಆಹ್ಲಾದವನ್ನುಂಟುಮಾಡಿದೆ. ಅವನು ಮತ್ತಷ್ಟು ದೊಡ್ಡವನಾಗಲಿ, ಇಸ್ಲಾಂ ಧರ್ಮ ಇನ್ನಷ್ಟು ಪ್ರಬಲವಾಗಲಿ, ಎನ್ನುವುದು ತಮ್ಮ ಯೋಚನೆ. ಇದು ಸಹಜ. ದೇಶದ ಮುಸ್ಲಿಂ ಜನ ತಮ್ಮಂತೆ ಬಯಸುತ್ತಾರೆ ಎನ್ನುತ್ತಿದೀರಿ. ಅದೂ ಸಹಜವೆ. ತಮ್ಮಂಥ ಹಿರಿಯರು ಮಸೀದಿಗಳಲ್ಲಿ ಸಭೆಗಳಲ್ಲಿ ಇಂಥ ಮಾತನ್ನು ಹೇಳಿದರೆ ಯಾವ ಮುಸ್ಲಿಂ ಒಪ್ಪಲಾರ? ತಮ್ಮ ಇಚ್ಛೆ ಎಲ್ಲ ಮುಸ್ಲಿಮರ ಇಚ್ಛೆ ಆಗುವುದು ನಿಜ. ಆದರೆ ತಮಗೆ ಸರಿಯಾಗಿ ಕಂಡಮಾತ್ರಕ್ಕೆ ಈ ಸಲಹೆ ನನಗೆ ಸರಿಯೆಂದು ಕಾಣಬೇಕೆಂದು ತಿಳಿಯಬೇಡಿರಿ. ಇದರಲ್ಲಿ ಎರಡು ಮಾತಿದೆ. ಒಬ್ಬ ಮಹಮ್ಮದೀಯ ಒಂದು ಸ್ಥಾನ ಪಡೆದಿದ್ದಾನೆ ಎನ್ನುವುದು ಒಂದು. ಆದರೆ ಅದನ್ನು ನಾನು ಪಡೆದದ್ದು ಬರಿಯ ಮಹಮ್ಮದೀಯರ ಸಹಾಯದಿಂದ ಅಲ್ಲ; ಅಥವಾ ಮಹಮ್ಮದೀಯರ ಪರವಾಗಿ ವಕೀಲನಾಗಿ ನಡೆದು ಅಲ್ಲ. ಬೇರೆಯಾವುದೇ ಜಾತಿಯ ಒಬ್ಬ ಮನುಷ್ಯನಂತೆ ನಾನೂ ಬಂದೆನು. ದೇವರ ಕೃಪೆಯಿಂದ ದೊಡ್ಡ ಸ್ಥಾನವನ್ನು ಗಳಿಸಿದ್ದೇನೆ. ಇದರಲ್ಲಿ ನನಗೆ ಹಿಂದುಗಳೇ ಸಹಾಯ ಮಾಡಿದ್ದಾರೆ. ತಮ್ಮ ಮತದ ವಿರೋಧಿ ಎಂದು ಭಾವಿಸಿದ್ದರೆ ಅವರು ನನಗೆ ನೆರವಾಗುತ್ತ ಇರಲಿಲ್ಲ. ನಾನು ಅವರಂತೆಯೆ ಇಬ್ಬರಿಗೂ ಸೇರಿದ ಒಂದು ಕಾರ್ಯದಲ್ಲಿ ದಕ್ಷನಾಗಿದ್ದೇನೆಂದು ಅವರು ಸಹಾಯಮಾಡಿದರು. ಅವರ ಸಹಾಯದಿಂದ ದೊಡ್ಡವನಾಗಿ ಈಗ ಅವರ ವಿರೋಧಿ ಎಂದು ನಾನು ನಡೆಯಲಾರೆ. ಇದರ ಜೊತೆಯ ಮಾತು ಇನ್ನೊಂದು ನಮ ಪ್ರಭುಗಳನ್ನು ಕುರಿತದ್ದು. ಈವರೆಗೂ ಅವರು ನಮಗೆ ಪ್ರಭುಗಳಾಗಿ ಇದ್ದಿದಾರೆ. ಒಬ್ಬ ಮುಸ್ಲಿಂ ದೊಡ್ಡವನಾದೊಡನೆಯೆ ಅವರ ಪ್ರಭುತ್ವ ಅಳಿಸೀತೆ? ಅಲ್ಲದೆ ನೋಡಿರಿ, ಅದು ಹಾಗೆ ಅಳಿಸುವುದಾದರೂ ನಾನು ಅವರನ್ನು ಚಿಕ್ಕವರನ್ನಾಗಿ ಮಾಡಿ ಅವರ ದೊಡ್ಡತನವನ್ನು ಹೊತ್ತುಕೊಳ್ಳುವವನಲ್ಲ. ಉಳಿದ ಹಿಂದುಗಳು ಸುಮ್ಮನೆ ಸಹಾಯಮಾಡಿದರೆ

ಮಹಾಸ್ವಾಮಿಗಳು ನನಗೆ ಅನ್ನಹಾಕಿಸಿದ್ದಾರೆ. ನಾನು ಅರಮನೆಯಲ್ಲಿ ಉಪ್ಪು ತಿಂದಿದೇನೆ; ಜೊತೆಗೆ ತುಂಬ ವಾತ್ಸಲ್ಯವನ್ನು ಉಂಡಿದೇನೆ. ದೊರೆಗಳು ನನ್ನನ್ನು ತಮ್ಮ ಮಗನಂತೆ ನಂಬಿದ್ದಾರೆ. ಅವರ ಉಪ್ಪು ಈ ಮೈಯಲ್ಲಿ ಸೇರಿ, ಇಕೊ ನೋಡಿ, ಈಗ ಈ ಕೈಯಲ್ಲಿ ಸ್ವಲ್ಪ ಬೆವರು ಕಾಣುತ್ತದೆಯಲ್ಲ, ಆ ತೇವಕ್ಕೆ ಕಾರಣವಾಗಿದೆ. ಅದನ್ನು ಮರೆತ ದಿನ ನಾನು ಮುಸ್ಲಿಂ ಅಲ್ಲ ಅಲ್ಲ, ಮನುಷ್ಯನೆ ಅಲ್ಲ. ನಾಯಿ ಆದೇನು! ನಮಕ್‌ಹರಾಂ ಎಂಬ ಶಬ್ದ ತಾವೇ ಹೇಳತಕ್ಕದಲ್ಲವೆ, ಸಾಹೇಬರೆ?"

ಮೌಲ್ವಿ ಉತ್ತರ ಕೊಡಬೇಕೆಂದು ಹೈದರ್ ಕ್ಷಣ ತಡೆದನು. ಆತನು ಸಪ್ಪೆಯ ಮುಖದಿಂದ, "ಓಹೊ, ಹೌದು," ಎಂದನು. ಹೈದರ್ ಮಾತನ್ನು ಮುಂದರಿಸಿದನು.

"ನಮಕ್‌ಹರಾಂ ಎನ್ನುತ್ತೀರಲ್ಲ, ಹಾಗೆಂದರೆ ಏನು, ಎಂದು ಕೇಳಿದರೆ ಮುಂದಿನ ಕಾಲದ ಜನ ಹೈದರಾಲಿ ಮಾಡಿದ್ದು ಎಂದು ಉತ್ತರ ಕೊಟ್ಟಾರು. ನಮಕ್‌ಹರಾಮಿಗೆ ನಾನು ನಿದರ್ಶನ ಆಗಲಾರೆ. ಇದನ್ನು ತಾವು ಕೊನೆಯ ಮಾತಾಗಿ ನಿಶ್ಚಯವಾಗಿ ತಿಳಿದುಕೊಂಡು ಬಿಡಬೇಕು. ಮುಂದಿನ ಜನ್ಮ ಒಂದಿದ್ದರೆ ನಾನು ರಾಜನಾಗಬಹುದು. ನಾನೇ ಕಾಣೆ. ಆದರೆ ನಮ್ಮ ಪ್ರಭುಗಳ ಉಪ್ಪಿನ ರುಚಿಯನ್ನು ನೋಡಿದ ಈ ಮೈಯಿಂದ ಆವರ ದೊರೆತನವನ್ನು ಕಸಿದುಕೊಳ್ಳಲಾರೆ."

ಮೌಲ್ವಿಗಳು ಸೋಲು ಮುಖದಿಂದ ತಲೆ ತಗ್ಗಿಸಿ ಕುಳಿತರು. ಅವರ ಮುಂದಾಳು ಕ್ಷಣ ಬಿಟ್ಟು ಟಿಪ್ಪುವಿನ ಕಡೆ ನೋಡಿದನು. ಮತ್ತೆ ಹೈದರನ ಕಡೆಗೆ ಮುಖಮಾಡಿ, "ನವಾಬ್ ಸಾಹೇಬರೆ, ತಾವು ಇಸ್ಲಾಂ ಧರ್ಮಕ್ಕೆ ಒಂದು ವಜ್ರದ ಮಣಿಯಂತೆ ಭೂಷಣವಾದ್ದೀರಿ. ನಿಮ್ಮನ್ನು ನಮಕ್‌ಹರಾಮಿಕೆಗೆ ಪ್ರೇರಿಸುವುದಕ್ಕೆಂದು ನಾವು ಬರಲಿಲ್ಲ. ಧರ್ಮದ ಸೇವೆಗಾಗಿ, ರಾಜ್ಯದ ಆಡಳಿತವನ್ನು ನಿಮ್ಮದಾಗಿ ಮಾಡಿ ಕೊಳ್ಳಿರಿ ಎಂದೆವು. ದೇವರಿಗೆ ಸೇವೆ ಮಾಡುವುದಕ್ಕೆ ಮನುಷ್ಯ ಸಂಬಂಧ ವನ್ನು ಮರೆಯುವುದು ಕೆಲವು ವೇಳೆ ಆವಶ್ಯಕ. ನಮ್ಮ ಪ್ರಾರ್ಥನೆಯನ್ನು ತಾವು ತೀರಾ ನಿರಾಕರಿಸಿದರೆ ಇಸ್ಲಾಂ ಧರ್ಮಕ್ಕೆ ಆಶ್ರಯವಾಗಬೇಕಾದ ಈ ದೇಶ ಕಾಫಿರ್ ಮತದ ಆಶ್ರಯವಾಗಿ ಇದ್ದುಬಿಡುತ್ತದೆ. ಕಷ್ಟಪಟ್ಟು

ಕಟ್ಟಿದ ಮಸೀತಿ ಕಟ್ಟಡದಲ್ಲಿ ವಿಗ್ರಹವನ್ನು ನಿಲ್ಲಿಸಿ ಪೂಜೆ ಮಾಡಿದರೆ ಹೇಗೊ ಹಾಗೆ ತಾವು ಕೈಗೆ ತೆಗೆದುಕೊಂಡಿರುವ ಆಡಳಿತದಲ್ಲಿ ಕುಧರ್ಮ ಮುಂದಾಗಿರುತ್ತದೆ. ತಮ್ಮ ಶ್ರಮವೆಲ್ಲ ವ್ಯರ್ಥವಾಗುತ್ತದೆ," ಎಂದನು.

"ನನ್ನ ಶ್ರಮ ವ್ಯರ್ಥವಾಗುತ್ತದೆಂದು ವ್ಯಥೆಬೇಡಿರಿ. ನಾನು ಏನನ್ನು ಬಯಸಿದ್ದೇನೆಯೊ ಅದನ್ನು ಮಾಡುತ್ತಿದೇನೆ. ನಿಮ್ಮ ಬಯಕೆ ಬೇರೆ; ಅದನ್ನು ನೀವು ನಡಸಿಕೊಳ್ಳಬೇಕು. ನಿಮ್ಮಂತೆ ನಿಮ್ಮ ಚೇಲ ನಮ್ಮ ಕುಮಾರರೂ ಯೋಚಿಸುತ್ತಿದಾರೆ. ನಿಮ್ಮ ಇಷ್ಟದಂತೆ ನೀವು ನಡೆದುಕೊಳ್ಳಬಹುದು. ಅರಮನೆಯ ಉಪ್ಪು ತಿಂದೆ ಎಂದು ನಾನು ಸಂಕೋಚಪಡುತ್ತೇನೆ. ಆ ಸಂಕೋಚವಿಲ್ಲದ ನಮ್ಮ ಮಕ್ಕಳು ಅವರಿಷ್ಟ ದಂತೆ ನಡೆಯಲಿ." (ಮಗನ ಕಡೆಗೆ ತಿರುಗಿ), "ತಿಳಿಯಿತೆ ನವಾಬ್ಜಾದ್? ಧರ್ಮದ ಸೇವೆಯೆಂದು ನಿಮಗೆ ತೋರುವುದನ್ನು ನೀವು ಬೇಕಾದರೆ ಮಾಡಿರಿ. ನಾನು ಅದರ ಗೋಜಿಗೆ ಬರುವುದಿಲ್ಲ. ಆದರೆ ಅದಕ್ಕೆ ನನ್ನನ್ನು ಎಳೆದು ಹಾಕಿಕೊಳ್ಳಲು ಪ್ರಯತ್ನಮಾಡಬೇಡಿರಿ. ಒಂದು ಎಚ್ಚರದ ಮಾತನ್ನು ಹೇಳುತ್ತೇನೆ; ಅದನ್ನು ಜ್ಞಾಪಕ ಇಟ್ಟುಕೊಳ್ಳಿರಿ. ಆತುರ ಪಟ್ಟರೆ ಒಳ್ಳೆಯದಾಗುತ್ತದೆ ಎಂದು ತಿಳಿಯಬೇಡಿರಿ. ಯಾರ ಮನಸ್ಸು ಎಷ್ಟು ಕೆಡಬಹುದೊ, ಯಾರು ಯಾರು ನಮಗೆ ವಿರೋಧಿಗಳಾಗ ಬಹುದೊ, ಅದನ್ನೂ ಯೋಚನೆ ಮಾಡಿರಿ. ಕೋಟೆಯ ಬಾಗಿಲ ಆ ಹನುಮಣ್ಣ ಎಂತಾರಲ್ಲ, ಅವರ ಕಥೆಯನ್ನು ಕೇಳಿದ್ದೀರೊ? ಹನುಮಣ್ಣ ಹಕ್ಕಿಯಂತೆ ಹಾರಬಲ್ಲನಂತೆ; ಸೂರ್ಯನ್ನ ಹಿಡೀತೇನೇ ಅಂತ ಹಾರಿ ಕೆಳಗೆ ಬಿದ್ದು ತೋಳು ಮುರಿದುಕೊಂಡನಂತೆ. ಹಾಗೆ ಮಾಡ ಬೇಡಿ; ದುಡುಕಿ ನಡೆದು ನನ್ನ ಶ್ರಮವನ್ನು ವ್ಯರ್ಥಮಾಡಬೇಡಿ."

ಹೀಗೆಂದು ಹೈದರ್ ಇನ್ನು ಮಾತಿಗೆ ಹೊತ್ತಿಲ್ಲ ಎಂದು ಮುಖ ಭಂಗಿಯಿಂದ ಸ್ಪಷ್ಟಪಡಿಸಿದನು. ಮೌಲ್ವಿಗಳು ಎದ್ದು ಅವನಿಗೆ ವಂದನೆ ಮಾಡಿ ಹೊರಕ್ಕೆ ಹೊರಟರು. ಟಿಪ್ಪು ಅವರ ಜೊತೆಯಲ್ಲಿ ಹೋದನು.

## ೫೯

ಈ ಮಾತು ನಡೆದ ಮೂರನೆಯ ದಿನ ಹೈದರ್ ಪಟ್ಟಣಕ್ಕೆ ಹೋದನು. ಅವನ ಕಾಗದ ಆ ಮೊದಲೆ ಬಂದು ಮೊಕದಂ ಆಲಿಗೆ ತುಂಬ ಆಶ್ಚರ್ಯ ಆಗಿದ್ದಿತು. ಅಂತೂ ಅವನು ರಾಜ ರಾಜಮಾತೆಯರ ಅಪ್ಪಣೆಯಂತೆ ಎಲ್ಲ ಏರ್ಪಾಡನ್ನೂ ಮಾಡುವುದಾಗಿ ಅರಮನೆಯಲ್ಲಿ ತಿಳಿಸಿದ್ದನು. ನವಾಬನು ಈ ಪ್ರಯಾಣಗಳನ್ನೆಲ್ಲ ಸವಾರಿಯಿಂದ ಬಹು ಬೇಗ ಮಾಡುವನು. ದಿನಕ್ಕೆ ನಲವತ್ತು ಮೈಲಿ ದಾರಿ ಮುಗಿಸುವುದು ಅವನಿಗೆ ತೀರ ವಾಡಿಕೆ. ಪಟ್ಟಣದಲ್ಲಿ ಯಾರಿಗಾಗಲಿ ಅವನು ಬಂದ ನೆನ್ನುವುದು ಬಂದಮೇಲೆಯೆ ಗೊತ್ತು. ಹೈದರನ ಪ್ರಭಾವ ಹೇಗೆ ಇದ್ದಿ ತೆಂದರೆ ನಲವತ್ತು ಮೈಲಿಯ ಸವಾರಿಯನ್ನು ಮುಗಿಸಿ ಅವನು ಕೋಟೆಯ ಬಾಗಿಲಲ್ಲಿ ಕಾಣಿಸಿಕೊಂಡನೆಂದರೆ ತಟ್ಟನೆ ಕೋಟೆ ಕೋಟೆಯೆ ಎಚ್ಚೆ ತ್ತಂತೆ ಕಾಣುವುದು. ಕೋಟೆಯನ್ನು ಹೊಗುವಾಗಲೆ ಕಾವಲ ಮನುಷ್ಯರ ವಂದನೆಯನ್ನು ಸ್ವೀಕರಿಸುವ ಕ್ಷಣದಲ್ಲಿಯೆ ಅವನು ಕೋಟೆಯ ವ್ಯವ ಹಾರವೆಲ್ಲ ಸರಿಯಾಗಿದೆ ಎನ್ನುವುದನ್ನು ಎರಡು ಮಾತಿನಿಂದ ತಿಳಿದು ಕೊಂಡು ತನ್ನ ಬಿಡಾರಕ್ಕೆ ಹೋಗುವ ಮೊದಲು ಮೊಕದಂ ಆಲಿ ತನ್ನ ಬಳಿ ಬರಬೇಕೆಂದೂ, ತಾನು ಬಂದಿರುವ ಸುದ್ದಿ ಅರಮನೆಗೆ ಮುಟ್ಟ ಬೇಕೆಂದೂ, ಆಜ್ಞೆಮಾಡಿದನು. ಬಿಡಾರವನ್ನು ಮುಟ್ಟಿ ಕೈಕಾಲು ತೊಳೆದು ಕೊಂಡು ಬೇರೆ ವಸ್ತ್ರವನ್ನು ಹಾಕಿಕೊಂಡು ತನ್ನ ಬೈಠಕ್ ಖಾನೆಯಲ್ಲಿ ಕುಳಿತುಕೊಂಡನು.

ಆ ವೇಳೆಗೆ ಮೊಕದಂ ಆಲಿ ಬಂದನು. ಹೈದರ್ ಅವನನ್ನು "ವೆಚ್ಚದ ವಿಷಯ ನಾನು ಕಳುಹಿಸಿದ ಉತ್ತರವನ್ನು ಪ್ರಭುಗಳಿಗೆ ತಿಳಿಸಿ ದಿರಾ ?" ಎಂದು ಕೇಳಿದನು.

ಮೊಕದಂ: ಇಲ್ಲ ಜನಾಬ್. ನಾನು ಅಪ್ಪಣೆ ಕೇಳಿದೆ. ತಾವು ಅಪ್ಪಣೆ ಕೊಟ್ಟರಿ. ಇದನ್ನು ಅರಮನೆಗೆ ತಿಳಿಸಬೇಕೆಂದು ನನಗೆ ತೋರಲಿಲ್ಲ. ಹುಜೂರ್ ಯಾವುದೊ ಏರ್ಪಾಡು ಮಾಡು ಎಂದರು.

ಎರಡು ದಿನ ತಡೆದು, ಮಾಡುತ್ತೇನೆ, ಮಹಾಸ್ವಾಮಿ, ಎಂದೆ. ಮಧ್ಯೆ ನಡೆದ ಪತ್ರವ್ಯವಹಾರ ಅವರಿಗೆ ಗೊತ್ತಿಲ್ಲ.

ಹೈದರ್ (ತುಂಬ ಮೆಚ್ಚಿಕೆಯಿಂದ) : ನೀವು ನಿಜವಾಗಿ ಮೊಕದಂ. ನನ್ನ ಇತರ ಸುಬೇದಾರರು ನಿಮ್ಮಂತೆ ಬುದ್ಧಿವಂತರಾದರೆ ನನ್ನ ಕೆಲಸ ಬಹು ಸುಲಭ ಆದೀತು.

ಮೊಕದಂ: ತಮ್ಮ ಸಂತೋಷ ಜನಾಬ್.

"ಪ್ರಭುಗಳೂ ಮಹಾತಾಯಿಯವರೂ ನನಗೆ ಈಗ ದರ್ಶನ ಕೊಡುವುದು ಸಾಧ್ಯವೆ? ಕೇಳಿ ಬನ್ನಿ."

"ಅದನ್ನು ಕೇಳಿಯೇ ಬಂದೆ ಜನಾಬ್. ಪ್ರಯಾಣದ ಶ್ರಮ ತೀರಿಸಿಕೊಂಡು ಜನಾಬ್ ಯಾವಾಗ ಬಂದರೂ ಸಂತೋಷ ಎಂದು ಹುಜೂರ್ ಅಪ್ಪಣೆ ಮಾಡಿದರು."

"ನಮ್ಮ ಶ್ರಮದ ಮಾತೇನು? ಈ ಕೆಲಸ ನಡೆಯಬೇಕಲ್ಲ. ಈಗ ಹೋಗಿ ಕಂಡು ಬರುತ್ತೇನೆ. ಉಳಿದ ಮಾತೇನೂ ಇಲ್ಲವಷ್ಟೆ?"

"ಏನೂ ಇಲ್ಲ ಜನಾಬ್. ಸೈನ್ಯವೆಲ್ಲ ಸಮಾಧಾನವಾಗಿದೆ. ನಮಗೆ ತಿಳಿಯದ ಯಾರೇ ಆಗಲಿ ಬಂದು ಯಾರನ್ನೂ ಯಾವ ಮಾತೂ ಆಡಿಸುತ್ತಿಲ್ಲ. ಮುಖ್ಯವಾದ ಕಾವಲಿಗೆಲ್ಲ ಮುಸ್ಲಿಮರನ್ನು ಇರಿಸಿದ್ದೇನೆ. ಅರಮನೆಯಲ್ಲಿ ಜನಾಬ್‌ಗೆ ವಿರೋಧವಾಗಿ ಯಾರೂ ಯಾವ ಮಾತೂ ಆಡುತ್ತಿಲ್ಲ. ಇದು ಯಾರೊ ಹೊಸ ಜನ ಬರುತ್ತಾರೆ ಎನ್ನುವುದು ಒಂದು ಹೊರತಾಗಿ ಇನ್ನು ಯಾವುದೂ ಶಂಕೆಗೆ ಕಾರಣ ಇಲ್ಲ."

"ಒಳ್ಳೆಯದು."

ಹೀಗೆಂದು ಹೈದರ್ ಅಲ್ಲಿಂದ ಎದ್ದನು. ಮೊಕದಂ ದಾರಿ ಕೊಟ್ಟು ಅವನ ಹಿಂದೆಯೆ ನಡೆದನು. ಇವರು ಬಾಗಿಲ ಹತ್ತಿರ ಬರುವ ವೇಳೆಗೆ ಬರ್ಕಿಯವರ ಮನೆಯ ಮನೆವಾರ್ತೆ ಎದುರಿಗೆ ಕಾಣಿಸಿಕೊಂಡು ಬಾಗಿ ಕೈನೀಡಿ ಸಲಾಂ ಮಾಡಿ, "ಜನಾಬ್ ದಯಮಾಡಿರುವುದು ತಿಳಿದು ಚಿಕ್ಕರಾಯರು ಕಾಣುವುದಕ್ಕೆ ಬರಬಹುದೆ ಎಂತ ಕೇಳತಾರೆ," ಎಂದನು.

ಹೈದರ್, "ನಾವು ಈಗ ಪ್ರಭುಗಳ ನಜರಿಗಾಗಿ ಹೋಗುತ್ತಿದೇವೆ. ಅದಾಗಿ ಬಂದಾಗ ರಾಯರನ್ನು ಕಂಡೇವು. ಮನೇಲಿ ಎಲ್ಲರೂ ಸೌಖ್ಯ ವಾಗಿದ್ದಾರೊ?" ಎಂದು ಕೇಳಿದನು.

ಮನೆವಾರ್ತೆ, "ದೇವರ ಕೃಪೆಯಿಂದ ಎಲ್ಲ ಸೌಖ್ಯ ಜನಾಬ್," ಎಂದನು.

## ೬೦

ಹೈದರ್ ಅರಮನೆಗೆ ಮುಟ್ಟುವ ವೇಳೆಗೆ ಸಮ್ಮುಖದ ಸೇವಕ ನೊಬ್ಬ ಬಾಗಿಲಲ್ಲಿ ಕಾದಿದ್ದು ಅವನಿಗೆ ಕೈಮುಗಿದು, "ಪ್ರಭುಗಳು ಓಲಗ ಸಾಲೆಯಲ್ಲಿ ಕಾದಿದ್ದಾರೆ," ಎಂದನು; ಯಾವ ಉತ್ತರವನ್ನೂ ನಿರೀಕ್ಷಿಸದೆ ಮರ್ಯಾದೆಯ ಕೋಲೊಂದನ್ನು ಹಿಡಿದು ಇವನಿಗೆ ದಾರಿ ತೋರುತ್ತ ಮುಂದೆ ನಡೆದನು.

ಅರಸರು ಸಾಲೆಯ ಒಂದು ಪಕ್ಕದಲ್ಲಿ ಒಂದು ಎತ್ತರದ ಪೀಠದಲ್ಲಿ ಕುಳಿತಿದ್ದರು. ಹೈದರ್ ದೂರದಿಂದಲೇ ಅವರಿಗೆ ದೃಷ್ಟಿಯನ್ನು ಕೊಟ್ಟು ಬಾಗಿ ಮೂರು ನಾಲ್ಕು ಸಲ ಸಲಾಮು ಮಾಡಿದನು. ಪ್ರಭುಗಳು ಪ್ರೀತಿ ಯಿಂದ ಮುಸಿ ನಕ್ಕರು; "ಬಾ ನವಾಬ್. ಈಗ ತಾನೆ ಬಂದೆಯಂತೆ?" ಎಂದರು.

ಹೈದರ್, "ಹೌದು ಹುಜೂರ್," ಎಂದನು; ಅವರು ತೋರಿಸಿದ ಸ್ಥಳದಲ್ಲಿ ಕುಳಿತನು. ಕೋಲುಕಾರನಿಗೆ, "ಬಾಗಿಲಲ್ಲಿ ಇರು," ಎಂದು ಹೇಳಿದನು. ಅವನು, "ಅಪ್ಪಣೆ ಜನಾಬ್," ಎಂದು ಬಾಗಿ ಪ್ರಭುಗಳಿಗೆ ಸಲಾಂ ಮಾಡಿ, ಬಾಗಿಲ ಬಳಿ ಹೋಗಿ ನಿಂತನು. ಕ್ಷಣದಲ್ಲಿ ಓಲಗ ಸಾಲೆಯ ಒಳ ಬಾಗಿಲ ಕಡೆಯಿಂದ ರಾಜಮಾತೆ ಬಂದಳು. ಹೈದರ್ ಬೆಚ್ಚಿದಂತೆ ಎದ್ದುನಿಂತನು; ನೆಲಕ್ಕೆ ಬಾಗಿ ನಾಲ್ಕೈದು ಸಲ ಸಲಾಮು ಮಾಡಿದನು. ರಾಜಮಾತೆ, "ಕುಳಿತುಕೊ," ಎಂದು ಹೇಳಿದ ಮೇಲೆ ಅವರು ಕುಳ್ಳಿರುವವರೆಗೆ ಕಾದು ಆಮೇಲೆ ತಾನು ಕುಳಿತನು.

ರಾಜಮಾತೆ, "ಸೌಖ್ಯವಾಗಿದ್ದೀಯಾ ನವಾಬ್?" ಎಂದು ಕೇಳಿದಳು.

ಹೈದರ್ : ದೇವರ ಕೃಪೆ, ಹುಜೂರ್.

ರಾಜಮಾತೆ, "ಈಸಲದ ನವರಾತ್ರಿ ಉತ್ಸವಕ್ಕೆ ನೀನು ಅವಶ್ಯವಾಗಿ ಇಲ್ಲಿ ಇರಬೇಕು ಎಂದು ಹುಜೂರ್ ಅಪೇಕ್ಷಿಸುತ್ತಾರೆ. ಉತ್ಸವಕ್ಕೆ ಕೆಲವು ಜನ ದೊಡ್ಡವರನ್ನು ಬರಮಾಡಿಕೊಳ್ಳುವ ಯೋಚನೆ ಮಾಡಿದ್ದೇವೆ. ಈ ವರ್ಷ ಸ್ವಲ್ಪ ಹೆಚ್ಚಿನ ಖರ್ಚು ಆಗುತ್ತದೆ ಎಂದು ಭಕ್ಷಿಸಾಹೇಬರಿಗೆ ತಿಳಿಸಿದೆವು. ಅವರು ಆಗಲಿ ಎಂದು ಹೇಳಿದರು. ನಿನಗೆ ಕಾಗದ ಬರೆದು ಅಪ್ಪಣೆ ಪಡೆದರು ಎಂತ ಕಾಣುತ್ತದೆ. ನೀನು ಉತ್ಸವದ ಕಾಲದಲ್ಲಿ ಇಲ್ಲಿ ಇದ್ದು ನಿನ್ನ ಹುಜೂರವರ ಸಂತೋಷವನ್ನು ನಡಸಿ ಸಂತೋಷ ಪಡಬೇಕು," ಎಂದಳು.

ಹೈದರ್ : ಹೌದು, ಹುಜೂರ್. ಭಕ್ಷಿ ಈ ವೆಚ್ಚದ ಮಾತು ನನ್ನನ್ನು ಕೇಳಿದ. ನಾನು ಪ್ರಭುಗಳು ಅಪ್ಪಣೆ ಮಾಡಿದಂತೆ ನಡಸು ಎಂದು ಉತ್ತರ ಕೊಟ್ಟೆ. ಭಕ್ಷಿ ಇದನ್ನು ಕೇಳಬೇಕಾದ ಕಾರಣ ಇರಲಿಲ್ಲ. ಆದರೆ ಅರಮನೆಯ ಲೆಕ್ಕದಲ್ಲಿ ಈಗಾಗಲೆ ಸಾಲವಾಗಿದೆ. ಮತ್ತಷ್ಟು ಸಾಲವಾಗುತ್ತಲ್ಲ, ಎಂದು ಅವನು ನನಗೆ ತಿಳಿಸಬೇಕಾಗಿ ಬಂದಿತು.

ರಾಜಮಾತೆ: ವೆಚ್ಚ ಹೆಚ್ಚಾಯಿತು ಎಂಬ ಮಾತು ನಮಗೆ ತಿಳಿದಿರಲಿಲ್ಲ. ಆದರೆ ಇದರ ಲೆಕ್ಕ ನಾಲ್ಕು ವರ್ಷದ ಹಿಂದೆ ನಿಗದಿ ಮಾಡಿದ್ದೆವು. ಈಚೆಗೆ ವರಮಾನ ಹೆಚ್ಚಾಗಿದೆಯಲ್ಲ, ಆದ್ದರಿಂದ ಅರಮನೆಯ ಪೂಜೆ ಪುರಸ್ಕಾರಗಳಿಗೆ ಇನ್ನಷ್ಟು ನಿಗದಿ ಮಾಡುವುದು ಸರಿ, ಎಂದು ಹುಜೂರ್ ಈಸಲ ಅಪ್ಪಣೆ ಮಾಡಿದರು.

ಹೈದರ್ : ಹುಜೂರ್ ಯಾವ ಅಪ್ಪಣೆ ಮಾಡಿದರೂ ನಾನು ತಲೆ ಮೇಲೆ ಹೊತ್ತು ನಡಸುತ್ತೇನೆ. ಆದರೆ ಮೊದಲು ಕಷ್ಟಸುಖ ಏನು ಎಂದು ನನ್ನನ್ನು ಒಂದುಸಲ ಕೇಳಿಬಿಟ್ಟರೆ ನನ್ನ ಈ ಹೊರೆ ಸುಲಭವಾಗುತ್ತದೆ. ವರಮಾನ ಹೆಚ್ಚಾಗಿದೆ ನಿಜ. ಜೊತೆಗೆ ವೆಚ್ಚವೂ ಹೆಚ್ಚಾಗಿದೆ. ಸೈನ್ಯವನ್ನು ಹೆಚ್ಚಿಸಿದೆ; ಎಲ್ಲರಿಗೂ ಬಡತಿ ಕ್ಕೊಟ್ಟಿದೆ; ಧಾನ್ಯ ಶೇಖರಿಸಿ ಇದೆ; ಹತ್ತು ಕಡೆಗೆ ಕಾವಲುಗಳನ್ನು ನಿಲ್ಲಿಸಿರುವುದಾಗಿದೆ. ಎಲ್ಲವೂ ರಾಜ್ಯದ ಕ್ಷೇಮಕ್ಕಾಗಿ ಅವಶ್ಯಕವಾದ ವೆಚ್ಚ. ಅದನ್ನೆಲ್ಲ ಮಾಡಿ ಕಾಸು ಉಳಿಸಿದರೆ ಹುಜೂರ್ ಅವರ ಸೇವೆಗೆ ಸಿದ್ಧವಾಗಿಯೆ ಇದೆ.

ರಾಜ: ವರಮಾನ ಹೆಚ್ಚಿದ್ದೆಷ್ಟು, ವೆಚ್ಚ ಹೆಚ್ಚಿದ್ದೆಷ್ಟು, ನಮಗೆ ಸ್ವಲ್ಪ ತಿಳಿಸಪ್ಪ.

ಹೈದರ್: ಅಪ್ಪಣೆ ಹುಜೂರ್. ತಮಗೆ ಇದರ ಆಯಾಸಬೇಡ ಎಂದೇ ನನಗೆ ಸರ್ವಾಧಿಕಾರ ವಹಿಸಿಕೊಡೋಣಾಯಿತು. ಈಗ ಅದನ್ನು ಹಿಂದಕ್ಕೆ ತೆಗೆದುಕೊಂಡು ಸನ್ನಿಧಾನವೇ ವ್ಯವಹಾರವನ್ನೆಲ್ಲ ನೋಡಿ ಕೊಳ್ಳುವುದಾದರೂ ನನಗೆ ಸಂತೋಷವೇ; ಅಥವಾ ಬೇರೆಯವರನ್ನು ಸರ್ವಾಧಿಕಾರಕ್ಕೆ ನೇಮಿಸಿದರೂ ಸಂತೋಷವೆ. ಇದನ್ನು ನಾನು ಬಯಸ ಲಿಲ್ಲ. ಹಿಂದಿನ ಸರ್ವಾಧಿಕಾರಿಗಳು ಸನ್ನಿಧಾನದ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ಅರಮನೆಯ ವ್ಯವಹಾರ, ರಾಜ್ಯದ ವ್ಯವಹಾರ, ಎರಡೂ ಹದಕೆಟ್ಟಿತ್ತು. ಇದನ್ನು ಸರಿಪಡಿಸುವ ಕಷ್ಟ ನನಗೆ ಬೇಡ ಎಂದು ನಾನು ಭಯಪಟ್ಟೆ. ಹುಜೂರ್ ಸನ್ನಿಧಾನವೇ ಬಲ ವಂತಮಾಡಿ ಈ ಕೆಲಸವನ್ನು ಹಚ್ಚೋಣವಾಯಿತು. ಮೂರು ವರ್ಷ ಇದನ್ನು ಮಾಡಿದೇನೆ. ಮಾಡಿ ಸೋತಿದೇನೆ. ಈಗ ಈ ಭಾರವನ್ನು ನನ್ನ ಬೆನ್ನಿಂದ ಇಳಿಸಿದರೆ ತುಂಬ ಕೃತಜ್ಞನಾಗುತ್ತೇನೆ.

ರಾಜಮಾತೆ: ವಿವರ ಒಂದೆರಡು ಮಾತು ತಿಳಿಯಬೇಕು ಎಂದು ಹುಜೂರ್ ಅಪ್ಪಣೆ ಕೊಡಿಸಿದರು ನವಾಬ್. ಸರ್ವಾಧಿಕಾರ ನಿನಗಲ್ಲದೆ ಇನ್ನಯಾರಿಗೆ ಕೊಡುವುದು? ನಿನ್ನಂಥ ದಕ್ಷರು ರಾಜ್ಯದಲ್ಲಿ ಬೇರೆ ಯಾರಿದ್ದಾರೆ?

ಹೈದರ್: ನಾನು ಏತರ ದಕ್ಷ, ಮಹಾತಾಯಿ? ಪ್ರಭುಗಳ ಐದು ಹೊನ್ನಿಗೆ ಸೇವಕನಾಗಿ ಬಂದ ಒಬ್ಬ ಬಡವ. ದಕ್ಷನೇ ಆಗಿದ್ದಲ್ಲಿ ಅದು ನಿಮ್ಮ ಅನ್ನದ ಪ್ರಭಾವ. ಆದರೆ ಈ ಸರ್ವಾಧಿಕಾರವನ್ನು ಕಟ್ಟಿಕೊಂಡು ನಿಮ್ಮ ಹತ್ತಿರ ಕೆಟ್ಟವನಾಗುವುದಕ್ಕೆ ನಾನು ಕಬೂಲಿಲ್ಲ. ಇಂಥ ವೆಚ್ಚದ ಮಾತು ಬಂದಾಗ ಕೆಟ್ಟವನಾಗದೆ ತಪ್ಪಿಸಿಕೊಳ್ಳುವಹಾಗಿಲ್ಲ.

ರಾಜಮಾತೆ: ಕೆಟ್ಟವನಾಗುತ್ತಿ ಏನು? ರಾಜ್ಯದ ಕಷ್ಟಸುಖ ನೀನು ಹೇಳಬೇಕು, ಪ್ರಭುಗಳು ಕೇಳಬೇಕು. ಸಂಗತಿ ಹೀಗೆ ಅಂತ ಅರಿಕೆ ಮಾಡಿದರೆ ಕೆಟ್ಟವ ಅಂತ ಯಾಕೆ ಹೇಳುತಾರೆ?

ಹೈದರ್: ಈಗ ನೋಡಿ, ಮಹಾತಾಯಿ; ಹೆತ್ತು ಕಡೆಯಿಂದ ಸೇರಿಸಿದ ಕಾಸನ್ನ ಎಷ್ಟೋ ಅಷ್ಟು ಉಳಿಸಿಕೊಂಡು ಎಲ್ಲ ಸೈನ್ಯಕ್ಕೆ ಸುರೀತಾ ಇದ್ದೇನೆ. ಆದರೂ ಅವರು ಹಸಿದ ಹುಲಿಹಾಗೆ ಗರ್ಜಿಸುತ್ತಾರೆ. ಇರೋ ಕೊಂಚವನ್ನ ಅರಮನೇಗೆ ಕೊಡೋಹಾಗಿಲ್ಲ. ಕೊಟ್ಟೆ, ಲೆಕ್ಕದಲ್ಲಿ ಸಾಲ ಅನ್ನಬೇಕು. ಅದನ್ನ ತೀರಿಸೋಹಾಗಿಲ್ಲ. ಮುಂದಿನ ವರ್ಷ ಖರ್ಚು ಕಡಮೆ ಆಗುತ್ತೆಯೆ? ಬೇರೆ ಕಾಸು ಬರುತ್ತೆಯೆ? ನಾನೇ ತೀರಿಸಬೇಕು. ಹಾಗೂ ತೀರಿಸಿದೆ, ಇದು ಸೈನ್ಯದ ಕಿವೀಗೆ ಬಿದ್ದರೆ ಎಲ್ಲರೂ ಮೊರೆದು ಮೇಲೆ ಬಿದ್ದಾರು. ಎರಡು ವರ್ಷದ ಹಿಂದೆ ಅವರು ಅರಮನೆ ಬಾಗಿಲಲ್ಲಿ ಧಾರಣ ಕುಳಿತದ್ದು ತಮಗೆ ಜ್ಞಾಪಕ ಇದೆ. ನಾಳೆ ನನ್ನ ಮನೆಯ ಮುಂದೆ ಧಾರಣ ಕುಳಿತಾರು. ಆ ಹೊತ್ತು ನಾನು ಅವರಿಗೆ ಯಾವುದೋ ಧೈರ್ಯ ಹೇಳಿ ಆಚೆಗೆ ಕರೆದುಕೊಂಡುಹೋದೆ. ಈಗ ಬೇರೆ ಯಾರು ಅವರನ್ನ ಸಮಾಧಾನ ಪಡಿಸುವವರು? ಇಲ್ಲ, ಸನ್ನಿಧಾನದಲ್ಲಿ ನಾನು ದುಷ್ಟನಾಗಬೇಕು; ಇಲ್ಲ, ಸೈನ್ಯದ ಕಣ್ಣಿಗೆ ಜಿಪುಣನಾಗಬೇಕು. ಹೇಗೆ ಮಾಡಲಿ? ಅದಕ್ಕಾಗಿ ಈ ಅಧಿಕಾರ ಸಾಕು ಅಂದೆ ಹೊರತಾಗಿ ಮತ್ತೆ ಯಾವ ಕಾರಣದಿಂದಲೂ ಅಲ್ಲ.

ಅರಸರು: ಹೋಗಲಿ ಬಿಡಪ್ಪ. ನೀನು ಲೆಕ್ಕ ಹೇಳಿ ನಾವು ತಿಳಿದು ಮಾಡೋದು ತಾನೇ ಏನಿದೆ?

ಹೈದರನಿಗೆ ಬೇಕಾದದ್ದು ಇಷ್ಟೇ. ಅವನ ಹತ್ತಿರ ಹಣ ಸಾಲದೆ ಇರಲಿಲ್ಲ. ಅರಮನೆ ತನ್ನನ್ನು ಒಬ್ಬ ನೌಕರನನ್ನು ಕೇಳುವಂತೆ ಲೆಕ್ಕ ಕೇಳಬಾರದು ಎನ್ನುವುದು ಅವನದೊಂದು ಮುಖ್ಯ ಉದ್ದೇಶ. ಇಷ್ಟನ್ನು ಸಾಧಿಸಿದ್ದಾಯಿತು. ಮುಂದಕ್ಕೆ ಅವನು ಹೇಳಿದನು: "ತಾವು ಬೇಷಕ್ ವಿವರ ವಿವರ ಅಪ್ಪಣೆ ಮಾಡಬಹುದು ಹುಜೂರ್! ನಾನು ನಿಮ್ಮ ಆಜ್ಞೆಯನ್ನು ಕಣ್ಣಿಗೆ ಒತ್ತಿಕೊಂಡು ನಡಸುತ್ತೇನೆ. ಈಗ ನಾನು ಈ ಸ್ಥಾನದಲ್ಲಿ ಇರಲೇಬೇಕು ಎಂದು ತಾವು ಆಜ್ಞೆಮಾಡಿದರೆ ನಾನು ಇದನ್ನು ಬಿಟ್ಟುಹೋಗುವಂತಿಲ್ಲ. ಆದರೆ ರಥಕ್ಕೆ ಕಟ್ಟಿರುವ ಕುದುರೆಯನ್ನು ಸದಾ ಓಡಿಸಿದರೆ ಕಷ್ಟ ಮಹಾಪ್ರಭು. ನನಗೆ ಸ್ವಲ್ಪ ನಿಲ್ಲುವುದಕ್ಕೆ ಅವಕಾಶ ಕೊಡಿರಿ. ಸ್ವಲ್ಪ ದಣುವು ಆರಿಸಿಕೊಳ್ಳುತ್ತೇನೆ. ತಮಗೆ

ಈಗ ಒದಗಿಸುತ್ತಿರುವ ವೆಚ್ಚ ಬಹಳವಲ್ಲ. ಆದರೆ ಇಸ್ಲಾಂ ಧರ್ಮದ ಪ್ರಕಾರ ದೊರೆಗಳು ದೇಶದ ಬೊಕ್ಕಸದಿಂದ ಹಣ ತೆಗೆದುಕೊಂಡು ಖರ್ಚು ಮಾಡಲಾಗದು. ತಾವೇ ದುಡಿದು ತಮ್ಮ ಅನ್ನವನ್ನು ಗಳಿಸಬೇಕಂತೆ. ಹಿಂದೂ ಶಾಸ್ತ್ರ ಇಷ್ಟು ಕಠಿನವಾಗಿಲ್ಲ. ಆದರೆ ಅದೂ ಕೂಡ ಅರಸರು ಬಹಳ ವೆಚ್ಚಮಾಡಬಾರದು ಎನ್ನುತ್ತದಂತೆ. ನಾನು ಬಲ್ಲೆ ಅರಮನೆಯ ಲೆಕ್ಕದ ಮೂರು ಲಕ್ಷದಲ್ಲಿ ತಮ್ಮ ಸ್ವಂತಕ್ಕೆ ವೆಚ್ಚವಾಗುವುದು ಮುನ್ನೂರಲ್ಲ. ಆನೆಯ ಹೆಸರಲ್ಲಿ ಮಾವುತ ಹೊಟ್ಟೆ ತುಂಬಿಕೊಳ್ಳುವಂತೆ ಹುಜೂರವರ ಹೆಸರಲ್ಲಿ ಎರಡು ಸಾವಿರ ಮನೆ ಬದುಕತಾ ಇವೆ. ಆದರೆ ಇದನ್ನು ನಾಡಿನ ಜನಕ್ಕೆ ಯಾರು ತಿಳಿಯ ಹೇಳಬೇಕು? ಮಹಾಸ್ವಾಮಿ ಇನ್ನುಮುಂದೆ ಹೀಗೆ ದುಷ್ಟರ ಬಾಯಿಗೆ ಸಿಕ್ಕಬಾರದು ಎಂದು ಬೇಡುತ್ತೇನೆ. ಈಗ ಅರಮನೆಯ ಲೆಕ್ಕಕ್ಕೆ ಸಾಲವಾಗಿ ಕೊಟ್ಟಿರುವ ಹಣವನ್ನು ಬರುವ ಎರಡುಮೂರು ವರ್ಷದಲ್ಲಿ ಉಪಾಯವಾಗಿ ಸ್ವಲ್ಪ ಸ್ವಲ್ಪ ಹಿಂದಕ್ಕೆ ಕೊಟ್ಟು ತೀರಿಸಿದರೆ ಒಳ್ಳೆಯದು. ಇದರಮೇಲೆ ದಣಿಯ ಚಿತ್ತ."

ರಾಜಮಾತೆ: ಇದೇನು ನವಾಬ್, ನೀನು ಹೇಳತೀ ಅಂತ ನಾವು, ಸೈನ್ಯದವರು ಹೇಳತಾರೇ ಅಂತ ನೀನು, ಎಲ್ಲಾ ಹೊತ್ತೂ ಹೆದರಿಕೊಂಡು ನಡೆಯೋದಾಯ್ತೆ? ಸೈನ್ಯಕ್ಕೆ ನೀನು ಒಂದು ಗಟ್ಟಿ ಮಾತು ಹೇಳಬೇಕು.

ಹೈದರ್: ಅದೇ ತಾಯಿ ನನಗೆ ಕಷ್ಟವಾಗಿರೋದು. ಅದಕ್ಕೆ ನನಗೆ ಧೈರ್ಯ ಸಾಲದು.

ರಾಜಮಾತೆ: ಹೌದಯ್ಯ, ಈಗ ಚಿಕ್ಕ ಬುದ್ಧಿಯವರದು ಒಂದು ತೊಟ್ಟಿ ಆಗಬೇಕಲ್ಲ. ಹದಿನಾಲ್ಕು ವರ್ಷ ತುಂಬಿತು. ನಮ್ಮ ಪುಣ್ಯ ಚೆನ್ನಾಗಿದ್ದರೆ ಈಗ ಅವರನ್ನು ಯುವರಾಜರೂ ಅಂತ ಪಟ್ಟಕಟ್ಟಿ ಒಂದು ಅರಮನೇಲಿಟ್ಟು ಆಸ್ಥಾನಮಾಡಬೇಕಾಗಿದ್ದಿತು. ನಿನಗೆ ಕಷ್ಟವಾಗಬಾರದು ಅಂತ ನಾವು ಕೈಕಟ್ಟಿಕೊಂಡು ಸುಮ್ಮನೆ ಇದ್ದೇವೆ. ನಿನಗೆ ಸ್ವಲ್ಪ ಧೈರ್ಯ ಕೊಡೋ ಅಂತ ಮಾತಿರಲಿ ಎಂತಲೆ ನಾಲ್ಕು ಜನ ದೊಡ್ಡವರನ್ನು ಬೇರೆ ಬೇರೆ ಕಡೆಯಿಂದ ಕರಸಿ, ಒಳ್ಳೆ ಮಾತಾಡಿ ಸ್ನೇಹ ಮಾಡೋಣ ಎಂತ ಯೋಚಿಸಿದೆವು. ಹೆಚ್ಚಿನ ವೆಚ್ಚ ಅದಕ್ಕಾಗಿ. ಅದನ್ನ

ಅರಮನೆ ವೆಚ್ಚ ಅಂತ ಹೇಳಬೇಡ. ರಾಜ್ಯದ ವೆಚ್ಚ ಅಂತ ಇಟ್ಟುಕೊ. ಏನು ತಪ್ಪು? ರಾಜ್ಯ ಬೇರೆ ಅರಮನೆ ಬೇರೆ ಅಂತ, ಅರಮನೆ ಮಾಡೋದೆಲ್ಲ ಸ್ವಂತಕ್ಕೆ ಅನ್ನೋ ಹಾಗೆ, ಸೈನ್ಯಾನ ಮಾತನಾಡೋದಕ್ಕೆ ಬಿಡಬೇಡ.

ಹೈದರ್ : ಅಪ್ಪಣೆ ಮಹಾತಾಯಿ. ನಮಗೆ ಇಂಥ ಮಾತನ್ನೆಲ್ಲ ಸೈನ್ಯಕ್ಕೆ ಬಿಡಿಸಿ ಹೇಳೋದು ಬರೋದಿಲ್ಲ. ಮಾತು ಬಲ್ಲವರನ್ನ ಕರೆದು ಹೇಳಿಸುತೇನೆ. ಈಗ ಯಾರು ಯಾರು ಬರುವವರು, ಏನು ಏರ್ಪಾಡಾಗಬೇಕು, ಅಂತ ಅಪ್ಪಣೆ ಆದರೆ ಭಕ್ಷಿ ಸಾಹೇಬನಿಗೆ ಬೇಕಾದ ತಿಳಿವಳಿಕೆ ಕೊಟ್ಟು ಹೋಗತೇನೆ.

ರಾಜಮಾತೆ: ಅದೆಲ್ಲ ಸಣ್ಣ ಮಾತು. ಅದನ್ನ ನೀನು ಕೇಳಿ ಅವನಿಗೆ ಹೇಳೋದೇಕೆ? ಗುರಿಕಾರರು ತಿಳಿಸುತಾರೆ, ಕೆಲಸ ನಡಸಿಕೋತಾರೆ. ಹಬ್ಬಕ್ಕೆ ನೀನು ಎರಡು ದಿನ ಮುಂದಾಗಿ ಬಂದು ಏನು ಏರ್ಪಾಡಾಗಿದೇ ಅಂತ ಬೇಕಾದರೆ ಒಂದು ಸಲ ವಿಚಾರಿಸಿದರೆ ಆಯಿತು. ಬರೋ ದೊಡ್ಡವರನ್ನ ಸ್ವತಃ ಕಂಡದ್ದು ಆಗತದೆ. ಅವರಿಗೂ ರಾಜ್ಯ ನಡಸುವ ಸರ್ವಾಧಿಕಾರಿಯನ್ನು ನೋಡಿದೆವು ಅಂತ ಸಂತೋಷವಾಗತದೆ.

ಹೈದರ್ : ಒಳ್ಳೇದು ಮಹಾತಾಯಿ. ಈ ಸಲಕ್ಕೆ ಹುಜೂರು ಏನಪ್ಪಣೆ ಮಾಡತೀರೊ ಮೊಕದಂ ಅದನ್ನ ನಡಸಿಬಿಡತಾರೆ. ಹಬ್ಬದ ಹೊತ್ತಿಗೆ ಬರಬೇಕೂ ಅಂತ ನನಗೇನೊ ಆಶೆ. ಆದರೆ ಶೀರ್ಯ ಚಿತ್ರದುರ್ಗದ ಕಡೆಯಿಂದ ಬರುತ್ತಿರೋ ಸುದ್ದಿ ಅಷ್ಟು ಸುಖವಾಗಿಲ್ಲ. ಕೆಲಸ ಬಿದ್ದರೆ ಅತ್ತಲಾಗೆ ಹೋಗಬೇಕು. ಹಾಗೇನಾದರೂ ಆದರೆ ನಾನು ದರ್ಬಾರಿಗೆ ಬರೋದಕ್ಕೆ ಆಗೋದಿಲ್ಲ. ದಯವಿಟ್ಟು ಮಾಫ್ ಮಾಡಿ ನಡಸಿಕೊಳ್ಳಬೇಕು. ಅದೂ ಪ್ರಭುಗಳ ಕೆಲಸವೇ. ನೆರಳಲ್ಲಿ ನಾಲ್ಕು ಜನ ಸೇವೆ ಸಲ್ಲಿಸತಾರೆ. ಬಿಸಿಲಲ್ಲಿ ನಾಲ್ಕು ಜನ ಅಲ್ಲಿ ಸೇವೆ ಸಲ್ಲಿಸತೇವೆ. ಎರಡು ಸೇವೆಯೂ ಮಹಾಸ್ವಾಮಿಗೆ ಸಲ್ಲಿಸಿದ್ದೇ.

ರಾಜ: ನೀನು ಬಿಸಿಲಲ್ಲಿ ಒಣಗತಾ ನಾವು ನೆರಳಲ್ಲಿ ಹಬ್ಬ ಮಾಡೋಣೇ ನವಾಬ್? ಅದರ ರುಚಿ ಏನು?

ಹೈದರ್ : ಮಹಾಸ್ವಾಮಿ, ನನ್ನ ರಕ್ತ ಸುರಿದರೆ ನನ್ನ ಮನಸ್ಸಿಗೆ ಕಷ್ಟವಾಗೋದಿಲ್ಲ. ನನ್ನ ಧಣೀ ಬೆವರು ಸುರಿದರೆ ನಾನು ಸಹಿಸಲಾರೆ.

ಸಾವಿರೋದೇಕೆ? ಕೆಲಸ ಬಿತ್ತು, ಅಲ್ಲಿ ಹೋಗತೇನೆ. ಬೀಳಲಿಲ್ಲ, ಸನ್ನಿಧಾನಕ್ಕೆ ಓಡಿಬರತೇನೆ. ಎಲ್ಲಿದ್ದರೂ ನಾನು ನಿಮ್ಮ ಪದಾರ್ಥ.

ಇಷ್ಟು ವಿನಯ, ಇಷ್ಟು ಭಕ್ತಿಗೆ, ರಾಜನಾಗಲಿ ರಾಜಮಾತೆಯಾಗಲಿ ಏನು ಉತ್ತರ ಹೇಳುವುದು? ಸಾಲದ್ದಕ್ಕೆ ವೆಚ್ಚದ ವಿಷಯ ಇವನು ಒಂದು ವಿವರ ಕೇಳದೆ ಒಪ್ಪಿಕೊಂಡಿದಾನೆ. ಇದರ ಅರ್ಥವೇನು? "ಈ ಸಲಕ್ಕೆ" ಎಂದನು. "ಮುಂದಿನ ಸಲಕ್ಕೆ ಮಾಡಬೇಡಿ" ಎಂತಲೊ ಏನೊ? ಬರುವ ಜನ ಯಾರು? ಎಂದು ಕೇಳಿದನು. ಉತ್ತರ ಹೇಳದೆ ಇದ್ದರೂ ಒತ್ತಾಯಮಾಡದೆ ಬಿಟ್ಟನು. ಇಷ್ಟು ಮೆತುವಿನ ಅಭಿಪ್ರಾಯ ಏನಿರಬಹುದು? ನವಾಬನಿಗೆ ಉಪ್ಪಿಗೆ ತಪ್ಪಬಾರದು ಎಂಬ ದೊಡ್ಡ ಗುರಿ ಉಂಟು. ಆದರೆ ಅದಷ್ಟೆ ಇಷ್ಟು ನಯುವನ್ನು ಮೂಡಿಸಿರಲಾರದು. ಇದರ ಸ್ವಲ್ಪ ಭಾಗವಾದರೂ ಬೇರೆಯ ದೃಷ್ಟಿಯಿಂದ ಪ್ರೇರಿತವಾಗಿದೆ. ಆ ದೃಷ್ಟಿ ಯಾವುದೊ? ಭಕ್ತಿಯ ರೂಪದಿಂದ ಕಂಡರೂ ಅದು ಬೇ ಏನೊ ಇರಬೇಕು. ಒಂದು ಎರಡು ಮಾತಿನಲ್ಲಿ ಕೊಂಕಿನ ಅಡ್ಡವಾಸನೆ ಇದ್ದಿತು. ಹಾಗೆಂದಮೇಲೆ ಇವರು ಎಚ್ಚರದಿಂದ ನಡೆದುಕೊಳ್ಳಬೇಕು. ರಾಜರ ಮನಸ್ಸಿನಲ್ಲಿ ಒಟ್ಟಿನಲ್ಲಿ, ರಾಜಮಾತೆಯ ಮನಸ್ಸಿನಲ್ಲಿ ವಿವರ ವಿವರವಾಗಿ, ಈ ಯೋಚನೆ ಹರಿದವು. ನವಾಬನ ಮಾತು ಮುಗಿದಮೇಲೆ ಇವರು ಒಂದು ಕ್ಷಣ ಸುಮ್ಮನೆ ಇದ್ದರು. ಆಮೇಲೆ ರಾಜಮಾತೆ, "ಹಾಗಾದರೆ ನೀನು ಒಡನೆ ಬೆಂಗಳೂರಿಗೆ ಹೋಗಬೇಕು?" ಎಂದಳು.

ನವಾಬ, "ಹೌದು ಮಹಾತಾಯಿ. ಹುಜೂರವರೂ ತಾಯ ಸನ್ನಿಧಾನವೂ ಅಪ್ಪಣೆ ಕೊಟ್ಟರೆ ನಾಳೆ ಹಿಂದಕ್ಕೆ ಹೋಗುತ್ತೇನೆ. ಈಗ ಅಪ್ಪಣೆಯಾದರೆ ಬಿಡಾರಕ್ಕೆ ಹೋಗಿ ಪಟ್ಟಣದ ಕೆಲಸ ಮತ್ತೇನಿದೆಯೊ ವಿಚಾರಿಸುತ್ತೇನೆ," ಎಂದನು.

ರಾಜಮಾತೆ, "ಯಾರಿದೀರೆ ಅಲ್ಲಿ?" ಎಂದು ತೊಟ್ಟಿಯ ಒಳ ಭಾಗಕ್ಕೆ ದನಿಮಾಡಿದಳು. ಚೇಟಿಯೊಬ್ಬಳು, 'ಅವ್ವ,' ಎನ್ನುತ್ತ ಕೈಯ್ಯಲ್ಲಿ ಎಲೆ ಅಡಿಕೆ ಹೂ ಹಣ್ಣಿನ ತಟ್ಟೆಯೊಂದನ್ನು ಹಿಡಿದು ಅವಳ ಬಳಿ ಬಂದಳು.

ಅರಸರು ಸನ್ನೆಮಾಡಿ ಅದನ್ನು ಹತ್ತಿರ ಇರಿಸಹೇಳಿ, "ಬಾ ನವಾಬ್, ಎಲೆ ಅಡಕೆ ತಗೊ," ಎಂದರು.

ನವಾಬನು ಎದ್ದು ಹತ್ತಿರ ಹೋದನು. ಪ್ರಭುಗಳು ಹೂವನ್ನು ಎತ್ತಿ ಅವನ ಕೈಗೆ ಕೊಟ್ಟರು. ತಟ್ಟೆಯನ್ನು ಮುಟ್ಟಿ, 'ಕೊ,' ಎಂದರು. ಹೈದರ್ ಅರ್ಧವಾಗಿ ಬೈಬಾಗಿದ್ದನು; ಹಾರವನ್ನೂ ತಟ್ಟೆಯನ್ನೂ ತೆಗೆದುಕೊಂಡನು. ಪ್ರಭುಗಳು ಚೇಟಿಯ ಕಡೆ ತಿರುಗಿ, "ಇದನ್ನ ನವಾಬರ ಬಿಡಾರಕ್ಕೆ ಕಳುಹಿಸಹೇಳು," ಎಂದನು. ಅವಳು, "ಅಪ್ಪಣೆ ಬುದ್ಧಿ," ಎಂದಳು.

ಈ ಎಲೆ ಅಡಕೆಯ ಮರ್ಯಾದೆ ನಡೆಯುವ ಹೊತ್ತಿನಲ್ಲಿ ಪ್ರಭುಗಳ ಕುಮಾರ ನಂಜರಾಜ ಒಳಗಣಿಂದ ಓಲಗಸಾಲೆಗೆ ಬಂದವನು ತಟ್ಟನೆ ಬಾಗಿಲಲ್ಲಿ ನಿಂತನು. ಎಲ್ಲರ ದೃಷ್ಟಿಯೂ ಅವನ ಕಡೆ ಬಿದ್ದಿತು. ಪ್ರಭುಗಳು, "ಬನ್ನಿ ಚಿಕ್ಕ ಬುದ್ಧಿ. ನವಾಬಸಾಹೇಬರನ್ನ ಕಾಣಿಸಿಕೊಳ್ಳಿ," ಎಂದರು.

ಕುಮಾರ ನವಾಬನ ಕಡೆ ನೋಡುತ್ತ ತಂದೆಯ ಮಾತಿಗೆ ಉತ್ತರ ಹೇಳದೆ ಅವರ ಹತ್ತಿರಕ್ಕೆ ಗಂಭೀರವಾಗಿ ನಡೆದುಬಂದನು. ಅವನು ಒಂದು ಮಾತನ್ನೂ ಆಡದೆ ತನ್ನನ್ನು ನೋಡುತ್ತ ಬರುತ್ತಿರುವುದನ್ನು ಕಂಡು ಹೈದರ್ ಅರಸರ ಕಡೆಗೆ ತಿರುಗಿ, "ಹುಜೂರ್ ಸನ್ನಿಧಾನದಲ್ಲಿ ನಮ್ಮ ಚಿಕ್ಕ ಹುಜೂರ್ ಸನ್ನಿಧಾನಕ್ಕೆ ಸಲಾಂ ಮಾಡುವಂತಿಲ್ಲ. ಇದಕ್ಕೆ ಹೇಗೆ ಮಾಡುವುದು ಪ್ರಭುಗಳೆ?" ಎಂದನು.

ಇವನ ಚಾತುರ್ಯವನ್ನು ನೋಡಿ ಅರಸರು ನಕ್ಕರು; ಕುಮಾರನಿಗೆ ಕೂಡ ನಗೆ ಬಂದಿತು; ದೇವಾಜಮ್ಮಣ್ಣಿ ಮೆಚ್ಚಿಕೊಂಡಳು. "ಯಾವ ಸಂದರ್ಭದಲ್ಲೂ ಹೆಜ್ಜೆ ತಪ್ಪದೆ ನಡೆದುಕೊಳ್ಳಬಲ್ಲ ಬುದ್ಧಿವಂತ ಈ ಮನುಷ್ಯ. ಇವನನ್ನು ಎದುರು ಹಾಕಿಕೊಂಡು ವ್ಯವಹಾರ ನಡಸುವುದು ಕಷ್ಟ. ಇವನಿಗೆ ಅಧೀನರಾಗಿ ನಡೆದು ಪ್ರಭುತ್ವ ನಡಸುವುದು ಇನ್ನೂ ಕಷ್ಟ. ಈ ಇಕ್ಕಟ್ಟಿನಲ್ಲಿ ನಮ್ಮ ಮಕ್ಕಳಿಗೆ ದಾರಿ ಯಾವುದು?" ಎಂದು ತನ್ನಲ್ಲೆ ಚಿಂತೆ ಮಾಡಿದಳು, ಕಳವಳಗೊಂಡಳು.

ನವಾಬ, ರಾಜ ರಾಜಮಾತೆ ಕುಮಾರ, ಈ ಮೂವರ ಅಪ್ಪಣೆಯನ್ನೂ ತೆಗೆದುಕೊಂಡು ತನ್ನ ಬಿಡಾರಕ್ಕೆ ಹೊರಟನು.

## ೬೧

ಹೈದರ್ ಬಿಡಾರಕ್ಕೆ ಹೋಗುವ ವೇಳೆಗೆ ಅಲ್ಲಿ ಬಕ್ಷಿ ಶ್ರೀನಿವಾಸ ರಾಯ ಬಂದು ಕಾದಿದ್ದನು. ಅವನು ನವಾಬನನ್ನು ಎದುರುಗೊಂಡು ಬಂದು ಮರ್ಯಾದೆಯಿಂದ ಸಲಾಮು ಮಾಡುವಲ್ಲಿ, ಹೈದರ್ ಪ್ರತಿಯಾಗಿ ಸಲಾಮು ಮಾಡಿ, ವಿಶ್ವಾಸದಿಂದ ಹತ್ತಿರ ಹೋಗಿ, "ಎಲ್ಲ ಚೆನ್ನಾಗಿದ್ದೀರಿ ಎಂದು ಮೊಕದಂ ಸಾಹೆಬ್ ತಿಳಿಸಿದರು ರಾವ್ ಸಾಹೆಬ್. ನಿಮ್ಮ ಮನೆ ವಾರ್ತೆಏನೂ ಹೇಳಿದ. ನಾನೆ ಮನೆ ಹತ್ತಿರ ಬರೋದೂ ಅಂತ ಯೋಚನೆ ಮಾಡಿದೆ. ಅವ್ವನವರು ಯಜಮಾನರು ಆರೋಗ್ಯವಾಗಿದ್ದಾರಲ್ಲ?" ಎಂದನು.

ಶ್ರೀನಿವಾಸರಾವ್, "ಯಜಮಾನರು ಅವರ ವಯಸ್ಸಿಗೆ ಎಷ್ಟು ಸಾಧ್ಯವೊ ಅಷ್ಟು ಆರೋಗ್ಯವಾಗಿದ್ದಾರೆ. ಅವ್ವನವರು ಎಂದಿನಂತೆ ಇದ್ದಾರೆ. ಮನೆ ಹತ್ತಿರ ಬಂದರೆ ನಿಮ್ಮನ್ನ ನೋಡಿ ಸಂತೋಷಪಡು ತಾರೆ," ಎಂದನು.

"ಹೌದು ರಾವ್‌ಸಾಹೆಬ್, ಬರಬೇಕು. ನನಗೆ ನೋಡಿ ಶ್ರೀನಿ ವಾಸರಾವ್, ತಂದೆ ತಾಯಿ ಇಬ್ಬರೂ ಚಿಕ್ಕಂದೇ ತೀರಿಕೊಂಡರು. ಈ ಜೀವಾ ನನ್ನದೂ ಅಂತ ಕಳವಳಪಡೋ ಮಂದಿ ಒಬ್ಬರೂ ಇಲ್ಲದೆ ಹೋದರು. ಮರಳು ನೆಲದಲ್ಲಿ ಎಕ್ಕದ ಗಿಡ ಬೆಳೆಯೋ ಹಾಗೆ ಬೆಳೆದೆ, ಶ್ರೀನಿವಾಸರಾವ್, ನಾನು. ಅದರಿಂದ ನಿಮ್ಮನ್ನ ನೋಡಿದಾಗಲೆಲ್ಲ ನನಗೆ ನೀವು ಒಳ್ಳೆ ಪುಣ್ಯವಂತರು ಅನ್ನಿಸುತ್ತದೆ. ಒಳ್ಳೆ ಬೆಳೆದು ಜವಾನ್ ಆಗಿದ್ದೀರಿ; ಆದರೂ ಮನೇಲಿ ಬಾರೊ ಅನ್ನೋರು ಇಬ್ಬರಿದ್ದಾರೆ."

"ಹೌದು ನವಾಬ್ ಸಾಹೆಬ್, ಅದು ಒಂದು ಭಾಗ್ಯ. ಅಂದರೆ ಅದು ನನ್ನ ಪುಣ್ಯ ಅಂದರೆ ಕೊಬ್ಬಿದ ಮಾತಾಗತ್ತೆ. ದೇವರ ಕೃಪೆ ಅಂದರೆ ಒಪ್ಪುವ ಮಾತು. ನಿಮಗೂ ಅದೇನು ತಿಳಿಯದ ಸಂಗತಿ ಅಲ್ಲ: ನಮ್ಮ ತಾಯಿ ನಿಮ್ಮನ್ನ ಕೂಡ ಒಬ್ಬ ಮಗ ಅಂತಲೆ ಎಣಿಸಿಕೊಂಡಿದ್ದಾರೆ. ನೀವು ನಮ್ಮ ತಂದೇನ ತಾಯಿಾನ ಒಬ್ಬ ಚಿಕ್ಕಪ್ಪ ಚಿಕ್ಕಮ್ಮ ಅಂತ ಕಂಡರೆ ನಮಗೆಲ್ಲ ಬಹಳ ಸಂತೋಷ."

"ಕಾಣುವಷ್ಟೇ ಏನು ಶ್ರೀನಿವಾಸರಾವ್, ನಿಜಾನೂ ಅದೇ. ನಿಮ್ಮ ಜನ ನಮ್ಮನ್ನು ಪದ್ಧತಿಗಾಗಿ ದೂರ ನಿಲ್ಲಿಸುತೀರಿ; ಹಾಗಲ್ಲದೆ ಇದ್ದರೆ ನಾನು ನಿಮ್ಮ ಅವ್ವ ಅವರ ಒಬ್ಬ ಮಗನೆ. ಯಜಮಾನರು ಮಧುಗಿರೀಲಿ ಯುದ್ಧ ನಡಸಿದ ಕಾಲದಲ್ಲಿ ನಾನು ಅವರ ಕೈಕೆಳಗೆ ನಾಯಕನಾಗಿದ್ದೆ. ಆಗ ನಿಮ್ಮ ಮನೆ ಅನ್ನ ನಾನು ಎಷ್ಟು ಸಲ ಉಣ್ಣಲಿಲ್ಲ? ನೀವು ಪ್ರಾಯಕ್ಕೆ ಬರೋಕೆ ಮೊದಲು ಒಂದು ಸಲ ಅಂಗಳದಲ್ಲಿ ಬೆಳದಿಂಗ ಳೂಟ ಮಾಡತಾ ಇದ್ದಿರಿ. ನಾನು ತಿಳಿಯದೆ ಒಳಕ್ಕೆ ಬಂದೆ. ಅವ್ವ ಅವರು ನನ್ನನ್ನು ಸ್ವಲ್ಪ ದೂರದಲ್ಲಿ ಒಂದು ಚಾಪೆಮೇಲೆ ಕುಳ್ಳಿರಿಸಿ ನನಗೂ ಬೆಳದಿಂಗಳ ತುತ್ತು ಹಾಕಿದರು. ಮಗ ಅಂತಲೇ ಕೈಗೆ ತುತ್ತು ಹಾಕಿ ದರು. ಇಲ್ಲದೆ ಇದ್ದರೆ ಹಾಕೋರೇನಪ್ಪ? ಬೇಷಕ್ ಆ ತಾಯಿ ನನ್ನ ಹೆತ್ತ ತಾಯಿ."

"ದೂರ ಕುಳ್ಳಿರಿಸಿದರು ಅಂತ ನೀವು ಮನಸ್ಸಿನಲ್ಲಿ ಬೇಸರ ಇಟ್ಟು ಕೊಳ್ಳಬಾರದಲ್ಲ."

"ಛೆ ಛೆ. ಆವತ್ತು ಏನಾಯ್ತೂ ಅಂತ ಹೇಳತಾ ಹಾಗಂದೆ. ನನ್ನ ದೂರ ಕೂರಿಸಿದರೆ ಏನು; ತುತ್ತು ಬಾಯ ಹತ್ತಿರಕ್ಕೇ ಬಂತು. ಅವ್ವ ನವರ ಮರುಕ ಬೇರೆ ಆಯಿತೆ, ಬೆಳದಿಂಗಳು ಬಿಸಿಲಾಯಿತೆ? ಬೆಳದಿಂಗಳ ತಂಪು, ಅವರ ಮನಸ್ಸಿನ ತಂಪು, ಎರಡೂ ಒಂದು ತಂಪು, ನಮ್ಮ ನಿಮ್ಮ ತಾಯಿನಾದು."

"ಬಿಡುವಾದಾಗ ಮನೆ ಹತ್ತಿರ ಬರತೀರಿ ಅನ್ನಲಿಯಾ ?"

"ಓಹೋ. ಬಂದೇ ಬರುತೇನೆ. ಯಜಮಾನರಿಗೆ ಅವ್ವನವರಿಗೆ ತಿಳಿಸಿರಿ. ಮತ್ತೇನು ತೊಂದರೆ ಮಾಡಿಕೊಳ್ಳಬೇಡಿರಿ. ಮಗ ಮನೆಗೆ ಬರತಾನೆ ಅಂತ ಔತನದ ಶ್ರಮ ಕಟ್ಟಿಕೊಂಡಾರು ಅವ್ವ."

"ನಾವು ಬೇಡಾ ಅಂದರೆ ಅವರು ಬಿಡತಾರೇನು? ಬಹಳ ತೊಂದರೆ ಮಾಡಿಕೊಳ್ಳಬೇಡೀ ಅಂತ ಹೇಳತೇನೆ."

"ಒಳ್ಳೇದು. ಹೋಗಿಬನ್ನಿರಿ. ಬೇರೆ ಈ ಕೆಲಸ ಏನಿದೆಯೊ ನಾನು ಸ್ವಲ್ಪ ನೋಡತೇನೆ."

ಶ್ರೀನಿವಾಸರಾವ್ ತನ್ನ ಮನೆಗೆ ಹೋದನು. ಹೈದರ್ ಬಿಡಾರದ

ಒಳಕ್ಕೆ ಹೋಗಿ, ಒಳ ಅಂಗಳದಲ್ಲಿ ಒಂದು ಚಾಪೆಯ ಮೇಲೆ ಕಾಲು ಚಾಚಿ ದಿಂಬಿಗೆ ಒರಗಿ ಕುಳಿತನು. ಮೊಕದಂ ಆಲಿ ಮೊದಲಾಗಿ ಹತ್ತು ಜನರನ್ನು ಒಬ್ಬರಾದಮೇಲೆ ಒಬ್ಬರನ್ನು ತಾನಿದ್ದಲ್ಲಿಗೆ ಬರಮಾಡಿ, ವ್ಯವಹಾರದ ವಿಷಯವನ್ನು ವಿವರವಾಗಿ ವಿಚಾರಿಸಿ ತಿಳಿದನು. ಹೈದರನ ನೆನವು, ಬುದ್ಧಿ, ಹತ್ತಿರ ಬಂದವರಿಗೆಲ್ಲ ವಿಸ್ಮಯವನ್ನುಂಟುಮಾಡುತ್ತಿದ್ದವು. ಹಿಂದೆ ಒಂದು ದಿನ ಇಂಥ ಸೈನಿಕನ ಕುದುರೆ ಬೆನ್ನ ಹುಣ್ಣಿನಿಂದ ಕಷ್ಟಪಡುತ್ತಿದ್ದಿತು; ಅದಕ್ಕೆ ಹೇಗಿದೆ? ಮತ್ತೊಬ್ಬ ಕುದುರೆಗೆ ಸಾಕಾದಷ್ಟು ಹುಲ್ಲು ಹಾಕದೆ ಅದನ್ನು ದುಬಲಾ ಮಾಡಿದ್ದನು; ಅವನು ಈಚೆಗೆ ಸರಿಯಾಗಿದ್ದಾನೆಯೆ? ಕುದುರೆ ಲಾಯದ ಇಂಥ ಕಡೆಯಲ್ಲಿ ಇಂಥ ಗೋಡೆ ಬಿದ್ದುಹೋಗಿದ್ದಿತು; ಈಗ ಸರಿಮಾಡಿಸಿ ಆಗಿದೆಯೆ? ಇಂಥವನು ಸೈನ್ಯಕ್ಕೆ ಹತ್ತು ಕಾಲಾಳನ್ನು ಸೇರಿಸುತ್ತೇನೆ ಎಂದನು; ತಂದಾಯಿತೆ? ಕೋಟೆಯ ಮೇಲೆ ಇಂಥ ಕಡೆ ಪಹರೆ ಇರಿಸುವುದು ಆವಶ್ಯಕ ಎಂದೆನಲ್ಲ; ಅಲ್ಲಿ ಈಗ ಒಬ್ಬ ನಿಂತಿರುತ್ತಾನೆಯೇ? ಇಂಥ ಊರಿನಿಂದ ಸೈನ್ಯದ ಉಗ್ರಾಣಕ್ಕೆ ಇಷ್ಟು ಧಾನ್ಯ ಬರುವುದಿತ್ತು; ಅದು ಬಂದಿತೆ? ಇತ್ಯಾದಿ ಇತ್ಯಾದಿ. ಕೆಲವುವೇಳೆ ಅವನು ಇಂಥ ಮಾತನ್ನೆಲ್ಲ ಬೇಕಾಗಿ ತಾನು ಯಾವುದನ್ನೂ ಮರೆಯುವುದಿಲ್ಲ ಎಂದು ಸೇವಕರಿಗೆ ತಿಳಿಸುವುದಕ್ಕಾಗಿಯೇ ಪ್ರಶ್ನೆ ಕೇಳುತ್ತಿದ್ದಾನೆ ಎನ್ನಿಸುವುದು. ಜೊತೆಗೆ ಒಂದೊಂದು ಸಲ ಅವನು ಯಾವುದೊ ಒಂದು ವಿವರವನ್ನು ತಪ್ಪಾಗಿ ಹೇಳುವನು. ಎದುರಾಳಿ ಅದನ್ನು ತಿದ್ದಬೇಕು. ತಿದ್ದದೆ ಇದ್ದರೆ, "ಹತ್ತು ಖಂಡಿಯೊ ಹದಿನೈದು ಖಂಡಿಯೊ?" ಎಂದು ತಾನೇ ತಿದ್ದಿಕೊಂಡು ಕೇಳುವನು. ಎದುರಾಳಿ "ಹದಿನೈದು" ಎಂದು ತಿದ್ದುಪಡಿಗೆ ಒಪ್ಪಿದರೆ, "ಮತ್ತೆ ಯಾಕೆ ನನ್ನ ನೆನವು ಸರಿಯಲ್ಲದೆ ಇದ್ದರೆ ನೀನು ಸರಿಯಾಗಿ ಹೇಳುವುದಿಲ್ಲ?" ಎನ್ನುವನು. ಯಾವನಾದರೂ, "ಎದುರು ಮಾತು ಯಾಕೆ ಎಂದು ಸುಮ್ಮನಿದ್ದೆ" ಎಂದರೆ, "ನನಗೆ ಈ ಸುಳ್ಳು ಮರ್ಯಾದೆ ಬೇಡ. ಹಗಲನ್ನ ನಾನು ರಾತ್ರಿ ಎಂದರೆ ಹೌದು ಎನ್ನುವುದು ಏತರ ಮರ್ಯಾದೆ?" ಎನ್ನುವನು. ಅಂತೂ ಆಡಳಿತದ ಯಾವ ವಿವರವೂ ಇವನ ಗಿಡುಗನ ದೃಷ್ಟಿಯಿಂದ ತಪ್ಪಿ ಸುಳಿಯುವುದು ಸಾಧ್ಯವಲ್ಲ.

ಈ ವಿಚಾರಣೆಯಾದಮೇಲೆ ಹೈದರ್ ಸ್ವಲ್ಪ ವಿಶ್ರಮಿಸಿಕೊಂಡನು. ಮಿತವಾಗಿ ಆಹಾರ ತೆಗೆದುಕೊಂಡು ಮತ್ತಷ್ಟು ಕೆಲಸಮಾಡಿ ಸಂಜೆಯಲ್ಲಿ ಕೋಟೆಯ ಗೋಡೆಯ ಮೇಲೆ ಒಂದು ಸುತ್ತು ಹಾಕಿ ಇಳಿದು ಬಿಡಾರಕ್ಕೆ ಬರುತ್ತ ಬರ್ಕಿಯವರ ಮನೆಗೆ ಹೋದನು.

## ೬೨

ಬರ್ಕಿ ಮನೆತನದ ಮತ್ತು ಹೈದರನ ಮಧ್ಯೆ ಬೆಳೆದಿದ್ದ ಹೆಚ್ಚಿನ ಸ್ನೇಹಕ್ಕೆ ಒಂದು ಕಾರಣ ಇದ್ದಿತು.

ಈ ದಿನಕ್ಕೆ ಸುಮಾರು ಐದು ವರ್ಷದ ಹಿಂದಿನ ಮಾತು. ಕರಾಚೂರಿ ನಂಜರಾಜ ಸರ್ವಾಧಿಕಾರಿಯಾಗಿದ್ದ ದಿನ. ಶ್ರೀನಿವಾಸರಾಯನ ತಂದೆ ವೆಂಕಟರಾವ್ ಆ ವೊದಲು ಸೇವೆಯಿಂದ ನಿವೃತ್ತಿ ಪಡೆದು ಕೆಲವು ವರ್ಷ ಆಗಿದೆ. ಮಗ ಶ್ರೀನಿವಾಸ ಸೈನ್ಯದಲ್ಲಿ ಸೇರಿ ಕೆಲವು ವರ್ಷವಾಗಿದೆ; ಅವನು ಚಟುವಟಿಕೆಯ ಮನುಷ್ಯ, ಧೈರ್ಯಶಾಲಿ, ಬುದ್ಧಿವಂತ ಎನಿಸಿಕೊಂಡಿದ್ದಾನೆ. ವೆಂಕಟರಾವ್ ಅಧಿಕಾರದಲ್ಲಿದ್ದಾಗ ಹೈದರ್ ಅವರ ಕೈಕೆಳಗೆ ಕೆಲಸಮಾಡಿದವನು ಎಂಬ ಕಾರಣದಿಂದ ಹಿಂದೆ ಮನೆಗೆ ಬಂದದ್ದುಂಟು. ಮನೆಯ ತಾಯಿಂದ ಅನ್ನ ತೆಗೆದುಕೊಂಡು ತಿಂದದ್ದುಂಟು. ಈ ಕಾರಣದಿಂದ ಶ್ರೀನಿವಾಸರಾವ್ ಅವನೊಂದಿಗೆ ಸ್ವಲ್ಪ ವಿಶ್ವಾಸದಿಂದಲೆ ನಡೆದುಕೊಳ್ಳುತ್ತಿದ್ದನು. ಆದರೆ ಒಂದುಸಲ ಯಾವುದೊ ವಿಷಯದಲ್ಲಿ ಅವನು ಶ್ರೀನಿವಾಸರಾಯನಿಂದ ಸ್ವಲ್ಪ ಕೊಸರಿಕೊಂಡನು. ತರುಣನಿಗೆ ಇದರಿಂದ ಬೇಸರವಾಯಿತು; ಹೀಗಾಯಿತೆಂದು ಅವನು ಮನೆಯಲ್ಲಿ ಹೇಳಿದನು. ತಂದೆಗೂ ಹೈದರನ ವಿಷಯಕ್ಕೆ ಸ್ವಲ್ಪ ಅಸಮಾಧಾನ: ಇವನು ಒಂದು ಮಿಡಿತೆ, ಅತಿ ಹಾರಾಡುತ್ತಾನೆ, ಬುದ್ಧಿವಂತಿಕೆ ಮಾಡಿ ಹೊಗಳಿಸಿಕೊಳ್ಳುವಷ್ಟೆ ಯೋಚಿಸುತ್ತಿದಾನೆ, ಎಂದು ಆತನ ಭಾವನೆ. ಮಗನ ಮಾತನ್ನು ಕೇಳಿ ತಂದೆಗೆ ಆಶ್ಚರ್ಯವಾಗಲಿಲ್ಲ; ಅವನ ಸ್ವಭಾವಕ್ಕೆ ತಕ್ಕಂತೆ ನಡೆದುಕೊಂಡಿದಾನೆ ಎಂದು ತೋರಿತು. ಪ್ರಾಯಶಃ ತನ್ನ ಹಿಂದಿನ ಹಿರಿಯ ತನ್ನಿಂದ ಅತಿ ಮರ್ಯಾದೆಯನ್ನು

ನಿರೀಕ್ಷಿಸುತ್ತಿದಾರೆ ಎಂದು ಹೈದರನೂ ಯೋಚಿಸಿರಬೇಕು. ಹೀಗಾಗಿ ಇವರಿಗೆ ಹೈದರನಿಗೆ ಮಧ್ಯೆ ಆ ಹಿಂದಿನ ಸಲಿಗೆ ಸಪ್ಪಿತು. ಆ ಸಮಯ ದಲ್ಲಿ ಮರಾಠರು ಗೋಪಾಲಹರಿಯ ಸೈನ್ಯಾಧಿಪತ್ಯದಲ್ಲಿ ಮೈಸೂರ ಸೀಮೆಯಮೇಲೆ ಬಂದು ಬೆಂಗಳೂರಿನ ಪ್ರಾಂತವನ್ನು ಮುತ್ತಿದರು. ಶ್ರೀನಿವಾಸರಾಯನು ಅವರ ಕಡೆಯ ಜನಕ್ಕೆ ತೊಂದರೆ ಕೊಡುವು ದಕ್ಕೆಂದು ತನ್ನ ದಳದ ಕೆಲವು ಜನದೊಡನೆ ಒಮ್ಮೆ ಇಲ್ಲಿ ಒಮ್ಮೆ ಅಲ್ಲಿ ಅವರಮೇಲೆ ಬಿದ್ದು ಕಾಡುವನು. ಧೈರ್ಯಶಾಲಿಯಾದ ದಳಪತಿಗೆ ಇದೊಂದು ಆಟ. ಹೀಗೆ ಮಾಡುವುದರಲ್ಲಿ ಒಂದು ದಿನ ಅವನು ಮರಾ ಠರಿಗೆ ಸೆರೆಯಾದನು. ಅವನೊಬ್ಬ ದಳಪತಿಯೆಂದು ತಿಳಿದು ಗೋಪಾಲ ಹರಿ ಪಟ್ಟಣಕ್ಕೆ, "ನಿಮ್ಮ ದಳಪತಿ ನಮಗೆ ಸೆರೆ ಸಿಕ್ಕಿದಾನೆ. ಮೂರು ಸಾವಿರ ಹೊನ್ನು ರಕ್ಷಣೆ ಹಣ ಕೊಟ್ಟು ಅವನನ್ನು ಹಿಂದಕ್ಕೆ ಪಡೆಯ ಬಹುದು. ಇದಕ್ಕೆ ಒಂದು ತಿಂಗಳು ಅವಧಿ ಕೊಡುತ್ತೇವೆ. ತಿಂಗ ಳೊಳಗಾಗಿ ಈ ಹಣ ಬಾರದಿದ್ದರೆ ಅವನನ್ನು ನೇಣುಹಾಕುತ್ತೇವೆ," ಎಂದು ಹೇಳಿ ಕಳುಹಿಸಿದನು.

ಪಟ್ಟಣದಲ್ಲಿ ಈ ವಿಷಯ ಯಾರು ಮನಸ್ಸಿಗೆ ಹಚ್ಚಿಕೊಳ್ಳಬೇಕು? ರಾಜರು ಅಸಹಾಯರು; ಸರ್ವಾಧಿಕಾರಿ ಧೋರಣೆಯ ಮನುಷ್ಯ; ತರುಣ ರಾಯನನ್ನು ಉಳಿಸಬೇಕೆಂಬ ಶ್ರದ್ಧೆ ಯಾರಿಗೂ ಇಲ್ಲ. ತಂದೆಗೆ ಕಕ್ಕುಲಿತೆ ಉಂಟು; ತಾಯಿ ಎದೆಗುಂದಿ ಮರುಗಿದಳು; ಆದರೆ ಮೂರು ಸಾವಿರ ಹೊನ್ನು ಎಲ್ಲಿಂದ ಬರಬೇಕು? ಮುದುಕ ಹೆಂಡತಿಯ ಒತ್ತಾಯದಿಂದ ಅರ್ಧ, ತನ್ನದೇ ಇಚ್ಛೆಯಿಂದ ಅರ್ಧ, ನಂಜರಾಜನ ಬಳಿಗೆ ಹೋಗಿ, "ನಾನು ತಕ್ಕಷ್ಟು ಸೇವೆ ಮಾಡಿದ್ದೇನೆ. ನನ್ನ ಮಗ ಶತ್ರುವಿನ ಕೈಗೆ ಸಿಕ್ಕಿದ್ದಾನೆ. ರಕ್ಷಣೆಯ ಹಣ ಕೊಟ್ಟು ಅವನನ್ನು ಬಿಡಿಸಿಕೊಳ್ಳಬೇಕು," ಎಂದು ಬೇಡಿದನು. ಸರ್ವಾಧಿಕಾರಿ ತಿರಸ್ಕಾರದ ಧ್ವನಿಯಿಂದ, "ಇದೇನು ರಾಯರೆ? ಎಂದೋ ನೀವು ಸೇವೆ ಮಾಡಿದಿರಿ ಎಂತ ಈಗ ಈ ಹುಡುಗನ ಅತಿ ಹರಟೆಗಾಗಿ ಮೂರು ಸಾವಿರ ಹೊನ್ನು ಕೊಡುವುದಕ್ಕಾಗುತ್ತದೆಯೆ? ಶತ್ರುವಿನ ಕೈಗೆ ಸೆರೆ ಸಿಕ್ಕು ಎಂತ ಇವನಿಗೆ ಯಾರು ಹೇಳಿದರು? ಹೀಗೆ ದಿನಾ ಒಬ್ಬ ಹುಚ್ಚಾಟ ಆಡಿ ಸೆರೆಯಾದರೆ ಸರಕಾರ ಇವರನ್ನೆಲ್ಲ ಬಿಡಿಸು

ವುದಕ್ಕೆ ಎಷ್ಟು ಕೃಚ್ಛ್ರ ತೆರಬೇಕು? ಅದು ಎಲ್ಲಿಂದ ಬರಬೇಕು? ಮಗ ಹುಟ್ಟಲಿಲ್ಲ ಎಂದೊ, ಯುದ್ಧದಲ್ಲಿ ತೀರಿಕೊಂಡ, ಎಂದು ತಿಳಿದುಕೊಳ್ಳಿ ಹೋಗಿ," ಎಂದನು.

ಮುದುಕ ಜಂಭದ ಮನುಷ್ಯ; ಇವರ ಹತ್ತಿರ ಬಹಳ ಬೇಡುವ ಮನಸ್ಸಿನವನಲ್ಲ. ಮತ್ತೆ ಮಾತಾಡದೆ ಮನೆಗೆ ಹೋದನು; ನಡೆದ ಸಂಗತಿಯನ್ನು ಹೆಂಡತಿಗೆ ಹೇಳಿದನು. ಆಕೆ ಎಲ್ಲವನ್ನೂ ಕೇಳಿ, "ಹೈದರ್ ಮನಸ್ಸುಮಾಡಿದರೆ ಈ ಕೆಲಸ ಆಗಬಹುದು. ಹೋಗಿ ಅವನನ್ನು ಒಂದು ಮಾತು ಕೇಳಬಾರದೆ?" ಎಂದಳು. ಮುದುಕ "ಹೈದರ್? ನಾನು ಹೋಗಿ ಹೈದರನನ್ನು ಬೇಡಲಿ? ನಾನು ಕೆಲಸ ಬಿಟ್ಟ ಮುದುಕ ಹೌದು. ಅವನು ಗಟ್ಟಿಗನೆಂದು ನಂಜರಾಜ ಈ ಮಹಾ ಯೋಧನನ್ನು ಸಭೆಯಲ್ಲಿ ಅಪ್ಪಿಕೊಂಡದ್ದೂ ಉಂಟು. ಆದರೆ ಬಕ್ಷಿ ಮನೆಯ ಒಬ್ಬ ಹಿರಿಯ ಇವನ ಎದುರಿಗೆ ನಿಂತು ಕೈಯೊಡ್ಡುವಷ್ಟು ಇವನು ಹಿರಿಯನಾಗಿಲ್ಲ," ಎಂದನು.

ತಾಯಿ ಈ ಮಾತನ್ನು ಕೇಳಿ ಏನೂ ತೋಚದೆ ನಿಂತಳು. "ಎಲ, ಈ ಗಂಡಸರ ಮನಸ್ಸು ನೋಡಿದೆಯ? ಮಗನ ಜೀವ ಉಳಿಸಬೇಕೆಂದರೂ ತನ್ನ ಮರ್ಯಾದೆಯ ಮಾತು ಇವರಿಗೆ ಮುಂದಾಗಿದೆಯಲ್ಲ! ಹೇಗೆ ಮಾಡುವುದು?" ಎಂದು ಚಿಂತಿಸಿದಳು. ಅರ್ಧ ಗಳಿಗೆ ಬಿಟ್ಟು ಪಾಲಕಿಯಲ್ಲಿ ಕುಳಿತು ಹೈದರನ ಮನೆಗೆ ಹೋದಳು.

ಹೈದರ್, ಜೊತೆಯ, ಕೆಳಗಿನ, ನಾಲ್ವರು ಅಧಿಕಾರಿಗಳೊಡನೆ ಮಾತನಾಡುತ್ತ ಮನೆಯ ಕೈಸಾಲೆಯಲ್ಲಿ ಕುಳಿತಿದ್ದನು. ಆಳು ಬಂದು ಅವನಿಗೆ, "ಬೇಕ್ಷಿ ಮಾಸಾಹೆಬ್ ದಯಮಾಡಿಸಿದ್ದಾರೆ," ಎಂದು ವರದಿಮಾಡಿದನು. ಹೈದರನಿಗೆ ಬಹು ಆಶ್ಚರ್ಯವಾಯಿತು; ಅದೇ ಕ್ಷಣದಲ್ಲಿ ಇವರು ತಮ್ಮ ಮಗನ ವಿಷಯ ಏನೊ ಹೇಳುವುದಕ್ಕೆ ಬಂದಿದ್ದಾರೆ ಎಂದೂ ತೋಚಿತು. "ಅವರನ್ನು ಒಳಗೆ ಕರೆದು ತಾ," ಎಂದು ಸೇವಕನಿಗೆ ಹೇಳಿ ಅವನು ಎದ್ದು ನಿಂತನು. ಈಕೆ ಒಳಕ್ಕೆ ಹೆಜ್ಜೆ ಇಟ್ಟೊಡನೆ ತುಂಬ ಮರ್ಯಾದೆಯಿಂದ ಸಲಾಂ ಮಾಡಿದನು. "ದಯಮಾಡಬೇಕು ತಾಯಿ.

ದಾಸನ ಮನೆಗೆ ತಾವೇಕೆ ಪಾದ ಬೆಳಸಿದಿರಿ? ಹೇಳಿ ಕಳುಹಿಸಿದ್ದರೆ ನಾನು ಬರುತ್ತಿದ್ದೆನಲ್ಲ?" ಎಂದನು.

ಈಕೆ, "ಅಪ್ಪ, ನೀವು ಹಾಗೆ ಹೇಳುವುದೇ ಚೆನ್ನು. ನಾವು ಏನನ್ನೊ ಬೇಡುವುದಕ್ಕೆ ಬಂದೆವು. ನಾವು ನಿಮ್ಮಲ್ಲಿಗೆ ಬರಬೇಕು ಹೊರತಾಗಿ ನಿಮಗೆ ಹೇಳಿ ಕಳುಹಿಸಬಾರದು," ಎಂದಳು.

ಹೈದರ್: ತಾಯಿ, ತಾವು ಬೇಡುವುದೇನು, ನಾನು ನೀಡುವುದೇನು? ನೀವು ನನಗೆ ಅನ್ನ ಹಾಕಿ ಕಾಪಾಡಿದ್ದೀರಿ. ಆಗಲಿ, ಏನು ಸಂಗತಿ, ಅಪ್ಪಣೆ ಮಾಡಿರಿ.

"ಶ್ರೀನಿವಾಸರಾಯ ಹಗೆಗಳಿಗೆ ಸೆರೆಯಾಗಿದ್ದಾನೆ. ಸಂಗತಿ ತಿಳಿದಿರಬೇಕಲ್ಲ?"

"ಹೌದು ಕೇಳಿದೆ."

"ಮೂರು ಸಾವಿರ ಹೊನ್ನು ಕೊಟ್ಟರೆ ಬಿಡತಾರಂತೆ. ಕೊಡೋಣ ಎಂದರೆ ನಮ್ಮ ಹತ್ತಿರ ಇಲ್ಲ. ನಾವು ಯಾವಾಗಲೂ ಹಣ ಉಳಿಸಿದವರಲ್ಲ. ಅವನು ಪ್ರಭುಗಳ ದಳಪತಿ. ಅವನನ್ನ ನೀವು ಕಾಪಾಡಿಕೊಳ್ಳಬೇಕಲ್ಲ?"

"ತಾಯಿ, ಇದು ಏನಿದ್ದರೂ ಸರ್ವಾಧಿಕಾರಿಗಳು ಮಾಡಬೇಕಾದ ಕೆಲಸ. ಮೂರು ಸಾವಿರ ಹೊನ್ನು ನಾನು ಕೊಡಿಸುವಹಾಗಿಲ್ಲ."

"ಅಪ್ಪ, ನಾನು ಹೆಂಗಸು. ನೀವು ಏನು ಮಾಡಬಹುದೊ, ಏನು ಮಾಡಬಾರದೊ ನನಗೆ ತಿಳಿಯೋದಿಲ್ಲ. ಆ ಒಬ್ಬ ಮಗನ್ನ ಹೆತ್ತೆ; ಬೇರೆ ನಮಗೆ ಮಕ್ಕಳಿಲ್ಲ. ಅವರಪ್ಪ ಮನೆಯಲ್ಲಿ ಮುದುರಿ ಕುಳಿತಿದ್ದಾರೆ. ಏನೋ ಹುಡುಗನಿಗೆ ಹಿರಿಯರಾಗಿ, ಪ್ರಭುಗಳ ಹತ್ತಿರ ಮಾತು ಹರರಾಗಿ ಇದ್ದೀರಿ ಅಂತ ನಿಮ್ಮ ಹತ್ತಿರ ಬಂದೆ; ನನ್ನ ದುಃಖ ಹೇಳಿಕೊಂಡೆ. ಆ ಹುಡಗನ್ನ ನಿಮ್ಮ ತಮ್ಮ ಅಂತ ಎಣಿಸಿ ಕಾಪಾಡೋದು ನಿಮ್ಮ ಕೆಲಸ. ಆದರೆ ಮಾಡಿ; ಆಗದೆ ಇದ್ದರೆ ತಿಳಿದೇ ಇದೆ."

"ಏನು ಮಾಡುವುದೊ ತೋರಬಲ್ಲದಲ್ಲ ತಾಯಿ."

"ಅಪ್ಪ, ತಾಯಿಯಾದೋಳು ಬಂದು ಸೆರಗೊಡ್ಡಿ ಬೇಡಿದ್ದೇನೆ. ಅದರಲ್ಲಿ ಭಿಕ್ಷೆಹಾಕಿ ನನ್ನ ಕಳುಹಿಸಬೇಕು." ಹೀಗೆಂದು ಆ ತಾಯಿ ತನ್ನ ಸೆರಗಿನ ಕೊನೆಯನ್ನು ಹರಹಿ ಹೈದರನ ಎದುರಿಗೆ ಹಿಡಿದಳು;

ಅವನ ಮುಖವನ್ನು ನೋಡಿದಳು ; ಅವಳ ಕಣ್ಣಿಂದ ತಟ್ಟನೆ ನೀರು ಹರಿಯಿತು.

ಹೈದರ್, “ತಾಯಿ, ಕೊಟ್ಟೆ ಎಂದು ಹೇಳಲಾರೆ. ನೀವು ಹಾಕಿದ ಅನ್ನದಾಣೆ ನನ್ನ ಕೈಯಲ್ಲಾದದ್ದನ್ನು ಮಾಡುತೇನೆ. ಸಾಧ್ಯವಾದರೆ ನಿಮ್ಮ ಮಗನನ್ನು ಕರತರುತ್ತೇನೆ. ಮನೆಗೆ ದಯಮಾಡಿ,” ಎಂದನು.

ಹೈದರ್ ಅಂದೇ ಸಣ್ಣ ಒಂದು ದಳದೊಡನೆ ಕಾನಕಾನಹಳ್ಳಿಗೆ ಹೋದನು ; ಶತ್ರುವಿನ ವಿವರವನ್ನು ಸರಿಯಾದ ಜನರ ಮೂಲಕ ಕೇಳಿ ತಿಳಿದನು. ಗೋಪಾಲಹರಿಯ ಮಗ ಹರಿಗೆ ಬೇಟೆಯೆಂದರೆ ಇಷ್ಟ ವೆಂದೂ ಅವನು ಕಾನಕಾನಹಳ್ಳಿಯ ಸರಹದ್ದಿಗೆ ಎರಡು ದಿನಕ್ಕೆ ಮೂರು ದಿನಕ್ಕೆ ಒಂದುಸಲ ಬರುತ್ತಿದಾನೆಂದೂ ಜನ ಹೇಳಿದರು. ಇವನು ಅಂಥ ಹೊತ್ತಿನಲ್ಲಿ ನಾಲ್ಕು ಜನದೊಡನೆ ಹೋಗಿ ಹೊಂಚಿದ್ದು ಹರಿ ಯನ್ನು ಸೆರೆಹಿಡಿದನು ; ಅವನನ್ನು ಕಾನಕಾನಹಳ್ಳಿಯಲ್ಲಿ ನಿಲ್ಲಿಸಿಕೊಂಡು ಗೋಪಾಲಹರಿಗೆ, “ನಮ್ಮ ದಳಪತಿ ಶ್ರೀನಿವಾಸರಾಯ ನಿಮ್ಮಲ್ಲಿ ಸೆರೆ ಯಾಗಿದ್ದಾನೆ. ನಿಮ್ಮ ಮಗ ಹರಿ ನಮಗೆ ಸೆರೆಸಿಕ್ಕಿದಾನೆ. ಶ್ರೀನಿವಾಸ ರಾಯನನ್ನು ಹಿಂತಿರುಗಿ ಕಳುಹಿಸಿದರೆ ನಾವು ಹರಿಯನ್ನು ಹಿಂದಕ್ಕೆ ಕಳುಹಿಸುತ್ತೇವೆ. ಹಾಗಿಲ್ಲದೆ ನೀವು ಶ್ರೀನಿವಾಸರಾಯನಿಗೆ ಯಾವ ತೊಂದರೆ ಕೊಟ್ಟರೂ ಅದರ ಎರಡರಷ್ಟು ತೊಂದರೆ ಇಲ್ಲಿ ನಿಮ್ಮ ಮಗ ನಿಗೆ ಕೊಡುತ್ತೇವೆ. ಶ್ರೀನಿವಾಸರಾಯನನ್ನು ಕೊಲ್ಲುವುದಾಗಿ ನೀವು ಹೇಳಿ ಕಳುಹಿಸಿದಿರಂತೆ. ಅದೇ ನಿಜವಾದರೆ, ಯಾವದಿನ ಎಷ್ಟು ಹೊತ್ತಿಗೆ ಅದನ್ನು ಮಾಡಬೇಕೆಂದಿದೀರಿ, ತಿಳಿಸಿರಿ ; ಅದೇ ಮುಹೂ ರ್ತದಲ್ಲಿ ಇಲ್ಲಿ ನಿಮ್ಮ ಮಗನನ್ನು ಸ್ವರ್ಗಕ್ಕೆ ಕಳುಹಿಸುವುದಾಗುತ್ತದೆ. ಶ್ರೀನಿವಾಸರಾಯ ಹರಿ ಇಬ್ಬರೂ ಅಲ್ಲಿ ಜೊತೆಯಾಗಿ ಇರಬಹುದು,” ಎಂದು ಹೇಳಿಕಳುಹಿಸಿದನು. ಗೋಪಾಲಹರಿ, “ನಿಮ್ಮ ದಳಪತಿ ನಮ್ಮ ಸರಹದ್ದಿನಲ್ಲಿ ಬಂದು ನಮ್ಮ ಸೆರೆಯಾದನು. ನಮ್ಮ ಮಗನನ್ನು ನೀವು ಮೋಸದಿಂದ ಸೆರೆ ಹಿಡಿದಿದ್ದೀರಿ,” ಎಂದು ಚರ್ಚೆಮಾಡಿದನು. ಹೈದರ್, “ನಾವು ಈ ವಿಷಯವನ್ನು ಚರ್ಚಿಸುವುದಕ್ಕೆ ಒಪ್ಪುವುದಿಲ್ಲ. ನಿಮ್ಮ ಇಷ್ಟದಂತೆ ನೀವು ಮಾಡಬಹುದು,” ಎಂದನು. ಮೂರು

ದಿನದಲ್ಲಿ ಶ್ರೀನಿವಾಸರಾವ್ ಹೈದರನವಶಕ್ಕೆ ಬಂದನು ; ಹರಿ ತಂದೆಯ ಬಳಿಗೆ ಹೋದನು.

ಹೈದರ್ ಶ್ರೀನಿವಾಸರಾಯನನ್ನು ಕರೆದು ತಂದು ಅವರ ಮನೆಯಲ್ಲಿ ಬಿಟ್ಟನು. ಮನೆಯ ಜನ, ಊರಜನ ಅವನನ್ನು ಎಷ್ಟು ಹೊಗಳಿತೆಂದು ಹೇಳುವುದು ಸಾಧ್ಯವಿಲ್ಲ. ಮುಖ್ಯವಾಗಿ ಹೈದರ್ ಬರ್ಕಿ ಮನೆತನವನ್ನು ಉಳಿಸಿಕೊಟ್ಟು ಉಪಕಾರಿ ಆದನು. ಮತಬೇರೆ, ಜಾತಿ ಅಲ್ಲ, ಎನ್ನುವುದಿಲ್ಲದಿದ್ದರೆ ಅವನು ಆ ಮನೆಯಲ್ಲಿ ಒಬ್ಬ ಹಿರಿಯ ಮಗನಂತೆ ನಡೆದಾಡಬಹುದಾಗಿತ್ತು. ಈಗಲೂ ನಡೆದಾಟ ಇಲ್ಲಹೊರತಾಗಿ ಮನೆಯ ತಾಯ ಹಿರಿಯ ಮಗನಂತೆ ಆಗಿದ್ದನು. ಶ್ರೀನಿವಾಸರಾಯನ ತಂದೆಗೆ ಕೂಡ ಹೈದರನನ್ನು ಕಂಡರೆ ಹೇಳಲಾಗದ ಮೆಚ್ಚಿಗೆ. ಮುದುಕನದು ಈಗ ಯಾರೂ ಹೈದರನಿಗೆ ಸಮನಲ್ಲ ಎಂದೇ ನಂಬಿಕೆ.

ಹೈದರ್ ಮನೆಗೆ ಬರುವ ವೇಳೆಗೆ ಶ್ರೀನಿವಾಸರಾಯ ಬಾಗಿಲಲ್ಲಿ ಕಾದಿದ್ದು ಅವನನ್ನು ಒಳಕ್ಕೆ ಕರೆದುಕೊಂಡುಹೋದನು. ತಾಯಿ ಕೈಸಾಲೆಗೆ ಬಂದು, "ಎಲ್ಲರೂ ಚೆನ್ನವೆ?" ಎಂದು ಕೇಳಿದಳು. ಹೈದರ್ ಸಲಾಂಮಾಡಿ ಮರ್ಯಾದೆಯಿಂದ ಉತ್ತರ ಹೇಳಿದನನು. ಕೈಸಾಲೆಯ ಪಕ್ಕದ ಕೋಣೆಯಲ್ಲಿ ಮುದುಕ ಕುಳಿತಿದ್ದನು ; ಹೈದರನನ್ನು ಕಂಡೊಡನೆ ಏಳುವುದಕ್ಕೆ ಯತ್ನಮಾಡಿದನು. ನವಾಬ ಅವನಿಗೆ ಸಲಾಂಮಾಡಿ, "ತಾವು ಏಳಬಾರದು. ನಾನು ನಿಮ್ಮ ಆಜ್ಞೆಯನ್ನು ನಡೆಸುತ್ತಿದ್ದ ಹೈದರ್ ನಾಯಕ್," ಎಂದನು. ಯಜಮಾನ ಹಾಗೆಯೇ ಕುಳಿತು ಬಲಗಡೆಗೆ ಹೈದರನಿಗೆ ಪೀಠವನ್ನು ತೋರಿಸಿದನು. ನವಾಬ ತುಂಬ ಸಂತೋಷದಿಂದ ಅಲ್ಲಿ ಕುಳಿತು, ತಂದುಕೊಟ್ಟ ಉಪಹಾರವನ್ನು ತೆಗೆದುಕೊಂಡು, ಎಲ್ಲರ ಕ್ಷೇಮ ಸಮಾಚಾರವನ್ನು ವಿವರವಾಗಿ ಕೇಳಿ, ಅಪ್ಪಣೆ ಪಡೆದು ತನ್ನ ಬಿಡಾರಕ್ಕೆ ಹೋದನು.

ಮರುದಿನ ಸೂರ್ಯೋದಯಕ್ಕೆ ಮೊದಲೆ ಅವನು ಕುದುರೆಯೇರಿ ಬೆಂಗಳೂರಿಗೆ ಪ್ರಯಾಣಮಾಡಿದನು.

೬೩

ವೀರಣ್ಣ ಸೂರಪ್ಪ ಹಿಂತಿರುಗಿ ಹೊರಟ ಆರು ದಿವಸದಲ್ಲಿ ನಾಯಕ, ಶಾಂತವ್ವ ಪರಿವಾರದೊಂದಿಗೆ ಪಟ್ಟಣವನ್ನು ಕುರಿತು ತೆರಳಿದರು. ಆಗಿನ ಕಾಲಕ್ಕೆ ಇಂಥ ಪ್ರಯಾಣ ರಾಜರಿಗೆ ರಾಜಮಾತ್ರರಿಗೆ ಮಾತ್ರ ಸಾಧ್ಯ. ಎರಡು ತಂಗು ಮುಂದಾಗಿ ನಾಲ್ಕು ಪಾಲಕ್ಕಿ, ಹತ್ತು ತಟ್ಟು ಹೊರಟು ಅಲ್ಲಲ್ಲಿ ಕಾದು ನಿಂತಿರಬೇಕು. ಪ್ರಯಾಣಿಕರು ಆದಷ್ಟು ದೂರ ಪಾಲಕಿಯಲ್ಲಿ, ದಾರಿ ಕಳೆಯಬೇಕು. ಯಾವ ಕ್ಷಣದಲ್ಲೂ ಇವರಿಂದ ಐದು ಹರಿದಾರಿಯ ಮುಂದೆ, ಎರಡು ಪಲ್ಲಕ್ಕಿ, ಇಳಿಯುವುದಕ್ಕೆ ಊಟಕ್ಕೆ ತಕ್ಕ ಏರ್ಪಾಡು, ಇರಬೇಕು. ನಗರದ ನಾಯಕನಾಗುವವನಿಗೆ ಇದು ಒಂದು ಕಷ್ಟವಲ್ಲ. ಸಾಲದ್ದಕ್ಕೆ ಶಾಂತವ್ವ ಬೇರೆ ಜೊತೆಗಿದ್ದಾಳೆ. ಚಿನ್ನಬಸವ ಈ ಜೊತೆಯ ಸುಖವನ್ನು ಈ ಮುನ್ನ ಅರಿತಿರಲಿಲ್ಲ. ಅರಮನೆಯಲ್ಲಿ ಎಲ್ಲ ಹೊತ್ತೂ ಮರ್ಯಾದೆಯ ಇಕ್ಕಟ್ಟು. ನಾಯಕನೂ ಶಾಂತವ್ವನೂ ರಾಜರಾಣಿಯರಾಗಿ ಬಾಳಬಹುದು ಹೊರತು ಬರಿಯ ಗಂಡ ಹೆಂಡಿರಾಗಿ ಬಾಳುವುದು ಅಲ್ಲಿ ಸಾಧ್ಯವಾಗಿರಲಿಲ್ಲ. ದಾರಿಯಲ್ಲಿ, ಶಾಂತವ್ವ ಪಾಲಕಿಯಲ್ಲಿ ಕುಳಿತಿರುತ್ತ, ನಾಯಕ ಕುದುರೆ ಮೇಲೆ ಕುಳಿತು ಪಕ್ಕದಲ್ಲೇ ಪಯಣ ಬೆಳಸುವನು. ಪರಿಜನ ಇವರ ಮಾತಿಗೆ ಅಡ್ಡಿಯಾಗಬಾರದೆಂದು ದೂರದಲ್ಲಿ ನಡೆಯುವುದು. ಬೋಯಿಗಳಿಂದ ಇವರ ಸರಸಕ್ಕೆ ಅಡ್ಡಿಯಿಲ್ಲ. ಕಾಡು ಸೀಮೆಯಲ್ಲಿ ಸುಳಿಯುವುದು, ಹಲವು ನದಿಗಳನ್ನು ದಾಟುವುದು, ಬೇಡ ಎಂದು ಇವರು ಶಿವಮಗ್ಗಿಯನ್ನು ಸೇರಿ ಅಲ್ಲಿಂದ ಬೆಂಕೀಪುರ, ಬೀರೂರು, ಅರಸೀಕೆರೆಯ ಮಾರ್ಗವಾಗಿ ಬಯಲು ನಾಡಿನಲ್ಲಿ ಸುಸೂತ್ರವಾಗಿ ಮುಂದರಿದರು. ಪ್ರಯಾಣ ಹತ್ತಿರ ಹತ್ತಿರ ಹದಿನೈದು ದಿನ ಹಿಡಿಯಿತು. ಇವರೆಲ್ಲ ತ್ರಯೋದಶಿಯ ದಿನ ಕರೀಘಟ್ಟದ ಬಳಿ ನಿಂತರು.

ಇವರು ಚಿನ್ನರಾಯಪಟ್ಟಣಕ್ಕೆ ಬರುವ ವೇಳೆಗೇ ಸೂರಪ್ಪ ಅರಮನೆಯ ಬಿಡದಿಯ ಜನದೊಂದಿಗೆ ನಾಯಕನನ್ನು ಎದುರುಗೊಂಡನು. ಅಲ್ಲಿಂದ ಇವರನ್ನು ಅತಿಥಿಗಳೆಂದು ನೋಡಿಕೊಂಡು ಕರೆದು ತಂದನು.

ಕರೀಘಟ್ಟದಲ್ಲಿ ಅರಮನೆಯ ಪರವಾಗಿ ಮೊಕದಂ ಆಲಿ ಬಂದು ನಾಯ ಕನಿಗೆ ಮರ್‍ಯಾದೆ ತೋರಿದನು; "ರಾಜರು, ರಾಜಮಾತೆ, ರಾಜಕುಟುಂಬ ಎಲ್ಲ ತಮ್ಮನ್ನು ಬರಮಾಡಿಕೊಳ್ಳುವುದಕ್ಕೆ ಆತುರದಿಂದ ಕಾದಿದ್ದಾರೆ," ಎಂದನು.

ನಾಯಕನಿಗೆ ಇದರಿಂದೆಲ್ಲ ಎಷ್ಟು ಸಂತೋಷ ಆಯಿತೊ ಅದು ಯಾರಿಗೂ ತಿಳಿಯುವಂತಿರಲಿಲ್ಲ. ಶಾಂತವ್ವ ಈ ಒಂದೊಂದು ಮಾತಿ ನಿಂದಲೂ ಹೇಳತೀರದ ಆನಂದವನ್ನು ಅನುಭವಿಸಿದಳು. ಬಿದನೂರಲ್ಲಿ ತನ್ನದೆ ಅರಮನೆಯಲ್ಲಿ ನಾಯಕ ಯಾರಿಗೂ ಬೇಡದವನಂತೆ ಬಾಳಬೇ ಕಾಗಿದ್ದಿತು. ಅವನ ಮನೆಯ ಗೋಡೆ ಅವನಕಡೆ ಸಿಣಿಕಿ ನೋಡುತ್ತಿ ದೆಯೊ ಎಂಬಂತೆ ಕಾಣುವುದು. ಇಲ್ಲಿಯೋ ಅವನಿಗೆ ರಾಜೋಚಿತ ಮರ್‍ಯಾದೆ, ರಾಜೋಚಿತ ವಾಕ್ಯಗಳು, ರಾಜೋಚಿತ ವ್ಯವಹರಣೆ. ಶಾಂತ ವ್ವನಿಗೆ ಒಂದು ಕತ್ತಲ ಕೋಣೆಯಿಂದ ಹೊರಕ್ಕೆ ಬಂದರೆ ಹೇಗೆ ಹಾಗೆ ಮನಸ್ಸು ಅರಳಿತು: ಅವಳ ಜೀವಕ್ಕೆ ಇದು ಯಾವುದೊ ಬೇರೆ ಲೋಕ ಎಂಬಂತೆ ತೋರಿತು. ಅವಳು ತನಗಾಗಿ, ಅದಕ್ಕಿಂತ ಹೆಚ್ಚಾಗಿ ತನ್ನ ಗಂಡನಿಗಾಗಿ, ತಾವು ಈ ಪ್ರಯಾಣ ಬಂದದ್ದು ಬಹು ಒಳ್ಳಿತಾಯಿತೆಂದು ಸಂತೋಷಪಟ್ಟಳು.

ಕೆಂಚವ್ವೆ ತನ್ನ ರಾಣಿಯ ಜೊತೆಗೆ ಬಂದಿದ್ದಳು. ಅವಳಿಗೆ ತನ್ನ ಒಡತಿ ಆ ಹದಿನೈದು ದಿನದ ಪ್ರಯಾಣದಲ್ಲಿ ಬತ್ತಿ ಸರಿಮಾಡಿದ ದೀಪದ ಕುಡಿಯಂತೆ ಹೆಚ್ಚಿ ಬೆಳಗಿದಳು ಎಂದು ಕಂಡಿತು. ಅವಳಿಗಾದರೂ ಈ ಅನುಭವವೆಲ್ಲ ಹೊಸತಾಗಿದ್ದಿತು, ಸುಖದಾಯಕವಾಗಿದ್ದಿತು.

ಮಲ್ಲಯ್ಯನೂ ಪರಿವಾರದಲ್ಲಿ ಬಂದಿದ್ದನು. ಆದರೆ ಕೆಂಚವ್ವೆಯ ಸಂತೋಷಕ್ಕೆ ಅದು ಮುಖ್ಯ ಕಾರಣವಲ್ಲ. ಅವಳು ತನ್ನ ಬಾಳಿನ ಸುಖ ದಲ್ಲಿ ತನ್ನ ಒಡತಿಯ ಬಾಳ ಸುಖದ ಪ್ರತಿಬಿಂಬವನ್ನು ಮಾತ್ರ ಕಾಣು ತ್ತಿದ್ದಳು. ಒಡತಿ ಅಷ್ಟು ಸುಖ ಪಡುತ್ತಿದ್ದಾಳೆಂದು ಅವಳಿಗೆ ತೋರ ದಿದ್ದರೆ ಮಲ್ಲಯ್ಯ ಜೊತೆಗಿದ್ದನೆಂಬ ಕಾರಣದಿಂದ ಮಾತ್ರ ಅವಳು ಅಷ್ಟು ಸುಖಿಯಾಗುತ್ತಿರಲಿಲ್ಲ.

## ೬೪

ಚತುರ್ದಶಿಯದಿನ ನಾಯಕ ಶಾಂತವ್ವ ನದಿಯಲ್ಲಿ ಸ್ನಾನಮಾಡಿ ಶಿವಪೂಜೆ ಮುಗಿಸಿಕೊಂಡು, ಕರೀಘಟ್ಟದ ದೇವಾಲಯದ ಅರ್ಚಕರು ತಂದು ಒಪ್ಪಿಸಿದ ದೈವ ಪ್ರಸಾದವನ್ನು ಸ್ವೀಕರಿಸಿ, ಹೊಳೆ ದಾಟಿ ಶ್ರೀರಂಗ ಪಟ್ಟಣ ಇರುವ ದ್ವೀಪವನ್ನು ಮುಟ್ಟಿದರು; ಮಧ್ಯಾಹ್ನಕ್ಕೆ ಮುನ್ನ ಅರ ಮನೆಯನ್ನು ಸೇರಿದರು. ಬೇರೆಯೊಂದು ಸಂಸ್ಥಾನದ ರಾಜರಾಣಿ ಬರುತ್ತಿದಾರೆ ಎಂಬ ಸುದ್ದಿ ಊರಿನಲ್ಲಿ ಹರಡಿ, ಇವರು ಬರುವ ದಾರಿ ಯುದ್ದಕ್ಕೂ ಜನ ಸಾವಿರ ಸಾವಿರವಾಗಿ ನಿಂತಿತ್ತು. ಅರಮನೆಯ ಪರ ವಾಗಿ ವೈದಿಕರು ಈ ದಂಪತಿಗಳನ್ನು ಎದುರುಗೊಂಡು ಅರಮನೆಯೊಳಕ್ಕೆ ಕರೆದುಕೊಂಡು ಹೋದರು. ಕೈಸಾಲೆಯಲ್ಲಿ ಚೇಟಿಯರು, ಬ್ರಾಹ್ಮಣ ಸುಮಂಗಲಿಯರು, ನಿಂತಿದ್ದು ಶಾಂತವ್ವೆಯನ್ನು ಓಲಯಿಸಿ ರಾಣಿವಾ ಸಕ್ಕೆ ಕರದೊಯ್ದರು. ಬಾಗಿಲಲ್ಲಿ ಅರಸರು ನಾಯಕನನನ್ನು ಇದಿರು ಗೊಳ್ಳಲು ಬಂದರು. ಜೊತೆಗೆ ಕರೆದುಕೊಂಡುಹೋಗಿ ಓಲಗದ ತೊಟ್ಟೆ ಯಲ್ಲಿ ಕುಳ್ಳಿರಿಸಿಕೊಂಡು ಕುಶಲ ಪ್ರಶ್ನೆಮಾಡಿ, "ಮತ್ತೆ ಕಾಣೋಣ. ಈಗ ದಯಮಾಡಿ ಬಿಡಾರದಲ್ಲಿ ನಿಂತು ಸ್ವಲ್ಪ ವಿಶ್ರಮಿಸಿಕೊಳ್ಳುವು ದಾಗಲಿ," ಎಂದು ಹೇಳಿದರು. ನಾಯಕನು "ಅಪ್ಪಣೆ" ಎಂದು ಅವ ರಿಂದ ಬೀಳ್ಕೊಂಡು ಸಮ್ಮುಖದ ಸೇವಕರೊಂದಿಗೆ ತನ್ನ ಬಿಡಾರಕ್ಕೆ ಹೋದನು.

ಶಾಂತವ್ವ ಬೇರೊಂದು ದಾರಿಯಿಂದ ಅದೇ ತೊಟ್ಟಿಯ ಎಡಭಾಗ ದಲ್ಲಿ ಇದ್ದ ರಾಣಿವಾಸದ ಓಲಗಸಾಲೆಯನ್ನು ಸೇರಿದಳು. ಅಲ್ಲಿ ರಾಜ ಮಾತೆ, ರಾಣಿ ಲಕ್ಷ್ಮಮ್ಮಣ್ಣಿ, ಇಬ್ಬರೂ ಇವಳನ್ನು ಇದಿರುಗೊಂಡರು. ರಾಜಮಾತೆ ಶಾಂತವ್ವನನ್ನು ನೋಡಿದವಳೆ, "ಅಯ್ಯೊ ನನ್ನತಾಯಿ, ಇದೆಷ್ಟು ಚೆನ್ನಾಗಿದ್ದೀಯೆ ನೀನು! ನಕ್ಷತ್ರದ ಹಾಗಿದ್ದೀಯಲ್ಲಮ್ಮ!" ಎಂದಳು. ಅದೇ ಉಸಿರಿನಲ್ಲಿ, "ನಾನು ನಿನ್ನನ್ನು ಬನ್ನಿ ಹೋಗಿ ಎನ್ನ ಲಿಲ್ಲ ಎಂತ ಬೇಸರ ಮಾಡಿಕೊಳ್ಳಬೇಡ. ನೋಡು, ನಾನು ನಿಮ್ಮ ಅಜ್ಜಿ ಆಗುವ ವಯಸ್ಸಿನ ಮುದುಕಿ," ಎಂದಳು. ಶಾಂತವ್ವ ನಗೆ ಮುಖ

ದಿಂದ, "ಬಾ ಹೋಗು ಎನ್ನುವುದೇ ಸರಿ. ನಮ್ಮನ್ನ ಹಾಗೆ ಕರೆಯುವ ಜನ ನಮಗೆ ಇಲ್ಲವಾಗಿದಾರೆ," ಎಂದಳು. ರಾಣಿ ಲಕ್ಷ್ಮಮ್ಮಣ್ಣಿ, "ಅಯ್ಯೋ, ಪಾಪ, ತಾಯಿ ಇಲ್ಲವೇ ತಂಗಿ?" ಎಂದು ಕೇಳಿದಳು. ಶಾಂತವ್ವ, "ಇಲ್ಲ ಅಕ್ಕಾಜಿ. ಚಿಕ್ಕಂದೇ ತೀರಿಕೊಂಡರು, ಎಂದಳು."

"ಬಹ ಚಿಕ್ಕಂದೊ? ಇಲ್ಲ ನೋಡಿದ ಜ್ಞಾಪಕ ಇದೆಯೊ?"

"ನೋಡಿದ ಜ್ಞಾಪಕ ಅಲ್ಲ, ಕನಸಿನಲ್ಲಿ ಕಂಡದ್ದು, ತಾಯಿ ಅಂತ ಒಂದು ಮುಖ ನೆನಪಿಗೆ ಬರುತ್ತೆ. ದೊಡ್ಡ ಕಣ್ಣು, ಅಯ್ಯೊ ಪಾಪಾ ಅಂತ ನನ್ನ ಕಡೇಗೆ ನೋಡೋಹಾಗಿರತ್ತೆ. ಕಣ್ಣಂತೆಯೆ ದೊಡ್ಡ ಕುಂಕುಮದ ಬಟ್ಟು."

ಹೀಗೆ ತರುಣಿಯನ್ನು ಮಾತನಾಡಿಸುತ್ತ ರಾಜಮಾತೆ ರಾಣಿ ಅವಳನ್ನು ಜೊತೆಗೆ ಕರೆದುಕೊಂಡುಹೋಗಿ ಒಂದು ಕಡೆ ಕುಳ್ಳಿರಿಸಿಕೊಂಡರು. ರಾಜಮಾತೆ, "ನಿನಗಿನ್ನೂ ಮಕ್ಕಳಾಗಲಿಲ್ಲವೆ ತಾಯಿ?" ಎಂದು ಕೇಳಿದಳು. ಶಾಂತವ್ವ ನಾಚಿಕೆಯಿಂದ ಕಣ್ಣು ತಗ್ಗಿಸಿ ನಗುಮುಖದಿಂದ, "ಇಲ್ಲ," ಎಂದಳು. ರಾಜಮಾತೆ, "ಈ ಸಲ ಆಗುತ್ತೆ, ಸುಮ್ಮನಿರು, ಚಿಂತೆ ಮಾಡಬೇಡ," ಎಂದು ಹಾಸ್ಯವಾಗಿ ಹೇಳಿದಳು.

ರಾಣಿ, "ಚಿಂತೆಯೇನಂತೆ? ಹರೆಯ ಹೋಯಿತು ಅಂತ ಮಕ್ಕಳಾಗಿಲ್ಲವೇನು? ಈಗಿನ್ನೂ ಹೂವಿನ ದಿನ. ಏತರ ಅವಸರ?" ಎಂದಳು.

ಶಾಂತವ್ವ ಇವರ ಮಾತನ್ನು ಕೇಳುತ್ತ ತುಟಿಯಮೇಲೆ, ಕಣ್ಣಿನಲ್ಲಿ, ನಗೆ ಹೊಮ್ಮುತ್ತಿರಲಾಗಿ ತುಂಬಾ ಸಂತೋಷದಿಂದ ಅಳವಟ್ಟ ಏನೊ ಹೊಸ ಬೆಡಗಿನಿಂದ ಬೆಳಗಿದಳು.

ರಾಜಮಾತೆ, "ಅದು ಸರಿ, ಅವರೂ ಇನ್ನೂ ಎಳೆಯವರೇ. ಇನ್ನೂ ಇಪ್ಪತ್ತುವರ್ಷ ಆಗಿಲ್ಲ," ಎಂದಳು.

ಇದಾದಮೇಲೆ ಆಕೆ, "ನಾಯಕರಿಗೆ ಯಾವ ಊಟ ಹೆಚ್ಚಾಗಿ ಸೇರತದೆ, ಏನು, ಎನ್ನುವುದು ನಮ್ಮ ಮನುಷ್ಯರಿಗೆ ತಿಳಿಯದು. ಈ ಒಂದು ದಿನ ನೀನು ಹತ್ತಿರ ಇದ್ದು ಇದನ್ನೆಲ್ಲ ತಿಳಿಯಹೇಳಮ್ಮಾ. ನಾಳೆಯಿಂದ ಬಿಡಾರದ ಮಣಿಯ ಅದನ್ನು ತಾನು ನೋಡಿಕೊಳ್ಳುತ್ತಾನೆ. ಮನೆ ನಿನ್ನದೂ ಅಂತ ಸ್ವತಂತ್ರವಾಗಿ ಕೇಳಿ ಮಾಡಿಸಿಕೊಳ್ಳಬೇಕು,

ಕಂಡೆಯಾ ? ದಾಕ್ಷಿಣ್ಯಪಟ್ಟುಕೊಳ್ಳಬಾರದು," ಎಂದಳು. ಶಾಂತವ್ವ, "ಆಯಿತು ಅಮ್ಮಾಜಿ," ಎಂದಳು.

ರಾಣಿ ಸುಮಂಗಲಿಯನ್ನು ಕರೆದು ಶಾಂತವ್ವನಿಗೆ ಎಲೆ ಅಡಕೆ ಒಪ್ಪಿಸಿದಳು; "ಈಗ ಹೋಗಿ ದಣುವಾರಿಸಿಕೊಳ್ಳಿ; ಮತ್ತೆ ಕಾಣೋಣ," ಎಂದು ಅವಳನ್ನು ಬಿಡಾರಕ್ಕೆ ಕಳುಹಿಸಿಕೊಟ್ಟಳು.

೬೫

ಬಿಡಾರದಲ್ಲಿ ಇವರಿಗಾಗಿ ಮಾಡಿದ್ದ ಏರ್ಪಾಡನ್ನು ನೋಡಿ ನಾಯಕನಿಗೆ ಶಾಂತವ್ವನಿಗೆ ಬಹು ಸಂತೋಷ ಆಯಿತು. ಕೆಂಚವ್ವೆ ಆದರ ಒಳಗೆಲ್ಲ ಹೊಕ್ಕು ಎಲ್ಲ ವಿವರವನ್ನೂ ನೋಡಿ ಬಂದು ಒಡತಿಗೆ, "ಇದು ಏನು ನಮ್ಮ ಬಿದನೂರ ಅರಮನೆ ಅನ್ನೋಹಂಗೇ ಅದೆ ಒಡತ್ಯೋರೆ! ಇವರ ಮಾತು ಈಸು ಬೇರೆ; ಬಣ್ಣ ಪೂರ ಕಪ್ಪು; ಅಂದರೆ ಆಳು ಒಳ್ಳೆಯೋರು ಕಾಣ್ತಾರೆ," ಎಂದಳು.

ಹೊಸ ಸನ್ನಿವೇಶದ ಈ ಸಂತೋಷದಲ್ಲಿ ಚೆನ್ನಬಸವ, ಶಾಂತವ್ವ, ತಮ್ಮ ದಾಂಪತ್ಯ ಜೀವನದಲ್ಲಿ ಹೊಸ ಒಂದು ಘಟ್ಟವನ್ನು ಮುಟ್ಟಿದಂತೆ ಆದರು. ಇದುವರೆಗೆ ಅವರು ನಿಜವಾಗಿ ಜೊತೆಗಿದ್ದದ್ದೂ ಬಹು ಕೊಂಚ. ಈ ಪ್ರಯಾಣದಲ್ಲಿ ಅವರ ಜೀವಗಳು ಹತ್ತಿರ ಹತ್ತಿರ ಬಂದವು; ಈ ಅರಮನೆಯಲ್ಲಿ ಇಳಿದಮೇಲೆ ಎರಡೂ ಒಂದುಗೂಡಿನಿಂತವು. ಈ ಭಾವವನ್ನು ಅವರು ಒಬ್ಬರನ್ನರಿಯದೆ ಒಬ್ಬರು ಇಬ್ಬರೂ ಅನುಭವಿಸಿದರು. ಊರಲ್ಲಿದ್ದರೆ ಆ ತಾಯನ್ನು ನೆನೆದು ಇವನಿಗೆ ಬೇಸರ, ಸಂಕೋಚ; ಇವನ ಬೇಸರ ಸಂಕೋಚವನ್ನು ನೋಡಿ ಇವಳಿಗೆ ಹಿಂಜರಿವು, ಕಳವಳ. ಅಲ್ಲಿಯ ಅರಮನೆಯ ಗಾಳಿ ಹೊಗೆ ತುಂಬಿದ ಗಾಳಿಯಂತೆ ಉಸಿರಾಡುವುದನ್ನು ಕಷ್ಟಮಾಡಿದ್ದಿತು. ಇಲ್ಲಿ ಆ ಎಲ್ಲ ಸಂಕೋಚ ಬೇಸರದಿಂದ ಕೊಸರಿಕೊಂಡು ಹಗುರವಾಗಿ ಬೀಸುವ ಗಾಳಿಯಲ್ಲಿ ಒಂದು ಎತ್ತರದಲ್ಲಿ ನಿಂತಂತೆ ಇವರಿಗೆ ನಿರಾಳ ತೋರಿತು. ಶಾಂತವ್ವ ಕೊಂಚದಿನಕ್ಕಾದರೂ ಊರಿಂದ ಇತ್ತ ಬಂದದ್ದು ಒಳ್ಳೆಯದಾಯಿತೆಂದುಕೊಂಡಳು.

ರಾಜ, ರಾಜಮಾತೆ, ರಾಣಿ ಲಕ್ಷ್ಮಮ್ಮಣ್ಣಿ, ಇವರಿಗೆ ಕೂಡ ನಾಯಕ ಶಾಂತವ್ವ ಬಂದದ್ದು ಒಂದು ಹೊಸ ಹುರುಪನ್ನು ತಂದಿತು. ಖಂಡೇರಾಯ ಸೋತಂದಿನಿಂದ ಇದುವರೆಗೆ ಅರಸರು ಯಾವ ಮಾತಾಡಿದರೆ ಏನು ಕೇಡಡಸುವುದೊ ಎಂದು ಹೆದರಿದಂತೆ, ಒಂದು ಸೆರೆಯಲ್ಲಿ ಇದ್ದಂತೆ, ನಿರುದ್ಯಮಿಯಾಗಿ ದಿನ ಕಳೆದಿದ್ದರು. ಸಾಮಾನ್ಯ ಮನುಷ್ಯ ತನ್ನ ಮನೆಯಲ್ಲಿ ದೊರೆಯಾಗಿರಬಹುದು; ಇಮ್ಮಡಿ ಕೃಷ್ಣರಾಜರು ದೊರೆಯಾದರೂ ತಮ್ಮ ಅರಮನೆಯಲ್ಲಿ ಒಬ್ಬ ಸಾಮಾನನಿಗಿಂತ ಕಡಮೆಯ ಸ್ಥಿತಿಯಲ್ಲಿ ಇರಬೇಕಾಗಿತ್ತು. ಈ ದುರವಸ್ಥೆಯಲ್ಲಿ ಎರಡು ವರ್ಷ ಆಳಲಿ ಅರಸರು ಈ ಸಲ ಸ್ವಲ್ಪ ಧೈರ್ಯಮಾಡಿದ್ದರು: ಸ್ವತಂತ್ರಿಸಿ ನವರಾತ್ರಿ ಉತ್ಸವಕ್ಕೆ ನಾಲ್ಕು ಜನರನ್ನು ಕರೆದಿದ್ದರು. ನಾಯಕ ಅತಿಥಿಯಾಗಿ ಬಂದು ಇವರ ಪೂಜೆಯನ್ನು ಕೊಂಡದ್ದು ಇವರ ಹೊಸ ಸ್ವಾತಂತ್ರ್ಯದ ಸ್ಪಷ್ಟ ಲಾಂಛನವಾಗಿ ಕಂಡಿತು. ರಾಜಮಾತೆಗೆ, ಈ ಯೋಚನೆಯೊಂದಿಗೆ, ಈ ಎಳೆ ಹರೆಯದ ಗಂಡು ಹೆಣ್ಣನ್ನು ನೋಡುವ ಅಪೂರ್ವ ತೃಪ್ತಿಯೊಂದು ದೊರೆಯಿತು. ರಾಣಿಗಾದರೂ ಇಂಥದೇ ಒಂದು ತೃಪ್ತಿ. ಮಗನಿಗೆ ಇನ್ನೇನು ಮದುವೆ ಆಗಬೇಕು. ಮುಂದೆ ಬರುವ ಸೊಸೆ ಇಂಥವಳಾಗಿರಲಿ ಎಂದು ತೋರಿಸುವುದಕ್ಕೆ ಸಂಸಾರದ ಲಕ್ಷ್ಮಿ ಈ ಮಗುವನ್ನು ಮನೆಗೆ ಕರೆತಂದಳೊ ಎಂದು ತೋಚಿತು. ಎಂಥ ಚೆಲುವೆ ಹುಡುಗಿ! ಆ ಕಣ್ಣು, ಆ ತುಟಿ, ನೀಟಾದ ಆ ಮೂಗು, ಎಂಥ ಲಕ್ಷಣ! ನಕ್ಕರೆ ತುಟಿಯಲ್ಲ, ಕಣ್ಣಲ್ಲ, ಮುಖವೆಲ್ಲ ನಗುತ್ತದೆಯಲ್ಲ! ಎಂಥ ಎಳೆಯ ಮುಖ, ಎಷ್ಟು ಅಚ್ಚಮನಸ್ಸು! ಒಂದು ಅರಮನೆಯ ಒಡತಿಯಾಗಿಯೂ ಹೆಮ್ಮೆ ಇಲ್ಲದ ಮುಖ. ಬಹು ಒಳ್ಳೆ ಹುಡುಗಿ. ಹೀಗೆ ಚೆನ್ನಬಸವ ಶಾಂತವ್ವ ಈ ಮನೆಗೆ ಬಂದು ತಾವು ಒಂದು ಸುಖವನ್ನು ಕಂಡಂತೆ ಈ ಮನೆಯ ಜನಕ್ಕೆ ಅಂಥದೇ ಒಂದು ಸುಖವನ್ನು ತಂದರು.

೩೩

ನವರಾತ್ರಿ ಉತ್ಸವದ ಕಲಾಪ ವಿಸ್ತಾರವಾಗಿ ಬೆಳೆಯಿತು. ರಾಜ ಮಾತೆ ಪ್ರತಿಯೊಂದು ವಿವರವೂ ತಾನು ಚಿಕ್ಕಂದು ನೋಡಿದ್ದ ಒಂದು ವೈಭವದ ಮಟ್ಟಕ್ಕೆ ಮುಟ್ಟುವಂತೆ ನೋಡಿಕೊಂಡಳು. ಚಿಕ್ಕದೇವರಾಜರು ಸಿಂಹಾಸನವನ್ನು ಅಲಂಕರಿಸಿದ್ದ ಕಾಲದಲ್ಲಿ ಈ ವೈಭವ ಈ ವಿಜೃಂಭಣೆ ಇದ್ದಿರಬಹುದು, ತಿರುಗಿ ಅದು ಕಾಣುತ್ತಿರುವುದು ಈಗಲೆ, ಎಂದು ಅರಮನೆಯ ವೃದ್ಧಸೇವಕರು ಹೇಳಿಕೊಂಡರು. ಒಡೆಯರ ನಂಟಿನ ಮಂದಿ ಸರ್ವಾಧಿಕಾರಿಗಳಾಗಿ, ತಮ್ಮ ಅಧಿಕಾರ ಒಡೆಯರಿಂದ ಬಂದದ್ದು ಎಂಬುದನ್ನು ಮರೆತು ನಡೆಯತೊಡಗಿ, ಹತ್ತಿರ ಹತ್ತಿರ ಮೂವತ್ತು ವರುಷ ಆಗಿದ್ದಿತು. ಸಿಂಹಾಸನದ ಮೇಲೆ ಕುಳಿತ ಹೊತ್ತಿನಲ್ಲಿ ಅರಸರು ಈ ದುಷ್ಟ ಜನರಿಗೆ, ಮನೆ ಮನೆಯಲ್ಲಿ ಹೆಣ್ಣುಮಕ್ಕಳು ಮಂಚಿಗೆಯ ಮೇಲೆ ಕೂರಿಸುವ ಗೊಂಬೆಗಳಂತೆ, ಅರಮನೆಯಲ್ಲಿ ಆಟಕ್ಕೆ ತಾವು ಕೂರಿಸಿದ ಬರಿಯ ಒಂದು ಗೊಂಬೆಯಾಗಿ ಕಾಣಿಸಿದರು. ರಾಜರು ಪಟ್ಟಕ್ಕೆ ಬಂದಂದು ಎಳೆಯ ಹುಡುಗ. ಆಗ್ಗೆ ಈ ಭಾವನೆ ಒಂದರ್ಥಕ್ಕೆ ಸರಿಯೆ. ಹಿರಿಯರು ವಾತ್ಸಲ್ಯದಿಂದ ನೋಡಿಕೊಂಡೆ ಕಾಪಾಡಿಕೊಳ್ಳ ಬೇಕಾದ ವಸ್ತು ಹುಡುಗ. ಆದರೆ ಈ ದುರ್ಬುದ್ಧಿಯ ಜನಕ್ಕೆ ಕೃಷ್ಣ ರಾಜರು ಪ್ರಾಯಬಂದಮೇಲೂ ಬರಿಯ ಗೊಂಬೆಯಾಗಿ ಕಂಡರು. ಮೊದಲು ದಾಕ್ಷಿಣ್ಯದ ಸಲುವಾಗಿ ಸಹಿಸಿಕೊಂಡು ಸುಮ್ಮನಿದ್ದ ರಾಜರು ಆಮೇಲೆ ನಿಸ್ಸಹಾಯರಾಗಿ ಸ್ಥಿತಿಯನ್ನು ಸಹಿಸಿಕೊಳ್ಳಬೇಕಾಯಿತು. ಸಹಿಸಿ ಸಾಕಾಯಿತು ಎಂದು ಅವರು ಸಾಹಸ ಮಾಡಿದ್ದು ಈಸಲವೆ ಮೊದಲು. ಪರಿಣಾಮ ಹೇಗಾದರೂ ಆಗಲಿ, "ನಾನು ಒಡೆಯ" ಎಂದು ನಡೆದಷ್ಟರಿಂದಲೆ ಪ್ರಭುಗಳಿಗೆ ಒಂದು ಉಲ್ಲಾಸ ಮೂಡಿತ್ತು. ಸೋತು ಕುಳಿತಿದ್ದ ಮಗ ಇಷ್ಟುಮಟ್ಟಿಗೆ ಧೈರ್ಯ ತಂದುಕೊಂಡನಲ್ಲ ಎಂದು ರಾಜಮಾತೆ ದೇವಾಜಮ್ಮಣ್ಣಿಗೆ ಒಂದು ಸಂತೋಷ. ರಾಣಿ ಲಕ್ಷ್ಮಮ್ಮಣ್ಣಿಗೂ ಇದೇ ಸಮಾಧಾನ. ಅತ್ತೆ ಸೊಸೆ ಆದರೂ ಇವರಿಬ್ಬರೂ ತುಂಬ ಹೊಂದಿಕೊಂಡು ನಡೆಯುತ್ತಿದ್ದರು. ಇದರಿಂದ ಇವರ ಎಣಿಕೆಗಳು ಬಹುವೇಳೆ ಒಂದು ರೀತಿ ಇರುವುವು.

ಮರುದಿನದ ಸಂಜೆಯ ವೇಳೆಗೆ ಮದರಾಸಿನ ಗವರ್ನರ್ ಕಡೆಯಿಂದ ಮೇಜರ್ ಫಿಟ್ಸ್‌ಗೆರಲ್ಡ್ ಎಂಬ ಒಬ್ಬ ಪ್ರತಿನಿಧಿ, ಹೆಲಿಕಾರ್ನಸಸ್ ಕ್ಷೇತ್ರದ ಒಬ್ಬ ಬಿಷಪ್ ಮಹಾಶಯ, ಅತಿಥಿಗಳಾಗಿ ಆಗಮಿಸಿದರು. ಸ್ವಲ್ಪ ಹೊತ್ತಿನ ಮೇಲೆ ಮಂಗಳೂರಿನ ಆಂಗ್ಲೇಯ ವ್ಯಾಪಾರಿಗಳ ಪರವಾಗಿ ಮ್ಯಾಥ್ಯೂಸ್, ಬರ್ಕ್, ಎಂಬ ಇಬ್ಬರು ಆಂಗ್ಲರು ಬಂದರು. ಆರ ವರ್ಷದ ಹಿಂದೆ ಸರ್ವಾಧಿಕಾರಿ ಕರಾಚೂರಿ ತುಂಬು ಸಭೆಯಲ್ಲಿ ಅರಸ ರೆದುರು ಧೂರ್ತನಾಗಿ ನಡೆದಂದಿನಿಂದ ನವರಾತ್ರಿಯ ಉತ್ಸವಕ್ಕೆ ಬಾರದೆ ನಿಂತಿದ್ದ ವಿಶ್ವಾಸಿ ಅರಸು ಮಕ್ಕಳು, ತೊರೆಮಾವು, ಬಿಳಗಿ, ಹದಿನಾಡು, ತೆರಕಣಾಂಬಿ, ಕಳಲೆ, ಮುಂತಾದ ಸ್ಥಳಗಳಿಂದ ಬಂದು ನೆರೆದರು.

ಹೈದರ್ ಮೊಕದಂ ಆಲಿಗೆ ಒಂದು ಕಾಗದ ಬರೆದು, "ಚಿತ್ರದುರ್ಗದ ಕಡೆ ಪಾಳೆಯಗಾರರಿಂದ ಸ್ವಲ್ಪ ತೊಂದರೆ ಆಗುವಂತಿದೆ. ಆದ್ದರಿಂದ ನಾನು ಅತ್ತ ಸೈನ್ಯದೊಡನೆ ಹೋಗುವುದರಲ್ಲಿದೇನೆ. ನಾನು ಓಲಗಕ್ಕೆ ಬಂದು ಪ್ರಭುಗಳಿಗೆ ನಜರ್ ಒಪ್ಪಿಸಲು ಅನುಕೂಲವಿಲ್ಲ. ಆದ್ದರಿಂದ ನನ್ನ ಪರವಾಗಿ ವಿನಯಪೂರ್ವಕ ಕ್ಷಮೆಬೇಡು," ಎಂದು ತಿಳಿಸಿದನು. ಭಕ್ಷಿ ಈ ಸಂಗತಿಯನ್ನು ರಾಜರಲ್ಲಿ ಅರಿಕೆ ಮಾಡಿದನು. ಹೈದರ್ ಬರ ಬೇಕು, ತಾವು ನಡಸುವ ಎಲ್ಲ ಅಧಿಕಾರಕ್ಕೆ ತಗ್ಗಿ ನಡೆಯಬೇಕು, ಅದನ್ನು ಬಂದ ಜನ ನೋಡಬೇಕು, ಎಂದು ರಾಜರಿಗೆ ಆಸೆ ಇದ್ದಿತು. ಅವನು ಬರದೆ ನಿಂತಾಗ ಅವರಿಗೆ ಸ್ವಲ್ಪ ಅತೃಪ್ತಿಯೇ. ಆದರೆ ಅವನು ಈ ಮಾತನ್ನು ಮೊದಲೆ ಬಿನ್ನವಿಸಿಕೊಂಡಿದ್ದನು. ಚಿತ್ರದುರ್ಗದ ಕಡೆ ಹೋಗಬೇಕು ಎನ್ನುವುದು ನೆಪಮಾತ್ರ ಅಲ್ಲ, ನಿಜವಾದ ಕಾರಣ, ಎಂದು ತೋರಿತು. ಆದರಿಂದ ಅವರು ಈ ವಿಷಯದಲ್ಲಿ ಸಮಾದಾನ ತಂದು ಕೊಂಡರು. ರಾಜಮಾತೆ, ಅವನು ಬಂದಿದ್ದರೂ ಸಮ, ಬರುವುದಿಲ್ಲ, ಇದೂ ಸಮವೇ, ಈಸಲ ಹೀಗೆ ನಡೆಯಲಿ, ಮುಂದಿವಸಲ ಇನ್ನಷ್ಟು ಖಚಿತವಾಗಿ ರಾಜನ ಅಧಿಕಾರವನ್ನು ಸ್ಥಾಪಿಸಬಹುದು, ಎಂದು ಕೊಂಡರು.

## ೬೭

ಪಾಡ್ಯಮಿಯ ಬೆಳಗ್ಗೆ ಸಂಪ್ರದಾಯದಂತೆ ಉತ್ಸವ ಆರಂಭವಾಯಿತು. ನಾಯಕನಿಗೆ ಅರಸರ ಸಿಂಹಾಸನದ ಬಲಕ್ಕೆ ರಾಜಾರ್ಹವಾದ ಒಂದು ಪೀಠವನ್ನು ಹಾಕಿಸಿದ್ದಿತು. ಅದರ ಪಕ್ಕದಲ್ಲಿ ರಾಜಕುಮಾರನಿಗೆ ಸ್ವಲ್ಪ ತಗ್ಗಿನ ಮತ್ತೊಂದು ಪೀಠ ಇದ್ದಿತು. ಅರಸರು ಮಗನನ್ನೂ ನಾಯಕನನ್ನೂ ಜೊತೆಗೆ ಕರೆದುಕೊಂಡು ಓಲಗಸಾಲೆಗೆ ಬಿಜಯಮಾಡಿದರು. ವಾಡಿಕೆಯ ಪೂಜೆಗಳನ್ನು ಮಾಡಿ ಪೀಠವನ್ನೇರಿ ಮಂಡಿಸಿದರು. ನಾಯಕಕುಮಾರರು ತಮ್ಮ ಪೀಠಗಳಲ್ಲಿ ಕುಳಿತರು. ಉಳಿದವರು ವಾಡಿಕೆಯಂತೆ ರತ್ನಕಂಬಳಿಯ ಮೇಲೆ ಕುಳಿತರು. ಪಟ್ಟದ ಆನೆ, ಕುದುರೆ, ಹಸು, ಮಂಗಳದ್ರವ್ಯ ವಾದ್ಯಗಳೊಡನೆ ಹೊಳೆಗೆ ಹೋಗಿ ಬಂದವು. ಜಟ್ಟಿಗಳ ಕಾಳಗ, ಇತರ ವಿನೋದ, ಓಲಗದಲ್ಲಿ ಗಾಯನ, ನೃತ್ಯ, ಎಲ್ಲ ನಡೆದುವು. ರಾಣಿವಾಸದ ಮಕ್ಕಳು ತೆರೆಯ ಹಿಂದೆ ಕುಳಿತು ಎಲ್ಲ ವೈಭವವನ್ನೂ ನೋಡುತ್ತಿದ್ದರು. ಶಾಂತವ್ವನನ್ನು ರಾಣಿ ತನ್ನ ಬಲಕ್ಕೆ ಕುಳ್ಳಿರಿಸಿಕೊಂಡಿದ್ದಳು. ರಾಜಮಾತೆ ಶಾಂತವ್ವನ ಬಲಕ್ಕೆ ಕುಳಿತು ತರುಣಿಗೆ ಉತ್ಸವದ ವಿವರಗಳನ್ನೆಲ್ಲ ತೋರಿಸಿ ವರ್ಣಿಸಿದಳು.

ಬಿದನೂರಿನಲ್ಲಿ ನವರಾತ್ರಿಯ ಉತ್ಸವ ಉಂಟು. ಆದರೆ ಆದರ ಕಲಾಪ ಇಷ್ಟು ಹೆಚ್ಚಿನದಲ್ಲ. ಇಲ್ಲಿ ಸಾಂಗ್ಯ ಹೆಚ್ಚು. ಆದರೆ ಅದೆಲ್ಲಕ್ಕೂ ನ್ಯಾಯವಾದ ಒಂದು ಅರ್ಥ ಉಂಟು. ತನ್ನ ದೊರೆ ಈಸಲ ಊರಿಗೆ ಹೋದಮೇಲೆ ಗದ್ದುಗೆ ಏರುವರು, ಮುಂದಿನ ನವರಾತ್ರಿ ಹಬ್ಬ ನಡೆಸುವುದಾಗುತ್ತದೆ, ಆಗ್ಗೆ ಇಲ್ಲಿಂದ ಬಲ್ಲ ಮಂದಿ ಇಬ್ಬರನ್ನು ಕರೆಯಿಸಿಕೊಂಡು ಈ ಎಲ್ಲ ಕಲಾಪವನ್ನೂ ಅಲ್ಲಿ ನಡೆಸಿದರೆ ಉತ್ಸವ ಬಹು ಚೆನ್ನವಾದೀತು, ಜನವೂ ಬಹು ಸಂತೋಷಪಟ್ಟಾರು, ಎಂದು ಶಾಂತವ್ವ ಯೋಚಿಸಿಕೊಂಡಳು.

ಶಾಂತವ್ವ ಒಡನೆಯೆ ಈ ಮಾತನ್ನು ರಾಣಿಯರಿಗೆ ಹೇಳಲಿಲ್ಲ; ಹೆಮ್ಮೆ ಎಂದುಕೊಂಡಾರು, ಎಂದು ಸಂಕೋಚದಿಂದ ಸುಮ್ಮನಿದ್ದಳು. ಇಷ್ಟಕ್ಕೆ ಮುಂದಿನ ವರ್ಷದ ಮಾತಿಗೆ ಈಗ ಏನು ಅವಸರ?

ಉತ್ಸವ ಮಾಡುತ್ತೇವೆ ಎಂದು ಹೇಳುವ ಮೊದಲು ಗದ್ದುಗೆಯನ್ನು ಏರಬೇಕಲ್ಲ. ದೇವರ ಕೃಪೆಯಿಂದ ಅದು ಆಗಲಿ. ಆ ಉತ್ಸವಕ್ಕೆ ಇಲ್ಲಿಗೆ ಒಂದು ಆಹ್ವಾನ ಕಳುಹಿಸಬೇಕಲ್ಲ. ಆಗ ನವರಾತ್ರಿ ಉತ್ಸವದ ವಿವರವನ್ನು ಬಲ್ಲ ಇಬ್ಬರು ಬರಬೇಕೆಂದೂ ಹೇಳಿಕಳುಹಿಸಿದರೆ ಆಯಿತು. ಇಬ್ಬರು ಬರುತ್ತಾರೆ; ಅರಮನೆಯ ಸೇವಕರಿಗೆ ಎಲ್ಲ ಸಂಗತಿಯನ್ನೂ ತಿಳಿಸಿ ತಿದ್ದುತ್ತಾರೆ.

ವಾಡಿಕೆಯ ಸತ್ಕಾರ ಎಲ್ಲ ಸಂದಮೇಲೆ ಓಲಗದ ಗುಂಕಾರ ಅರಸರಿಗೆ, ನಾಯಕನಿಗೆ, ರಾಜಕುಮಾರನಿಗೆ, ತಕ್ಕವರ ಕೈಯಿಂದ ತಾಂಬೂಲ ಮಂಗಳ ದ್ರವ್ಯಗಳನ್ನು ಒಪ್ಪಿಸಿದನು. ಆಮೇಲೆ ಸಭೆಯಲ್ಲಿ ನೆರೆದಿದ್ದ ಅತಿಥಿಗಳಿಗೆ ವೈದಿಕ ಲೌಕಿಕ ಪ್ರಮುಖರಿಗೆ ತಾಂಬೂಲ ಮಂಗಳ ದ್ರವ್ಯ ವಿನಿಯೋಗ ಆಯಿತು. ಇದಾದಮೇಲೆ ಅರಸರು ಸಿಂಹಾಸನದಿಂದಿಳಿದು ಸಭಿಕರ ವಂದನೆಯನ್ನು ಸ್ವೀಕರಿಸಿ, ಕೈಮುಗಿದೆ ನಡೆದು ನಾಯಕನನ್ನೂ ಕುಮಾರನನ್ನೂ ಜೊತೆಗೆ ಕರೆದುಕೊಂಡು ಅರಮನೆಯೊಳಕ್ಕೆ ಹಿಂದಿರುಗಿದರು.

## ೩೮

ನವರಾತ್ರಿಯ ಉತ್ಸವದಲ್ಲಿ ಮಲ್ಲಕಾಳಗ, ಅಕ್ಕಿಬಿಕ್ಕಿ, ಯಕ್ಷಗಾನ, ಕೋಲಾಟ, ಗ್ರಾಮ ನೃತ್ಯ, ಮುಂತಾದ ವಿನೋದ ನಾಯಕನ . ಮುಂದೆ ನಡೆಯುವುದು ಬಿದನೂರ ವಾಡಿಕೆ. ಈ ಆಟಗಳನ್ನು ಬಲ್ಲ ಜನರನ್ನೂ, ಹತ್ತು ಜನ ಜಟ್ಟಿಗಳನ್ನೂ, ನಾಯಕನು ಜೊತೆಗೆ ಕರೆತಂದಿದ್ದನು. ಪ್ರಭುಗಳ ಮನಸ್ಸಿಗೆ ಒಪ್ಪಿದರೆ ಈ ಜನರೂ ಸಂಜೆಯ ಹೊತ್ತು ಸ್ವಲ್ಪ ವಿನೋದ ಮಾಡಿ ತೋರಿಸುವರು; ತಮ್ಮ ಜಟ್ಟಿಗಳು ಪಟ್ಟಣದ ಜಟ್ಟಿಗಳೊಂದಿಗೆ ಕಾಳಗವಾಡುವರು ಎಂದು ನಾಯಕನ ಪರವಾಗಿ ಮಲ್ಲಯ್ಯ ಉತ್ಸವದ ಮಣಿಯನಿಗೆ ತಿಳಿಸಿದನು. ಅರಸರು ಅವಶ್ಯವಾಗಿ ಆಗಲಿ ಎಂದು ಅಪ್ಪಣೆ ಮಾಡಿದರು. ಪಾಡ್ಯಮಿಯ ಸಂಜೆ ಒಂದು ಕುಣಿತ, ಬಿದಿಗೆಯ ಸಂಜೆ ಅಕ್ಕಿಬಿಕ್ಕಿ, ತದಿಗೆ ಇನ್ನೊಂದು ಕುಣಿತ, ದಿನವೂ ಯಾವನಾದರೊಬ್ಬ ಜಟ್ಟಿ ಪಟ್ಟಣದ ಜಟ್ಟಿಯೊಂದಿಗೆ ಸೇರಿ ಸೆಣಸುವುದು;

ಹೀಗೆಂದು ಏರ್ಪಾಡಾಯಿತು. ಪಾಡ್ಯಮಿಯ ದಿನ ಮಲೆನಾಡ ಗೌಡರ ಕುಣಿತ ನಡೆಯಿತು.

ಹೀಗೆ ಎಂಟು ದಿನವೂ ಉತ್ಸವ ನಡೆಯಿತು. ಆ ದಿವಸಗಳಲ್ಲಿ ನಾಯಕ, ಶಾಂತವ್ವ, ಒಂದು ದಿನ ಪೂರ್ವ ಕಾವೇರಿಯಲ್ಲಿ, ಒಂದು ದಿನ ಪಶ್ಚಿಮವಾಹಿನಿಯಲ್ಲಿ ಮಿಂದು, ರಂಗನಾಥನ ದೇವಾಲಯಕ್ಕೆ, ಗಂಗಾ ಧರೇಶ್ವರನ ದೇವಾಲಯಕ್ಕೆ ಹೋಗಿ, ದೇವರ ದರ್ಶನಮಾಡಿಕೊಂಡು ಬಂದರು. ಒಂದು ದಿನ ಚಂದ್ರವನಕ್ಕೆ ಹೋಗಿ ಗೌತಮ ಕ್ಷೇತ್ರವನ್ನು ನೋಡಿಕೊಂಡು, ಒಳಕರೆಗೆ ಹಾಯ್ದು ಬಂದರು. ಒಂದು ದಿನ ಕಾವೇರಿ ಲೋಕಪಾವನಿ ಸಂಗಮದಲ್ಲಿ ಮಿಂದು ಬಂದರು. ಹೀಗೆ ಒಂದಲ್ಲ ಒಂದು ಉತ್ಸವ ಕಾರ್ಯ ಇದ್ದು, ಜೊತೆಯಲ್ಲಿ ರಾಜಮಾತೆ ಅಥವಾ ರಾಣಿ, ರಾಜಕುಮಾರ ಇವರು ಇದ್ದು, ಈ ದಂಪತಿಗಳಿಗೆ ನವರಾತ್ರಿಯ ಹಬ್ಬ ಬಹು ಸಂತೋಷದಲ್ಲಿ ನಡೆಯಿತು.

ಉತ್ಸವಕ್ಕೆ ಬಂದಿದ್ದ ಆಂಗ್ಲರು ಅರಸರ ಆತಿಥ್ಯದಲ್ಲಿ ಮೂರು ದಿನ ಹುಲಿಯ ಬೇಟೆಗೆ ಮೂರು ದಿನ ಮೀನು ಹಿಡಿಯುವುದಕ್ಕೆ ಹೋಗಿ ಬಂದರು. ಅರಸರು ಹಿಂದುಗಳು ಎಂಬ ಕಾರಣದಿಂದ ಈ ಜನ ತಮಗೆ ಇಲ್ಲಿ ಗೋಮಾಂಸ ಬೇಡ ಎಂದು ಹೇಳಿದರು; ಜನರ ಪ್ರೀತಿ ಗೌರವ ವನ್ನು ಗಳಿಸಿದರು. ಅವರಿಗೂ ಹಬ್ಬ ಸಂತೋಷವಾಗಿಯೇ ಕಳೆಯಿತು.

ನವಮಿಯ ದಿನ ಸಂಜೆ ಅರಸರು ವಿನೋದ ನೋಡುವುದಕ್ಕಾಗಿ ಹೊರಡುವಾಗ ನಾಯಕ ಜೊತೆಗೆ ಬರಲಿಲ್ಲ. "ಮಹಾನವಮಿ ಪೂಜೆಯ ಅಂಗವಾಗಿ ಸಂಜೆಯ ಕಾರ್ಯ ಸ್ವಲ್ಪ ಉಳಿದಿದೆ; ಅವರು ಅದರಲ್ಲಿ ತೊಡಗಿದ್ದಾರೆ. ಎರಡು ಗಳಿಗೆಬಿಟ್ಟು ಬರುತ್ತಾರೆ. ಪ್ರಭುಗಳು ಕಾಯುವ ಕೆಲಸವಿಲ್ಲ," ಎಂದು ಮಲ್ಲಯ್ಯ ಬಂದು ಬಿನ್ನವಿಸಿದನು. ಅರಸರು, "ಒಳಿತು, ನೋಂಪಿ ಏನಿದ್ದರೂ ಸಾವಕಾಶವಾಗಿ ನಡೆಯಲಿ," ಎಂದು ಅಪ್ಪಣೆ ಕೊಡಿಸಿ ತಾವು ಹೊರಕ್ಕೆ ಬಂದರು; ಓಲಗದ ಪೀಠದಲ್ಲಿ ಕುಳಿತರು.

ಆ ದಿವಸ ಬಿದನೂರ ಕಡೆಯ ಜಟ್ಟಿಗಳಿಬ್ಬರು ಪಟ್ಟಣದ ಜಟ್ಟಿಗಳ್ನು ಇಬ್ಬರನ್ನು ಎದುರಿಸುವುದು ಏರ್ಪಾಡಾಗಿದ್ದಿತು. ಮಲ್ಲಯ್ಯ ಅವನ

ಜೊತೆಗೆ ಮತ್ತೊಬ್ಬ ಜಟ್ಟಿ ಕಾಳಗದ ವೇಳೆಗೆ ಕಳಕ್ಕೆ ಬಂದರು. ಮಲ್ಲಯ್ಯ ಅವನ ಎದುರಾಳಿಯೊಡನೆ ಬಹು ಚೆನ್ನಾಗಿ ಸೆಣಸಿದನು. ಅದುವರೆಗೆ ಕಾದಿದ್ದ ಇವರ ಕಡೆಯ ಜಟ್ಟಿಗಳು ಬಲಿಷ್ಠರು; ಕಾಳಗದ ಪಟ್ಟುಗಳನ್ನು ಬಲ್ಲವರು. ಆದರೆ ಅವರ ಕಾದಾಟದಲ್ಲಿ ನವುರಿಲ್ಲ, ನಯವಿಲ್ಲ. ಅವರು ಒಟ್ಟು ಬಲ, ಎಲ್ಲ ಪಟ್ಟು, ಎಲ್ಲ ಹೊತ್ತಿನಲ್ಲೂ ಬೇಕು ಎಂಬಂತೆ ಕಾದುವರು. ಪ್ರಾಯಶಃ ಪಟ್ಟಣದ ಅವರ ಎದುರಾಳಿಗಳಿಗೂ ಅಂಥವರೇ ಆಗಿದ್ದರು. ಈ ದಿವಸ ಮಲ್ಲಯ್ಯನಿಗೆ ಸರಿಯಾಗಿ ಪಟ್ಟಣದವನೂ ಒಬ್ಬ ಕುಶಲಿಗ ಜಟ್ಟಿ ನಿಂತಿದ್ದನು. ಇವರ ಕದನ ನೋಡುವುದಕ್ಕೆ ಬಹು ಸೊಗಸಾಗಿದ್ದಿತು. ಅರಸರು ಇವರ ಕಾಳಗವನ್ನು ನೋಡಿ, "ಎರಡು ಚಿರತೆ ಕಾದುವಂತೆ ಇದೆ!" ಎಂದುಕೊಂಡರು. ಮೈಬಳುಕು, ಬಾಗು, ಕೈನೀಟ, ಹಿಡಿತ, ಕುಣಿಯುತ್ತ ಹಾಕಿದ ಹೆಜ್ಜೆ ಎಂಬಂತೆ ಕಾಳಗದ ತಾಳಕ್ಕೆ ಹಾಕುತ್ತಿದ್ದ ಹೆಜ್ಜೆ, ಸಿಕ್ಕಿ ಸಿಕ್ಕದಂತೆ ಹಾಯ್ದು ಹಿಮ್ಮೆಟ್ಟುತ್ತಿದ್ದ ಅವರ ಸಂಚು, ಮಲ್ಲಕಾಳಗವನ್ನು ಒಂದು ಹಾಡು, ಒಂದು ಕೇಳಿ, ಎಂಬಂತೆ ಚೆನ್ನ ಎನಿಸಿದುವು. ಮಲ್ಲಯ್ಯ ಒಂದುಸಲ, ಪಟ್ಟಣದ ಜಟ್ಟಿ ಒಂದುಸಲ, ಗೆದ್ದರು.

೬೯

ಇದಾದ ಮೇಲೆ ಬಿದನೂರಿನ ಹಿರಿಯ ಜಟ್ಟಿ, ಪಟ್ಟಣದ ಹಿರಿಯ ಜಟ್ಟಿ, ಎದುರಾದರು. ಬಿದನೂರಿನ ಜಟ್ಟಿಯ ಮುಖ ಅರಸರಿಗೆ ನೋಡಿದ ಮುಖದಂತೆ ತೋಚಿತು. ಆದರೆ ಆ ದಪ್ಪನ ಮೀಸೆ, ತುಂಬು ಕೂದಲ ಹುಬ್ಬು, ಅವರು ಕಂಡವಲ್ಲ; ಅವರು ಆ ಯೋಚನೆಯನ್ನು ಬಿಟ್ಟುಬಿಟ್ಟರು, ಕಾಳಗಕ್ಕೆ ಮನಸ್ಸನ್ನು ಕೊಟ್ಟರು.

ಮಲ್ಲರ ಜೋಡಿ ಅಷ್ಟೇನೂ ಸರಿಯಾಗಿಲ್ಲ ಎಂದು ಇವರಿಗೆ ಕಂಡಿತು. ಪಟ್ಟಣದ ಜಟ್ಟಿ ದಪ್ಪನಾಗಿ ತುಂಬಿಕೊಂಡಿದಾನೆ; ಬಿದನೂರವನು ತೆಳುಮೆಯ್ಯ ತರುಣ. ಈ ಭೀಮನ ಎದುರಿಗೆ ಒಬ್ಬ ಅರ್ಜುನ ಎನ್ನಬಹುದು, ಹಾಗೆ ಇದ್ದನು. ಎತ್ತರದಲ್ಲಿ ಕೂಡ ಮೂರು ಬೆರಳು ಕಡಮೆ ಆಗಿದ್ದನು. ಈಡು ಸರಿಯಾಗಿಲ್ಲ, ಏಕೆ ಹೀಗೆ ಜೊತೆ ಮಾಡಿದರು, ಎಂದು ಅರಸರು ಯೋಚಿಸಿಕೊಂಡರು. ಕಾಳಗ ಮೊದಲಾಯಿತು.

ಪಟ್ಟಣದ ಜಟ್ಟಿ ತುಂಬ ಪ್ರಸಿದ್ಧನಾದ ಸಿಂಗಾಜಟ್ಟಿ; ಕಂಠೀರವ ನರಸರಾಜರಲ್ಲಿ ಮೈಗಾವಲ ಜಟ್ಟಿಯಾಗಿದ್ದ ಸಿಂಗನ ಮರಿಮಗ. ಅವನು ಬಿದನೂರ ಈ ಜಟ್ಟಿಯನ್ನು ಹಿಂಸೆಮಾಡಬಾರದು ಎಂದು ನಿಶ್ಚಯಿಸಿ ಕೊಂಡಿದ್ದನು. ತಮ್ಮ ಊರಿಗೆ ಅತಿಥಿಗಳಾಗಿ ಬಂದಿರುವ ನಾಯಕರ ಕಡೆಯ ಮನುಷ್ಯ, ಇವನು ಮರ್ಯಾದೆಯಿಂದ ಊರಿಗೆ ಹೋಗಲಿ, ಎಂದು ಅವನ ಯೋಚನೆ. ಮೊದಲ ಎರಡು ನಿಮಿಷ ಸಿಂಗ ಹೀಗೆ ಹಾಗೆ ಕೈಚಾಚಿ, ಇವನು ತನಗೆ ಸಮನಲ್ಲ ಎಂಬ ಒಂದು ಧೋರಣೆ ಯಿಂದ ಕಾದಿದನು. ಬಿದನೂರ ಮಲ್ಲ ಇವನ ಈ ಹೆಮ್ಮೆಯ ಆಟದ ಗುಟ್ಟನ್ನು ತಿಳಿದನು; ಇವನಿಗೆ ಕೋಪಬರುವಂತೆ ಎರಡು ಸಲ ಇವನನ್ನು ಬೀಸಿ ಎಳೆದನು. ಸಿಂಗನ ತಾಳ್ಮೆ ಇದ್ದದ್ದು ಅಷ್ಟೇ ಉದ್ದ; ಹತ್ತು ಜನ ದೆದುರಿಗೆ ತಾನು ದುರ್ಬಲನೆಂದು ಕಾಣುವ ಮಟ್ಟಿಗೆ ಸುಮ್ಮನಿರಲು ಅವನ ಜೀವ ಒಪ್ಪಲಿಲ್ಲ. ಅವನು ಕಾದಲೇ ಬೇಕಾಯಿತು; ಕಾದಿದನು. ಮಲ್ಲಯ್ಯನ ಮತ್ತು ಅವನ ಎದುರಾಳಿಯ ಕಾಳಗ ಒಂದು ಕೇಳಿಯಂತೆ ಕಂಡಿದ್ದರೆ ಈ ಇಬ್ಬರು ಮಲ್ಲರ ಕಾಳಗ ಒಂದು ನಾಟ್ಯದಂತೆ ಕಾಣಿಸಿತು. ಬಿದನೂರ ಮಲ್ಲ ತೆಳುಮೆಯ್ಯ ಕಾರಣದಿಂದ ಬಹು ಹಗುರವಾಗಿ ಓಡಿಯಾಡುವನು. ಸಿಂಗನ ಹೆಜ್ಜೆ ಅಷ್ಟು ವೇಗವಲ್ಲ, ಆದರೂ ಲಾಘವ ಬಲ್ಲ ಹೆಜ್ಜೆ. ಬಿಳಿಯಮೆಯ್ಯ ಎದುರಾಳಿ ಇವನ ಶ್ಯಾಮಲ ದೇಹದ ಕಡೆಗೆ ಹಾಯ್ದು ಹಿಮ್ಮೆಟ್ಟುವುದರಲ್ಲಿ, ಹತ್ತು ಗಜದಿಂದ ನೋಡುವವರಿಗೆ, ಮೋಡದ ಮೇಲೆ ಮಿಂಚು ಆಡುತ್ತಿವೆಯೊ ಎಂಬಂತೆ ಕಾಣುತ್ತಿತ್ತು. ಎದುರಾಳಿಯಿಂದ ಸೋಲು ತಿನ್ನದೆ ಮರ್ಯಾದೆಯಿಂದ ಕಳವನ್ನು ಬಿಡ ಬೇಕಾದರೆ ಸಿಂಗ ತನ್ನ ಬುದ್ಧಿ ತನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಬೇಕಾಗಿ ಬಂದಿತು. ಸ್ವಲ್ಪ ಹೊತ್ತಿನಮೇಲೆ ಇವರು ತೋಳು ತೋಳು ಸುತ್ತಿ ಒಬ್ಬರನ್ನೊಬ್ಬರು ಹಿಂದಕ್ಕೆ ದೂಡಿ ಮುಖಾಮುಖಿಯಾಗಿ ನಿಂತರು. ಬೇರೊಬ್ಬ ಜಟ್ಟಿಯನ್ನಾಗಿದ್ದರೆ ಸಿಂಗ ಹಿಂದು ಹಿಂದಕ್ಕೆ ತಳ್ಳಿ, ಇತ್ತ ಅತ್ತ ಆಡಿಸಿ, ಯಾವುದೊ ಒಂದು ಪಟ್ಟನಿಂದ ನೆಲಕ್ಕೆ ಕೆಡಹುತ್ತಿದ್ದನು. ಈಗ ಅದು ಏಕೊ ಆಗಲಿಲ್ಲ. ಏಕೆ ಎಂದು ನೋಡುತ್ತಾನೆ; ಎದುರಾಳಿ ತನ್ನ ಬಲಗೈಯ ಬೆರಳಿನಿಂದ ಇವನ ಎಡತೋಳ ಮಧ್ಯದಲ್ಲಿ ಯಾವುದೊ

ಸ್ಥಳವನ್ನು ಔಕಿ ಹಿಡಿದಿದ್ದಾನೆ. ಆ ತೋಳನ್ನು ಆಡಿಸುವುದೆ ಕಷ್ಟ ಎಂದು ಇವನಿಗೆ ತೋರುತ್ತಿದೆ. ಇದು ಯಾವುದೊ ಹೊಸ ಹಿಡಿತ. ಸಿಂಗಾಜಟ್ಟಿ ಮೆಲ್ಲನೆ ತೋಳನ್ನು ಸಡಿಲಿಸಿಕೊಂಡು ಮುಂದಕ್ಕೆ ಚಾಚಿ ದನು. ಎದುರಾಳಿ ಆಕ್ಷಣದಲ್ಲಿ ಮುಂದಕ್ಕೆ ನುಗ್ಗಿ ಸಿಂಗನನ್ನು ಕೆಳಕ್ಕೆ ದೂಡಿದನು. ಸಿಂಗ ಬಲಗೈ ಊರಿ ಮಗ್ಗುಲಾಗಿ ಕುಕ್ಕರಿಸಿದನು.

"ಎಲ, ಸೋತನೆ?" ಎಂದು ಇವನ ಜೊತೆಯವರು ಆಶ್ಚರ್ಯ ಪಟ್ಟರು. ಇಲ್ಲ, ಸಿಂಗ ಸೋಲಲಿಲ್ಲ; ತನ್ನನ್ನು ಕೆಳಕ್ಕೆ ದೂಡಿದ ಎದುರಾಳಿ ಯನ್ನು ತನ್ನ ಎಡತೋಳಿಂದ ಅಪ್ಪಳಿಸಿ ಜೊತೆಗೆ ಸೆಳೆದುಕೊಂಡಿದ್ದನು. ಸಿಂಗ ಬಲಮಗ್ಗುಲಾಗಿ ಕುಕ್ಕುರಿಸಿದ ಕ್ಷಣದ ಮರುಕ್ಷಣದಲ್ಲಿ ಅವನ ಎದುರಾಳಿ ಎಡಮಗ್ಗುಲಾಗಿ ಕುಕ್ಕುರಿಸಿದನು.

ಸಿಂಗನಿಗೆ ಹೇಳಬಾರದ ಕೋಪ. ಈ ಮೂಳನನ್ನು ಬೆನ್ನುಮಾಡಿ ಬಿಡುತ್ತೇನೆ ಎಂದು ಅವನು ಮೇಲೆ ಹಾಯ್ದನು. ಎದುರಾಳಿ ಇವನನ್ನು ಬೆನ್ನುಮಾಡಬೇಕೆಂದೇ ಮಗ್ಗುಲಾಗಿ ಕುಕ್ಕುರಿಸಿದ್ದಂತೆ ತೋರಿತು. ಇವನಿ ಗಿಂತ ಅವನ ವೇಗ ಹೆಚ್ಚು. ಕುಕ್ಕುರಿಸಿದ ಕ್ಷಣದಲ್ಲಿ ಆವನು ಸಿಂಗನ ಮೇಲೆ ಹಾಯ್ದು ಅವನನ್ನು ನೆಲಕ್ಕೆ ಬೆನ್ನುಮಾಡಿ ಔಕಲು ನೋಡಿದನು.

ಸಿಂಗ ವೇಗದಲ್ಲಿ ಕಡಮೆ ಆದರೂ ಬಲದಲ್ಲಿ ಹೆಚ್ಚು. ಇವನ ರಭಸ ವನ್ನು ಸಹಿಸಿಕೊಂಡು ಅವನು ಮೇಲೆ ಬಂದವನನ್ನು ತಡೆದು ತನ್ನ ಎಡಕ್ಕೆ ಹಾಕಿದನು, ಅವನ ಮೇಲೆ ಕವಿದನು. ಎಡುರಾಳಿ ಇವನು ತನ್ನನ್ನು ಕೆಡಹುವ ಮುನ್ನವೇ ಹಾರಿ ನಾಲ್ಕು ಗಜದಾಚೆ ನಿಂತನು. ಹಾಗೆ ಹಾರುವುದರಲ್ಲಿ ಸಿಂಗನ ಕೈ ಎದುರಾಳಿಯ ಬಾಯಿಗೆ ಬಡಿಯಿತು; ತುಟಿ ಹಲ್ಲಿಗೆ ಪೆಟ್ಟಾಗಿ ಬಾಯಿಂದ ರಕ್ತ ಒಸರಿತು.

## ೨೦

ಇವರು ಮತ್ತೆ ಒಬ್ಬರನ್ನೊಬ್ಬರು ತಾಗಬೇಕು. ಅಷ್ಟರಲ್ಲಿ ಓಲಗ ಮಂಟಪದ ರಾಣಿವಾಸದ ಕಡೆಯಿಂದ ಆರ್ತನಾದ ಕೇಳಿಸಿತು. ಏನು, ಎತ್ತ, ಎಂದು ಓಲಗದ ಗುರಿಕಾರ ವಿಚಾರಿಸಿದನು. ಇಲ್ಲಿ ಕಾಳಗ ನಿಲ್ಲಲಿ ಎಂದು ಅರಸರು ಅಪ್ಪಣೆ ಮಾಡಿದರು.

ರಾಣಿವಾಸದಲ್ಲಿ ಆಗಿದ್ದದ್ದು ಇದು. ವಾಡಿಕೆಯಂತೆ ಶಾಂತವ್ವ ರಾಣಿ ಲಕ್ಷ್ಮಮ್ಮಣ್ಣಿಯ ಪಕ್ಕದಲ್ಲಿ ಕುಳಿತಿದ್ದಳು. ಅವಳ ಬಲಕ್ಕೆ ರಾಜಮಾತೆ ದೇವಾಜಮ್ಮಣ್ಣಿ. ಹಿಂದೆ ಕೆಂಚವ್ವೆ ಇದ್ದಳು. ಕಾಳಗದ ಮಲ್ಲರು ಬಂದು ಕಳದಲ್ಲಿ ನಿಂತಾಗ ಶಾಂತವ್ವ ಅನಿವಾರ್ಯವಾಗಿ ಬೆಚ್ಚಿದಂತೆ ಕಂಡಿತು. ಉಳಿದವರು ಕಂಡರೊ ಇಲ್ಲವೊ, ಕೆಂಚವ್ವೆ ಇದನ್ನು ಕಂಡಳು; ಏಕೆ ಎನ್ನುವುದನ್ನು ಮರುಕ್ಷಣ ತಿಳಿದುಕೊಂಡಳು. ಆದರೆ ಯಾವ ಮಾತನ್ನೂ ಆಡುವಂತಿಲ್ಲ; ಸುಮ್ಮನಿದ್ದಳು. ಮೊದಲ ಕಾಳಗ ಮುಗಿಯಿತು. ಎರಡನೆಯ ಕಾಳಗ ಮೊದಲಾಯಿತು. ಶಾಂತವ್ವ ತುಂಬ ಆಯಾಸದಿಂದ ನಿಟ್ಟುಸಿರು ಬಿಡುವಂತೆ ಕಂಡಿತು. ರಾಣಿ ಇದನ್ನು ತಿಳಿದಳು; ಇವಳ ಕಡೆ ನೋಡಿದಳು. ಹುಡುಗಿ ಬಿದನೂರಿನ ಮಲ್ಲನನ್ನೇ ದೃಷ್ಟಿಸಿ ನೋಡುತ್ತಿದಾಳೆ, ಅವನಿಗಾಗಿ ಭಯಪಟ್ಟಿದಾಳೆ, ಎಂದು ರಾಣಿಗೆ ತೋರಿತು. ಇದೇನಿರಬಹುದು, ಅರಮನೆಯ ಈ ಹೆಣ್ಣು ಒಬ್ಬ ಜಟ್ಟಿಗಾಗಿ ಹೀಗೆ ಕಾತರಿಸುವುದು, ಎಂದು ರಾಣಿಯ ಮನಸ್ಸಿನಲ್ಲಿ ಪ್ರಶ್ನೆ ಹಾಯ್ದಿತು. ಕಾಳಗ ಮುಂದರಿದಂತೆ ಶಾಂತವ್ವನ ಆಯಾಸ ಸ್ಪಷ್ಟವಾಗಿ ಹೆಚ್ಚಿತು. ಅಲ್ಲಿ ಅವನು ಕೆಳಗೆ ಬಿದ್ದಾಗ ಇವಳು ಹಾ ಎಂದು ಮತ್ತೆ ಶಬ್ದವನ್ನು ತಡೆದುಕೊಂಡಳು. ಸಿಂಗ ಎದುರಾಳಿಯನ್ನು ಔಕಿಬಿಡುತ್ತಾನೊ ಎಂದ ಹೊತ್ತಿನಲ್ಲಿ ಇವಳ ಮುಖದ ಭಯ ಅಷ್ಟಿಷ್ಟಲ್ಲ. ಸಿಂಗನ ಕೈ ಅವನ ಎದುರಾಳಿಯ ಮುಖಕ್ಕೆ ಬಡಿದು ಅವನ ತುಟಿಯ ಮೇಲೆ ರಕ್ತ ಬಂದು ಅದನ್ನು ಅವನು ಕೈಯಿಂದ ಒರಸಿಕೊಂಡಾಗ ಶಾಂತವ್ವ ಮೂರ್ಛೆ ಹೋದಳು.

ಆಗ ರಾಣಿ, "ಅಯ್ಯೊ ಇಲ್ಲಿ ನೋಡಿ," ಎಂದಳು. ನಾಲ್ಕು ಜನ ಶಾಂತವ್ವನ ಸುತ್ತ ನಿಂತು, ನೀರು ತನ್ನಿ ಎಂದೊಬ್ಬರು, ಗಾಳಿ ಹಾಕಿ ಎಂದೊಬ್ಬರು, ದೂರ ನಿಲ್ಲಿ ಗಾಳಿ ಬರಲಿ ಎಂದಿನ್ನೊಬ್ಬರು, ಶುಶ್ರೂಷೆಗೆ ತೊಡಗಿದರು. ರಾಜಮಾತೆ, "ಏನಾಯ್ತಕ್ಕ? ಅಮ್ಮಾಜಿ ಏನಾಯ್ತು ?" ಎಂದಳು.

ಶಾಂತವ್ವ ಮಾತನಾಡಲಿಲ್ಲ. ಕೆಂಚವ್ವೆ, "ನಾಯಕರಿಗೆ ಪೆಟ್ಟಾಯ್ತು, ಅವ್ವಾವರಿಗೆ ತಡೀಲಿಲ್ಲ," ಎಂದಳು.

ಇವಳು ಹೇಳುವುದು ಏನು ಎಂದು ರಾಜಮಾತೆಗೆ ತಿಳಿಯಲಿಲ್ಲ. ಆಕೆ, "ನಾಯಕರಿಗೆ ?" ಎಂದು ಕೇಳಿ ಇವಳ ಕಡೆ ನೋಡಿದಳು.

ಕೆಂಚವ್ವೆ ಕಾಳಗದ ಕಣದ ಕಡೆ ತಲೆ ಆಡಿಸಿ, "ಹೌದು ಒಡತಿ ಯವರೆ. ಜಟ್ಟಿ ನಮ್ಮ ನಾಯಕರು," ಎಂದಳು.

ಇಷ್ಟು ಹೊತ್ತಿಗೆ ಕಣದಲ್ಲಿ ಕೂಡ ಕಾಳಗ ನಿಲ್ಲುವುದಕ್ಕೆ ತಕ್ಕಷ್ಟು ಗಲಭೆ ಆಗಿತ್ತು. ಮಲ್ಲಯ್ಯ ಅಲ್ಲೆ ನಿಂತಿದ್ದವನು ಒಡೆಯನ ಹತ್ತಿರಕ್ಕೆ ಓಡಿ ಬಂದು, "ಏನಾಯ್ತು ದಣಿಗಳೆ? ನೀರು ತರಿಸಲಾ?" ಎಂದನು. ಹತ್ತಿರ ಬಂದ ಜಟ್ಟಿಗಳಿಗೆ, "ನಾಯಕರು ಪಟ್ಟಣದ ಜಟ್ಟಿಗಳೊಂದಿಗೆ ಕಾದಬೇಕೂ ಅಂತ ಆಶೆಬಿದ್ದರು. ವ್ಯಾಷ ಹಾಕ್ಕೊಂಡು ಬಿಜಯ ಮಾಡಿದರು," ಎಂದನು. ಎಲ್ಲ ದಾರಿ ಕೊಟ್ಟು ಅತ್ತ ಇತ್ತ ನಿಂತರು; ಬಾಗಿ ನಾಯಕನಿಗೆ ಕೈಮುಗಿದರು. ನಾಯಕನು ಅರಸರ ಕಡೆಗೆ ತಿರುಗಿ ಕೈಮುಗಿದು ಬೇಗನೆ ಒಳಕ್ಕೆ ಹೊರಟು ಹೋದನು.

ಗುರಿಕಾರ ಅರಸರ ಹತ್ತಿರ ಬಂದು, "ಈಗ ಕಾದಿದ ಜಟ್ಟಿ ಬಿದನೂ ರಿನ ನಾಯಕರಂತೆ. ಅವರಿಗೆ ಗಾಯವಾಯಿತು ಎಂತ ಅವರ ನಾಯಕಿತಿ ಆಯಾಸಪಟ್ಟರು. ಅಷ್ಟೆ ಮಹಾಸ್ವಾಮಿ; ಬೇರೆ ಏನೂ ತೊಂದರೆ ಇಲ್ಲ," ಎಂದು ಅರಿಕೆ ಮಾಡಿದನು.

ಅರಸರಿಗೆ ಸೋಜಿಗ. ಏನು, ಓಲಗವನ್ನು ನಿಲ್ಲಿಸುವುದೆ, ಎಂದೇ ಅವರು ಯೋಚಿಸುತ್ತಿದ್ದರು. ಆ ಐದು ನಿಮಿಷದಲ್ಲಿ ನಾಯಕ ಮುಖ ತೊಳೆದುಕೊಂಡು ವಿಭೂತಿಯನ್ನು ಧರಿಸಿ, ಸಭೆಗೆ ತಕ್ಕ ಉಡುಪಿನಿಂದ ಓಲಗದೊಳಕ್ಕೆ ಬಂದನು. ರಾಜರಿಗೆ ಕೈಮುಗಿದು ತನ್ನ ಪೀಠದಲ್ಲಿ ಕುಳಿತನು.

ಅರಸರಿಗೆ ಮನಸ್ಸಮಾಧಾನವಾಯಿತು. "ನಾಯಕರು ಸೌಖ್ಯವಾಗಿ ಪೀಠದಲ್ಲಿ ಮಂಡಿಸಿದಾರೆಂದು ನಾಯಕಿತಿಯವರಿಗೆ ತಿಳಿಸ ಹೇಳು," ಎಂದು ಗುರಿಕಾರನಿಗೆ ಅವರು ಅಪ್ಪಣೆ ಮಾಡಿದರು; ಇಲ್ಲಿ ಬೇರೆ ಯಾವ ಮಾತನ್ನೂ ಆಡದೆ, ಉತ್ಸವ ಮುಂದರಿಯಲಿ, ಎಂದು ಬೆಸಸಿದರು.

೭೧

ಓಲಗ ಮುಗಿದ ಮೇಲೆ ನಾಯಕ ನಡೆಸಿದ ಸಾಹಸದ ವಿಷಯವಾಗಿ ದೊಡ್ಡ ಪಂಚಾಯಿತಿ ಆಯಿತು ಎಂದು ಹೇಳಬೇಕಾಗಿಲ್ಲ. ಅರಸರು ಸಭೆಯನ್ನು ಬಿಟ್ಟು ನಾಯಕನನ್ನು ಜೊತೆಗೆ ಕರೆದುಕೊಂಡು ಒಳಗೆ ಹೋದವರೆ, "ಇದೇನು ನಾಯಕರೆ, ನಮಗೆ ತಿಳಿಸದೆ ಇಂಥ ಸಾಹಸ ಮಾಡಿಬಿಟ್ಟಿರಲ್ಲ ! " ಎಂದರು.

ನಾಯಕ, "ಒಡೆಯರು ನನ್ನ ತಪ್ಪನ್ನು ಮನ್ನಿಸಬೇಕು. ನಾನು ಕಾದುತ್ತೇನೆ ಎಂದಿದ್ದರೆ ತಾವು ಒಪ್ಪುತ್ತಿರಲಿಲ್ಲ," ಎಂದನು.

"ಹೌದು, ನಾಯಕರೆ, ನೀವು ಸಾಮಾನ್ಯ ಒಬ್ಬ ಜಟ್ಟಿ ಅಂತ ನಮ್ಮ ಸಿಂಗ ಅಪ್ಪಳಿಸಿ ಕೆಳಕ್ಕೆ ಹಾಕಿದ್ದರೆ ಏನುಗತಿ ? "

ರಾಜಕುಮಾರ ನಂಜರಾಜ, "ಇಲ್ಲ ಅಪ್ಪಾಜಿ, ಸಿಂಗನಿಂದ ಅದಾಗ ತಿರಲಿಲ್ಲ. ನಾಯಕರು ಕತ್ತಿ ಅಲಗಿನ ಹಾಗೆ ಬಾಗುತ್ತಿದ್ದರಲ್ಲ, ಅಪ್ಪಾಜಿ! ಸಿಂಗ ಇವರನ್ನು ಅಪ್ಪಳಿಸೋದು ಎಂಥಾದು ? ಇವರು ಸಿಕ್ಕಿದರಲ್ಲವೆ ? " ಎಂದನು.

ಆ ವೇಳೆಗೆ ರಾಜಮಾತೆಯ ಕಡೆಯಿಂದ ಒಬ್ಬ ಚೇಟಿ ಬಂದು, "ದೊಡ್ಡ ಒಡತಿಯೋರು ನಾಯಕರನ್ನ ಮೊಗಸಾಲೆಗೆ ಸ್ವಲ್ಪದಯಮಾಡಲಿ ಅಂತಾರೆ. ಕಾಣಬೇಕಂತೆ," ಎಂದಳು. ರಾಜರು, "ಒಳ್ಳೇದು" ಎಂದು, ಅವನನ್ನು ಕರೆದುಕೊಂಡು ಅವಳ ಹಿಂದೆ ರಾಣಿವಾಸದ ಮೊಗ ಸಾಲೆಗೆ ಹೋದರು. ಅಲ್ಲಿ ರಾಜಮಾತೆ ದೇವಾಜಮ್ಮಣ್ಣಿ ತೆರೆಯ ಮುಂದೆ ನಿಂತಿದ್ದಳು. ತೆರೆಯ ಹಿಂದೆ ರಾಣಿ ಲಕ್ಷ್ಮಮ್ಮಣ್ಣಿ, ಶಾಂತವ್ವ ಇದ್ದರು. ತೆರೆಯ ಒಂದು ಕೊನೆಯಲ್ಲಿ ಕೆಂಚವ್ವೆ ನಿಂತು ಹೊರಭಾಗದಿಂದ ಬಂದ ಅರಸ ನಾಯಕರ ಕಡೆ ನೋಡುತ್ತಿದ್ದಳು.

ಅರಸರೂ ನಾಯಕನೂ ಹತ್ತಿರ ಬಂದರು. ನಾಯಕ ರಾಜಮಾತೆಗೆ ಕೈಮುಗಿದನು. ಆಕೆ ಪ್ರತಿಯಾಗಿ ಕೈಮುಗಿದು, "ನೀವು ಸೌಖ್ಯವಾಗಿ ರುವುದನ್ನು ನಾವೇ ಕಣ್ಣಾರ ನೋಡಬೇಕು, ಮಗುವಿಗೆ ಪ್ರತ್ಯಕ್ಷ ತೋರಿಸ ಬೇಕು, ಎಂತ ನಿಮ್ಮನ್ನು ಇಲ್ಲಿಗೆ ಬರಮಾಡಿಕೊಂಡೆವು," ಎಂದಳು.

ನಾಯಕ, "ಹೇಗಾದರೂ ನಮಗೆ ತಮ್ಮ ದರ್ಶನ ಆಯಿತು. ಇದೊಂದು ಪುಣ್ಯ," ಎಂದನು.

ರಾಜಮಾತೆ: ನಮ್ಮ ದರ್ಶನ ಆಗುವುದಕ್ಕಾಗಿ ನೀವು ಇಂಥ ಅಪಾಯಕ್ಕೆ ಈಡಾಗಬೇಕಾಗಿರಲಿಲ್ಲ. ನೀವು ನಮಗೆ ನಮ್ಮ ಚಿಕ್ಕ ಬುದ್ಧಿಯವರಂತೆ ಒಂದು ಮೊಮ್ಮಗು. ನಿಮಗೆ ಕಾಣಿಸಿಕೊಳ್ಳಬಾರದೆಂತ ನಮಗೆ ತಿರೆಯಿಲ್ಲ.

ನಾಯಕ: ತಮ್ಮ ಮನಸ್ಸಿಗೆ ಭಯವಾಗುವಂತೆ ಮಾಡಿದೆ. ಮನ್ನಿಸಬೇಕು.

ರಾಜಮಾತೆ: ಮನ್ನಿಸುವ ಮಾತೇನೂ ಇಲ್ಲ. ಬಂದಿದ್ದ ಅಪಾಯ ಸ್ವಲ್ಪದರಲ್ಲಿ ಮುಗಿಯಿತು. ಇಷ್ಟೆ ಸಂತೋಷ. ಹಾಗಲ್ಲದಿದ್ದರೆ ಹಬ್ಬಕ್ಕೆ ಬಂದ ನಂಟರಿಗೆ ಗಾಯವಾಯಿತೆ ಎಂದು ನಾವು ಬೇಯಬೇಕಾಗುತ್ತಿತ್ತು. ಮಗು ತಮ್ಮನ್ನು ನೋಡಿ ಆಯಿತು. ಇನ್ನು ದಯಮಾಡಬಹುದು.

ಇಷ್ಟು ಹೊತ್ತೂ ಅರಸರು ಸುಮ್ಮನೆ ನಿಂತು ಈ ಮಾತನ್ನೆಲ್ಲ ನಗೆ ಮೊಗದಿಂದ ಕೇಳುತ್ತಿದ್ದರು. ನಾಯಕ ತಮ್ಮ ತಾಯಿಯೊಂದಿಗೆ ಎಷ್ಟು ಚೆನ್ನಾಗಿ ನಡೆದುಕೊಳ್ಳುತ್ತಿದಾನೆ, ಎಂದು ಅವರಿಗೆ ಮೆಚ್ಚಿಗೆ. ಅವರು "ವಯಸ್ಸು ಸಣ್ಣದಾದರೂ ಈ ತರುಣ ದೃಢದೇಹಿ, ಸಾಹಸಿ, ಚತುರ. ಬಿದನೂರಿಗೆ ಇವನು ಬಹು ಒಳ್ಳೆಯ ನಾಯಕನಾಗಬೇಕು," ಎಂದುಕೊಂಡರು. ನಾಯಕನನ್ನು ಕರೆದುಕೊಂಡು ತಮ್ಮ ತೊಟ್ಟಿಗೆ ಹಿಂದಿರುಗಿದರು.

## ೭೨

ನಾಯಕ ಅವರೊಂದಿಗೆ ಎರಡು ಕ್ಷಣ ಮಾತನಾಡಿ ತನ್ನ ಬಿಡಾರಕ್ಕೆ ಹೋದನು. ಇವನು ಅಲ್ಲಿ ಸೇರಿದ ಕೆಲವು ನಿಮಿಷದನಂತರ ಶಾಂತವ್ವ ಬಿಡಾರಕ್ಕೆ ಬಂದಳು. ನಾಯಕನಿಗೆ ಅವಳ ಮುಖವನ್ನು ನೋಡಿ ತುಂಬ ಕನಿಕರವಾಯಿತು. ಹಾಗೆಯೆ ನಗೆ ಬಂದಿತು. ಅವನು, "ಇದೇನಿಷ್ಟು ಭಯ? ಏನಾಯಿತು?" ಎಂದು ಕೇಳಿದನು.

ಶಾಂತವ್ವ ದುಃಖದ ಅತಿರೇಕದಲ್ಲಿ ಮಾತನಾಡಲಾಗದೆ ಗಂಡನ ಕಡೆ ನೋಡಿದಳು. ದುಃಖವನ್ನು ತಡೆದುಕೊಳ್ಳುವ ಯತ್ನದಲ್ಲಿ ಅವಳ ಮುಖ ಹಿಂಡಿಹೋಯಿತು; ತುಟಿ ಅದುರಿತು; ತಡೆಯಲಾರದೆ ಕಣ್ಣಿನಲ್ಲಿ ಕೂಡಿದ ನೀರು ಕೋಡಿ ಹರಿಯಿತು. ಅವಳು ಮೆಲ್ಲನೆ ನಡೆದು ಹೋಗಿ ಒಂದು ಕಿಟಕಿಯ ಹತ್ತಿರ ನಿಂತು ದೇವಾಲಯದ ಕಡೆಗೆ ಕೆಲವು ಕ್ಷಣ ನೋಡುತ್ತಿದ್ದಳು. ಭಾವೋದ್ವೇಗದಲ್ಲಿ ಅವಳು ಹೀಗೆ ಮಾಡುವುದನ್ನು ನಾಯಕ ಹಿಂದೆ ಎರಡು ಸಲ ನೋಡಿದ್ದನು. ಆದಕಾರಣ ಅವನು ಒಡನೆಯೆ ಅವಳಿಗೆ ಮತ್ತೆ ಏನನ್ನೂ ಹೇಳಲಿಲ್ಲ; ತನ್ನಂತೆ ತಾನು ಸುಮ್ಮನೆ ಕುಳಿತಿದ್ದನು.

ಆ ಎರಡು ಕ್ಷಣ ಮನಸ್ಸನ್ನು ಬಿಗಿಹಿಡಿದು, ಉಸಿರನ್ನು ಅಂಕೆಗೆ ತಂದುಕೊಂಡು ಶಾಂತವ್ವ ಗಂಡನ ಹತ್ತಿರಕ್ಕೆ ಹಿಂತಿರುಗಿ ಬಂದು, "ನೀವು ನನ್ನನ್ನು ಇಲ್ಲಿಗೆ ಕರೆತಂದದ್ದು ಇದಕ್ಕಾಗಿಯೆ?" ಎಂದು ಕೇಳಿದಳು.

"ಆದದ್ದೇನು?"

"ನಿಮಗೇನಾಗುತ್ತೋ ಅಂತ ನನ್ನ ಜೀವ ನಡುಗಿತು. ಈ ಮಂದಿಯೆಲ್ಲ ನನ್ನನ್ನ ಒಂದು ಹುಚ್ಚಿ ಅಂತ ತಿಳಕೊಂಡಿದ್ದಾರೆ. ಇದು ಎರಡೂ ಆಯಿತು."

"ನಾನು ಗರಡಿಗೆ ಹೋಗೋದು ಕಾಳಗ ಮಾಡೋದು ನಿಮಗೇನು ತಿಳಿಯದೆ? ಗರಡೀಲಿ ಮಾಡೋ ಕಾಳಗ ಕಣದಲ್ಲಿ ಮಾಡಿದೆ. ಅಲ್ಲಿ ಇಲ್ಲದ ಭಯ ಇಲ್ಲಿ ಏನು?"

"ಅಲ್ಲಿ ನಾಯಕರೂ ಅಂತ ತಿಳಿದು ಮರ್ಯಾದೆಯಿಂದ ನಡೆದುಕೊಳ್ಳುತಾರೆ. ಇಲ್ಲಿ ಯಾರಿಗೆ ಗೊತ್ತು?"

"ಯುದ್ಧಕ್ಕೆ ಹೋಗಬೇಕಾದರೂ ಮರ್ಯಾದೆಯಿಂದ ಕಾಣೋವರ ಹತ್ತಿರ ಹೋಗೂ ಅಂತಲೆ? ಊರಲ್ಲೂ ನಾನು ವೇಷ ಹಾಕಿಕೊಂಡು ಗರಡಿಗಳಲ್ಲಿ ಕಾದಿದ್ದೇನೆ. ಅದು ನಿಮಗೆ ತಿಳೀದು. ಗುರುತು ತಿಳಿಸದೆ ಕಾದಿದರೆ ಕಾಳಗ ದಿಟ ಆಗತದೆ. ನಮ್ಮ ಶಕ್ತಿ ತಿಳೀತದೆ. ನೋಡಲಿಲ್ಲ ಈ ಹೊತ್ತು ಆ ಧೋಂಡೂ ಮನುಷ್ಯನ್ನ ಹ್ಯಾಗೆ ಆಡಿಸಿದೆ?"

"ನೀವು ಆಡಿಸಿದ್ದು ಮಾತ್ರ ನಿಮಗೆ ತಿಳೀತೇನೋ! ಅವನು ನಿಮ್ಮನ್ನ ಒಂದು ಮಗುವನ್ನ ತೂಗಿ ಎಸೆಯೋ ಹಾಗೆ ಎಸೆದ. ಎಂಥ ರಾಕ್ಷಸ! ಅವನು ಹೆಚ್ಚೂ ಅಂತಲ್ಲ, ಆದರೆ ಈಡು ಬೇಡವೆ?"

"ಈಡು ನೋಡಿ ಕೂಡೋದಕ್ಕೆ ಕಣ ಏನು ಹಸೆ ಮಣೆ ಆಯ್ತೆ? ಮದವಣಿಗ ಮದವಣಿಗಿತಿ ಈಡಾಗಿರಬೇಕು. ಕಾಳಗದ ಕಣದಲ್ಲಿ ಬಂದವರೆ ಈಡು!"

"ಒಳಿತಾಯ್ತು. ಇನ್ನು ನನ್ನಾಣೆ ಹೀಗೆ ಮಾಡಬಾರದು. ಮಾಡ ಬೇಕು ಅಂದರೆ ನನಗೆ ತಿಳಿಸಿ ಮಾಡಿರಿ. ಊರಿಗೆಲ್ಲ ಹೇಳೋದು ಬೇಡ; ಕೈಹಿಡಿದ ಹೆಣ್ಣಿನ ಕೂಡ ಗುಟ್ಟು ಕಾಯಬೇಕೆ?"

"ನಿಜವಾಗಿ ಹೇಳಬೇಕು, ನನ್ನ ಚಿನ್ನ! ನಾನಿದನ್ನ ಮಾಡತೇನೆ ಅಂದಿದ್ದರೆ ನೀವು ಒಪ್ಪುತಿದ್ದಿರ?"

ಶಾಂತವ್ವನಿಗೆ ವಿಧಿಯಿಲ್ಲದೆ ನಗೆ ಬಂದಿತು. ಇಲ್ಲ ಎಂದು ಅವಳು ಬಲ್ಲಳು; ವಿಧಿಯಿಲ್ಲದೆ, "ಒಪ್ಪುತ್ತಿರಲಿಲ್ಲ," ಎಂದಳು.

ನಾಯಕ: ಅಜ್ಜ, ನೋಡಲಿಲ್ಲ? ಅದಕ್ಕಾಗಿ ಹೇಳಲಿಲ್ಲ. ಇಲ್ಲಿ ಜಟ್ಟಿಯೊಂದಿಗೆ ಕಾದಲೇ ಬೇಕು, ಕಾದಿ ಗೆಲ್ಲಲೇ ಬೇಕು, ಅಂತಲೆ ಬಿದನೂರಿಂದ ಇಲ್ಲಿಗೆ ಬಂದದ್ದು; ಅದು ತಪ್ಪುತಾ ಇತ್ತು. 'ಇದು ಮಾಡತೇನೇ ಅಂದಾಗ ಆಗಲೀ ಅಂತೀನೆ' ಅಂತ ಮಾತು ಕೊಟ್ಟರೆ ಇನ್ನು ಮೇಲೆ ಎಲ್ಲವನ್ನೂ ತಿಳಿಸಿಯೇ ಮಾಡತೇನೆ.

"ಮಾಡೋದು ಬಾರದ್ದನ್ನ ಮಾಡಹೋಗತೇನೆ ಅಂತ ನೀವು ನನಗೆ ಹೇಳಿದರೆ, ಮಾತು ಕೊಟ್ಟೀ ಅಂತ ನಾನು ಆಗಲಿ ಅನ್ನಲಾ? ಈ ಭಾಗ್ಯಕ್ಕೆ ಕೇಳಬೇಕು ಯಾಕೆ? ಕಷ್ಟವೆ ಸುಖವೆ ಅಂತ ಯೋಚಿಸಲಿ ಅನ್ನೋದಕ್ಕೆ ಇನ್ನೊಬ್ಬರನ್ನ ಕೇಳಬೇಕು. ನಿಮಗದೇ ಬೇಡವಲ್ಲ!"

"ಆಯಿತಲ್ಲ, ಇನ್ನು ನಾನು ಏನುಮಾಡುತೇನೆ? ಬಹಳ ದಿವಸ ದಿಂದ ಇದ್ದೊಂದಾಸೆ ಈಹೊತ್ತು ಸಂದಿತು. ಇನ್ನು ಇಂಥಾ ಆಸೆ ಬೇರೆ ಏನಿದೆ? ಯಾವುದನ್ನೂ ತಿಳಿಸತೇನೆ."

"ಅಜ್ಜ, ಅದೀಗ ನ್ಯಾಯ ಆದ ಮಾತು. ಗಂಡಾದವರು ಇಷ್ಟು ನಡಸಿಬಿಟ್ಟರೆ ಹೆಣ್ಣು ಉಸ್ಸೂರಂತ ಇರಬಹುದು. ಈಹೊತ್ತು ನೀವಲ್ಲಿ

ಅವನೆದುರಿಗೆ ನಿಂತಾಗ ಕಂಡು ನನಗೆ, ನಾವು ಉಸಿರೊಂದಿಗೆ ಊರಿಗೆ ಹೋದರೆ ಆದೀತಲ್ಲ, ಅನ್ನಿಸಿತು. ರಾಣಿಯವರು ಎರಡು ಮೂರು ಸಲ ನನ್ನ ಕಡೆ ನೋಡಿದರು; ಏನೊ ಕೇಳಿದರು; ನನಗೆ ಮಂದಟ್ಟಾಗಲಿಲ್ಲ. ಅವರು ಏಂನದುಕೊಂಡರೊ. ಆಯಿತು, ಈಗ ಎಲ್ಲ ತಿಳಿದಿರುತದೆ. ನೀವೂನೂ ಸೌಖ್ಯವಾಗಿದ್ದೀರಿ. ಎಲ್ಲಾ ಒಳಿತಾಯಿತು."

## ೭೩

ಶಾಂತವ್ವ ಇದೇ ವಿಷಯವನ್ನು ಕುರಿತು ಯೋಚಿಸುತ್ತಿರುವುದು ಬೇಡ ಎಂಬ ಉದ್ದೇಶದಿಂದ ನಾಯಕ ತಾನು ಗುರುತು ಮರಸಿಕೊಂಡು ಬಿದನೂರ ನಾಡಗಡಿಯಲ್ಲಿ, ಒಳ ವಲಯದಲ್ಲಿ, ಸುತ್ತುವುದರ ಕಥೆಯನ್ನು ಅಷ್ಟು ಹೊತ್ತು ಹೇಳಿದನು. ಬೆಳ್ಳಂಬರೆ, ಹುಲಿಕಲ್ಲು, ಕೊಪ್ಪ, ಕಳಸ, ಹೊರನಾಡು, ಜಾವಳಿ, ಸೋಮನ ಕಾಡು, ಈ ಪ್ರಾಂತಗಳಲ್ಲಿ ದಟ್ಟವಾದ ಕಾಡಿನಲ್ಲಿ ಎಷ್ಟುವೇಳೆ ತಾನು ಒಬ್ಬನೇ ಎಷ್ಟು ಸರಾಗವಾಗಿ ಸುತ್ತಿದನು ಎಂಬುದನ್ನು ವಿಸ್ತರಿಸಿದನು.

"ಏನು ಆ ಕಾಡು! ಏನು ಆ ಮರಗಳು! ಈ ಜಟ್ಟಿಯಾದವನು ಮನುಷ್ಯರಿಗೆ ರಾಕ್ಷಸನಾದರೆ, ಆ ಕಾಡಿನ ಮರಗಳು ನಮ್ಮ ಊರಿನ ಮರಗಳಿಗೆ ರಾಕ್ಷಸ! ಆ ಮಲೆಗಳ ತಲೆಗಳಾದರೂ ಅದು ಏನು ಎತ್ತರ! ದೂರದಿಂದ ನೋಡಿದಾಗ ಅವುಗಳ ಎತ್ತರ ಅಷ್ಟಾಗಿ ಮನಮುಟ್ಟುವುದಿಲ್ಲ; ಅವುಗಳ ಅಡಿವಾರದಿಂದ ನೋಡಬೇಕು; ಆಗ ತಿಳಿಯುತ್ತದೆ. ಮೇಲಿಂದ ಕೆಳಕ್ಕೆ ನೋಡಿದರೆ ತಲೆ ತಿರುಗುವುದಾಯಿತಲ್ಲ; ಮೇರ್ತಿಯಂಥ ಗಿರಿಯನ್ನು ಹೊರನಾಡ ತಗ್ಗಿನಿಂದ ನೋಡಿದರೆ ಜನಕ್ಕೆ ತಲೆ ತಿರುಗುತದೆ. ಸ್ವಲ್ಪಕ್ಕೆ ಭಯವಾಗುವುದಾದರೂ ಹತ್ತು ದಿನ ಬಳಕೆಮಾಡಿಕೊಂಡರೆ ಈ ಕಾಡು, ಈ ಮರ, ಬಾನೆತ್ತರಕ್ಕೆ ತಲೆ ಹಾದಿರುವ ಈ ಮಲೆ, ಗೆಳೆಯರಂತಾಗುತ್ತವೆ. ಮಾತು ಒಂದಾಡುವುದಿಲ್ಲ; ಒಬ್ಬ ಮೂಕ ಜೊತೆಗಾರನಂತೆ ಧೈರ್ಯಕೊಡುತ್ತವೆ, ಕಾಪಾಡಿಕೊಳ್ಳುತ್ತವೆ. ಲೋಕ ತನ್ನಿಂದ ಬೇರೆ, ವಿರೋಧಿಗಳ ಕಣ, ಎಂದು ತಿಳಿದರೆ ಮನುಷ್ಯನಿಗೆ ಭಯ. ಅದು

ಶಿವನ ಬೆನ್ನು, ಅಂಬಿಕೆಯ ಮಡಿಲು. ಎಂದು ತಿಳಿದರೆ ಭಯವೇ ಇಲ್ಲ, ಗಣಪ ಶಿವನ ಬೆನ್ನು ಬದಿಗೆ ನಿಂತು ಭುಜ ಏರಬೇಕು ಎಂದರೆ ಸುಮ್ಮನೆ ಆಯಿತೆ? ಕಷ್ಟ; ಆದರೆ ಆಡಬೇಕು. ಅವನು ಆಡಲಿ ಎಂದೇ ಶಿವನಿಗೂ ಆಶೆ. ಅಂಬಿಕೆ ಮಗನನ್ನ ಮಡಿಲ ಮೇಲೆ ನಿಲ್ಲಿಸಿಕೊಂಡು ಏರು ಎನ್ನು ತ್ತಾಳೆ. ಇದನ್ನ ಅರಿಯುವುದೇ ಬುದ್ಧಿವಂತರ ದಾರಿ," ಎಂದನು.

"ಈ ಶಾಸ್ತ್ರ ಕೇಳುವುದಕ್ಕೆ ಚೆನ್ನಾಗಿದೆ. ಕಾಡಿನಲ್ಲಿ ಹುಲಿ ಎದುರಾ ದರೆ ತಾನೆ ಯೋಚನೆ."

ನಾಯಕ ಇದಕ್ಕೆ ಉತ್ತರ ಹೇಳಲಿಲ್ಲ. ಸುಮ್ಮನೆ ನಕ್ಕನು. "ಈ ಶಾಸ್ತ್ರ ನಮ್ಮದಲ್ಲ; ನಮ್ಮ ಅಯ್ಯಗಳು ಹೇಳಿದ್ದು. ಹೌದು ಅನ್ನಿಸಿದ್ದನ್ನ ಹೇಳಿದೆ. ಈ ಹುಲಿ ಮಾತಿಗೂ ಅವರು ಏನೋ ಹೇಳತಾರೆ; ಅದು ಈಗ ನನಗೆ ನೆನಪಿಲ್ಲ. ಅಂದರೆ ಗುಡ್ಡ ಮರ ಗೆಳೆಯನಾಗೋದು ನಾನೇ ಕಂಡ ಸಂಗತಿ," ಎಂದನು.

ಇಲ್ಲಿ ಇವರು ಹೀಗೆ ಮಾತನಾಡುತ್ತಿರುವಾಗ ರಾಜಮಾತೆ ದೇವಾ ಜಮ್ಮಣ್ಣಿ, ರಾಣಿ ಲಕ್ಷ್ಮಮ್ಮಣ್ಣಿ, ನಾಯಕನ ಸಾಹಸವನ್ನು ಕುರಿತು ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು.

"ನಾಯಕ ಸ್ವಲ್ಪ ದುಡುಕು ನಿಜ, ಅದರೆ ನಿಜವಾಗಿ ಸಾಹಸಿ. ಒಳ್ಳೆಯ ಹೆಡೆಗಾರ ಹಾವಿನಂತೆ ಸುಳಿಯುತಾನೆ. ತೆಳ್ಳನೆಯ ಕತ್ತಿಯ ಬಳುಕು, ಆ ಬಳುಕು. ಎಂಥ ಗಟ್ಟಿ ಹುಡುಗ! ರಾಜನಾದರೆ ರಾಜ್ಯವನ್ನು ಚೆನ್ನಾಗಿ ಆಳುತ್ತಾನೆ. ಧೀರ; ಕೆಚ್ಚುಗಾರ. ನಮ್ಮ ಮನೆಯ ಮಕ್ಕಳು ಸ್ವಲ್ಪ ಈರೀತಿ ಆದರೆ ಚೆನ್ನಾದೀತು. ಹಿರಿಯರು ಮಲ್ಲರನ್ನು ಗೆದ್ದವರು. ಆದರೆ ಇತ್ತೀಚೆಗೆ ಇದು ನಮಗೆ ಮರ್ಯಾದೆಗೆ ಕಡಮೆಯಾಗಿದೆ. ಕೈಕೆಳಗಿನವರು ತಾವು ಮಲ್ಲಾಟ ಆಡಿ ಕೊಬ್ಬಿ ನಡೆಯುತ್ತಾರೆ."

"ತರುಣ ಧೀರ; ಆದರೂ ಹೀಗೆ ಹೆಂಡತಿಯನ್ನು ಕಾಡಬಾರದು. ಆ ಮಗು ಅದೆಷ್ಟು ಒದ್ದಾಡಿಬಿಟ್ಟಿತು! ಮೊದಲು ಅದು ಹಾಗೆ ತುಟಿ ಒಣಗಿ ಮುಖ ಕಂದಿ ಕುಳಿತಾಗ, ಇದು ಏಕೆ ಈ ಹುಡುಗಿ ಈ ಜಟ್ಟಿಗಾಗಿ ಹೀಗೆ ಅಳುಕತದೆ, ಎನ್ನಿಸಿತು. ಏನಾಯ್ತಮ್ಮಾ ಅಂತ ಕೇಳಿದರೆ ಮಾತು ಕಿವಿ ಮುಟ್ಟಲೇ ಇಲ್ಲ. ಜಟ್ಟಿ ಇವಳ ಗಂಡ ಅಂತ ನಾವೇನು ಕಂಡೆವು?

ಹೌದೂ ಅಂತ ತಿಳಿದಮೇಲೆ ಅಯ್ಯೋ ಪಾಪ ಅನ್ನಿಸಿತು. ಪೆಟ್ಟುತಿಂದ ಹಕ್ಕಿ ಮುರಿದ ರೆಕ್ಕೇನ ಬಡಿಯೋ ಹಾಗೆ ಎದೆ ಡವಗುಟ್ಟಿರಬೇಕು ಹುಡುಗೀಗೆ. ಅಂತೂ ಒಳ್ಳೇದಾಯಿತು."

ಆಮೇಲೆ ಅರಸರೂ ಕುಮಾರರೂ ಆರೋಗಣೆಗೆ ಕುಳಿತಾಗಲೂ ಇದೇ ಮಾತು. ಆಗಲೂ ಎಲ್ಲರದೂ ಇದೇ ಅಭಿಪ್ರಾಯ. ನಾಯಕ ಸಾಹಸಿ, ಆದರೆ ದುಡುಕ. ಅರಸರು ಕೊನೆಯಾಗಿ, "ಅವರು ಬೇಕು ಅಂತ ಅಪಾಯವನ್ನ ಹುಡುಕೋ ಮನುಷ್ಯ. ಕೆಲವು ಜನ ಹೀಗಿರತಾರೆ. ಹತ್ತುಸಲ ಸಾಗಬಹುದು; ಒಂದುಸಲ ಹೋಗಬಹುದು. ಆಗತಾನೆ ಕಷ್ಟ. ದೊರೆಯಾಗುವವನಿಗೆ ಸಾಹಸ ಒಳ್ಳೇದು; ಜೊತೆಗೆ ಸ್ವಲ್ಪ ಎಚ್ಚರಿಕೆಯೂ ಬೇಕು," ಎಂದರು.

## ೭೪

ವಿಜಯದಶಮಿಯ ಉದಯ ವಾಡಿಕೆಯ ಪೂಜೆಗಳಾಗಿ, ಸಂಜೆ ಅರಸರು ನಾಯಕ ರಾಜಕುಮಾರರ ಸಮೇತ ಪರಿವಾರದೊಡನೆ ಕುದುರೆ ಏರಿ ಕೋಟೆಯ ಹೊರಗೆ ಹೋಗಿ ಶಮೀಪೂಜೆ ಮಾಡಿಕೊಂಡು ಬಂದರು. ಆ ವೇಳೆಯಲ್ಲಿ ವೃಕ್ಷದ ಬಳಿ, ಅತಿಥಿಗಳಾಗಿ ಬಂದಿದ್ದ ಪರಂಗಿ ಜನರೂ ಇದ್ದರು. ಸಾಧ್ಯವಾದರೆ ಈ ಜನ ಮಾರನೆಯ ದಿನ ಊರಿಗೆ ಹೊರಡ ಬೇಕು. ಅರಸರಿಗೆ ಇದು ತಿಳಿದಿತ್ತು. ಅವರು, "ಬೆಳಗಾಗ ಸ್ವಲ್ಪಹೊತ್ತು ಅರಮನೆಗೆ ಬಂದು ಇವರು ಮಾತನಾಡಿಕೊಂಡು ಹೋಗಲಿ," ಎಂದು ಅಪ್ಪಣೆಮಾಡಿದರು.

ಅವರೆಲ್ಲ ಮರುದಿನ ಅದೇ ಪ್ರಕಾರ ಬಂದರು. ಮೊದಲು ಮದರಾಸಿನಿಂದ ಬಂದಿದ್ದ ಮೇಜರ್ ಸಾಹೇಬನೊಡನೆ ಅರಸರು, ರಾಜಮಾತೆ, ಮಾತು ನಡೆಸಿದರು. ಇದನ್ನು ನಡೆಸುವುದಕ್ಕೆ ತಿರುಮಲರಾವ್ ದುಬಾಷಿ ಯಾಗಿ ನೆರವಾದನು.

ಮದರಾಸಿನ ಆಂಗ್ಲೇಯರಿಗೆ ಅರಸರು ಹೀಗೆಂದು ತಿಳಿಸಿದರು. "ಇದುವರೆಗೆ ಯಾವುದೇ ಕಾರಣದಿಂದ ಕದನಗಳಾಗಿದ್ದರೂ ಇನ್ನು

ಮುಂದೆ ಮೈಸೂರಿಗೆ ಆಂಗ್ಲರೊಂದಿಗೆ ವಿರೋಧ ಸಾಧಿಸಬೇಕು ಎಂಬ ಇಷ್ಟವಿಲ್ಲ. ಮೈಸೂರ ಅರಸರಿಗೆ ತಮ್ಮ ನಾಡೆಷ್ಟು ಅಷ್ಟು ತಮ್ಮ ಸ್ವಾಧೀನ ದಲ್ಲಿದ್ದರೆ ಸಾಕು. ಹೆಚ್ಚಿನ ಪ್ರಾಂತ್ಯಕ್ಕೆ ಅವರು ಆಶೆಪಡುವುದಿಲ್ಲ. ಹೊರಗಿನ ಜನರಿಗೆ ಸಹಾಯ ಮಾಡುವುದರಲ್ಲಿ ಆಂಗ್ಲೇಯರು ಮೈಸೂರಿನ ಮೇಲೆ ಕೈಮಾಡಬಾರದು. ಈ ಭರವಸೆಯನ್ನು ಕೊಟ್ಟರೆ ಮೈಸೂರು ಅವರಿಗೆ ವಿರೋಧವಾಗಿ ಯಾವ ಕಾರ್ಯವನ್ನೂ ಕೈಗೊಳ್ಳುವುದಿಲ್ಲ."

ಮೇಜರ್ ಸಾಹೇಬ, "ಈ ವಿಷಯ ಪ್ರಭುಗಳು ಅಪ್ಪಣೆ ಕೊಟ್ಟಂತೆ ಅವಶ್ಯವಾಗಿ ಆಗಬಹುದು. ಸರ್ವಾಧಿಕಾರಿಗಳು ಇಲ್ಲಿ ಇದ್ದು ಅವರಿಗೂ ಇದು ತಿಳಿದಿದ್ದರೆ ಚೆನ್ನಾಗುತ್ತಿತ್ತು," ಎಂದನು.

ಅರಸರು ಅಪ್ಪಣೆ ಕೊಡಿಸಿದರು : "ನಿಜ. ಅವರು ಇಲ್ಲಿರಬೇಕೆಂದೇ ನಮ್ಮ ಉದ್ದೇಶ ಇದ್ದಿತು. ಆದರೆ ಸಂಸ್ಥಾನದ ಒಂದು ಗಡಿಯಲ್ಲಿ ಏನೋ ತೊಂದರೆ ಎದ್ದ ಕಾರಣದಿಂದ ಅವರು ಅಲ್ಲಿಗೆ ಹೋಗಬೇಕಾ ಯಿತು. ಅವರಿಗೆ ತಕ್ಕ ತಿಳಿವಳಿಕೆಯನ್ನು ಕೊಡುವುದು ನಮ್ಮನ್ನು ಸೇರಿದ ಮಾತು. ನಿಜದಲ್ಲಿ ನವಾಬ್ ಹೈದರಲ್ಲಿಯವರಿಗೆ ಈ ಸಂತತ ವಾದ ಕಾದಾಟ ಇಷ್ಟವಲ್ಲ. ಅವರು ಅರಸರ ಇಷ್ಟವನ್ನು ನಡಸುತ್ತಾರೆ. ಮುಖ್ಯ ಮೈಸೂರಿನ ಮಾತು ಯಾವುದನ್ನು ಹೇಳಬೇಕಾದರೂ ಹೇಳತಕ್ಕ ವರು ಅರಸರು. ಮದರಾಸ್ ಪಟ್ಟಣದ ಆಂಗ್ಲೇಯರು ಇದನ್ನು ಮನಸ್ಸಿ ನಲ್ಲಿಟ್ಟುಕೊಂಡು ಯಾವುದೇ ಸಂದರ್ಭದಲ್ಲಿ ಪ್ರಭುಗಳನ್ನು ಒಂದು ಮಾತು ಕೇಳಿ ಮುಂದರಿಯಬೇಕು."

ಮೇಜರ್ ಮಹಾಶಯ: ತುಂಬ ಸಂತೋಷ. ಆದರೆ ಬಹು ಸಂಕೋಚದಿಂದ ನಾವು ಒಂದು ಮಾತನ್ನು ಬಿನ್ನವಿಸಬೇಕಾಗಿದೆ. ಕೆಲವು ಸಂದರ್ಭದಲ್ಲಿ ಪ್ರಭುಗಳ ಸರ್ವಾಧಿಕಾರಿ ತೀರಾ ಸ್ವತಂತ್ರಿಸಿ ನಡೆಯು ವಂತೆ ನಮಗೆ ಕಾಣುತ್ತದೆ. ಇಂಥ ವೇಳೆಯಲ್ಲಿ ನಾವು ಹೇಗೆ ನಡೆದು ಕೊಳ್ಳಬೇಕು ?

ಅರಸರು : ಕೆಲವುವೇಳೆ ಹೀಗೆ ಕಾಣಬಹುದು. ಅಂಥ ಹೊತ್ತಿ ನಲ್ಲಿ ತಾವು ನಮ್ಮನ್ನು ಪ್ರತ್ಯಕ್ಷವಾಗಿ ಕೇಳಿ ನಮ್ಮ ಮನಸ್ಸನ್ನು ತಿಳಿದು ಕೊಳ್ಳಿರಿ. ನಮ್ಮ ಸರ್ವಾಧಿಕಾರಿ ನಮ್ಮ ಇಷ್ಟದಂತೆ ನಡೆಯದೆ ಇದ್ದರೆ

ಅವನನ್ನು ಸರಿಯಾಗಿ ನಡಸುವುದಕ್ಕೆ ಕೂಡ ನಿಮ್ಮ ಸಹಾಯ್ಯ ಬೇಕಾದೀತು.

ಮೇಜರ್ : ನಮ್ಮ ಅಧಿಕಾರಿಗಳಿಗೆ ಈ ಸ್ಪಷ್ಟವಾದ ಅಭಿಪ್ರಾಯ ತಿಳಿಯುವುದು ಅವಶ್ಯಕವಾಗಿತ್ತು. ಆಂಗ್ಲರಿಗೆ ಈ ದೇಶದಲ್ಲಿ ಭೂಮಿ ಬೇಕಾಗಿಲ್ಲ; ಅವರಿಗೆ ವ್ಯಾಪಾರದ ಅವಕಾಶ ಅಷ್ಟು ಮಾತ್ರಬೇಕು. ವ್ಯಾಪಾರಕ್ಕೆ ಅಡ್ಡಿಯಾಗಿ ವ್ಯವಹಾರ ಬಂದಾಗ, ವ್ಯವಹಾರವನ್ನು ಕೈಗೆ ತೆಗೆದುಕೊಂಡು ಇಲ್ಲಿಯ ರಾಷ್ಟ್ರಗಳೊಂದಿಗೆ ಕಾದಿದ್ದಾಗಿದೆ. ಕಾದಾಟ ವನ್ನು ತಪ್ಪಿಸುವುದಾದರೆ ಅವರು ಪ್ರಭುಗಳಿಗೆ ಸರ್ವಥಾ ಕೃತಜ್ಞರಾಗಿರು ವವರು. ಆದನ್ನು ತಪ್ಪಿಸುವುದಕ್ಕೆ ತಮ್ಮಿಂದ ಆದ ಎಲ್ಲ ಸಹಾಯವನ್ನೂ ಮಾಡುವರು. ಪ್ರಭುಗಳು ಹೀಗೆ ನಡೆದುಕೊಳ್ಳಿ ಎಂದು ಬೆಸಸಿದರೆ ಸಾಕು: ತಾವು ಅದನ್ನು ಶಿರಸಾವಹಿಸಿ ನಡೆಸುವವರು. ಮುಖ್ಯ ಇಷ್ಟೆಲ್ಲ ಕಾದಾಟಕ್ಕೆ ಕಾರಣ ಸಾಹಸದಿಂದ ಉನ್ನತಪದವಿಗೆ ಬಂದಿರುವ ಉದ್ಯಮ ಶೀಲರ ಮಹತಿಯ ಆಕಾಂಕ್ಷೆ. ಉದ್ಯಮ ಶೀಲರಿಗೆ ಗೌರವ ತೋರಿಸ ಬೇಕು; ನ್ಯಾಯವಾದ ಪ್ರತಿಫಲವನ್ನು ಕೊಡಬೇಕು. ಆದರೆ ಉದ್ಯಮ ಶೀಲ ತಾನೇ ತಾನಾಗಿ ಮೆರೆಯುವುದಕ್ಕೆ ಬಿಡಬಾರದು. ಮೈಸೂರು ಪ್ರಭುಗಳು ತಮ್ಮ ಸರ್ವಾಧಿಕಾರಿಯನ್ನು ಸರಿಯಾಗಿ ನಡಸಿಕೊಂಡು ಶಾಂತಿಯನ್ನು ಸ್ಥಾಪಿಸುವ ಕಾರ್ಯಕ್ಕೆ ನಿಂತರೆ ಮದರಾಸಿನ ಆಂಗ್ಲ ಆಡಳಿತ ಅವರಿಗೆ ಅವಶ್ಯವಾಗಿ ಎಲ್ಲ ಸಹಾಯವನ್ನೂ ನೀಡುತ್ತದೆ. ಹೆಚ್ಚಿನ ಶಾಂತಿಯನ್ನು ಸ್ಥಾಪಿಸುವುದಕ್ಕಾಗಿ ಅರಸರ ವಿರೋಧಿಗಳನ್ನು ತಡೆಯ ಬೇಕಾಗಿ ಬಂದ ಸಂದರ್ಭದಲ್ಲಿ ಆ ಕೆಲಸದಲ್ಲೂ ನೆರವಾಗುತ್ತದೆ.

ಇಷ್ಟು ಮಾತಾದ ಮೇಲೆ ಅರಸರು ಮೇಜರ್ ಮಹಾಶಯನಿಗೆ ತಾಂಬೂಲ ಕೊಡಿಸಿದರು. "ಈ ನಡೆದ ಮಾತೆಲ್ಲ ಸದ್ಯಕ್ಕೆ ಗುಪ್ತವಾಗಿರ ಬೇಕು. ಕಾರ್ಯರೂಪಕ್ಕೆ ಬರುವ ಕಾಲಕ್ಕೆ ಎರಡು ಪಕ್ಷದ ಒಪ್ಪಿಗೆ ಯಿಂದ ಅದು ಪ್ರಕಟವಾಗತಕ್ಕದ್ದು," ಎಂದು ಬೆಸಸಿದರು. ಮೇಜರ್ ಮಹಾಶಯನು, ಹೌದು, ಎಂದು ಹೇಳಿ ಅವರಿಂದ ಬೀಳ್ಕೊಂಡು ಬಿಡಾರಕ್ಕೆ ತೆರಳಿದನು.

ಇವನ ನಂತರ ಅತಿಥಿ ಬಿಷಪ್ ಅರಸರ ಸಂದರ್ಶನಮಾಡಿದನು. ಅವನು ತಾನಾಗಿ ಅರಸರನ್ನು ಬೇಡಿ ಅತಿಥಿಯಾಗಿ ಬಂದಿದ್ದನು. ಅವನ ಉದ್ದೇಶ್ಯ ದೇಶದಲ್ಲಿರುವ ಕಾದಾಟವನ್ನು ಕಡಮೆಮಾಡಬೇಕು ಎನ್ನುವುದು. "ಭಗವಂತನ ಮಗ ಯೇಸು ಶಾಂತಿಯ ಸಮ್ರಾಟ್. ಅವನಿಗೆ ಕದನ ವೆಂದರೆ ಆಗದು. ಲೋಕದಲ್ಲಿ ಶಾಂತಿಯನ್ನು ಸ್ಥಾಪಿಸುವ ಸಲುವಾಗಿಯೇ ಅವನು ಮನುಷ್ಯನಾಗಿ ಜನ್ಮವೆತ್ತಿದನು. ನೆಲದ ಆಸೆಗಾಗಿ ಇಲ್ಲಿ ನವಾಬ, ಅಲ್ಲಿ ಪಾಳೆಯಗಾರ, ಇಲ್ಲಿ ರಾಜ ಅಲ್ಲಿ ಪೇಷ್ವೆ, ಇಲ್ಲಿ ನಿಜಾಮ ಅಲ್ಲಿ ಪರಂಗಿ ವ್ಯಾಪಾರಿ, ಕದನ ಮಾಡುತ್ತಿದ್ದರೆ ದೇಶದ ಜನ ಇವರ ಮಧ್ಯೆ ಸಿಕ್ಕಿ ತೊಳಲುತ್ತದೆ. ಶಾಂತಿಯ ಸಮ್ರಾಟನಾದ ಕ್ರೀಸ್ತ ಗುರುವಿನ ಸೇವಕರಿಗೆ ಇದು ಅಸಹನೀಯ ಪರಿಸ್ಥಿತಿ. ಮೈಸೂರಿನ ಪ್ರಭುಗಳು ದೊಡ್ಡಸ್ಥಾನದಲ್ಲಿದ್ದಾರೆ. ಅವರು ಮನಸ್ಸುಮಾಡಿದರೆ ಈ ಕದನವನ್ನೆಲ್ಲ ನಿಲ್ಲಿಸಬಹುದು. ಮಧ್ಯರಾಷ್ಟ್ರವಾದ ಮೈಸೂರು ಇದರಲ್ಲಿ ಯಾರ ಸಹಾಯವನ್ನು ಬೇಕಾದರೂ ಪಡೆದು ಇತರರನ್ನು ತಡೆಯುವ ಸ್ಥಾನದ ಲ್ಲಿದೆ. ಅದು ಆ ಸ್ಥಾನವನ್ನು ಉಪಯೋಗಿಸಿಕೊಳ್ಳಬೇಕು. ಪೂರ್ವದಿಂದ ನಡೆದು ಬಂದಿರುವ ರಾಜಮನೆತನ ಎನ್ನುವ ಒಂದು ಪ್ರತಿಷ್ಠೆ ಮೈಸೂರಿನ ಅರಸರಿಗೆ ಉಂಟು. ಈ ದೃಷ್ಟಿಯಿಂದ ಇವರು ಈಗ ಕಾದಾಡುತ್ತಿರುವ ಉಳಿದ ಪ್ರಭುತ್ವಗಳ ಮುಖಂಡರಿಗಿಂತ ಒಂದು ಹೆಚ್ಚಿನ ಸ್ಥಾನದಲ್ಲಿ ಇದಾರೆ."

ಅರಸರು ಈ ಮಾತನ್ನೆಲ್ಲ ಕೇಳಿ, "ಧರ್ಮದ ಸೇವಕರಾದ ಬಿಷಪ್ ಮಹಾಶಯರು ಈ ವಿಚಾರದಲ್ಲಿ ಇಷ್ಟು ಶ್ರದ್ಧೆವಹಿಸಿರುವುದು ಸಂತೋಷ. ಮೈಸೂರು ರಾಜಮನೆತನ ಶಾಂತಿಯನ್ನು ಪಾಲಿಸುವುದಕ್ಕೆ ಸರ್ವಪ್ರಯತ್ನ ವನ್ನೂ ಮಾಡುತ್ತಿದೆ. ಮುಂದೆಯೂ ಮಾಡುತ್ತದೆ. ಆಂಗ್ಲೇಯರೂ ಫ್ರೆಂಚರೂ ನಮ್ಮ ಜನರನ್ನು ಎತ್ತಿಕಟ್ಟಿ ದೇಶದಲ್ಲಿ ಕದನವನ್ನು ನಡಸು ತ್ತಿದಾರೆ. ಬಿಷಪ್ ಮಹಾಶಯರು ಈ ಎರಡು ಪರಂಗಿ ಜನದೊಂದಿಗೆ ಮಾತನಾಡಿ ಅವರವರ ಮಧ್ಯದ ಸ್ಪರ್ಧೆಯನ್ನು ನಿಲ್ಲಿಸಬೇಕು. ಎರಡು ಪಕ್ಷದವರೂ ನಿರ್ದಿಷ್ಟ ಪ್ರದೇಶಗಳಲ್ಲಿ ವ್ಯಾಪಾರ ಮಾಡುವಂತೆ ಒಪ್ಪಂದ ಮಾಡಿಸಿ ಇಬ್ಬರೂ ಮೈಸೂರ ಅರಸರಿಗೆ ಶಾಂತಿಸ್ಥಾಪನೆಯ ಕಾರ್ಯದಲ್ಲಿ

ನೆರವಾಗುವಂತೆ ಮಾಡಬೇಕು," ಎಂದು ತಿಳಿಸಿದರು. ಇದೇ ಅರ್ಥದಲ್ಲಿ ಒಂದೆರಡು ಮಾತುಗಳು ವಿವರಣೆಯ ರೂಪದಲ್ಲಿ ನಡೆದ ಮೇಲೆ ಬಿಷಪ್ ವೀಳೆಯ ತೆಗೆದುಕೊಂಡು ತನ್ನ ಬಿಡಾರಕ್ಕೆ ಹೋದನು.

೭೫

ಕಡೆಗೆ ಮಂಗಳೂರಿನ ಕಡೆಯಿಂದ ಬಂದಿದ್ದ ಆಂಗ್ಲರು ಇಬ್ಬರು ಬಂದರು. ಅವರಲ್ಲಿ ಮ್ಯಾಥ್ಯೂಸ್ ಮಂಗಳೂರಿನ ಕೋಟೆಯ ಮುಖಂಡ. ಬರ್ಕ್ ಆವನ ಸಹಾಯದ ಒಬ್ಬ ಕ್ಯಾಪ್ಟನ್. ಇವರು ಅರಸರಿಗೆ ಒಂದು ಅರ್ಜಿಯನ್ನು ಕಳುಹಿಸಿದ್ದರು. ಅದರಲ್ಲಿ ಸೋಮನ ಕಾಡಿನ ಬಳಿ ಘಾಟಿಯಲ್ಲಿ ಬಿದನೂರಿನ ಗಡಿಯಲ್ಲಿ, ಮೈಸೂರ ಆಡಳಿತಕ್ಕೆ ಸುಂಕ ಕೊಟ್ಟು ಹೇರಿಕೊಂಡು ಹೋಗುತ್ತಿದ್ದ ಪದಾರ್ಥಗಳನ್ನು ಕೆಲವರು ದರೋಡೆಗಾರರು ಹಿಡಿದುಹಾಕಿದರು, ಆಮೇಲೆ ವಿಚಾರಿಸಿದ್ದರಲ್ಲಿ ಆ ಪದಾರ್ಥಗಳ ಬಹುಭಾಗ ಅಲ್ಲಿಯ ಗ್ರಾಮಗಳ ಗೌಡರ ಕೈಗೆ ಹೋದುವು ಎಂದು ತಿಳಿಯಿತು, ಇದರ ವಿಷಯ ಬಿದನೂರಿನಲ್ಲಿ ಹೋಗಿ ಕೇಳಿದೆವು, ಅಲ್ಲಿ ವಿಚಾರಿಸುವ ಜನ ಇಲ್ಲ, ಇದಕ್ಕೆ ತಕ್ಕ ಏರ್ಪಾಡು ಮಾಡಬೇಕು, ಎನ್ನುವುದು ಒಂದು ಮಾತು. ಮೈಸೂರಿನ ಅರಸರ ಅರಮನೆಯ ಸ್ವಂತ ಪ್ರದೇಶದೊಡನೆ ಹೆಚ್ಚು ವ್ಯಾಪಾರ ನಡಸುವುದಕ್ಕೆ ಸೌಕರ್ಯ ಕೊಡಬೇಕು, ಎನ್ನುವುದು ಎರಡನೆಯದು. ಅರಸರು, "ಅರಮನೆಯ ಪ್ರದೇಶದೊಂದಿಗೆ ವ್ಯಾಪಾರ ಮಾಡುವುದಕ್ಕೆ ಬೇಕಾದ ಸೌಕರ್ಯ ಏನು?" ಎಂದು ವಿಚಾರಿಸಿದರು. ಪದಾರ್ಥಗಳನ್ನು ತಕ್ಕ ಬೆಲೆಗೆ ಕೊಳ್ಳುವುದಕ್ಕೆ ಅರಮನೆಯ ಸೇವಕರು ಸಹಾಯಮಾಡಬೇಕು ಎಂದು ಮ್ಯಾಥ್ಯೂಸ್ ಕೇಳಿದನು. ಅರಸರು "ಆಗಬಹುದು," ಎಂದರು. ಅರಮನೆಯ ಸ್ವಂತದ ಸ್ವತ್ತಾದದ್ದರಿಂದ ಇಂಥ ಸಾಮಾನಿನ ಮೇಲೆ ಸುಂಕ ಹಾಕಬಾರದೆಂದು ಮ್ಯಾಥ್ಯೂಸ್ ಕೇಳಿದನು. ಅರಸರು, "ನಾವು ನಿಮ್ಮ ಊರಿಗೆ ತಂದರೆ ಅದು ನಮ್ಮ ಸ್ವತ್ತು. ಅದು ಇಲ್ಲಿ ನಿಮ್ಮ ಸ್ವಾಧೀನಕ್ಕೆ ಬಂದರೆ ನಿಮ್ಮದಲ್ಲವೆ?" ಎಂದರು. ಮ್ಯಾಥ್ಯೂಸ್, "ಮಂಗಳೂರನ್ನು ಮುಟ್ಟುವ

ವರೆಗೂ ನಮ್ಮನ್ನು ನಿಮ್ಮ ಹೊರೆಕಾರರಾಗಿ ಗಣಿಸಬೇಕು. ಅಲ್ಲಿ ನಮ್ಮ ಮಳಿಗೆಯನ್ನು ಮುಟ್ಟಿದ ಮೇಲೆ ಪದಾರ್ಥ ನಮ್ಮದು ಎಂದು ತಿಳಿಯುವಂತೆ ನಿಮ್ಮ ಜನಕ್ಕೆ ಅಪ್ಪಣೆ ಮಾಡಬೇಕು," ಎಂದನು. ರಾಜರು ಒಳ್ಳೆಯದು ನೋಡೋಣ ಎಂದರು; ಸೋಮನ ಕಾಡಿನ ಬಳಿ ದರೋಡೆ ನಡೆಯಿತೆಂಬ ವಿಷಯದಲ್ಲಿ, "ಬಿದನೂರಿನ ನಾಯಕರು ಇಲ್ಲಿಗೆ ಹಬ್ಬಕ್ಕಾಗಿ ದಯಮಾಡಿಸಿದ್ದಾರೆ. ಅವರಲ್ಲಿ ಈ ವಿಷಯ ಮಾತನಾಡುತ್ತೀರಾ?" ಎಂದು ಕೇಳಿದರು. ಮ್ಯಾಥ್ಯೂಸ್, ಆಗಬಹುದು, ಎಂದದ್ದರ ಮೇಲೆ, ಅರಸರು ನಾಯಕರಿಗೆ ಹೇಳಿಕಳುಹಿಸಿದರು. ಅವರು ಬರುವ ಒಳಗೆ ಕ್ಯಾಪ್ಟನ್ ಬರ್ಕ್ ಗಡಿಯಲ್ಲಿ ನಡೆದ ಸಂಗತಿ ಏನು ಎಂದು ವಿವರಿಸಿದನು. "ಆ ದಿನ ಇನ್ನೂರು ಹೇರು ಕೊಟ್ಟಿಗೆ ಹರದಿಂದ ಹೊರಟವು. ಅವುಗಳ ಮೇಲೆ ಆ ಮೊದಲೇ ಸುಂಕ ತೀರಿಸಿತ್ತು. ಸೋಮನ ಕಾಡಿನ ಗಡಿಯಲ್ಲಿ ಒಂದು ಐವತ್ತು ಜನ ಹಗಲುಗಳ್ಳರು ಇವರನ್ನು ಅಡ್ಡಗಟ್ಟಿದರು. ಅವರ ನಾಯಕ ದಾರಿಯ ಪಕ್ಕದ ದಿಣ್ಣೆಯ ಮೇಲೆ ನಿಂತಿದ್ದು ಸುಂಕ ತೀರಿಸಿದ ಚೀಟಿ ತೋರಿಸಿ ಎಂದು ಆಜ್ಞೆಮಾಡಿದನು. ಈ ಆಜ್ಞೆಮಾಡುವುದಕ್ಕೆ ನೀನು ಯಾರು ಎಂದು ನಾನು ಕೇಳಿದೆ. ಅದಕ್ಕೂ ನಿನಗೂ ಸಂಬಂಧವಿಲ್ಲ, ಲೆಕ್ಕ ತೋರಿಸು, ಸರಿಯಾಗಿದ್ದರೆ ನಿನ್ನನ್ನು ತಡೆಯುವುದಿಲ್ಲ, ಎಂದನು. ಅದರ ಮೇಲೆ ಸುಂಕದ ಚೀಟಿಯನ್ನು ತೆಗೆದು ತೋರಿಸಿದೆನು. ಅವನು ಇಲ್ಲಿ ಐವತ್ತು ಹೇರಿಗೆ ಮಾತ್ರ ಸುಂಕ ತೀರುವೆ ಆಗಿದೆ; 'ನೀನು ಇನ್ನೂರು ಹೇರು ತೆಗೆದುಕೊಂಡು ಹೋಗುತ್ತಿದ್ದೀಯೆ; ಇದು ಹೇಗೆ,' ಎಂದನು. ಚೀಟಿಯಲ್ಲಿ ಇನ್ನೂರು ಹೇರು ಬರೆದಿದ್ದಿತು. ಅವನು ಸುಮ್ಮನೆ ಹಾಗೆ ಹೇಳಿದನು. ನಮಗೆ ಅವನಿಗೆ ವಾದ ಆಗಿ, ಸುಂಕ ತೀರುವೆ ಆದ ಐವತ್ತು ಹೇರನ್ನು ತೆಗೆದುಕೊಂಡು ಹೋಗಬಹುದು, ಉಳಿದ ಎಲ್ಲ ಹೇರು ಇಲ್ಲಿಯೇ ಇರಬೇಕು, ಎಂದು ಅವನು ದರ್ಪದಿಂದ ಹೇಳಿದನು. ವಿಧಿಯಿಲ್ಲದೆ ನೂರೈವತ್ತು ಹೇರನ್ನು ಬಿಟ್ಟು ನಾವು ಮುಂದಕ್ಕೆ ಹೋದೆವು," ಎಂದನು. ಈ ವೇಳೆಗೆ ನಾಯಕ ಬಂದನು. ಅವನನ್ನು ನೋಡಿದೊಡನೆ ಬರ್ಕ್ ಸ್ವಲ್ಪ ಆಶ್ಚರ್ಯಗೊಂಡಂತೆ ತೋರಿತು. ನಾಯಕ ಬಂದು ಅರಸರ ಬಳಿ ಕುಳಿತ ಮೇಲೆ, ಅವನಿಗೆ ದ್ವಿಭಾಷಿ ಕ್ಯಾಪ್ಟನ್ ಹೇಳಿದ ಮಾತನ್ನೆಲ್ಲ

ತಿಳಿಸಿದನು. ನಾಯಕ ಕಥೆಯನ್ನೆಲ್ಲ ಕೇಳಿ, "ಈ ವಿಷಯ ನಮ್ಮ ಕಿವಿಗೆ ಬಿದ್ದಿತು. ಸಂಗತಿ ನಡೆದದ್ದು ಇವರು ಹೇಳುವಂತೆ ಅಲ್ಲ. ಕೆಲವು ವಿವರದಲ್ಲಿ ಇವರ ಮಾತು ತಪ್ಪು ಎಂದು ಕಾಣುತ್ತದೆ," ಎಂದನು.

"ಯಾವ ವಿವರ?"

"ನಿಮ್ಮ ಚೀಟಿಯಲ್ಲಿ ಇನ್ನೂರು ಹೇರಿನ ತೀರುವೆ ಆಗಿರಲಿಲ್ಲ. ಐವತ್ತು ಎಂದು ಸ್ಪಷ್ಟವಾಗಿ ಬರೆದಿದ್ದಿತು ಅಲ್ಲವೆ?"

"ನನಗೆ ತಿಳಿದಮಟ್ಟಿಗೆ ಅದರಲ್ಲಿ ಇನ್ನೂರು ಎಂದೇ ಬರೆದಿದ್ದಿತು."

"ನಿಮ್ಮ ಆ ದರೋಡೆಗಾರರ ಮುಖಂಡ ನಿಮಗೆ ಚೀಟಿಯನ್ನು ಎರಡು ಸಲ ತೋರಿಸಿದನಂತೆ, ಐವತ್ತು ಎನ್ನುವುದು ಸ್ಪಷ್ಟವಾಗಿ ಇದ್ದದ್ದರಿಂದ ನೀವು ತಪ್ಪನ್ನು ಒಪ್ಪಿಕೊಂಡು ಹೇರನ್ನು ಬಿಟ್ಟು ಹೋದಿರಂತೆ."

"ಛೆ, ಛೆ! ಇದೆಲ್ಲ ಕಥೆ."

"ನೀವು ತೀರುವೆ ಮಾಡದೆ ತೆಗೆದುಕೊಂಡು ಹೋಗುತ್ತಿದ್ದ ಹೇರು ದಾರಿಯ ಎರಡು ಗ್ರಾಮದಿಂದ ಕದ್ದುತಂದಿದ್ದ ಹೇರು ಎಂದು ಅಲ್ಲಿ ಇಬ್ಬರು ದೂರು ತಂದಿದ್ದರಂತೆ."

"ಇದೂ ಕಥೆ"

"ಹೀಗಲ್ಲದಿದ್ದರೆ ನೀವು ಸುಂಕ ಕೊಟ್ಟು ಹೇರು ತೆಗೆದುಕೊಂಡು ಹೋಗಬಹುದಾಗಿದ್ದಿತಲ್ಲ. ಹಾಗೆ ಏಕೆ ಮಾಡಲಿಲ್ಲ?"

ಕ್ಯಾಪ್ಟನ್ ನಾಯಕನ ಕಡೆ ನಿಟ್ಟಿಸಿ ನೋಡಿದನು. ಅವನನ್ನು ಕಂಡ ಕ್ಷಣ ಮನಸ್ಸಿನಲ್ಲಿ ಮೂಡಿದ್ದ ಸಂಶಯ ನಿಶ್ಚಯವೆ ಆಯಿತು. ಅವನು ಉತ್ತರ ಹೇಳಲಿಲ್ಲ.

"ನೀವು ಹೇರನ್ನು ಬಿಟ್ಟು ಹೋಗುವುದಕ್ಕೆ ಸುಮ್ಮನೆ ಒಪ್ಪಲಿಲ್ಲವಂತೆ. ನಿಮ್ಮ ಕೈಕೋವಿಯಿಂದ ಮುಖಂಡನನ್ನು ಕೊಲ್ಲುತ್ತೇನೆ ಎಂದಿರಂತೆ. ಆ ಹೊತ್ತಿಗೆ ಸರಿಯಾಗಿ ನಿಮ್ಮ ಬೆನ್ನಿಗೆ ಒಂದು ಕೋವಿಯ ಮೂತಿ ಸೋಕಿ ನೀವು ಹಿಂದಿರುಗಿ ನೋಡಿದಿರಂತೆ. ನಿಮ್ಮ ಆ ದರೋಡೆಗಾರರೆನ್ನುವವರಲ್ಲಿ ಒಬ್ಬ ನಿಮ್ಮ ಗುಂಡಿಗೆಗೆ ಸರಿಯಾಗಿ ಹಿಂದುಗಡೆ ಕೋವಿ ಹಿಡಿದಿದ್ದುದರಿಂದ ನೀವು ನಿಮ್ಮ ಕೋವಿಯನ್ನು ಹೊಡೆಯದೆ ಕಿಸೆಯಲ್ಲಿ ಇಟ್ಟುಕೊಂಡಿರಂತೆ."

ಕ್ಯಾಪ್ಟನ್ ಬಾಯಿ ತೆರೆಯಲಿಲ್ಲ.

ನಾಯಕ ರಾಜರಿಗೆ, "ನಮಗೆ ತಿಳಿದದ್ದರಲ್ಲಿ ಇವರು ಕಳ್ಳಹೇರನ್ನು ತೆಗೆದುಕೊಂಡು ಹೋಗುತ್ತಿದ್ದರು. ಅದನ್ನು ಗಡಿಯ ಜನ ತಡೆದರು. ಇವರು ಬೆದರಿಸಿ ಅದನ್ನು ಹಾರಿಸಲು ನೋಡಿದರು. ಕಾವಲು ಇವರ ಪ್ರಾಣಕ್ಕೆ ಸಂಚಕಾರ ಕೊಟ್ಟದ್ದರಿಂದ ಇವರು ಸೋತು ಬರಿಕೈಯಾಗಿ ಹೋದರು. ಈ ವಿಚಾರದಲ್ಲಿ ಬಿದನೂರಿನ ಆಡಳಿತವನ್ನು ಇವರು ದೂರುವಂತಿಲ್ಲ. ಇಲ್ಲಿ ಇವರಿಗೆ ಯಾವ ಪರಿಹಾರ ದೊರೆಯುವುದು ಸಾಧ್ಯ ?" ಎಂದನು.

ಮ್ಯಾಥ್ಯೂಸ್, "ನೀವು ಆ ಹೊತ್ತು ಅಲ್ಲಿ ಇದ್ದು ಎಲ್ಲವನ್ನೂ ಕಂಡ ವರಿಗಿಂತ ಹೆಚ್ಚಾಗಿ ಹೇಳುತ್ತಿದೀರಿ. ಇದೆಲ್ಲ ನಿಮಗೆ ಹೇಗೆ ತಿಳಿಯ ಬೇಕು ?" ಎಂದನು.

ಕ್ಯಾಪ್ಟನ್ ಮ್ಯಾಥ್ಯೂಸ್ ಮಹಾಶಯನಿಗೆ ಮೆಲ್ಲನೆಯ ದನಿಯಲ್ಲಿ, ತಮ್ಮ ಮಾತಿನಲ್ಲಿ, "ಇವನೇ ಆ ದರೋಡೆಗಾರರ ಮುಖಂಡ ಎಂದು ನನಗೆ ಕಾಣುತ್ತದೆ. ಮುಖ, ರೀತಿ, ಹಾಗೆಯೇ ಇದೆ," ಎಂದನು.

ನಾಯಕ, "ನಾವು ಹೇಳುವ ಮಾತು ಸರಿಯೊ ತಪ್ಪೊ ನಿಮ್ಮ ಗೆಳೆಯರು ಹೇಳಲಿ. ಆಮೇಲೆ ವಿವರ ಹೇಗೆ ತಿಳಿಯಿತು ಎಂದು ತಿಳಿಸು ತ್ತೇವೆ," ಎಂದನು.

ಕ್ಯಾಪ್ಟನ್ ತನ್ನ ಹಿರಿಯನಿಗೆ ತಮ್ಮ ಮಾತಿನಲ್ಲಿ, "ಈ ಮಾತನ್ನು ಬಿಡೋಣ," ಎಂದು ಹೇಳಿ, "ಕೋವಿಯನ್ನು ತೆಗೆದದ್ದುಂಟು. ದರೋಡೆ ಗಾರರು ಮೈಮೇಲೆ ಬೀಳುವುದಕ್ಕೆ ಅನುವಾದಾಗ ಆತ್ಮ ರಕ್ಷಣೆಗಾಗಿ ಅದನ್ನು ತೆಗೆದೆವು. ಹೇರಿನಲ್ಲಿ ಕದ್ದ ಸಾಮಾನು ಇದ್ದಿತೆನ್ನುವುದು ನಮಗೆ ತಿಳಿಯದು. ಅದನ್ನು ನಮ್ಮ ಆಳುಗಳಲ್ಲಿ ಯಾರೊ ತಪ್ಪಿ ತಂದಿರ ಬೇಕು. ಈ ವಿಷಯ ಮತ್ತೆ ಬಿದನೂರಿಗೆ ಬಂದು ಮಾತನಾಡುತ್ತೇವೆ," ಎಂದು ಉತ್ತರ ಕೊಟ್ಟನು.

ಇದರ ಮೇಲೆ ನಾಯಕ ಏನೂ ಹೇಳಲಿಲ್ಲ. ಅರಸರು, "ಒಳಿತು. ನೀವಿನ್ನು ಹೋಗಿಬನ್ನಿ. ನಾವು ಯಾವಾಗಲಾದರೂ ದೇಶದ ಶಾಂತಿಯ ಸ್ಥಾಪನೆಗಾಗಿ ನೆರವನ್ನು ಕೇಳಿದರೆ ಬಂದು ನೀಡಿ," ಎಂದು ಹೇಳಿದರು.

ಮ್ಯಾಥ್ಯೂಸ್, ಬರ್ಕ್, ಆಗಬಹುದು ಎಂದರು. ವೀಳೆಯ ತೆಗೆದು ಕೊಂಡು ತಮ್ಮ ಬಿಡಾರಕ್ಕೆ ಹೋದರು.

ಅರಸರು ನಾಯಕನನ್ನು ಕುರಿತು, "ಏನು ಆ ಹೊತ್ತು ಅಲ್ಲಿ ನೀವೇ ಇದ್ದಿರೊ?'' ಎಂದು ಕೇಳಿದರು.

ನಾಯಕ, "ಹೌದು. ಒಡೆಯರೆ. ನಮ್ಮ ಸುಂಕದ ಕಟ್ಟೆಯ ಮಣೇಗಾರರು ನಂಬಿಕೆವಂತರಲ್ಲ. ಈ ಜನ ಬೇರೆ, ಕೊಂಡ ಸಾಮಾನು ಹತ್ತು ಕದ್ದ ಸಾಮಾನು ಇಪ್ಪತ್ತನ್ನು ಸಾಗಿಸುವುದಕ್ಕೆ ನೋಡುತ್ತಾರೆ. ಇದಕ್ಕೆ ಗಡಿಯಲ್ಲಿ ಒಂದು ಗುಟ್ಟಿನ ಕಾವಲ ಪಡೆಯನ್ನು ನಿಲ್ಲಿಸಿದ್ದೇವೆ. ಅವರಿಗೆ ಇವರಿಗೆ ಆದ ಜಗಳದ ಮಾತು ಇದು. ಇವನು ಕೋವಿ ತೆಗೆದಾನು ಎಂತ ನಮಗೆ ಗೊತ್ತು. ಆದ್ದರಿಂದ ಇವನು ಆ ಬೆದರಿಕೆಯ ಆಟ ಆಡುವ ಮೊದಲೆ ಕಾವಲ ಒಬ್ಬನನ್ನು ಕೋವಿ ಸಹಿತ ಇವನ ಹಿಂದೆಯೆ ನಿಲ್ಲು ಎಂದು ಹೇಳಿದ್ದೆವು. ಹೆದರುವ ಜನ ಸಿಕ್ಕಿದರೆ ಈ ಜನರ ದರ್ಪ ಬಹಳ. ಜೊತೆಗೆ ಜೊತೆ ಆದರೆ ವಿವೇಕವಾಗಿ ನಡೆದು ಕೊಳ್ಳುತ್ತಾರೆ," ಎಂದನು. ಮತ್ತೆ ಎರಡು ಮಾತನಾಡಿ ಅರಸರು ನಾಯಕನನ್ನು ಬಿಡಾರಕ್ಕೆ ಕಳುಹಿಸಿಕೊಟ್ಟರು. ಆಮೇಲೆ ದ್ವಿಭಾಷಿ ಯೊಂದಿಗೆ, "ಸದ್ಯದಲ್ಲಿ ಯಾರಾದರೂ ಈ ಜನರನ್ನು ಏನು ಮಾತು ನಡೆಯಿತು ಎಂದು ಕೇಳಿದರೆ ಅರಮನೆಯ ಸ್ವಂತ ಪ್ರದೇಶದ ಅಭಿವೃದ್ಧಿ ಗಾಗಿ ಮತ್ತು ಅಲ್ಲಿಂದ ಹೆಚ್ಚಿನ ವ್ಯಾಪಾರ ನಡೆಯುವುದಕ್ಕಾಗಿ ಈ ಜನ ರೊಂದಿಗೆ ಆಲೋಚನೆ ನಡಸಿದೆ ಎಂದು ಇವರೆಲ್ಲ ಹೇಳಬೇಕು. ಇದನ್ನು ನೋಡಿಕೊಳ್ಳಿ ತಿರುಮಲರಾವ್," ಎಂದು ಬೆಸಸಿದರು.

ತಿರುಮಲರಾವ್, "ಅಪ್ಪಣೆ ಮಹಾಸ್ವಾಮಿ," ಎಂದು ವೀಳೆಯ ತೆಗೆದುಕೊಂಡು ಹೊರಟನು.

## ೭೬

ಉತ್ಸವಗಳೆಲ್ಲ ಮುಗಿದ ಮೇಲೆ ನಾಯಕನು ಶಾಂತವ್ವನೊಡನೆ ಚಾಮುಂಡಿಯ ಬೆಟ್ಟ, ನಂಜನಗೂಡಿಗೆ ಯಾತ್ರೆ ಹೋಗಿ ಬಂದನು. ಶ್ರೀರಂಗಪಟ್ಟಣಕ್ಕೆ ಬರುವ ದಿವಸದಲ್ಲಿ ಹೇಗೊ ಹಾಗೆ ಈ ಪ್ರಯಾಣ

ಗಳಲ್ಲಿಯೂ ಶಾಂತವ್ವ ಹೊಸ ಒಂದು ಸ್ವಾತಂತ್ರ್ಯದ ಸವಿಯನ್ನು ಅನುಭವಿಸಿದಳು. ಗಂಡಹೆಂಡಿರು ಚಾಮುಂಡಿ ಬೆಟ್ಟವನ್ನು ತಾವೇ ಹತ್ತಿದರು; ತುಂಬ ಭಕ್ತಿಯಿಂದ ದೇವಿಯ ದರ್ಶನಮಾಡಿ ಪೂಜೆಗಳನ್ನು ನಡೆಸಿದರು. ಅಲ್ಲಿಂದ ನಂಜಗೂಡಿಗೆ ಹೋಗಿ ಎರಡು ದಿನ ದೇವರ ಸೇವೆ ಮಾಡಿದರು. ಮತ್ತೆ ಪಟ್ಟಣಕ್ಕೆ ಬಂದು ಎರಡು ದಿನ ಇದ್ದು ಊರಿಗೆ ಹೊರಡುವುದಾಗಿ ತಿಳಿಸಿದರು.

ಅರಸರೂ ರಾಜಮಾತೆಯೂ ನಾಯಕನನ್ನು ಹತ್ತಿರ ಕುಳ್ಳಿರಿಸಿಕೊಂಡು ಅವನನ್ನು ಬರಮಾಡಿಕೊಂಡದ್ದರ ಉದ್ದೇಶವನ್ನು ವಿವರಿಸಿ ತಿಳಿಸಿದರು. ರಾಜಮಾತೆ, "ಪ್ರಭುಗಳು ಚಿಕ್ಕವರಾಗಿದ್ದಾಗ ಸರ್ವಾಧಿಕಾರಿಯಾಗಿದ್ದ ನಂಜರಾಜರು ತಾವೇ ರಾಜನೆಂಬಂತೆ ಆಡಿದರು. ಇದರಿಂದ ಸರ್ವಾಧಿಕಾರ ಎನ್ನುವುದು ಪ್ರಭುಗಳಿಗಿಂತ ಮೇಲ್ಪಟ್ಟ ಒಂದು ಅಧಿಕಾರ ಎಂಬಂತೆ ಒಂದು ಸಂಪ್ರದಾಯ ಬೆಳೆಯಿತು. ಈಗಿನ ಸರ್ವಾಧಿಕಾರಿ ನಂಜರಾಜರಷ್ಟು ಧೂರ್ತನಾಗಿಲ್ಲ; ಆದರೂ ಸ್ವಲ್ಪ ಮಿತಿ ಮರೆತು ಒಮ್ಮೊಮ್ಮೆ ದುಡುಕುವುದುಂಟು. ಪ್ರಭುಗಳು ಅವನನ್ನು ಹಿಡಿತದಲ್ಲಿ ಇರಿಸಿಕೊಳ್ಳುವುದಕ್ಕೆ ಯತ್ನಮಾಡುತ್ತಿದಾರೆ. ಯಾವ ತೊಂದರೆಯೂ ಇಲ್ಲದೆ ಸಂದರ್ಭ ಸರಿಹೋಗಬಹುದು; ಆದರೆ ಸರ್ವಾಧಿಕಾರಿ ಅರಸರನ್ನು ಉಲ್ಲಂಘಿಸಿ ಕೆಲವು ಹೆಜ್ಜೆ ಇಟ್ಟರೂ ಆಶ್ಚರ್ಯವಿಲ್ಲ. ಅಂಥ ಹೊತ್ತಿನಲ್ಲಿ ಅವನನ್ನು ಅಂಕೆಗೆ ತರುವುದಕ್ಕೆ ಅರಸರು ತಕ್ಕ ಏರ್ಪಾಡು ಮಾಡಿಕೊಳ್ಳುತ್ತಿದಾರೆ. ಆ ಕೆಲಸದಲ್ಲಿ ಇತರರ ಸಹಾಯ ಬೇಕು; ಆ ಸಹಾಯವನ್ನು ಅವರು ಬಿದನೂರ ನಿಮ್ಮಿಂದಲೂ ನಿರೀಕ್ಷಿಸುತ್ತಾರೆ. ಒಂದು ಕಾಲದಲ್ಲಿ ನಮ್ಮ ಸೈನ್ಯಗಳು ಬಿದನೂರ ನಾಡನ್ನು ಆಕ್ರಮಿಸಿದ್ದುಂಟು; ಬಿದನೂರಿಂದ ಕಾಣಿಕೆ ಪಡೆದದ್ದು ಉಂಟು. ಈಗ ಅದರ ಮಾತುಬೇಕಿಲ್ಲ; ಬಿದನೂರು ಸ್ವತಂತ್ರವಾಗಿ ಸುಖವಾಗಿ ಇರಬೇಕು. ನಾಯಕರು ಮೈಸೂರ ಅರಸರಿಗೆ ಜೊತೆಗೂಡಿ ಸಹಾಯ ಮಾಡಬೇಕು. ಇದು ಒಂದು ಮಾತು. ನಾಯಕರು ಅರಸರಿಗೆ ಈ ಸಹಾಯ ಮಾಡಬೇಕಾದರೆ ತಾವು ತಮ್ಮ ಸ್ಥಾನದಲ್ಲಿ ಭದ್ರವಾಗಿ ಕುಳ್ಳಿರಬೇಕು. ನಿಮ್ಮ ಹಿರಿಯರು ತೀರಿಕೊಂಡು ಬಹುದಿನವಾದರೂ ನಿಮಗೆ ಪಟ್ಟವಾಗದೆ ಇರುವುದು

ಅವ್ಯವಸ್ಥೆಗೆ ಕಾರಣವಾಗಿದೆ. ಈಸಲ ಊರಿಗೆ ಹೋದ ಒಡನೆ ಪಟ್ಟ ಕಟ್ಟಿಕೊಂಡು ಆಡಳಿತವನ್ನು ವಹಿಸಿಕೊಳ್ಳಬೇಕು. ಈ ವಿಚಾರದಲ್ಲಿ ಅರಸರಿಂದ ಏನಾದರೂ ಸಹಾಯ ಬೇಕಾದರೆ ಇವರು ಅದನ್ನು ಸಂತೋಷದಿಂದ ನೀಡುತ್ತಾರೆ. ಈ ವಿಷಯವನ್ನು ಈಗಿನ ಸಂದರ್ಭದಲ್ಲಿ ಕಾಗದದ ಮೂಲಕ ತಿಳಿಸುವುದು ಅಪಾಯ. ಆದ್ದರಿಂದ ಮುಖತಃ ತಿಳಿಸುವ ಯೋಚನೆಮಾಡಿ, ಹಾಗೆಯೇ ಬೆಳೆಯುವ ಎಳೆಯರಾದ ನಿಮ್ಮನ್ನೂ ನಿಮ್ಮ ಕುಟುಂಬವನ್ನೂ ನೋಡಬೇಕು, ಸತ್ಕರಿಸಬೇಕು, ಎಂಬ ಆಶೆಯಿಂದ ನಿಮ್ಮಗಳನ್ನು ಉತ್ಸವಕ್ಕೆ ಆಹ್ವಾನಿಸಿದ್ದಾಯಿತು. ನೀವು ಆಹ್ವಾನವನ್ನು ಅಂಗೀಕರಿಸಿ ರಾಣಿಯರ ಸಮೇತ ಪಟ್ಟಣಕ್ಕೆ ದಯಮಾಡಿಸಿದ್ದು ರಾಜರಿಗೆ, ಅವರ ಸಮಸ್ತ ಕುಟುಂಬಕ್ಕೆ, ತುಂಬ ಸಂತೋಷವಾಗಿದೆ. ನೀವು ಸುಖವಾಗಿ ಪ್ರಯಾಣ ಬೆಳಸಿ ಊರನ್ನು ಸೇರಿ ಸುಖವಾಗಿ ಆಳಬೇಕು ಎನ್ನುವುದು ಇಲ್ಲಿ ಎಲ್ಲರ ಆಶೆ. ಮೈಸೂರ ಅರಸರನ್ನು ನಿಮ್ಮ ಒಬ್ಬ ಚಿಕ್ಕಪ್ಪ ಎಂಬಂತೆ ಭಾವಿಸಿ, ನಂಬಿ, ನಂಬಿಸಿ ನಡೆದುಕೊಳ್ಳಬೇಕು," ಎಂದಳು.

ನಾಯಕ, "ಕಪ್ಪದ ಮಾತು, ಕಾಣಿಕೆಯ ಮಾತು, ಇಲ್ಲ ಎನ್ನುವುದು ಸಂತೋಷ. ಅರಸರು ಯಾವುದೇ ಸಂದರ್ಭದಲ್ಲಿ ಬಿದನೂರಿನ ನೆರವನ್ನು ಬಯಸಿದರೆ, ನಾವು ಅಗತ್ಯವಾಗಿ ಬಂದು ಜೊತೆಗೆ ನಿಲ್ಲುವವರು. ನಾವು ಪಟ್ಟ ಕಟ್ಟಿಕೊಳ್ಳದೆ ಇರುವುದು ಬೇರೆ ಯಾವ ಕಾರಣದಿಂದಲೂ ಅಲ್ಲ. ಹಿರಿಯ ನಾಯಕರು ತೀರಿಕೊಂಡದ್ದರ ದಃಖ ಇನ್ನೂ ಹಸಿಯಾಗಿ ಇದ್ದದ್ದರಿಂದ ಪಟ್ಟ ಕಟ್ಟುವುದೆಂಬ ಉತ್ಸವ ತಾಯಿಗೂ ಬೇಕಾಗಲಿಲ್ಲ, ನಮಗೂ ಬೇಕಾಗಲಿಲ್ಲ. ಈಸಲ ಅದು ನಡೆಯತಕ್ಕದ್ದು ಎಂದು ಈ ಮೊದಲೆ ನಿಶ್ಚಯವಾಗಿದೆ. ಅರಸರು ಅಪ್ಪಣೆ ಕೊಟ್ಟಂತೆ ನಾವು ಅವರ ಬಂಧು ಎಂದೇ ನಡೆದುಕೊಳ್ಳಲುಳ್ಳವರು. ಅವರೂ ಅವರ ಕುಟುಂಬವೂ ಬಿದನೂರ ನಮ್ಮ ಕುಟುಂಬವನ್ನು ಹಾಗೆಯೆ ನಂಟು ಎಂದು ವಾತ್ಸಲ್ಯದಿಂದ ಕಾಣಬೇಕು," ಎಂದನು.

ಅರಸರಿಗೆ, ರಾಜಮಾತೆಗೆ, ನಾಯಕನ ಈ ಮಾತಿನಿಂದ ಬಹಳ ಸಂತೋಷವಾಯಿತು. ನಾಯಕ ಈ ಮಾತಿನಲ್ಲಿ ತನ್ನ ಸಂಸಾರದ

ಛಿದ್ರವನ್ನು ಬಿಟ್ಟುಕೊಡಲಿಲ್ಲ ಎನ್ನುವುದೂ ಅವರಿಗೆ ಬಹಳ ಮೆಚ್ಚಿಗೆ. ಇದರಿಂದ ಅವರು ಇವನು ನಂಬಿಕೆಗೆ ಅರ್ಹ ಎಂದು ಮನಗಂಡರು. ಅವನೂ ಪರಿವಾರವೂ ಒಂದು ಒಳ್ಳೆಯ ದಿನ ತಮ್ಮ ಊರಿಗಾಗಿ ಹಿಂದಿರುಗಿ ಹೊರಡಲು ಅನುಮತಿ ಕೊಟ್ಟರು.

೭೭

ರಾಜಮಾತೆಯೂ ರಾಣಿ ಲಕ್ಷ್ಮಮ್ಮಣ್ಣಿಯೂ ಶಾಂತವ್ವನನ್ನು ಎಷ್ಟು ಕಣ್ಣಾಗಿ ಹೊನ್ನಾಗಿ ಕಂಡರೂ ತಣಿಯದೆ ಹೋದರು. ರಾಜಮಾತೆ ಅವಳನ್ನು ಒಂದು ಕಡೆ ಕುಳ್ಳಿರಿಸಿಕೊಂಡು, "ಶಾಂತವ್ವ, ನೀನು ಅತಿ ನಾಚಿಕೆಯ ಹೆಣ್ಣು. ನಿನ್ನ ಗಂಡನೊಂದಿಗೂ ನಾಚುತ್ತೀಯೆ ಎಂದು ಕಾಣುತ್ತದೆ. ಹೀಗೆ ಮಾಡಬಾರದು," ಎಂದಳು. ಶಾಂತವ್ವ ನಗೆ ಮುಖದಿಂದ, "ಹಾಗೇನೂ ಇಲ್ಲ," ಎಂದಳು.

"ಅದೀಗ ಸರಿ. 'ಎದೆ ತೋರೆದು ತಾಯಿ, ಮೈ ತೆರೆದು ಹೆಂಡತಿ,' ಅಂತ ಹಿರಿಯರ ವಚನ ಇದೆ ತಾಯಿ. ನಾನು ಹೇಳಿದ್ದು ತಿಳೀತೆ? ಮಗುವಿಗಾಗಿ ಹಾಲು ತೋರೀಬೇಕೂ ಅಂತ, ಸಂಸಾರ ಚೆನ್ನವಾಗ ಬೇಕಾದರೆ ಗಂಡನ ಹತ್ತಿರ ಸಂಕೋಚ ಮಾಡಿಕೊಳ್ಳಬಾರದು ಅಂತ; ತಿಳೀತೆ ?"

"ತಿಳೀತು, ಅಮ್ಮಾಜಿ."

"ಇನ್ನೊಂದು ಸಮಾಚಾರ. ಅರಮನೇಲಿ ಬಾಳೋ ಹೆಣ್ಮಗಳು ಗಂಡನ ಕಣ್ಣಿಗೆ ಕಾವಲು ಹಾಕಬಾರದು. ಗುಡಿಸಲಲ್ಲಿದ್ದರೂ ಗಂಡಿನ ಯೋಗ್ಯತೆ ಅಷ್ಟೆ. ಅರಮನೇಲಿ ಅಧ್ವಾನ ತಪ್ಪಿದ್ದಲ್ಲ. ಗಂಡಿನ ಕಣ್ಣು ಅತ್ತಿತ್ತ ಹಾಯ್ದಾಗಲೆಲ್ಲ ರಾಣಿ ಹತ್ತಿರ ಇರೋಕಾಗೋದಿಲ್ಲ. ಬೇರೆ ಜನ ಇರತಾರೆ; ಅವನ್ನ ಒಲಿಸತೇವೇ ಅಂತಾರೆ; ವಶಮಾಡಿಕೋತಾರೆ. ರಾಣಿ ಯಾದವಳು, ತನ್ನ ಪದವಿ ತನ್ನದು, ಈ ಕೂಡಿಕೆಗೆ ಅಡ್ಡಬರೋಹಾಗಿಲ್ಲ, ಅಂತ ತಿಳಿದುಕೋಬೇಕು; ಸಮಾಧಾನವಾಗಿದ್ದು ಗಂಡನ್ನ ಉಳಿಸಿಕೊಳ್ಳ ಬೇಕು; ತಿಳೀತೆ ?"

"ತಿಳೀತು, ಅಮ್ಮಾಜಿ."

"ನಾಯಕರು ಇನ್ನೂ ಕಿರಿಯರು. ಅಂಥ ತೊಂದರೆ ಏನೂ ಆಗಿರಲಾರದು. ಅಲ್ಲದೆ ನೀನು ಮುದ್ದುಗಾರ ಅರಗಿಳಿ ಹಾಗಿದ್ದೀಯೆ. ನಿನ್ನ ನೋಡಿದರೆ ಹೆಣ್ಣಿಗೂ ಆಶೆ ಆಗತದೆ; ಗಂಡು ಮರುಳಾಗದೆ ಬಿಟ್ಟೀತೆ! ಯಜಮಾನನನ್ನು ಒಪ್ಪವಾಗಿ ನೋಡಿಕೊ ತಾಯಿ. ಅಂಟಿ ಬಾಳಬೇಕು; ಹೆಮ್ಮೆ ಬೇಡ; ಹಾಲು ಸಕ್ಕರೇನ ಕರಗಿಸಿಕೊಳ್ಳೊ ಹಾಗೆ ಗಂಡನ ಮನಸ್ಸು ಕರಗಿಸಿಕೊಳ್ಳಬೇಕು."

ಶಾಂತವ್ವ ಏನೂ ಪ್ರತಿ ಹೇಳಲಿಲ್ಲ. ರಾಜಮಾತೆ ಕೊನೆಯಾಗಿ, "ದೇವರ ಕೃಪೆಯಿಂದ ನನ್ನ ಆಶೆ ಸಂದರೆ ಇನ್ನೈದು ತಿಂಗಳಿಗೆ ನಿನಗೆ ಹೂಮುಡಿಸೋ ಹಬ್ಬಕ್ಕೆ ನನ್ನ ಕರಸು. ನವರಾತ್ರಿ ಉತ್ಸವದಲ್ಲಿ ಈ ಊರಲ್ಲಿ ಇರತಾ ನಿನಗೆ ನೀರು ನಿಂತಿದ್ದರೆ ಏನೂ ಆಶ್ಚರ್ಯ ಇಲ್ಲ. ರಂಗನಾಥಸ್ವಾಮಿ, ಗಂಗಾಧರೇಶ್ವರ, ನಿನಗೆ ಒಳ್ಳೇದು ಮಾಡಲಿ. ಮಕ್ಕಳನ್ನ ಹೆತ್ತುಕೊಂಡು ರಾಣಿಯಾಗಿ ಸುಖವಾಗಿ ಬಾಳು, ತಾಯಿ," ಎಂದಳು.

ಇವಳ ವಾತ್ಸಲ್ಯವನ್ನು ನೋಡಿ ಶಾಂತವ್ವನಿಗೆ ಹಿಡಿಯಲಾರದ ಸಂತೋಷ ಆಯಿತು. ಜೊತೆಗೆ ಅವಳ ಮನಸ್ಸು ಅದೇಕೋ ಕುಗ್ಗಿತು. ಇಷ್ಟೆಲ್ಲ ಒಳ್ಳೆಯದು ಅಸಾಧ್ಯ ಎಂತಲೊ, ಇಂಥ ಮಾತನ್ನಾಡುವ ಜನ ಊರಲ್ಲಿ ಇಲ್ಲ ಎಂತಲೊ, ಬಾಳಲ್ಲಿ ಒಂದು ಸಲ ಹೀಗೆ ಮಾತನಾಡಿದವರನ್ನು ಬಿಟ್ಟುಹೋಗಬೇಕಲ್ಲ ಎಂತಲೊ? ಇದನ್ನು ಯಾರು ಹೇಳಬೇಕು? ಅವಳೇ ಕಾಣಳು. ಅವಳ ಕಣ್ಣಲ್ಲಿ ನೀರು ತುಳುಕಿತು. ಅವಳು ತಗ್ಗಿದ ದನಿಯಿಂದ ರಾಜಮಾತೆಗೆ, "ನೀವು ಹರಸಿದ್ದೆಲ್ಲಾ ಒಳಿತೇ. ದೇವರು ಇದನ್ನು ನಡಸಿಕೊಡಲಿ. ನಿಮ್ಮಂಥ ಸಜ್ಜನರು ಬೇಡಿದರೆ ದೇವರು ನಡಸಬೇಕು. ಅಂದರೆ ಹಿರಿಯರು ನೀವೆಲ್ಲ ಹರಸಬೇಕಾದ್ದು ನಾಯಕರನ್ನ. ಅವರ ದುಡುಕು ಹೆಚ್ಚು. ಜೀವಾ ಅನ್ನೋದು ಒಂದು ಪದಾರ್ಥ ಅಲ್ಲಾ ಅಂತ ಅವರು ತಿಳೀತಾರೆ. ನೋಡಿಕೊಂಡು ನಡೀಬೇಕೂ ಅಂತ ಹಿರಿಯರು ಅವರಿಗೆ ತಿಳಿಯ ಹೇಳಬೇಕು. ಈ ತಾಯಿತಿ ಒಂದು ಭದ್ರವಾಗಿದ್ದರೆ ಉಳಿದ ಎಲ್ಲ ಒಳ್ಳೆಯದನ್ನೂ ಹೇಗೂ ಕಂಡೇನು," ಎಂದಳು. ಅವಳ ಕೆನ್ನೆಯಮೇಲೆ ಕಣ್ಣೀರ ಹನಿ ಉದುರಿತು.

ರಾಜಮಾತೆ ತನ್ನ ಸೆರಗಿಂದ ಅವಳ ಕಣ್ಣನ್ನು ಒರಸಿದಳು. ಅವಳ ಗಲ್ಲವನ್ನು ಹಿಡಿದು ಕೆನ್ನೆಗೆ ಕೆನ್ನೆಯಿಟ್ಟು ಅವಳನ್ನು ಮುದ್ದಿಸಿದಳು. ಅರಸು ಮಕ್ಕಳ ಹಿರಿಯಾಕೆ ತನ್ನ ಕುಲದವಳಲ್ಲದ ಈ ತರುಣಿಯನ್ನು ಹೀಗೆ ಮುದ್ದಿಸುವುದರಲ್ಲಿ ತನ್ನ ಸಂಪ್ರದಾಯದ ಬಿಗುಮಾನವನ್ನು ಮರೆತ ಳೆನ್ನಬೇಕು. ಆದರೆ ಹೆಣ್ಣಿನ ಮನಸ್ಸು ಇಂಥ ವೇಳೆ ಕುಲ ಆಚಾರಗಳ ಅಡ್ಡಿಗಳನ್ನು ವಿಾರಿ ಹಾಯುತ್ತದೆ. ಅಲ್ಲದೆ ತಿಂಗಳ ಸಾಮಿಾಪ್ಯದಿಂದ, ಜೊತೆಗೆ ತರುಣಿಯ ಅತ್ಯಂತ ಸೌಜನ್ಯ ಸರಳತೆಯಿಂದ, ವೃದ್ಧೆ ಇವಳನ್ನು ತನ್ನ ಒಂದು ಮಗು ಎಂಬಂತೆ ಕಾಣುವ ಸ್ಥಿತಿಗೆ ಬಂದಿದ್ದಳು. ಹುಡುಗಿ ಸಂತೋಷವನ್ನು ಕಾಣಲಿ, ಸುಖವಾಗಿ ಬಾಳಲಿ, ಎಂಬ ಆಕಾಂಕ್ಷೆಯಿಂದ ಅವಳ ಎದೆ ತುಂಬಿದ್ದಿತು.

೭೮

ಇದಾದಮೇಲೆ ರಾಜಮಾತೆ ಕೆಂಚವ್ವೆಯನ್ನು ಒಂದು ಕಡೆಗೆ ಕರೆದು, "ನೀನು ನಾಯಕರು ಒಡತಿ ಸಂತೋಷವಾಗಿರಬೇಕೆಂದು ಹವಣಿಸುವ ಹುಡುಗಿ ಆಗಿದ್ದೀಯೆ. ನಾವು ನಿನಗೆ ಏನೂ ಹೇಳಿಕೊಡಬೇಕಾಗಿಲ್ಲ. ಆದರೂ ಕಿರಿಯವಳು ಅಂತ ಒಂದು ಮಾತು ಹೇಳುತ್ತೇವೆ. ನಾಯಕರು ಅತ್ತ ಇತ್ತ ಸುಳಿದ ಮಾತು ಕಂಡರೂ ಊಳಿಗ ಒಡತಿಯನ್ನು ಎಂದಿನಂತೆ ಮರ್ಯಾದೆಯಿಂದ ನೋಡಿಕೊಳ್ಳಬೇಕು. ಇದನ್ನು ನೀನು ಜ್ಞಾಪಕ ದಲ್ಲಿಡು," ಎಂದಳು.

ಕೆಂಚವ್ವೆ, "ಅವ್ವಾವರೆ, ನಾಯಕರು ದೇವರಂಥ ಮನುಷ್ಯರು. ಅವರು ಅತ್ತ ಇತ್ತ ಅಲೆಯೋರಲ್ಲ," ಎಂದಳು.

"ಇದು ತುಂಬ ಸಂತೋಷ. ನಿಮ್ಮೊಡತಿ ಅವರನ್ನ ಹಾಗೆಯೇ ಬಾಳಿಸಿಕೊಳ್ಳಬೇಕು."

"ಬಾಳಿಸಿಕೊಳ್ಳುತಾರೆ. ಒಂದು ಸಲ ಜೋಲು ಮುಖ ಮಾಡಿ ನಿಂತರೂ ಅಂದರೆ ಹೆಣ್ಣಿನ ಕರುಳೇ ಕರಗಿಹೋಗುತದೆ. ಇನ್ನು ಗಂಡೇ ನಾಗಬೇಕು. ಅಂದರೆ ನಮ್ಮ ಒಡೆಯರು ಇದಕ್ಕಾಗಿ ಅಲ್ಲ, ಹುಟ್ಟಾ

ಸತ್ಯವಂತರು. ಅವರಪ್ಪ ಹಿಂಗೇ ಇದ್ದರಂತೆ. ತಮ್ಮೂಟ ಅಲ್ಲದ್ದನ್ನ ಎದುರಿಗೆ ಹಿಡಿದರೆ, ಮುಟ್ಟೋದಲ್ಲ ಬಿಡಿರವ್ವ, ಕಣ್ಣೆತ್ತಿ ನೋಡೋದಿಲ್ಲ."

"ನಿನ್ನೊಡತಿ ಪುಣ್ಯ ಒಳ್ಳೇದು. ದೇವರು ಯಾವ ಕಾಲಕ್ಕೂ ಇವರನ್ನ ಹೀಗೆ ಕಾಪಾಡಿಕೊಳ್ಳಲಿ."

"ಅವ್ವನೋರಿಗೆ ತಿಳಿದಿರಬಹುದು, ನಮ್ಮ ಹಿರೇ ರಾಣಿಯವರು ಮಗನಿಗೆ ಇನ್ನೊಂದು ಹೆಣ್ಣು ತರನೋಡಿದ್ದಾರೆ. ಅವಳನ್ನ ಅರಮನೆ ಯಾಗೆ ತಂದು ಇರಿಸಿದ್ದಾರೆ. ಈಗ ಆಗ ಅವಳು ಒಡೇರ ಹತ್ತಿರ ಸುಳಿ ಯೋದುಂಟು. ಯಾವುದು ಈ ಹೆಣ್ಣು ಅಂತ ನೋಡಿದರೆ ಇವರು ನಾಯಕರಲ್ಲ. ಕತೇಲಿ ಹೇಳತಾರೆ ಶಿವ ಇದ್ದ, ಸುಕಮುನಿ ಇದ್ದಾ ಅಂತ. ಶಿವ ಸುಕಮುನಿ ಹರಿದಾರಿ ದೂರಾ ಅಂತ ಇರತಾರೆ ನಾಯಕರು. ಆದಲ್ಲ ಅವ್ವಾವರೆ, ನಾಯಕರದು ಒಂದೇ ತಪ್ಪು. ಅತಿ ಧೈರ್ಯ. ಯಾವಾಗಲೂ ದುಡುಕು. ಸಾದನೆ ಅಂತ ಗರಡಿ; ಬೇಟೆ ಅಂತ ಕಾಡು; ಜೀವ ತಕೊಳ್ಳೋಕೆ ಯಾಕೆ ಹುಲಿ ಬರಲಿಲ್ಲಾ ಅಂತ ಒಬ್ಬೊಂಟಿ ಅಲೆ ಯೋದು. ಕೈಹಿಡಿದ ಹೆಣ್ಣೂ ಅಂತ ಸರಿಯಾಗಿ ಜೊತೆಗೆ ಕೂತದಿಲ್ಲ, ನಾನು ಹೆಂಡಿರಾಗಿದ್ದಿದ್ದರೆ ಏನು ರಂಪಮಾಡತಿದ್ದೆನೊ! ಈಸಲ ಇಲ್ಲಿಗೆ ಬಂದರಲ್ಲ, ಈಗ ಜೊತೇಗೆ ಇದ್ದದ್ದೇ ಇದ್ದದ್ದು. ಬಿದನೂರಲ್ಲಿ ವರ್ಷದ ದಿನಕ್ಕೆ ಇಷ್ಟುಮಟ್ಟಿಗೆ ಜೊತೇಲಿದ್ದದ್ದಿಲ್ಲ. ಮನಸುಮಾಡಿ ಮನೇಲಿ ನಿಂತರೇ, ಎಲ್ಲ ಚೆಂದ ಆದಾತು. ಅದಷ್ಟನ್ನ ಅವರು ಒಲ್ಲರು."

ನಾಯಕನ ಸ್ವಭಾವ ಹೀಗೆ ಎಂದು ಆ ಹೆಂಡತಿ, ಈ ಸೇವಕಿ, ಇಬ್ಬರೂ ಹೇಳಿದ್ದು ರಾಜಮಾತೆಗೆ ನಿಜವೆನಿಸಿತು. ಉತ್ಸವದಲ್ಲಿ ಜಟ್ಟಿಯ ಕಾಳಗಕ್ಕೆ ಇಳಿದದ್ದು ಇದೇ ಸ್ವಭಾವದ ಕುರುಹು. ಆದರೆ ಇದನ್ನು ಯಾರೇನು ಮಾಡುವಂತಿದೆ? ಈ ಸಾಹಸ ಅಭಿಮನ್ಯುವಿನ ಸಾಹಸದ ಜಾತಿಯದು. ಇದರ ಯೋಗ್ಯತೆಯೇ ಇಷ್ಟು. ನಡೆದಷ್ಟು ದಿನ ಬಹಳ ಚೆನ್ನ; ಪವನ ತಪ್ಪಿಸಿದರೆ ಉಳಿಯುವಂತಿಲ್ಲ. ವೃದ್ಧೆ ಈ ಹುಡುಗನನ್ನು ದೇವರು ಕಾಪಾಡಿಕೊಳ್ಳಲಿ ಎಂದು ಮನಸ್ಸಿನಲ್ಲೆ ಪ್ರಾರ್ಥಿಸಿಕೊಂಡಳು. "ಸರಿ, ಕೆಂಚವ್ವ, ಒಡತಿ ಕರೆದಾರು ನೋಡು," ಎಂದು ಅವಳನ್ನು ಕೊಟ್ಟು ಕಳುಹಿಸಿದಳು.

ರಾಣಿ ಲಕ್ಷ್ಮಮ್ಮಣ್ಣಿ ಶಾಂತವ್ವನನ್ನು ಉಚಿತ ರೀತಿಯಿಂದ ಮಾತನಾಡಿಸಿ ಬೀಳ್ಕೊಂಡಳು. ರಾಜಕುಮಾರನೂ ನಾಯಕನ ಬಿಡಾರಕ್ಕೆ ಬಂದು, ಹತ್ತಿರ ಕುಳಿತು, ವಿಶ್ವಾಸದಿಂದ ಮಾತನಾಡಿಸಿ ತೆರಳಿದನು. ಎರಡು ಕುಟುಂಬದ ಮಧ್ಯೆ ಭದ್ರವಾದ ಸ್ನೇಹ ರೂಪುಗೊಂಡಿತು.

ಮೊದಲೆ ದಾರಿಯಲ್ಲಿ ಮುಂದಕ್ಕೆ ಜನರನ್ನು ಕಳುಹಿಸಿ ಏರ್ಪಾಡು ಎಲ್ಲವನ್ನೂ ಮಾಡಿ, ಅರಸರೂ ರಾಜಕುಟುಂಬವೂ ನಾಯಕನನ್ನೂ ಶಾಂತವ್ವನನ್ನೂ ಪಟ್ಟಣದಿಂದ ಕಳುಹಿಸಿಕೊಟ್ಟರು. ಈ ದಂಪತಿಗಳು ತಮ್ಮೂರನ್ನು ಕುರಿತು ಸುಖವಾಗಿ ಪ್ರಯಾಣ ಬೆಳಸಿದರು.

## ೭೯

ಪಟ್ಟಣವನ್ನು ಬಿಟ್ಟು ಬೆಂಗಳೂರಿಗೆ ಹಿಂತಿರುಗುವ ವೇಳೆಗೆ ಹೈದರನಿಗೆ ಅರಮನೆಯಲ್ಲಿ ತನಗೆ ವಿರೋಧವಾಗಿ ಏನೊ ಏರ್ಪಾಡು ನಡೆಯುತ್ತಿದೆ ಎಂದು ಸಂದೇಹ ಸ್ಪಷ್ಟವಾಗಿ ದೃಢವಾಗಿದ್ದಿತು. ತನಗೆ ತಿಳಿಸದೆ ನವರಾತ್ರಿಯ ಉತ್ಸವಕ್ಕೆ ಹೊರಗಿನ ಜನರನ್ನು ಬರಮಾಡುವುದರಲ್ಲಿಯೆ ಅರಸರು ತಮ್ಮ ಸ್ವಾತಂತ್ರ್ಯವನ್ನು ಪ್ರಕಟಿಸುತ್ತಿದ್ದರು. ಯಾರು ಬರುತ್ತಾರೆ, ಏನು ಮಾತಾಗುತ್ತದೆ? ಯಾರೋ ಬಂದರು, ಏನೋ ಮಾತಾಗುವುದು, ಎಂದು ನವಾಬನಿಗೆ ಏನೂ ಭಯವಿಲ್ಲ. ರಾಜ್ಯದ ಅರ್ಧಕ್ಕೆ ಮೇಲ್ಪಟ್ಟು ನೇರವಾಗಿ ಇವನ ಸ್ವಾಧೀನದಲ್ಲಿದ್ದಿತು; ಉಳಿದ ಭಾಗದ ಆಡಳಿತಕ್ಕೂ ಇವನು ಸರ್ವಾಧಿಕಾರಿ. ಯಾರಿಗೂ ಇವನ ಹಿಡಿಯಿಂದ ಬಿಡಿಸಿಕೊಂಡು ಬಾಳುವ ಆಸೆಯಿರುವಂತಿಲ್ಲ. ಆದರೆ ಅರಸರು ಏನಾದರೂ ಹಟಮಾಡಿದರೆ ತಾನು ಅಸಹಾಯನಾದೇನು ಎಂದು ಇವನಿಗೆ ಭಯ ಉಂಟು. ಈ ಅಸಹಾಯತೆಯ ಕಾರಣ ಅವನ ಒಳಗಿನ ಧರ್ಮಭೀತಿಯ ಒಂದು ಎಳೆ. ಏನೇ ಆದರೂ, ಅವನು ರಾಜರಮೇಲೆ ಕೈಎತ್ತುವುದಕ್ಕೆ ಸಿದ್ಧನಾಗಿರಲಿಲ್ಲ. ಮಗನಿಗೆ ಮೌಲ್ವಿಗಳಿಗೆ ಅವನು ಹೇಳಿದ ಮಾತು ಅವನ ಮನಸ್ಸಿನ ಸ್ಥಿತಿಯ ನಿಜವಾದ ವರ್ಣನೆ. ತನ್ನ ಮೈಯ ತೇವದಲ್ಲಿ ಅರಸರು ಬಡಿಸಿದ ಉಪ್ಪು ಇದೆ ಎನ್ನುವುದನ್ನು ಅವನು ಕನಸಿನಲ್ಲಿ ಕೂಡ ಮರೆ

ಯುತ್ತಿರಲಿಲ್ಲ. ರಾಜರನ್ನು ಕುರಿತ ಈ ನಿಶ್ಚಲ ಶ್ರದ್ಧೆಯೊಂದಿಗೆ ಹೈದರನ ಮನಸ್ಸಿನಲ್ಲಿ ಅವರನ್ನು ಕುರಿತು ಸ್ವಲ್ಪ ಕನಿಕರವೂ ಬೆರೆತಿತ್ತು. ಪಾಪ, ರಾಜನ ಮಗ, ಆಳಬೇಕು ತಾನೇ. ಆದರೆ ಯೋಗ್ಯತೆ ಇಲ್ಲವಲ್ಲ! ತಾನಾಗುವ ಹೊತ್ತಿಗೆ ಇತ್ತ ರಾಜ್ಯವನ್ನು ನೋಡಿಕೊಂಡು ಇತ್ತ ಸೈನ್ಯವನ್ನು ನಡೆಯಿಸಿಕೊಂಡು ಅತ್ತ ಹಗೆಗಳನ್ನು ಹೆದರಿಸಿಕೊಂಡು ನಡೆಯುತ್ತಿದ್ದನು. ಇದು ಎಲ್ಲರಿಗೂ ಸಾಧ್ಯವೆ? ಆಶೆಯುಂಟು, ಶಕ್ತಿ ಇಲ್ಲ. ಇದನ್ನು ನೋಡಿ ಯಾವನಾದರೂ ಸ್ವಪ್ರಯೋಜನಕ್ಕಾಗಿ ಇವರನ್ನು ಎತ್ತಿಕಟ್ಟಬೇಕು; ಇವರು ಆ ಮಾತಿನ ಗಾಳಕ್ಕೆ ಮರುಳಾಗಬೇಕು; ವಸ್ತುಸ್ಥಿತಿಯಿಂದ ವಿಧಿಯಿಲ್ಲದೆ ಸೋಲಬೇಕು, ಪಾರುಗಾಣದೆ ತೊಳಲಬೇಕು. ಖಂಡೇರಾಯ ಅರಸರಿಗೆ ಏನು ಉಪಕಾರ ಮಾಡಿದ? ಅವನನ್ನು ಪಂಜರದಲ್ಲಿ ಇಟ್ಟಹಾಗೆ ತಾನು ಅರಸನನ್ನೂ ಪಂಜರದಲ್ಲಿ ಇಟ್ಟಿದ್ದರೆ ಯಾರದು ಏನು ಅಡ್ಡಿ ಇತ್ತು? ಮತ್ತೆ ಅಂಥದೇ ಒಂದು ಪಿತೂರಿ; ತನಗೆ ಅದನ್ನು ತುಳಿಯುವ ಶ್ರಮ. ಈ ಕಾದಾಟಕ್ಕೆ ಎಲ್ಲಿ ಕೊನೆ?

ಹೊರಟು ಬರುತ್ತ ನವಾಬ ಖಾನ ಮೊಕದಂ ಆಲಿಗೆ, "ಉತ್ಸವಕ್ಕೆ ಬರುವ ಹೊರಗಿನ ಜನದ ವಿವರವನ್ನು ತಿಳಿದು ಕಳುಹಿಸಿರಿ," ಎಂದಿದ್ದನು. ಮೊಕದಂ ಆಲಿ ಕೆಲವು ದಿನದಲ್ಲಿ ಈ ವಿವರಗಳನ್ನು ತಿಳಿದುಕೊಂಡು ನವಾಬನಿಗೆ ಸಂಗತಿಯನ್ನು ತಿಳಿಸಿ ಪತ್ರ ಕಳುಹಿಸಿದನು. ಅದು ಹೈದರನಿಗೆ ಸೀರ್ಯದಲ್ಲಿ ಮುಟ್ಟಿತು. ಅದರಲ್ಲಿ ನಗರದ ಜನ ಬರುವರು ಎಂಬ ವಿವರ ಇದ್ದದ್ದನ್ನು ನೋಡಿ ಹೈದರ್, ಇದೇನು ಸಂಗತಿ, ಎಂದು ಯೋಚಿಸಿದನು.

ಇಂಥ ಸಂಗತಿಗಳಲ್ಲಿ ಹೈದರನ ಬುದ್ಧಿ ಯಾವ ಹರಿತದಿಂದ ಮುಂದರಿಯುತ್ತಿತ್ತು ಎನ್ನುವುದನ್ನು ಅವನ ಜೊತೆಯ ಜನ ಯಾರೂ ಕಾಣರು. ನೇರವಾದ ಮಾತಿನಲ್ಲಾಗಲಿ, ನಟನೆಯಲ್ಲಾಗಲಿ, ತಂತ್ರದಲ್ಲಾಗಲಿ ಉಳಿದವರಿಗೆ ಮೂರು ದಿನದ ಮುಂದಾಲೋಚನೆ ಇದ್ದರೆ ಹೈದರನಿಗೆ ಹತ್ತುದಿನದ ಮುಂದಾಲೋಚನೆ ಇರುವುದು. ನಗರದ ಜನ ಬರುವುದು ಏಕೆ ಎಂದು ಯೋಚಿಸಿದಂತೆ ಅವನಿಗೆ ತನ್ನನ್ನೆ ಕುರಿತು ಒಂದು ಎಣಿಕೆ ರೂಪುಗೊಂಡಿತು. ಬಿದನೂರಿನ ಆಗಿನ ಸ್ಥಿತಿ

ಯನ್ನು ಹೈದರ್ ಚೆನ್ನಾಗಿ ಬಲ್ಲನು. ಬಸಪ್ಪನಾಯಕ ತೀರಿಕೊಂಡು ಅವನ ಹೆಂಡತಿಗೆ ಮಗನಿಗೆ ಜಗಳ ಬಂದಿದೆ ಎಂದು ಕೇಳಿದಾಗ ಅವನು, ಬಿದನೂರನ್ನು ಗೆದ್ದು ಮೈಸೂರಿಗೆ ಸೇರಿಸಿಕೊಳ್ಳುವುದಕ್ಕೆ ಇದು ಒಳ್ಳೆಯ ಸಮಯ, ಎಂದುಕೊಂಡಿದ್ದನು. ಈಗ ಬಿದನೂರಿನ ಜನ ಮೈಸೂರಿನ ಅರಸರ ಬಳಿಗೆ ಬರುತ್ತಾರೆಯೆ? ಅರಸರು ಅವರ ಕೆಳೆಯನ್ನು ಅಪೇಕ್ಷಿಸುತ್ತಿದಾರೆ; ತನ್ನನ್ನು ವಿರೋಧಿಸುವ ಹೊತ್ತಿನಲ್ಲಿ ಅವರಿಂದ ನೆರವು ದೊರೆಯುತ್ತದೆಯೆಂದು ನಿರೀಕ್ಷಿಸುತ್ತಿದಾರೆ.

ಇದಕ್ಕೆ ನಿವಾರಣೆ ಏನು?

ತಾನು ಬಿದನೂರನ್ನು ಸ್ವಾಧೀನ ಮಾಡಿಕೊಳ್ಳಬೇಕು. ಮೈಸೂರಿನಲ್ಲಿ ತಾನು ದೊರೆ ಆಗುವಂತಿಲ್ಲ. ಅದು ನಮಕ್‌ಹರಾಮಿ ಆಗುತ್ತದೆ. ಬಿದನೂರನ್ನು ಗೆದ್ದು ಅದರ ನವಾಬ ಅಥವಾ ಸುಲ್ತಾನ ಆದರೆ ಏನೂ ತಪ್ಪಿಲ್ಲ. ತನ್ನ ತೋಳಿನ ಬಲದಿಂದ ತಾನು ಗೆದ್ದ ರಾಜ್ಯಕ್ಕೆ ತಾನು ರಾಜ. "ಮೈಸೂರ ಸರ್ವಾಧಿಕಾರಿ ಗೆದ್ದನೆನ್ನುವರಲ್ಲವೆ? ಆಗಲಿ. ನಾನು ಬಿದನೂರ ಸುಲ್ತಾನನಾಗಿ, ಮೈಸೂರ ಅರಸರ ಸಾಮಂತನಾಗುತ್ತೇನೆ. ವರ್ಷಂಪ್ರತಿ ಕಪ್ಪ ಕಳುಹಿಸುತ್ತೇನೆ. ನವರಾತ್ರಿಯಲ್ಲಿ ಬಂದು ನಜರ್ ಮುಜರೆ ಮಾಡುತ್ತೇನೆ. ಯಾರು ನನ್ನನ್ನು ಏನು ಹೇಳಬಹುದು? ದೇವರ ಸನ್ನಿಧಿಯಲ್ಲೆ ಆಗಲಿ, ಇದರ ತಪ್ಪೇನು?"

ಈ ಯೋಚನೆ ಮನಸ್ಸಿಗೆ ಬಂದು ಬಹಳ ಹೊತ್ತು ಕಳೆಯುವ ಮುನ್ನ ಹೈದರನ ಮನಸ್ಸಿನಲ್ಲಿ ಅದು ನಿಶ್ಚಯವೇ ಆಯಿತು. ಅವನು ತನ್ನ ಹತ್ತಿರದ ಸೇವಕ ಉಜನಿಯನ್ನು ಕರೆದನು.

## ೪೦

ಉಜನಿ, ಹೈದರ್ ಮೈಸೂರ ಸೈನ್ಯದಲ್ಲಿ ಒಬ್ಬ ನಾಯಕನಾಗಿ ಸೇರಿದ ಕೆಲವೆ ದಿನದಲ್ಲಿ, ಅವನ ಸೇವಕನಾಗಿ ಬಂದುನಿಂತ ಮನುಷ್ಯ. ಉಜನಿಯ ತಂದೆ ಕರಾಚೂರಿ ನಂಜರಾಜನ ಬಳಿ ಕೋಲುಕಾರನಾಗಿದ್ದನು. ಉಜನಿ ಅವನ ಮೂವರು ಮಕ್ಕಳಲ್ಲಿ ಹಿರಿಯ. ಆ ವೇಳೆಗೆ ಇವನ ಒಬ್ಬ ತಮ್ಮ

ತಂದೆಯೊಡನೆ ನಂಜರಾಜರಲ್ಲಿ, ಇನ್ನೊಬ್ಬ ಅರಸರೊಡನೆ ಅರಮನೆಯಲ್ಲಿ, ಸೇವಕರಾಗಿದ್ದರು. ಉಜನಿಯೂ ತಂದೆಯೊಡನೆ ಇದ್ದನು; ನಂಜ ರಾಜನ ಅಪೇಕ್ಷೆಯಂತೆ ಹೈದರನ ಪರಿವಾರದಲ್ಲಿ ಸೇರಿದನು. ಹೈದರ್ ಪ್ರಬಲನಾಗಿ ಸ್ಥಾನದಿಂದ ಸ್ಥಾನಕ್ಕೆ ಏರಿದಂತೆ ಉಜನಿ ಅವನ ನಂಬಿಕೆಯ ಸೇವಕನಾಗಿ ಒಡೆಯನ ಸಂಪೂರ್ಣ ವಿಶ್ವಾಸವನ್ನು ಗಳಿಸಿದ್ದನು. ಒಂದು ಸಲ ಹೈದರ್ ಉಜನಿಯನ್ನು ನಂಜರಾಜನ ವಿಷಯ ಏನೊ ಪ್ರಶ್ನೆ ಕೇಳಿದನು; ಉಜನಿ ಉತ್ತರ ಕೊಡಲಿಲ್ಲ. ಈ ಮೌನ ಉದ್ದೇಶಪೂರ್ವಕ ಎಂದು ಹೈದರ್ ತಿಳಿದುಕೊಂಡನು. ಸ್ವಲ್ಪಹೊತ್ತು ಬಿಟ್ಟು, "ನೀನು ಅಂಥ ಮಾತನ್ನು ಹೇಳಲಾಗುವುದಿಲ್ಲ ಅಲ್ಲ?" ಎಂದನು. ಉಜನಿ "ಹೌದು, ಜನಾಬ್!" ಎಂದನು.

"ನೀನು ಬಹಳ ಸಾಚ."

"ನಮ್ಮ ತಾಯಿ ನಮ್ಮ ಮೂವರನ್ನ ಹೆತ್ತಳು ಜನಾಬ್. ಮೂವರು ಮೂರು ಕಡೆ ಸೇರಿದ್ದೀವಿ. ಮೂವರು ದಣಿಗಳಲ್ಲಿ ಒಬ್ಬರ ಮಾತು ತಂದು ಒಬ್ಬರ ತಾವ ಹೇಳಿದರೆ ಹೆತ್ತ ತಾಯಿಗೆ ಮರ್ಯಾದೆ ಇಲ್ಲ."

"ಇಂಥ ಸಾಚಾ ಮನುಷ್ಯ ನಮ್ಮ ಹತ್ತಿರ ಇರೋದು ನಮಗೂ ಒಳ್ಳೆಯದೆ, ಉಜನಿ."

"ಬೇಷಕ್ ಜನಾಬ್! ಸತ್ತು ಬೇಕಾದರೆ ಹೆಣವಾಗತೇನೆ. ನಿಮ್ಮದೂ ಅನ್ನೋ ಮಾತು ಬಿಟ್ಕೊಡೋದಿಲ್ಲ. ಅರಸರ ಉಪ್ಪಿಗೆ ನೀವು ನಡೆಯೋವಂತೆ ನಿಮ್ಮ ಉಪ್ಪಿಗೆ ನಾನು ನಡೆಯೋನು."

ಈ ಶಪಥ ಬಹು ಹಿಂದಿನದು. ಹತ್ತು ಸಂದರ್ಭದಲ್ಲಿ ಗುಟ್ಟಿನ ಮಾತು ಎಷ್ಟೊ ಉಜನಿಗೆ ತಿಳಿದಿರಬೇಕು. ಅದನ್ನು ಅವನು ತಂದೆಗೊ ತಮ್ಮಂದಿರಿಗೊ ಹೇಳಬಹುದಾಗಿದ್ದಿತು; ಇಂಥದು ಒಂದು ತೃಣ ಆಗಿರ ಲಿಲ್ಲ. ಹೈದರ್ ರಾಜರಿಗೆ ವಿರೋಧವಾಗಿ ನಡೆದಿದ್ದರೆ ಉಜನಿ ಏನು ಮಾಡುತ್ತಿದ್ದನೊ? ಅದು ಪ್ರಾಯಶಃ ಅವನಿಗೂ ತೋರಿರಲಾರದು. ಇದುವರೆಗೆ ಅಂಥ ಪ್ರಸಂಗ ನಡೆದಿರಲಿಲ್ಲ. ಇದು ಹೊರತಾಗಿ ಬೇರೆ ಯಾರಿಗಾಗಿಯೂ ಉಜನಿ ಹೈದರನನ್ನು ಬಿಟ್ಟುಕೊಡುವವನಲ್ಲ. ನಂಜ ರಾಜನಲ್ಲ, ಖಂಡೇರಾಯನಲ್ಲ, ಯಾರೇ ಅಲ್ಲ.

ಉಜನಿ ಬಂದು ಹತ್ತಿರ ನಿಲ್ಲಲು ಹೈದರ್, "ಉಜನಿ, ನೀನು ಒಂದು ಗುಟ್ಟಾದ ಕೆಲಸದಮೇಲೆ ಒಂದು ಕಡೆಗೆ ಹೋಗಿ ಬರಬೇಕು. ಬೇರೆಯವರನ್ನು ಕಳುಹಿಸಿಯೇನು. ಆದರೆ ಅದು ಅಷ್ಟು ಕ್ಷೇಮವಲ್ಲ. ತಿಂಗಳ ದಿನ ಹೋಗುವುದು ಬರುವುದು ಆಗುತ್ತದೆ. ಮಾಡುತ್ತೀಯಾ ?" ಎಂದನು.

"ಅಪ್ಪಣೆಯಂತೆ ನಡೆಯುತ್ತೇನೆ."

"ಬಿದನೂರಿದೆಯಲ್ಲ, ಅಲ್ಲಿ ನಾಯಕ ತೀರಿಕೊಂಡಿದ್ದಾನೆ. ಅವನ ಮಗನಿಗೆ ಪಟ್ಟ ಆಗಿಲ್ಲ. ಅವನ ಹೆಂಡತಿ ಹುಚ್ಚು ಹುಚ್ಚು ನಡೀತಿದ್ದಾಳೆ. ರಾಜ್ಯದ ಜನಕ್ಕೆ ಬೇಸರ ಆಗಿದೆ. ನೀನು ಗುರುತು ಮರಸಿಕೊಂಡು ಬಿದನೂರಿಗೆ ಹೋಗಿ ನಾಯಕವಾಡಿಗೆ ಆಗದೋರು ಯಾರೊ ನೋಡಿ ಕೊಂಡು ತಾಯಿಗೆ ಸಹಾಯಬೇಕು ಅಂತಲೊ, ಮಗನಿಗೆ ಸಹಾಯ ಬೇಕು ಅಂತಲೊ, ಮಾತು ಪರ ಆದೋರು ಯಾರೊ ಇಬ್ಬರಿಂದ ಒಂದು ಕಾಗದ ತಂದಹಾಗೆ ಮಾಡಬೇಕು. ಮಾಡತೀಯಾ ? "

"ಇಂತವರಿಂದ ಅಂತ ಏನೂ ಇಲ್ಲವಲ್ಲ ? ಸರಿಯಾದವರು ಸಿಕ್ಕದೆ ಇದ್ದರೆ ಎಂತೂ ಒಂದು ಓಲೇ ಅಂತ ಬರಬೇಕು."

"ಆದರೆ ಸರಿಯಾದವರಿಂದ ಬರಬೇಕು. ಆಗಲಿಲ್ಲ, ಎಂತೂ ಒಂದು ಓಲೆ ಬರಲಿ. ಈಗ ನೋಡು, ಈ ಸೀರ‍್ಯದ ಮಾತು ಮುಗೀತು. ಚಿತ್ರದುರ್ಗದ ಪಾಳೆಯಗಾರನ್ನ ನೋಡಿಕೊಳ್ಳಬೇಕಾಗಿದೆ. ನಾಡಿದ್ದು ನಾವಿಲ್ಲಿಂದ ಹೊರಟೆವು. ನಾವು ಚಿತ್ರದುರ್ಗ ಮುಟ್ಟೊ ಹೊತ್ತಿಗೆ ನೀನು ನಗರ ಮುಟ್ಟಬಹುದು. ಚಿತ್ರದುರ್ಗದ ಕೆಲಸ ಮುಗಿಯೊ ಹೊತ್ತಿಗೆ ನಿನ್ನ ಈ ಕಾಗದ ನಮ್ಮ ಕೈಗೆ ಬಂದರೆ, ಸೈನ್ಯಕ್ಕೆ ಕೆಲಸಾನು ಆಯಿತು, ಈ ಖರ್ಚಿಲ್ಲ ಹೊರಟ ಹಂಗೂ ಆಯಿತು. ಮೈಸೂರಿಗೆ ಅಷ್ಟು ನಾಡು ಸೇರಿದ ಹಂಗೂ ಆಯಿತು."

"ಮಾಡಿಯೇನು ಜನಾಬ್. ಹೆಂಗೂ ಒಂದು ಸಂಸ್ಥಾನ. ಜನಾಬ್ ಅದಕ್ಕೆ ಸುಲ್ತಾನರೆ ಆಗಬಹುದು."

ಹೈದರ್ ನಕ್ಕನು. ಆಳಿನ ಬುದ್ಧಿ ಒಡೆಯನ ಬುದ್ಧಿಗಿಂತ ಸೂಕ್ಷ್ಮ ದಲ್ಲಿ ಕಡಮೆ ಅಲ್ಲ.

"ಆಗಬಹುದೂ ಅಂತೀಯಾ? ತಪ್ಪಾಗೋದಿಲ್ಲ?"

"ಮಾತನಾಡೂ ಅಂದರೆ ಆಡತೀನಿ ಜನಾಬ್. ಅಪ್ಪಣೆ ಇಲ್ಲದೆ ಊಳಿಗ ಹೇಳೋ ಮಾತಲ್ಲ ಇದು."

"ನೀನು ಊಳಿಗ ಅಲ್ಲ. ಹತ್ತುಸಲ ನನ್ನನ್ನ ಕಾದುಕೊಂಡಿದ್ದಿ. ನಿನ್ನ ಮನಸ್ಸಿಗೆ ತೋರಿದ್ದನ್ನ ಬೇಷಕ್ ಹೇಳಬಹುದು."

"ಮೈಸೂರರಸರನ್ನ ಮೇಲೆ ಇರಿಸಿಕೊಂಡು ಬಿದನೂರ ಸುಲ್ತಾನರಾಗೋದು ತಪ್ಪಿಲ್ಲ ಜನಾಬ್. ನಾನು ನಿಮ್ಮ ಊಳಿಗ. ಹಂಗೇ ಅರಸರ ಊಳಿಗಾನೂ ಹೌದು. ಅರಮನೆ, ದಳವಾಯಿ ಮನೆ, ಅನ್ನ ಉಂಡು ನಾವು ಬೆಳದಿದ್ದೀವಿ. ನೀವು ಉಪ್ಪು ನೆನೀತೀರಿ. ಅರಸರನ್ನ ನಡಸಿಕೊಳ್ತ ಇದೀರಿ. ಅಂದರೆ, ಮಗನ್ನ ಹಿಂಗೇ ಮಾಡು, ಅನ್ನೋಕಾಗದು. ಅಂದಿರಿ; ಅವರು ಮಾಡರು. ನಿಮ್ಮ ಹೊಟ್ಟೇಲಿ ಹುಟ್ಟಿ ಒಂದು ರಾಜ್ಯ ಆಳೋದು ಬೇಡವೆ? ಬೇರೆ ರಾಜ್ಯ ಮಾಡಿಕೊಡಿರಿ; ಆಳ್ತಾರೆ, ಮೈಸೂರು ಬಾಳ್ತದೆ. ಮಾಡಲಿಲ್ಲ; ನೀವು ಮೈಸೂರನ್ನ ಕಾಯೋಕಾಗೋದಿಲ್ಲ."

ಈ ಸೇವಕನ ದೂರಾಲೋಚನೆಯನ್ನು ನೋಡಿ ಹೈದರನಿಗೆ ಆಶ್ಚರ್ಯವಾಯಿತು. ಉಜನಿ ಈ ಮೊದಲು ಇವನೊಂದಿಗೆ ಇಷ್ಟು ಮಾತನ್ನು ಆಡಿದ್ದಿಲ್ಲ. ಒಂದೇ ಕೆಲಸದಿಂದ ತನಗೆ, ತನ್ನ ಒಡೆಯನಿಗೆ, ಒಬ್ಬರಿಗೂ ಪ್ರಯೋಜನವಾಗುವಂತೆ ತಾನು ಮಾಡಿದ್ದ ಯೋಚನೆ ಇವನ ಮನಸ್ಸಿನಲ್ಲೂ ಹೀಗೆ ಬಂದಿರಬೇಕೆ? ಮಾತೂ ನ್ಯಾಯವಾಗಿದ್ದಿತು. ಹೈದರ್ ಉಜನಿಯನ್ನು ಎಂದಿಗಿಂತ ಹೆಚ್ಚಾಗಿ ಮೆಚ್ಚಿಕೊಂಡನು.

"ಉಜನಿ, ನೀನು ಊಳಿಗ ಅಂತೀಯೆ. ಒಬ್ಬ ರಾಜ ಇಂಥ ಮಾತು ಹೇಳಬಹುದು. ಅಷ್ಟು ಭೇಷಿದೆ ನಿನ್ನ ಮಾತು."

"ನಿಮ್ಮ ಸಂತೋಷ, ಜನಾಬ್."

"ನೋಡು ಒಂದು ಕಾಗದ ಬರಸಿಕೊಡತೇನೆ. ಅದರಲ್ಲಿ ನೀನು ಯಾವ ಕೆಲಸಕ್ಕೆ ಹೊರಟಿದ್ದೀಯ ಅನ್ನೋದನ್ನ ಮೂರು ಮಾತಿನಲ್ಲಿ ಹೇಳಿರತದೆ. ಅದನ್ನ ತಗೊಂಡು ಹೋಗು; ಕೆಲಸಮಾಡಿಕೊಂಡು ಬಾ. ನೀನು ತಿರುಗಿ ಬರೋವರೆಗೆ ನಿನ್ನ ಹೆಸರು ರಾಮಚಂದ್ರ. ಈ ಹೊತ್ತು

ಆಡಿದ ಮಾತು ರಾಜಾಮಾತು; ಯಾರಾದರೂ ಹೆಸರು ಕೇಳಿದರೆ ರಾಜಾ ರಾಮಚಂದ್ರ ಅನ್ನು. ಬಂಗರದ ಹಾಗೆ ಹೋಗಿ ತಿರುಗಿಕೊಂಡು, ಕೆಲಸ ಮಾಡಿಕೊಂಡು ಬರಬೇಕು."

"ಅಪ್ಪಣೆ, ಜನಾಬ್."

"ಒಳ್ಳೆಯದು.ರಾಜಾ ರಾಮಚಂದರ್. ಮುಂಜಾನೆ ಎದ್ದು ಹೊರಡ ಬೇಕು. ಅನುವಾಗು."

ರಾಜಾ ರಾಮಚಂದ್ರ ತಲೆಬಾಗಿ ಒಡೆಯನಿಗೆ ಕೈಮುಗಿದನು. ಒಳಕ್ಕೆ ಹೋದನು.

ಹೀಗೆ ಚಿನ್ನಬಸವನಾಯಕ ಪಟ್ಟಣವನ್ನು ಕುರಿತು ಪ್ರಯಾಣ ನಡೆಯುತ್ತಿದ್ದವೇಳೆ, ಅವನಿಂದ ಅವನ ಪಿತ್ರಾರ್ಜಿತ ರಾಷ್ಟ್ರವನ್ನು ಕಸಿದು ಕೊಳ್ಳುವುದಕ್ಕೆ ಮೈಸೂರ ಹೆಸರಲ್ಲಿ ಯತ್ನ ನಡೆಯಿತು.

## ೬೧

ನವರಾತ್ರಿಯ ಉತ್ಸವಕ್ಕೆ ಬಂದಿದ್ದ ಅತಿಥಿಗಳು ಹಿಂದಿರುಗಿ ಹೋದ ಮೇಲೆ ನಾಲ್ಕು ದಿನದಲ್ಲಿ, ರಾಜಮಾತೆ ಒಂದು ಸಂಜೆ ಬರ್ಕಿ ಶ್ರೀನಿವಾಸ ರಾಯನಿಗೆ ಬರಹೇಳಿ ಕಳುಹಿದಳು.

ಈ ಮಾತು ಗುಪ್ತವಾಗಿ ಬಂದಿತು. ಅವನು ಸಮಯ ನೋಡಿ ಬರಬೇಕು ಎಂದೂ ಅದನ್ನು ತಂದ ಹರಿಕಾರ ಹೇಳಿದನು. ಶ್ರೀನಿವಾಸ ರಾವ್, "ಅಪ್ಪಣೆ ಎಂದೆ ಅಂತ ಅರಿಕೆಮಾಡು," ಎಂದನು. ಸರಿಯಾದ ಸಮಯ ನಾಲ್ಕೈದು ದಿನ ಸಿಕ್ಕಲಿಲ್ಲ. ಕೊನೆಗೆ ಅರಮನೆಯಲ್ಲಿ ಯಾವುದೊ ಏರ್ಪಾಡನ್ನು ಕುರಿತು ಮಾತನಾಡುವುದಕ್ಕೆಂದು ಹೋಗಬೇಕಾಯಿತು. ಮೊಕದಂ ಆಲಿಗೆ ತಿಳಿದಂತೆಯೆ ಇವನು ಅರಮನೆಗೆ ಹೋದಾಗ, ಆ ವಿಷಯದಲ್ಲಿ ಒಳಗೆ ಮಾತನಾಡಬೇಕು ಎಂಬಂತೆ ಸೂಚಿಸಿದನು. ರಾಜ ಮಾತೆ ಇವನ ಬರವನ್ನು ಕಾದಿದ್ದಳು; ಇವನಿಂದ ಸೂಚನೆ ಬರಬಹುದು ಎಂಬ ನಿರೀಕ್ಷೆಯಲ್ಲಿದ್ದಳು; ಇವನು ಹೇಳಿಕಳುಹಿಸಿದೊಡನೆ, "ಬರಲಿ," ಎಂದಳು.

ಗುಪ್ತವಾದ ಮಾತು ಎಂದಾಗಲೆ ಶ್ರೀನಿವಾಸರಾಯನಿಗೆ ಇದು ಕ್ಷೇಮವಲ್ಲ ಎನ್ನಿಸಿತ್ತು. ಇವನು ಒಳಗೆ ಹೋಗಿ ರಾಜಮಾತೆಯ ಸನ್ನಿಧಿಯಲ್ಲಿ ಮರ್ಯಾದೆಯಿಂದ ಕೈಮುಗಿದು ನಿಂತನು.

ರಾಜಮಾತೆ, "ನಿಮ್ಮ ತಂದೆಯವರು ಅರಮನೆಗೆ ಬಹು ಸೇವೆ ಮಾಡಿದ ಹಿರಿಯರು, ರಾಯರೆ. ಅದನ್ನು ನೆನೆದು ನಿಮ್ಮನ್ನು ಬರಮಾಡಿಕೊಂಡಿದ್ದೇವೆ," ಎಂದಳು.

"ಅನುಗ್ರಹ, ಮಹಾತಾಯಿ."

"ಬಹು ಮುಖ್ಯವಾದ ಒಂದು ಕೆಲಸ ಇದೆ. ಅದನ್ನು ನೀವು ನಡಸಿ ಕೊಡಬೇಕು. ಇದು ಪ್ರಭುಗಳ ಅಪೇಕ್ಷೆ. ನಿಮ್ಮಿಂದ ಒಪ್ಪಿಗೆ ದೊರೆತ ಮೇಲೆ ಅವರೆ ಇದನ್ನು ಪ್ರತ್ಯಕ್ಷ ಹೇಳುತ್ತಾರೆ. ಮೊದಲು ನೀವು ಯೋಚನೆ ಮಾಡಬೇಕು."

"ಪ್ರಭುಗಳ ಅಪ್ಪಣೆಯನ್ನು ಶಿರಸಾ ನಡಸುತ್ತೇನೆ."

"ಅಷ್ಟು ಬೇಗನೆ ಹೇಳಬೇಡಿ. ನಾಳೆ ನಾವು ರಂಗನಾಥದೇವಾಲಯಕ್ಕೆ ಪೂಜೆಗಾಗಿ ಹೋಗುವುದಿದೆ. ನೀವು ಆಗ ಒಳಗೆ ಇರಿ. ಅಲ್ಲಿ ಏನು ಸಂಗತಿ ಎನ್ನುವುದನ್ನು ನಾವು ತಿಳಿಸುತ್ತೇವೆ."

ಮಾರನೆಯ ದಿನ ಇವನು ರಂಗನಾಥದೇವಾಲಯದಲ್ಲಿ ಇದ್ದಾಗ ರಾಜಮಾತೆ ಅಲ್ಲಿಗೆ ಬಂದಳು. ಪ್ರಾಕಾರದಲ್ಲಿ ಪ್ರದಕ್ಷಿಣೆ ಮಾಡುವ ವೇಳೆ ಇವನನ್ನು ಕಂಡು, "ದೇವರ ಸನ್ನಿಧಿಯಲ್ಲಿ ನಿಮ್ಮ ಮನಸ್ಸಿಗೆ ಸತ್ಯಮಾಡಿಕೊಂಡು ಪ್ರಭುಗಳಿಗೆ ಅನುಕೂಲವಾಗಿ ನಡೆದುಕೊಳ್ಳಬೇಕು," ಎಂದಳು.

ಶ್ರೀನಿವಾಸರಾವ್, "ಮಹಾತಾಯಿ, ನಾವು ಪ್ರಭುಗಳಿಗೆ ಸತ್ಯವಾಗಿ ನಡೆದುಕೊಳ್ಳುವುದನ್ನು ಎಂದೊ ನಿಶ್ಚಯಿಸಿದ್ದೇವೆ. ಈ ಹೊತ್ತು ಇಲ್ಲಿ ಮತ್ತೆ ಸತ್ಯಮಾಡಿಕೊಳ್ಳಬೇಕಾದದ್ದು ಇಲ್ಲ. ನಮ್ಮನ್ನು ಮನೆತನದ ಸೇವಕರು ಎಂದು ನಂಬಿ ನಡಸಿಕೊಳ್ಳಬೇಕು," ಎಂದನು.

"ಸಂತೋಷ, ರಾಯರೆ. ಪ್ರಸಾದ ಕೊಡಿಸುತ್ತೇವೆ. ಅದನು ಸ್ವತಃ ಮನೆಗೆ ತೆಗೆದುಕೊಂಡು ಹೋಗಿರಿ. ದೇವರ ಸನ್ನಿಧಿಯಲ್ಲಿ ತೆಗೆದು ನೋಡಿರಿ. ಅದರಲ್ಲಿ ಒಂದು ಕಾಗದ ಇರುತ್ತದೆ. ಅದನ್ನು ನೋಡಿ ಪ್ರಭುಗಳ ಇಚ್ಛೆಯನ್ನು ಗ್ರಹಿಸಿರಿ," ಎಂದಳು.

ಹಾಗೆಯೇ, ದೇವರ ಸನ್ನಿಧಿಯಲ್ಲಿ ಯಾವುದೊ ಸಣ್ಣ ಕೆಲಸ ಆಗಬೇಕಾಗಿದೆ, ಎಂದು ತೋರಿಕೆಗೆ ಹೇಳಿ, ಅದರ ವಿಷಯ ಮಾತನಾಡಿದಂತೆ ಮಾಡಿದಳು. ಪೂಜೆ ಮುಗಿಸಿಕೊಂಡು ಇವನ ಮಡಿಲಲ್ಲಿ ಸ್ವಲ್ಪ ಪ್ರಸಾದವನ್ನು ಹಾಕಿಸಿ, ತಾನೂ ಹಾಕಿ, ಅರಮನೆಗೆ ಹಿಂದಿರುಗಿದಳು.

## ೮೨

ಶ್ರೀನಿವಾಸರಾವ್ ಪ್ರಸಾದವನ್ನು ತೆಗೆದುಕೊಂಡು ಮನೆಗೆ ಬಂದನು; ಅದನ್ನು ದೇವರ ಸನ್ನಿಧಿಯಲ್ಲಿ ತೆಗೆದು ನೋಡಿದನು. ರಾಜಮಾತೆ ಹೇಳಿದಂತೆ ಅದರಲ್ಲಿ ಒಂದು ಕಾಗದ ಇದ್ದಿತು. ಅದರಲ್ಲಿ, "ನೀವು ಸರ್ವಾಧಿಕಾರಿ ಆಗಬೇಕೆಂದು ನಮ್ಮ ಅಪೇಕ್ಷೆ. ಇದನ್ನು ಭಗವದಿಚ್ಛೆ ಎಂದು ಸ್ವೀಕರಿಸಿ, ಪ್ರಭುವಿನ ಸೇವೆಯನ್ನು ಮಾಡಿ," ಎಂದು ಬರೆದಿದ್ದಿತು.

ಶ್ರೀನಿವಾಸರಾಯನಿಗೆ ಇದು ಅಷ್ಟು ಸ್ಪಷ್ಟವಾಗಿ ಅರ್ಥವಾಗಲಿಲ್ಲ. ಹೈದರನನ್ನು ಸರ್ವಾಧಿಕಾರದಿಂದ ತೆಗೆದುಹಾಕಿ ತನ್ನನ್ನು ಸರ್ವಾಧಿಕಾರಿಯಾಗಿ ಮಾಡಬೇಕೆಂದು ಅರಸರ ಉದ್ದೇಶವೆ? ಇದು ಉದ್ದೇಶವಾಗಿದ್ದಲ್ಲಿ, ಇದಕ್ಕೆ ಈ ಗುಟ್ಟಿನ ನಡತೆ ಏಕೆ? ನಾಳೆ ಊರಿಗೆ ತಿಳಿಯುವ ಮಾತು!

ಆಮೇಲೆ ಅವನಿಗೆ ತೋರಿತು: ತಾನು ಒಪ್ಪದೆ ಇದ್ದರೆ ಈ ಮಾತು ರಟ್ಟಾಗುವುದು ಒಳ್ಳೆಯದಲ್ಲ; ಆದ್ದರಿಂದ ಇದನ್ನು ಗುಪ್ತವಾಗಿ ತಿಳಿಸಿದ್ದಾರೆ; ಸತ್ಯದಿಂದ ಕಟ್ಟುವುದಕ್ಕಾಗಿ ದೇವಸ್ಥಾನದಲ್ಲಿ ಇದನ್ನು ಕೊಟ್ಟಿದ್ದಾರೆ.

ತಮ್ಮ ತಂದೆ, ತಾನು, ಅರಸರಿಗೆ ರಾಜಕುಟುಂಬಕ್ಕೆ ಎಂಥ ಏಕನಿಷ್ಠೆಯಿಂದ ನಡೆದುಕೊಂಡು ಬಂದದ್ದಾಗಿದೆ? ಆದರೂ ಈ ಜನ ಗುಟ್ಟು ಎನ್ನುತ್ತಾರೆ, ಆಣೆ ಎನ್ನುತ್ತಾರೆ. ಇಂಥ ಅಪನಂಬಿಕೆಯ ಸಂತೆಯಲ್ಲಿ ಒಬ್ಬ ಪ್ರಮಾಣವನ್ನೇ ಮಾಡಿದ. ಇವರು ಅದಕ್ಕೆ ಏನು ಬೆಲೆ ಕಟ್ಟಬಹುದು? ಶ್ರೀನಿವಾಸರಾಯನಿಗೆ ಈ ರಾಜತಂತ್ರದಲ್ಲಿ ತಂತ್ರ ಅತಿ ಹೆಚ್ಚಿತು ಎಂದು ಕಂಡಿತು. ಇನ್ನೊಂದರ್ಥದಲ್ಲಿ ತಂತ್ರವೇ ಇಲ್ಲ ಎಂದು ಕಂಡಿತು. ಧೈರ್ಯವಿಲ್ಲ; ದಿಟ್ಟತನವಿಲ್ಲ; ಅದೃಷ್ಟವನ್ನು ಎದುರಿಸಿಯೇನು ಎಂಬ ದಾರ್ಢ್ಯವಿಲ್ಲ. ಇದರಿಂದ ಯಾರು ಬದುಕಬಹುದು?

ಶ್ರೀನಿವಾಸರಾವ್ ಈ ಕಾಗದವರ್ನು ಭದ್ರವಾಗಿಟ್ಟುಕೊಂಡನು. ಅದರ ಸಂಗತಿಯನ್ನು ತಂದೆಗೆ, ತಾಯಿಗೆ, ಹೆಂಡತಿಗೆ, ಕೂಡ ಹೇಳಲಿಲ್ಲ. ಎರಡು ಮೂರು ದಿನ ಅದನ್ನು ಕುರಿತು ಯೋಚನೆ ಮಾಡಲಿಲ್ಲ. ಮತ್ತೆ ಯಾವುದೊ ಕೆಲಸ ಬಿದ್ದಿತೆಂದು ಅರಮನೆಗೆ ಹೋದನು; ರಾಜಮಾತೆಯನ್ನು ಕಂಡನು.

"ಮಹಾತಾಯಿ, ಈಗ ಇರುವರಿಂದ ಅಧಿಕಾರವನ್ನು ತೆಗೆದು ನನಗೆ ಕೊಡುವುದು ಉದ್ದೇಶವೆ?" ಎಂದನು.

"ಹೌದು."

"ಮತ್ತೆ ನನಗೆ ಅವರಿಗೆ ವಿರೋಧ ಬರಬಹುದಲ್ಲ? ಏನಾದರೂ ಸರಿ, ನಾನು ಅಧಿಕಾರವಹಿಸಿಕೊಳ್ಳಬೇಕು, ಎಂದು ಇಷ್ಟವೆ?"

"ಹೌದು. ಹಾಗೆ ಬಂದರೆ ಪ್ರಭುಗಳ ಆಜ್ಞೆಯನ್ನು ನಡಸುವುದಕ್ಕೆ ಕಾದಬೇಕು."

"ಈಗಿನವರಿಗೆ ಸಲ್ಲಬೇಕಾದ ಹಣಕಾಸು ಇದ್ದರೆ ಹೇಗೆ?"

"ನೀವು ವ್ಯವಹಾರವನ್ನು ಕೈಗೆ ತೆಗೆದುಕೊಂಡು ಅದನ್ನೆಲ್ಲ ತೀರಿಸಬಹುದು. ಅವರು ಸೇನಾಪತಿಯಾಗಿ ಇರುತ್ತಾರೆ. ನೀವು ಅವರ ಮೇಲೆ ರಾಜರ ಪರವಾಗಿ ಅಧಿಕಾರ ನಡಸುತ್ತೀರಿ."

"ಒಳ್ಳೆಯದು, ಮಹಾತಾಯಿ. ಇದರ ವಿಷಯ ನಾನು ಇನ್ನೂ ಯಾರಿಗೂ ಹೇಳಲಿಲ್ಲ. ಅಪ್ಪಣೆಯಾದರೆ ಈಗ ತಂದೆ ತಾಯಿಗೆ ತಿಳಿಸಿ ಅವರ ಒಪ್ಪಿಗೆ ದೊರೆತರೆ ಮುಂದಕ್ಕೆ ಹೆಜ್ಜೆ ಇಡುತ್ತೇನೆ."

"ಒಳ್ಳೆಯದು, ರಾಯರೆ; ಹಿರಿಯರಿಗೆ ತಿಳಿಸಿರಿ."

ಶ್ರೀನಿವಾಸರಾವ್ ಮನೆಗೆ ಬಂದನು. ಅಂದೆಲ್ಲ ಸುಮ್ಮನಿದ್ದು ರಾತ್ರಿ ತಂದೆಯ ಹಾಸಿಗೆಯ ಬಳಿ ಹೋಗಿ ನಿಂತು ಮೆಲ್ಲನೆ ಅವರಿಗೆ ಎಲ್ಲ ಸಂಗತಿಯನ್ನೂ ವಿವರಿಸಿದನು.

ವೆಂಕಟರಾಯನಿಗೆ ಈ ಕಥೆಯನ್ನು ಕೇಳಿ ತುಂಬ ಬೇಸರವಾಯಿತು. ಆತ ಬಹು ವರ್ಷದ ಹಿಂದೆ ಸೇನೆಯ ಪ್ರಮುಖ ಅಧಿಕಾರಿ ಆದನು. ಬಹು ದಿವಸ ದಳವಾಯಿ, ಆಮೇಲೆ ಕರಾಚೂರಿ, ರಾಜರ ಹತ್ತಿರ ಪ್ರಬಲರಾಗಿದ್ದು ಎಲ್ಲ ಕೆಲಸಕ್ಕೂ ನಾವು ನಾವು ಎಂದು ಮುಂದೆ ಬಿದ್ದು

ಎಲ್ಲವನ್ನೂ ಕೆಡಿಸಿದ್ದರು. ಇದ್ದದ್ದರಲ್ಲಿ ದಳವಾಯಿ ಸ್ವಲ್ಪ ದೊಡ್ಡ ಮನುಷ್ಯ; ಉಳಿದವರಷ್ಟು ಆತುರ ಇಲ್ಲ; ಆದರೆ ಬುದ್ಧಿಯೂ ಇಲ್ಲ. ಕೆಲಸ ನಡೆಯ ಬೇಕಾದರೆ ದುರ್ಗುಣ ಇಲ್ಲ ಎನ್ನುವುದು ಸಾಲದು; ಗುಣ ಇರಬೇಕು; ಶಕ್ತಿ ಇರಬೇಕು. ಆಗಿನ ದಿವಸಕ್ಕೆ ಅವರು ವೆಂಕಟರಾಯನನ್ನು ಸರಿಯಾಗಿ ನೋಡಿಕೊಂಡಿದ್ದರೆ, ಈತನೆ ಸರ್ವಾಧಿಕಾರಿಯಾಗಬಹುದಾಗಿತ್ತು. ಆಗ ಅದನ್ನು ತಪ್ಪಿಸಿದ್ದರು; ಪರಧರ್ಮಿ ಆದ ಹೈದರ ನಾಯಕನನ್ನು ದೊಡ್ಡವನನ್ನು ಮಾಡಿದ್ದರು. ತನಗೆ ತೋರಿಸದೆ ಇದ್ದ ಮರ್ಯಾದೆಗಳನ್ನು ಅವನಿಗೆ ತೋರಿಸಿದ್ದರು; ಅವನನ್ನು ತಲೆಯ ಮೇಲೆ ಏರಿಸಿಕೊಂಡಿದ್ದರು. ಅವರು ಉತ್ಥಾಪನೆ ಮಾಡಿದ ಭೂತ ಅವರನ್ನೇ ನುಂಗಿತು. ಈಗ ರಾಜರ ಮೇಲೆ ಬಂದಿತ್ತು. ಅದಕ್ಕೆ ಉದ್ಯಾಪನೆ ಮಾಡುವುದಕ್ಕೆ ಉತ್ಥಾಪನೆ ಮಾಡಿದವರು ಇರಲಿಲ್ಲ. ಬಡಪಾಯಿ ಅರಸರು ಈಗ ಇದರ ವಿಷಯ ಯೋಚನೆ ಮಾಡಬೇಕಾಗಿತ್ತು. ಇವರಿಂದ ಈ ಕೆಲಸ ಆಗಬಹುದೆ? ಖಂಡೇರಾಯ ಹೈದರನನ್ನು ಅಡಿಸುವುದಕ್ಕೆ ಹೋಗಿ ಅವನ ಬೋನಿನಲ್ಲಿ ಬಿದ್ದಿದ್ದನು. ಎಂದರೆ ಆಗ ನಡೆದ ಯತ್ನ ರಾಜರದಲ್ಲ, ಕರಾಚೂರಿಯದು; ಸ್ವಲ್ಪಮಟ್ಟಿಗೆ ಖಂಡೇರಾಯನದು. ಖಂಡೆ ಕೂಡ ದಳವಾಯಿ, ಕರಾಚೂರಿ, ಇವರಂತೆ ಸ್ವಲ್ಪಮಟ್ಟಿಗೆ ಸ್ವಾರ್ಥದಿಂದ ವರ್ತಿಸಿದ್ದನು. ಈಗ ಅರಸರೇ ಈ ಯೋಚನೆ ಮಾಡಿದ್ದಾರೆ. ಇದು ಒಳ್ಳೆಯದೇ. ಆದರೆ ಇದನ್ನು ಇವರು ಕೊನೆಮುಟ್ಟ ನಡಸಬಲ್ಲರೆ? ಹೈದರ್ ಮೇಲೆ ಬಿದ್ದು, "ವಂಶವನ್ನು ಅಳಿಸುತ್ತೇನೆ," ಎಂದರೆ, "ಅಳಿಸು, ನಾವು ಬೇಡ ಎನ್ನುವುದಿಲ್ಲ. ಇಲ್ಲವೆ ನಾವು ಅರಸರು, ಇಲ್ಲವೆ ಏನೂ ಅಲ್ಲ," ಎಂದು ಹೇಳುವರೆ? ಹೇಗಿದೆ ಇವರ ಬುದ್ಧಿ?

ವೆಂಕಟರಾವ್ ನಿದಾನವಾಗಿ ಯೋಚನೆ ಮಾಡಿ ಮಗನಿಗೆ, "ಏನು ಮಾಡಬೇಕು ಎಂತ ನಿನ್ನ ಮನಸ್ಸು?" ಎಂದನು.

"ನಾನೇನೂ ನಿಶ್ಚಯಮಾಡಿಕೊಂಡಿಲ್ಲ. ಹೈದರ್ ನಮ್ಮೊಂದಿಗೆ ಬಹು ವಿಶ್ವಾಸದಿಂದ ನಡೆದುಕೊಂಡಿದ್ದಾನೆ. ಅವನನ್ನು ಬಿಟ್ಟು ನಾವು ಇಂಥ ಯೋಚನೆ ಮಾಡುವುದು ಸರಿಯಲ್ಲವೇನೊ ಎನ್ನಿಸುತ್ತಿದೆ."

"ಅವನು ವಿಶ್ವಾಸವಾಗಿ ನಡೆದದ್ದೂ ಉಂಟು; ಅವಿಶ್ವಾಸವಾಗಿ ನಡೆದದ್ದೂ ಉಂಟು. ತನ್ನ ಪ್ರಯೋಜನದ ಸಾಧನೆಗಾಗಿ ಅವನು ಏನೂ ಮಾಡಬಲ್ಲ. ಅಧಿಕಾರ ತೆಗೆದುಕೊಂಡರೆ ನಡಸಬಲ್ಲೆನೆಂದು ನಿನಗೆ ತೋರುತ್ತಿದೆಯೊ ?"

"ನಡಸಬಹುದು. ಅಧಿಕಾರಿಗಳು ಯೋಗ್ಯರಿಲ್ಲ. ಹೈದರ್ ಎಲ್ಲ ಸಂಗತಿಯನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದಾನೆ. ಯಾರಲ್ಲಿಯೂ ನಂಬಿಕೆಯಿಟ್ಟಿಲ್ಲ. ಸರಿಯಾದ ಜನವನ್ನು ಹಿಡಿದು ಹತ್ತುಕಡೆ ನಿಲ್ಲಿಸಿ, ಅರಸರ ವಿಷಯಕ್ಕೆ ಸತ್ಯವಾಗಿ ನಡೆದುಕೊಳ್ಳುವಂತೆ ನೋಡಿಕೊಂಡರೆ, ಆಡಳಿತ ಚೆನ್ನಾಗಬಹುದು."

"ಇದನ್ನು ನೀನು ಮಾಡಬಲ್ಲೆಯಾ ?"

"ಹೇಗೊ ನೋಡಬಹುದು."

"ಸರಿ. ನಿಮ್ಮ ತಾಯಿಗೆ ತಿಳಿಸು. ಏನು ಹೇಳುತಾರೆ ಕೇಳು."

## ೮೩

ಈ ವೇಳೆಗೆ ಶ್ರೀನಿವಾಸರಾಯನ ತಾಯಿ ಅಲ್ಲಿಗೆ ಬಂದಳು. ವೆಂಕಟರಾವ್ ಹೆಂಡತಿಗೆ, "ಮಗ ಏನೊ ಹೇಳುತಾನೆ ಕೇಳಿ," ಎಂದನು.

ತಾಯಿ ಅಲ್ಲೆ ಪಕ್ಕದಲ್ಲಿ ಕುಳಿತಳು; ಮಗನಿಂದ ಎಲ್ಲ ಮಾತನ್ನೂ ಕೇಳಿದಳು; ತಂದೆ ಏನು ಹೇಳಿದರೆನ್ನುವುದನ್ನು ತಿಳಿದು, "ಅಪ್ಪ ನೀನು ಈ ದಿನ ಜೀವದೊಂದಿಗೆ ಇಲ್ಲಿ ಇದ್ದು, ತಂದೆಯೊಂದಿಗೆ, ನನ್ನೊಂದಿಗೆ, ಮಾತನಾಡುವುದಕ್ಕೆ ಹೈದರ್ ಕಾರಣ. ಇದು ನೆನಪಿದೆಯೆ ?" ಎಂದಳು.

"ಯಾಕಿಲ್ಲ ಅಮ್ಮ ?"

"ನೋಡಪ್ಪ, ಆ ಹೊತ್ತು ನೀನು ಹಗೆಯ ಕೈಯಲ್ಲಿ ಸೆರೆಯಾಗಿದ್ದಾಗ ಬೇರೆ ಯಾರೂ ನಿನ್ನನ್ನ ಕಾಯಲಿಲ್ಲ. ಗೋಪಾಲರಾವ್ ನಿನ್ನನ್ನ ಗಲ್ಲಿಗೆ ಏರಿಸಿದ್ದರೆ ಇವರು ಒಂದು ತೊಟ್ಟು ಕಣ್ಣೀರು ಹಾಕುತ್ತಿರಲಿಲ್ಲ. ಮಗನನ್ನು ಕಳೆದುಕೊಂಡೆವೆಂದೇ ತಿಳಿದು ನಿಮ್ಮ ತಂದೆ ನಾನು ಸುಮ್ಮ ನಾದೆವು. ಏನೋ ತೋರಿತು; ಹೈದರ್ ಹತ್ತಿರ ಹೋದೆ, ನಿಮ್ಮ

ತಂದೆಗೇ ಹೇಳಲಿಲ್ಲ. ಎಳೆಯ ಮಕ್ಕಳನ್ನು ನೋಡಿ ಇವು ತಬ್ಬಲಿಯಾಗ ಬೇಕೆ ಎಂದು ಹೊಟ್ಟೆ ತೊಳಸಿ, ಹೋಗಿ ಅವನೆದುರಿಗೆ ಸೆರಗೊಡ್ಡಿದೆ; ಅವನು ನಿನ್ನನ್ನು ಉಳಿಸಿದ. ಐದು ವರ್ಷದ ಮೇಲೆ ತನ್ನ ಕುತ್ತಿಗೆಗೆ ಉರುಳಾಗಿ ಬರಲಿ ಎಂತ ಹೈದರ್ ನಿನ್ನ ಉಳಿಸಿ ತಂದನೆ? ಇಲ್ಲ, ಅವನು ಉಳಿಸಿ ತಂದ ನೀನು ಆ ಉಪಕಾರವನ್ನು ಮರೆತು ಅವನನ್ನು ಕೆಡಿಸಿ ರಾಜರ ಸೇವೆಯನ್ನು ಮಾಡುತ್ತೀಯೊ? ಯೋಚನೆ ಮಾಡು."

"ನಿಜ, ಅಮ್ಮ; ಹೈದರ್ ಕಾಪಾಡಿದ್ದು ನಿಜ. ಅದರ ಸಾಲ ಇದ್ದೇ ಇದೆ. ಆದರೆ ನಾವು ರಾಜರ ಸೇವಕರು. ನಂಟರು, ಇಷ್ಟರು, ಬಂಧುಗಳು ಎಂದು ನೋಡುವುದಕ್ಕಾಗುವುದಿಲ್ಲ. ಒಡೆಯರ ಆಜ್ಞೆಯನ್ನು ನಡಸುವುದು ಕರ್ತವ್ಯ."

"ಒಪ್ಪಿದೆ, ಮಗು. ಒಡೆಯರ ಆಜ್ಞೆಯನ್ನು ನಡಸು; ಆದರೆ ಜೀವ ಕೊಟ್ಟವನನ್ನು ಮರೆಯಬೇಡ. ಇವರು ಸರ್ವಾಧಿಕಾರಿಯಾಗು ಎಂದು ಹೇಳುತ್ತಿದಾರಲ್ಲವೆ? ಹೈದರನ ಹತ್ತಿರ ಹೋಗು; ಹೀಗೆ ಆಜ್ಞೆ ಆಗುತ್ತಿದೆ, ಒಪ್ಪಿಕೊಳ್ಳಲೆ, ಎಂತ ಕೇಳು. ಅವನು ಆಗಬಹುದು ಎಂದರೆ ಒಡೆಯರಲ್ಲಿ ಒಪ್ಪಿಕೊ. ಏನೂ ಅಡ್ಡಿ ಇಲ್ಲ. ಹಾಗಲ್ಲದೆ ನಿನಗೆ ಜೀವ ಕೊಟ್ಟವನ ಉಪಕಾರವನ್ನು ಮರೆತು ಅವನ ಎದುರಾಳಿಯಾಗಿ ನಿಲ್ಲಬೇಡ. ಉಪಕಾರ ಮರೆತವರಿಗೆ ಗತಿ ಇಲ್ಲ; ಇದು ವಚನ. ನೀನು ಹೈದರನ ಸ್ವತ್ತು; ಅವನಿಗೆ ತಪ್ಪಿ ನಡೆಯಬೇಡ."

ತಂದೆ ವೆಂಕಟರಾವ್, "ಇದೇನು ಹೀಗೆ ಹೇಳುತ್ತಿದ್ದೀರಿ? ಹೈದರ್ ಉಪಕಾರ ಮಾಡಿದ ನಿಜ. ಆದರೆ ನಿಮ್ಮ ಮಗ ಅವನ ಸ್ವತ್ತು ಆದಾನೆ? ಶ್ರೀನಿವಾಸರಾವ್ ಅರಸರ ಸೇವಕ, ಹೈದರನ ಸೇವಕನಲ್ಲ," ಎಂದನು.

ತಾಯಿ, "ಹೈದರ್ ಸರ್ವಾಧಿಕಾರಿ. ಅರಸರ ಆಜ್ಞೆ ನಿಮ್ಮ ಮಗನಿಗೆ ಸರ್ವಾಧಿಕಾರಿಯ ಮೂಲಕ ಬರಬೇಕು. ಹೀಗೆ ನೇರವಾಗಿ ಏಕೆ ಬರುತ್ತಿದೆ? ಅದೂ ಇರಲಿ. ಗುಟ್ಟಾಗಿ ಬಂದಿದೆ ಏಕೆ?" ಎಂದಳು.

"ರಾಜಕಾರ್ಯದಲ್ಲಿ ಹತ್ತು ಸಂದರ್ಭದಲ್ಲಿ ಹೀಗೆ ನಡೆಯಬೇಕಾಗುತ್ತದೆ. ಇದರಲ್ಲಿ ದ್ರೋಹವಿಲ್ಲ, ರಾಜರ ಕಾರ್ಯ ಹೌದೆ, ಅಲ್ಲವೆ, ಎನ್ನೋದೇ ಮುಖ್ಯ."

"ಇದರ ಸೂಕ್ಷ್ಮ ನನಗೆ ತಿಳಿಯುತ್ತಿಲ್ಲ. ಅಲ್ಲದೆ ಈ ಕೆಲಸಕ್ಕೆ ಹೆಚ್ಚುವ ಹಿರಿಯರು ಕೊನೆಮುಟ್ಟ ಎತ್ತಿ ಹಿಡಿಯುತ್ತಾರೆ ಎಂದು ನಂಬು ವುದಕ್ಕಿಲ್ಲ. ಖಂಡೇರಾಯನೇ ಇದಕ್ಕೆ ಸಾಕ್ಷಿ."

"ಅದು ಬೇರೆ ಮಾತು. ಕೊನೆಮುಟ್ಟ ಎತ್ತಿ ಹಿಡೀತೇವೆ ಎಂತ ಭಾಷೆ ಮಾಡಿದರೆ ? "

"ಆಗಲೂ ಹೈದರನ್ನ ಕೇಳದೆ ಇವರಿಗೆ ಒಪ್ಪಿಗೆ ಹೇಳುವುದು ಸರಿಯಲ್ಲ ಎನ್ನಿಸುತ್ತಿದೆ. ನಿಮಗೆ ಹೇಗೊ, ನಾನು ಕಾಣೆ; ನನ್ನ ಮನಸ್ಸಿ ಗಂತೂ ಇದು ಅಳುಕು."

"ಇರಬಹುದು. ಇದನ್ನು ಹೋಗಿ ಹೈದರನಿಗೆ ಹೇಳಿದರೆ ನವಾಬನಿಗೆ ಸರಿಯಾಗಿ ನಡೆದುಕೊಳ್ಳುವುದರಲ್ಲಿ ಅರಸರನ್ನ ಬಿಟ್ಟುಕೊಟ್ಟಹಾಗಾಗುತ್ತಲ್ಲ."

"ಆಗುತ್ತೆ. ದೇವರು ನಾವು ಹೇಗೆ ನಡೆದುಕೊಳ್ಳುತ್ತೇವೊ ಅಂತ ನೋಡೋದಕ್ಕೆ ಈ ಪ್ರಸಂಗ ತಂದಿರಬೇಕು. ಹೈದರನಿಗೆ ಹೇಳದೆ ಈ ಕೆಲಸ ಮಾಡಿದರೆ ಉಪಕಾರಿಗೆ ಅಪಕಾರ ಆಗುತ್ತೆ. ಹೈದರನಿಗೆ ಹೇಳೋಣ ಅಂದರೆ ಅರಸರನ್ನು ಅವನಿಗೆ ಹಿಡಿದು ಕೊಟ್ಟ ಹಾಗಾಗುತ್ತೆ. ಸರ್ವಾಧಿಕಾರ ಮಾಡೋ ಪುಣ್ಯ ನಮ್ಮ ಪಾಲಿಗೆ ಇಲ್ಲ ಅನ್ನಬೇಕು. ಅಮ್ಮಣ್ಣಿಯವರಿಗೆ ಇದು ನಮ್ಮಿಂದ ಆಗೋದಿಲ್ಲ, ದಯವಿಟ್ಟು ಮನ್ನಿಸ ಬೇಕು, ಅಂತ ಅರಿಕೆ ಮಾಡಿ ಮುಗಿಸಬೇಕು."

ತಂದೆ ಮಗ ಈ ಮಾತನ್ನು ಕೇಳಿ ಯೋಚಿಸಿದರು. ಹೈದರನ ಹತ್ತಿರ ಹೋಗಿ, ಎದುರಿಗೆ ನಿಂತು ಸೆರಗೊಡ್ಡಿ ಬೇಡಿ, ಮಗನ ಜೀವವನ್ನು ದಾನವಾಗಿ ಪಡೆದ ಆ ತಾಯ ಮನಸ್ಸಿನ ಸ್ಥಿತಿಯನ್ನು ಯಥಾವತ್ತಾಗಿ ಗ್ರಹಿಸುವುದು ಇವರಿಗೆ ಸಾಧ್ಯವಲ್ಲ. ಆದರೂ ಮೊತ್ತದಲ್ಲಿ ಆಕೆಯ ಮಾತು ಸರಿ ಎಂದು ಇಬ್ಬರಿಗೂ ತೋರಿತು. ಪದವಿ ದೊಡ್ಡದು; ತಾನಾಗಿ ಹುಡುಕಿಕೊಂಡು ಬಂದಾಗ ಬೇಡ ಎನ್ನುವುದು ಕಷ್ಟ. ಆದರೆ ಈಗ ಅದು ಬರಿಯ ಪದವಿಯಾಗಿ ಬಂದಿರಲಿಲ್ಲ; ಪರೀಕ್ಷೆಯಾಗಿ ಬಂದಿದ್ದಿತು. ಅದರ ರುಚಿಗೆ ಮನಸೋತು, ಇಲ್ಲ ಉಪಕಾರಿಗೆ, ಇಲ್ಲ ಒಡೆಯನಿಗೆ, ತಪ್ಪಿ ನಡೆದಂತೆ ಕಾಣುವುದಕ್ಕಿಂತ, ಇದು ನಮಗೆ ಬೇಡ ಎಂದು ಹೇಳು ವುದು ಸರಿ ಎಂದು ಇವರಿಗೂ ತೋಚಿತು.

ಕ್ಷಣ ಬಿಟ್ಟು ತಂದೆ, "ನಿಮ್ಮ ತಾಯಿ ಮಾತು ನನಗೂ ಒಪ್ಪಿಗೆ ಅಪ್ಪಾಜಿ," ಎಂದನು.

ಶ್ರೀನಿವಾಸರಾವ್ ಏನೂ ಹೇಳಲಿಲ್ಲ. ಎರಡು ಮೂರು ದಿನದಲ್ಲಿ ಮತ್ತೊಮ್ಮೆ ಅರಮನೆಗೆ ಹೋಗಿ, "ನವಾಬರು ನನ್ನ ಜೀವವನ್ನ ಉಳಿಸಿದ ಉಪಕಾರಿ. ಅವರನ್ನು ತಪ್ಪಿಸಿ ನಾನೊಂದು ಅಧಿಕಾರವನ್ನು ಪಡೆಯುವುದು ಬೇಡ ಎಂದು ಹಿರಿಯರು ಅಪ್ಪಣೆ ಮಾಡಿದರು. ತಮ್ಮ ಆಜ್ಞೆಯನ್ನು ಪಾಲಿಸುವ ಪುಣ್ಯ ನನಗಿಲ್ಲ. ಮನ್ನಿಸಿ ಅನುಗ್ರಹಿಸಬೇಕು," ಎಂದು ರಾಜಮಾತೆಗೆ ತಿಳಿಸಿದನು.

## ೮೪

ನಾಯಕ ಶಾಂತವ್ವ ಪಟ್ಟಣವನ್ನು ಕುರಿತು ಹೊರಟ ವಾರದ ದಿನದಲ್ಲಿ ರಾಣಿ ವೀರಮ್ಮಾಜಿ ನೇಮಯ್ಯನನ್ನು ಕರೆಸಿ, ವಸ್ತಾರೆಯ ಹೆಗ್ಗಡಿತಿ ಬರೆದಿದ್ದ ಕಾಗದವನ್ನು ನೆಪಮಾಡಿಕೊಂಡು, ಮಗನ ಮೇಲೆ, ನೇಮಯ್ಯನ ಮೇಲೆ, ಮಿತಿಮೀರಿದ ಕೋಪವನ್ನು ಕಾರಿದಳು.

"ಪೀಠಕ್ಕೆ ಯಾತ್ರೆಮಾಡಬೇಕು ಎಂತ ನೆಪಮಾಡಿ ನಿಮ್ಮ ಮಗಳು ವಸ್ತಾರೆಗೆ ಹೋಗಿ ನಮ್ಮ ದಾಯಾದಿ ಆ ಹೆಗ್ಗಡಿತಿಗೆ ಹೇಳಿಕೊಟ್ಟು ಪಟ್ಟಣಕ್ಕೆ ಜನವನ್ನು ಕಳುಹಿಸಿ ಅಲ್ಲಿಂದ ಈ ಜನ ಬರುವ ಹಾಗೆ ಮಾಡಿ, ಅವರು ಇಲ್ಲಿಗೆ ಬರುತಾ ವಸ್ತಾರೆಯ ಮೇಲೆ ಬರಲೀ ಅಂತ ಏರ್ಪಾಡು ಮಾಡಿ, ಅವರ ಜೊತೇಲಿ ವಸ್ತಾರೆ ಕರಣೀಕ ಬರಬೇಕು, ಹೆಗ್ಗಡಿತಿಯಿಂದ ಒಂದು ಕಾಗದ ತರಬೇಕೂ ಅಂತ ಗೊತ್ತುಮಾಡಿ, ಏನೆಲ್ಲ ಒಳಸಂಚು ನಡಸಿದಾಳೆ! ಇದು ನೋಡೋಕೆ ಆಶ್ಚರ್ಯವಾಗಿದೆ. ಇಷ್ಟು ಸಣ್ಣ ಹುಡುಗಿ ಇಷ್ಟೆಲ್ಲ ಮಾಡಬಹುದೆ, ಅದಕ್ಕೆ ತೋರಬಹುದೆ? ನನಗನ್ನಿಸತದೆ, ಇದು ನಾಲ್ಕು ಜನ ಸೇರಿ ಮಾಡಿದ ಏರ್ಪಾಡಿರಬೇಕು."

ಹೀಗೆಂದು ರಾಣಿ ವಾದವನ್ನು ಮೊದಲು ಮಾಡಿದಳು.

ಮೈಸೂರ ನಿಯೋಗಿಗಳು ರಾಣಿಯನ್ನು ಕಂಡ ದಿವಸ ನೇಮಯ್ಯ ಹೆಗ್ಗಡಿತಿಯ ಆ ಕಾಗದವನ್ನು ನೋಡಿದನಷ್ಟೆ. ಅದನ್ನು ನೋಡಿದಾಗಲೆ ಅವನಿಗೆ, ಈ ಕಾಗದ ಬಂದದ್ದು ಒಳ್ಳೆಯದಕ್ಕಲ್ಲ, ಎನ್ನಿಸಿತು. ಅದರಲ್ಲಿ

ಕೊಂಕುಮಾತು ಹೆಚ್ಚಾಗಿತ್ತು. ಹೆಗ್ಗಡಿತಿ ಜಾಣೆ; ಈ ಕಾಗದದಲ್ಲಿ ಅವಳ ಜಾಣು ಸ್ವಲ್ಪ ಅತಿಯಾಗಿತ್ತು. ಆ ದಿನದ ಕೆಲಸದಲ್ಲಿ ಈ ಕಾಗದದ ಮಾತು ಮತ್ತೆ ಬರಲಿಲ್ಲ; ನೇಮಯ್ಯ, ಒಳ್ಳೆಯದಾಯಿತು, ಎಂದು ಸಂತೋಷದಿಂದ ಇದ್ದನು. ಆದಿನ ಮಾರನೆಯ ದಿನ ರಾಣಿ ಒಂದು ರೀತಿಯಲ್ಲಿ ದುಗುಡದಿಂದ ಇದ್ದು, ಮಗ ಸೊಸೆ ಪಟ್ಟಣಕ್ಕೆ ಹೋಗ ಬಹುದು, ಅಲ್ಲಿಂದ ಬಂದಮೇಲೆ ಪಟ್ಟ ಕಟ್ಟುವ ಯೋಚನೆ ಮಾಡ ಬಹುದು, ಎಂದಷ್ಟೆ ಹೇಳಿದ್ದಳು. ಒಂದು ಊರಿನಲ್ಲಿ ಒಂದು ಅರಮನೆ ಯಲ್ಲಿ ಇದ್ದುಕೊಂಡು, ಒಂದಾದ ಮೇಲೊಂದು ಬುಸುಗುಟ್ಟಿ ಮಧ್ಯದ ಒಲೆಯನ್ನು ಉರಿಸುವ ಜೋಡಿ ಕೊಲುಮೆಯಂತೆ ಆಗಿದ್ದರು, ಈ ತಾಯಿ, ಈ ಮಗ. ಇವರು ನಾಲ್ಕು ದಿನ ಒಬ್ಬರಿಂದ ಒಬ್ಬರು ದೂರ ಇದ್ದರೆ ಶುಭ ವಾದೀತು ಎಂದು ನೇಮಯ್ಯನಿಗೆ ತೋರಿತು. ಅವನು ನಾಯಕ ಶಾಂತವ್ವ ಇವರ ಪ್ರವಾಸದ ವಿಷಯ ಏರ್ಪಾಡು ಮಾಡಿದ್ದನು. ಕಾಗಗದ ಮಾತು ಬಂದೀತು ಎಂದು ಅವನಿಗೆ ನಿರೀಕ್ಷೆ ಉಂಟು; ಅದು ಈಗ ಬಂದಿತು. ಆದರೆ ಅದು ಬಂದ ರೀತಿ ಇವನ ನಿರೀಕ್ಷೆಯಿಂದ ಬೇರೆಯಾಗಿದ್ದಿತು.

ಹೆಗ್ಗಡಿತಿ ಒಬ್ಬಳ ಮಾತು ತೀರ ತಪ್ಪಿತು ಎಂದು ರಾಣಿ ಹೇಳಿದ್ದರೆ ನೇಮಯ್ಯ "ಹೌದು," ಎಂದುಬಿಡುತ್ತಿದ್ದನು. ಈಗ ಹೆಗ್ಗಡಿತಿಯ ತಪ್ಪಿ ಗಿಂತ ಬೇರೆಯವರ ತಪ್ಪು ಹೆಚ್ಚಾಗಿದ್ದಿತು. ಆ ಬೇರೆಯವರು ಶಾಂತವ್ವ ಮತ್ತು ಅವಳ ದೊಡ್ಡಪ್ಪನಾದ ತಾನು.

ಈ ವಿಷಯದಲ್ಲಿ ತಾನು ತೀರ ನಿರಪರಾಧಿ; ಶಾಂತವ್ವ ತನ್ನಷ್ಟೆ ನಿರಪರಾಧಿ, ಇಂಥ ಕುಟಿಲವನ್ನು ಕಂಡವಳಲ್ಲ. ಆದರೆ ರಾಣಿ ಹೇಳಿದ ಮಾತನ್ನು ಕೇಳಿದವರು, "ಹೌದು," ಎನ್ನಬಹುದು ಎಂಬಂತೆ ಸಂದರ್ಭ ಕೂಡಿದ್ದುವು. ಇದನ್ನು ನೋಡಿ ನೇಮಯ್ಯನಿಗೆ ಆಶ್ಚರ್ಯವಾಯಿತು; ಅವನು "ಇದೇನು ವಿಧಿಯ ವಿಲಾಸ!" ಎಂದುಕೊಂಡನು.

ಮಂತ್ರದಲ್ಲಾಗಲಿ, ಮನೆಮಾತಿನಲ್ಲಾಗಲಿ, ನೇಮಯ್ಯ ಯಾರೇ ಹೇಳುವ ಮಾತನ್ನು ಕೇಳಿ ಪ್ರತಿ ಹೇಳುವ ಮುನ್ನ ಸ್ವಲ್ಪ ಸುಮ್ಮನಿರುವುದು ವಾಡಿಕೆ. ಈ ದಿನವೂ ಅವನು ರಾಣಿಯ ಮಾತಿಗೆ ಒಡನೆ ಉತ್ತರ ಹೇಳದೆ ಎರಡು ನಿಮಿಷ ಸುಮ್ಮನಿದ್ದನು.

ರಾಣಿ, "ಯಾಕೆ ಬಾಯಿ ತೆರೆಯ ಒಲ್ಲಿರಿ? ನಿಜವಾದ ಮಾತಿಗೆ ಏನು ಹೇಳೋದು ಅಂತೀರಾ?" ಎಂದಳು.

ನೇಮಯ್ಯ, "ಅಮ್ಮಾಜಿಯವರು ಕೋಪವಾಗಿದ್ದೀರಿ. ಹೆಗ್ಗಡಿತಿ ಆ ಕಾಗದ ಬರಸಬಾರದಾಗಿತ್ತು; ಅದನ್ನು ನೋಡಿದರೆ ಕೋಪ ಬರೋದೇ ಸರಿ. ಆದರೆ ಅದರ ಜೊತೆಗೆ ತಾವು ಅಪ್ಪಣೆ ಕೊಡಿಸಿರುವ ಮಾತೆಲ್ಲ ಬರೀ ಕೋಪದ ಮಾತು ಆಗತದೆ; ಯಾವುದೂ ನಿಜದಲ್ಲಿ ನಡೆದದ್ದಲ್ಲ."

"ಏನು, ಮೈಸೂರು ಜನ ಬಂದದ್ದು, ವಸ್ತಾರೆ ಮೇಲೆ ಬಂದದ್ದು, ಕರಣೀಕ ಜೊತೇಗೆ ಬಂದದ್ದು?"

"ಇದು ಕಂಡ ಮಾತಾಯ್ತು. ಕಾಣದ ಮಾತು, ತಾವು ಯಾವುದು ಅಪ್ಪಣೆ ಕೊಡಿಸಿದಿರಿ ಅದು, ನಡೀಲಿಲ್ಲ ಅಂದೆ"

"ಇದೇನಪ್ಪ ಒಗಟಿ ಮಾತು ಆಡತೀರಿ?"

"ಅಮ್ಮಾಜಿಯವರೆ, ನಡೆಯದ ಮಾತನ್ನ ನಡೆಯಲಿಲ್ಲ ಅನ್ನುವುದು ಹೊರತಾಗಿ ನಾನು ಬೇರೆ ಏನೂ ಹೇಳಲಾರೆ. ನಾನು ಸಾಕಿದ ಮಗು ನಿಮ್ಮ ಸೊಸೆ: ಇದು ಉಂಟು. ಅಂದರೆ ಇಷ್ಟರಿಂದ ಅವಳ ತಪ್ಪು ನನಗೆ ಒಪ್ಪಲ್ಲ: ಇನ್ನೊಬ್ಬರ ಒಪ್ಪು ತಪ್ಪಲ್ಲ. ನಿಮ್ಮ ಸೊಸೆ ಪೀಠಕ್ಕೆ ಹೋದದ್ದುಂಟು; ಹೆಗ್ಗಡಿತಿ ತಮ್ಮ ನಂಟೂ ಅಂತ ವಸ್ತಾರೇಗೆ ಹೋಗಿ ಬಂದದ್ದುಂಟು. ಆದರೆ ವಸ್ತಾರೆಯಿಂದ ಪಟ್ಟಣಕ್ಕೆ ಜನ ಹೋದರು, ಅದರಿಂದ ಪಟ್ಟಣದ ಜನ ಬಂದರು, ಯಾರೊ ಹೇಳಿ ಹೆಗ್ಗಡಿತೀ ಕೈಲಿ ಪತ್ರ ಬರಸಿದರು. ಹೀಗೆ ಯಾವ ಮಾತು ಅಪ್ಪಣೆ ಆಯ್ತು ಅದು ಅಲ್ಲ ಅಂತೇನೆ. ಸೊಸೆ ನಿಮ್ಮ ಮನೇ ಮಗು; ನೀವದನ್ನ ಹೊಡೆದರೆ ಅದು ನಿಮ್ಮ ಸಂತೋಷ; ನಾ ಅದನ್ನ ಬೇಡ ಅನ್ನೋವನಲ್ಲ. ಆದರೆ ಉಂಟಾದ ಮಾತು ಅಪ್ಪಣೆ ಕೊಡಿರಿ; ನಿಮ್ಮ ಚಿತ್ತಕ್ಕೆ ತೋರಿದ ದಂಡನೆ ಮಾಡಿರಿ. ನಾನು ಬೀಗನಾಗಿ ಮಾತನಾಡತಾ ಇಲ್ಲ; ಅರಮನೆಯ ಸೇವಕನಾಗಿ ಮಾತನಾಡತಾ ಇದೇನೆ."

"ಬಹಳ ದೊಡ್ಡ ಸೇವೆ ಆಯ್ತು ನೇಮಯ್ಯ. ಸೆಗಣಿ ಕಲಸಿ ತಲೆ ಮೇಲೆ ಸುರಿಸುತಾ ಇದ್ದೀರಿ. ಬಸಪ್ಪನಾಯಕರು ನಿಮ್ಮನ್ನ ಬೀಗರು ಅಂತ ಮಾಡಿದ್ದಕ್ಕೆ ಇದೀಗ ಸಾರ್ಥಕ ಆಯಿತು. ಹಾಗಾದರೆ ಈಗ

ನಿಮ್ಮಳಿಯ ಮೈಸೂರಿಗೆ ಹೋಗಿರೋದು ಯಾಕೆ ಅಂತ ನಿಮಗೆ ಗೊತ್ತಿಲ್ಲ?"

"ನಿಮ್ಮೆದುರಿಗೆ ನಾನು ನೋಡಿದ ಕಾಗದ, ಅದಕ್ಕೆ ಸಂಬಂಧಪಟ್ಟ ಮಾತು, ಹೊರತಾಗಿ ಬೇರೆ ಯಾವುದೂ ನನಗೆ ಗೊತ್ತಿಲ್ಲ."

"ನೇಮಯ್ಯ, ಇಲ್ಲವೆ ನಿಮ್ಮಂತೆ ಸತ್ಯಾನ ನುಂಗೊ ಮನುಷ್ಯ ಇನ್ನೊಬ್ಬನಿಲ್ಲ; ಇಲ್ಲವೆ ಲೋಕಕೆಲ್ಲ ಕಾಣೋ ಸಂಗತಿ ನಿಮ್ಮ ಕಣ್ಣಿಗೆ ಕಾಣೋದಿಲ್ಲ. ಇದರಲ್ಲಿ ಯಾವುದೂ ಅಂತ ನಾ ತಿಳೀಲಿ?"

"ನನ್ನ ಕುರುಡ ಅಂತ ಬೇಕಾದರೆ ತಿಳಕೊಳ್ಳಿ ಅಮ್ಮಾಜಿ; ಸುಳ್ಳ ಅಂತ ತಿಳೀಬೇಡಿ. ಸುಳ್ಳ ಅಲ್ಲ. ಕುರುಡಿರಬಹುದು; ಅದನ್ನ ನಾನರಿಯೆ, ಬೇರೆ ಜನ ಹೇಳಬೇಕು."

"ಆಯಿತು; ನಾನು ನನ್ನಿಂದ ಆದಷ್ಟು ಸಹಿಸಿದೆ; ಇನ್ನು ನನ್ನಿಂದ ಆಗೋದಿಲ್ಲ. ಮನೆತನಕ್ಕೆ ಬಂದ ಸಂಸ್ಥಾನ, ಮಗನಿಗಾಗಿ ನೋಡಿ ಕೊಳ್ಳೋಣ, ಅಂದರೆ ಆ ಮಗ ಎಡ್ಡಾದಿಡ್ಡಿ, ಅವನಿಗೆ ಬಂದವರ ಮನೆತನಕ್ಕೆ ಹಗೆಗಳು. ಯಾರು ಸಹಿಸಬೇಕು ಇದನ್ನ? ರಾಜ್ಯ ಅನ್ನೋದು ಪಗಡೆ ಆಟವೆ? ನೀನೊಂದು ಕಾಯಿ ನಡಸು, ನಾನ್ನೊಂದು ಕಾಯಿ ನಡಸತೀನೆ, ಅನ್ನೋದಕ್ಕೆ?"

"ಅಮ್ಮಾಜಿಯವರೆ, ನಾನು ಈಗಾಗಲೆ ಬಹಳ ಮಾತಾಡಿ ಆಯಿತು. ನಿಜವಾಗಿ ಇಷ್ಟು ಮಾತು ನಾನೆಂದೂ ಆಡೋವನಲ್ಲ. ಇದೇ ಕೊನೇ ಮಾತಾಗಿ ಹೇಳತೀನೆ. ನಮ್ಮ ಮನೇ ಮಗಳನ್ನ ನಿಮ್ಮ ಮಗನಿಗೆ ತಗೊಳ್ಳೋದಕ್ಕಿಂತ ಮೊದಲು ನಾನು ಏನಾಗಿದ್ದೆ, ಈಗಲೂ ಅದೇ ಆಗಿದ್ದೇನೆ; ರವೆ ಹೆಚ್ಚಿಲ್ಲ, ರವೆ ಕಡಿಮೆ ಇಲ್ಲ. ಏನೋ, ನೀವು ಮಗಳಂ ತೀರಿ ಅಂತ ನಾನೂ ಮಗಳೂ ಅಂದಿದ್ದೇನೆ; ಆದರೆ ಮಗಳು ನಿಮ್ಮ ಸ್ವತ್ತು. ಹೆಣ್ಣಿನ ಅದೃಷ್ಟಕ್ಕೆ ತವರು ಹೊಣೆ ಅಲ್ಲ. ಈಗ ನಾನು ನಿಮ ಸೊಸೇಗೆ ಏನೂ ಅಲ್ಲ ಅಂತ ತಿಳಿದುಕೊಳ್ಳಿ. ನಾನೇದಾದರೂ ತಪ್ಪು ನಡೆದಿದ್ದರೆ, ನೀವು ರಾಣಿ, ದಂಡಿಸಿ; ನಾನು ಒಪ್ಪಿಕೊಂಡೆ."

"ನಿಮ್ಮನ್ನ ದಂಡಿಸಿ ನಾನು ಬದುಕಬಹುದೊ ನೇಮಯ್ಯ?"

ಆದರೆ ದಂಡಿಸದೆ ಬಿಟ್ಟು ದಾರಿ ಇಲ್ಲ. ತಾವು ಗಳಿಗೆ ಮೊದಲು ಹೇಳಿದ ಮಾತು ನಿಜವಾದರೆ ನನ್ನನ್ನ ನೀವು ನಗರದಲ್ಲಿ ನಿಲ್ಲೋಕೆ ಬಿಡಬಾರದು; ಗಡೀಪಾರು ಮಾಡಬೇಕು."

"ನಗರ ಇರೋ ಗತೀಲಿ ಇದನ್ನ ಯಾರು ಮಾಡಬೇಕು?"

"ಅಮ್ಮಾಜಿ, ಸತ್ಯವಾಗಿ ಹೇಳುತೇನೆ; ನೀವು ತಿಳಿದುಕೊಂಡಿರೋದು ತಪ್ಪು. ನೀವು ಕೋಪದಲ್ಲಿ ಮಾತನಾಡಿದ್ದೀರಿ; ನಾನು ಅನ್ಯಾಯ ತೃಣಮಾಡಿಲ್ಲ, ತೃಣ ಎಣಿಸಿಲ್ಲ. ನಾನು ದೇಶ ಬಿಟ್ಟು ಹೋಗಬೇಕಾದ ಕಾರಣ ತೀರ ಇಲ್ಲ; ಆದರೂ ಹೇಳತೇನೆ, ದಯಮಾಡಿ ಕೇಳಿರಿ. ಸಂಸ್ಥಾನ ಈ ಹೊತ್ತು ನಿಮ್ಮ ಕೈಯಲ್ಲಿದೆ; ಅದಕ್ಕೆ ಯಾವುದು ಒಳ್ಳೆಯದು ಅಂತ ಕೊನೆಯಾಗಿ ನಿಶ್ಚಯ ಮಾಡೋರು ನೀವು. ಉಳಿದವರು ಹತ್ತು ಮಾತು ಹೇಳಬಹುದು; ನಿಶ್ಚಯ ನಿಮ್ಮದು. ಈಗ ನೀವು ತಪ್ಪಿ ತಿಳಿದೊ ಸರಿಯಾಗಿ ತಿಳಿದೊ ನಾನು ನಗರದಲ್ಲಿರೋದೊ ರಾಜ್ಯಕ್ಕೆ ಕೆಡಕು ಅಂತ ಹೇಳಿದರೆ, ಆ ಮಾತು ನಡೀಬೇಕು. ಹೌದೂ ಅಂತ ಹೇಳಿ. ಆಜ್ಞೇನ ಬೇರೆ ಯಾರಿಗೂ ತಿಳಿಸಬೇಕಾಗಿಲ್ಲ: ನಾನೆ, ಯಾರಿಗೂ ಹೇಳದೆ ಏನು ಸಂಗತಿ ತಿಳಿಸದೆ, ಊರು ಬಿಟ್ಟು ಹೊರಟರತೇನೆ. ನಾಳೆ ಈ ಹೊತ್ತಿಗೆ ನಾ ನಗರದಲ್ಲಿಲ್ಲ."

ರಾಣಿ ಉತ್ತರ ಕೊಡಲು ಒಂದು ಕ್ಷಣ ತಡೆದಳು. ನೇಮಯ್ಯ ಕೈಮುಗಿದನು. ಮೇಲಕ್ಕೆದ್ದನು.

"ಅಮ್ಮಾಜಿಯವರಿಗೆ ಈ ಮಾತನ್ನು ಹೇಳುವುದಕ್ಕೆ ಒಡನೆಯೆ ಮನಸ್ಸು ಬರದಿರಬಹುದು. ನಾನು ಆತುರಪಡಿಸುವುದಿಲ್ಲ. ಅಪ್ಪಣೆಯಾದರೆ ಬರುತ್ತೇನೆ; ಮನೆಗೆ ಆಜ್ಞೆ ಕಳಿಸಬಹುದು; ಅದನ್ನು ನಾನು ತಲೆಕೊಟ್ಟು ನಡಸುತ್ತೇನೆ," ಎಂದು ಹೊರಡಲು ಅನುವಾಗಿ ತಿರುಗಿದನು.

ಅವನು ಹಾಗೆ ತಿರುಗಿದಾಗ, ಅವನ ಹಿಂದುಗಡೆಯ ಮಾಡದ ಮೇಲಣ ರಾಣಿಯ ಕೋಣೆಯ ಎರಡು ಗವಾಕ್ಷದಿಂದ ಎರಡು ತಲೆ ಇವರ ಮಾತನ್ನು ಕೇಳುತ್ತಿದ್ದು ಪಕ್ಕನೆ ಸರಿದು ಮರೆಯಾದುವು. ಇವರ ಮಾತನ್ನು ಈ ಜನ ಕೇಳುತ್ತಿದ್ದರೆಂದು ನೇಮಯ್ಯ ತಿಳಿಗನು. ಅವರು ನಂಬಯ್ಯ, ಸಣ್ಣವ್ವ.

ರಾಣಿ, "ಇರಿ ನೇಮಯ್ಯ, ಸ್ವಲ್ಪವಾತಿದೆ; ಆಡಿ ಮುಗಿಸಿ ಹೋಗು ವಿರಂತೆ. ಕುಳಿತುಕೊಳ್ಳಿ," ಎಂದಳು.

ನೇಮಯ್ಯನಿಗೆ ಮತ್ತೆ ಕುಳಿತುಕೊಳ್ಳುವುದು ಇಷ್ಟವಿಲ್ಲ; ಅವನು "ಅಮ್ಮಾಜಿಯವರೆ, ನಾನು ಒಂದು ಸಲಕ್ಕೆ ಇದಕ್ಕಿಂತ ಹೆಚ್ಚಿನ ಮಾತನ್ನು ಜೀರ್ಣಿಸಿಕೊಳ್ಳಲಾರೆ. ನನಗೆ ಅಪ್ಪಣೆ ಕೊಡಬೇಕು," ಎಂದನು.

"ನಿಮ್ಮ ಇಷ್ಟ. ಎಂದರೆ, ಮಾತನ್ನು ನಾನು ಹೇಳದೆ ಆಗುವಂತಿಲ್ಲ. ನಿಮ್ಮಳಿಯ ಸಂಸ್ಥಾನದ ಕ್ಷೇಮಕ್ಕೆ ವಿರೋಧವಾಗಿ ಹೊರಗಿನ ಜನದ ಸ್ನೇಹವನ್ನು ಬಯಸಿದ್ದಾನೆ. ಅವನನ್ನು ಹೀಗೆ ತಪ್ಪುದಾರಿಗೆ ನಿಮ್ಮ ಮಗಳು ಸೆಳೆದಿದ್ದಾಳೆ. ಇದರ ತಪ್ಪು ನಿಮಗೆ ಅಂಟುತ್ತದೊ ಇಲ್ಲವೊ ನಾನು ಕಾಣೆ; ಆದ್ದರಿಂದ ನೀವು ಏನು ಮಾಡಬೇಕು, ಬಿಡಬೇಕು ಅದನ್ನು ಹೇಳಲಾರೆ. ನಾನು ಏನು ಮಾಡತೇನೆ ಅದನ್ನು ತಿಳಿಸತೇನೆ. ಸದ್ಯ ಈ ರಾಜ್ಯವನ್ನ ಕಾಯುವುದು ನನ್ನ ಕೆಲಸ. ನಾನು ಇದಕ್ಕೆ ತಕ್ಕ ಏರ್ಪಾಡು ಮಾಡಿಕೊಳ್ಳಬೇಕು. ನಿಮ್ಮ ಅಳಿಯ ಮೈಸೂರಿನ ಮಾತನ್ನು ಕಟ್ಟಿಕೊಂಡು ಇರುವಷ್ಟುದಿನ ಅವನು ನನ್ನ ಮಗನಲ್ಲ. ನಾನು ಅವನ್ನ ಹೆತ್ತ ತಾಯಿ ಅಲ್ಲ. ನಮಗೂ ಅವನಿಗೂ ಸಂಬಂಧವಿಲ್ಲ. ನೀವು ಏನು ಮಾಡಿದರೂ ಬಿಟ್ಟರೂ ಈ ಮಾತನ್ನ ಮನಸ್ಸಿನಲ್ಲಿ ಇಟ್ಟುಕೊಂಡು ನಡೆಯಿರಿ; ಅಷ್ಟೆ."

ನೇಮಯ್ಯ, "ಅಪ್ಪಣೆ, ಅಮ್ಮಾಜಿಯವರೆ," ಎಂದು ಪ್ರತಿಹೇಳಿ ಬಾಗಿ ಕೈಮುಗಿದು ಹೊರಕ್ಕೆ ಬಂದನು.

## ೮೫

ಮನೆಗೆ ಹೋಗುತ್ತ ನೇಮಯ್ಯ ರಾಣಿಯ ಈ ನಡತೆಯ ಕಾರಣ ಏನು ಎಂದು ತಿಳಿಯಲು ಯತ್ನಮಾಡಿದನು. ಹೀಗಿರಬಹುದೆ, ಹಾಗಿರ ಬಹುದೆ, ಎಂದು ಇತ್ತ ಅತ್ತ ತಿರುವಿಹಾಕಿ ಎಳೆ ಬಿಡಿಸಿ ನೋಡಿದ್ದರಲ್ಲಿ ಅವನಿಗೆ ಸಂದರ್ಭ ಹೀಗೆಂದು ಕಂಡಿತು. ಇದುವರೆಗೆ ಒಂದಲ್ಲ ಒಂದು ಕಾರಣದಿಂದ ಅಧಿಕಾರ ರಾಣಿಯ ಕೈಯಲ್ಲಿ ಇದ್ದಿತು; ಆದು

ನಂಬಯ್ಯನಿಗೆ ಅನುಕೂಲವಾಗಿದ್ದಿತು. ಈಗ ಹಾಗೆಯೇ ಒಂದಲ್ಲ ಒಂದು ಕಾರಣದಿಂದ ನಾಯಕನಿಗೆ ಪಟ್ಟ ಆಗಲೇ ಬೇಕು ಎನ್ನುವ ಸಮಯ ಬಂದಿದೆ. ಪಟ್ಟ ಆದರೆ ರಾಣಿ ಈಗಿನಂತೆ ಕೈಮೇಲಾಗಿರುವುದು ಸಾಧ್ಯ ವಲ್ಲ; ನಂಬಯ್ಯನಂತೂ ಮನೆವಾರ್ತೆಯಾಗಿ ಇರುವುದೇ ಕಷ್ಟವಾಗ ಬಹುದು. ಇವರಿವರ ಸಂಬಂಧ ಏನು ಎಂದು ಬಿಚ್ಚಿನೋಡುವುದು ನೇಮಯ್ಯನ ಮನಸ್ಸಿಗೆ ಇಷ್ಟವಿಲ್ಲ. ಅದು ಹೆಂಗಸಿನ ಮಾತು; ಅದನ್ನು ಗಂಡು ನೋಡಸಲ್ಲ. ಸಂಬಂಧ ಏನೇ ಆದರೂ ನಂಬಯ್ಯನನ್ನು ತೊರೆಯುವುದು ರಾಣಿಗೆ ಇಷ್ಟವಲ್ಲ. ಮತ್ತೆ ಏನೂ ಅಲ್ಲದಿದ್ದರೂ ಅದು ಅವಳ ಪ್ರತಿಷ್ಠೆಗೆ ಕಡಮೆ; ಈ ಅವಮಾನವನ್ನು ಸಹಿಸುವುದು ಅವಳಿಗೆ ಒಪ್ಪಿಗೆ ಇಲ್ಲ. ಈ ಸಂಕಟದಿಂದ ಪಾರಾಗುವುದು ಹೇಗೆ? ಇನ್ನಷ್ಟು ದಿನ ತಾನೇ ಅಧಿಕಾರದಲ್ಲಿರಬೇಕು; ಮುಂದೆ ಹೇಗಾಗುತ್ತದೆಯೊ ನೋಡೋಣ. ಅದಕ್ಕಾಗಿ ಈಗ ಹತ್ತು ದಿನಕ್ಕೆ ಆದರೂ ನಡೆಯುವ ಒಂದು ವ್ಯವಹಾರವನ್ನು ಮೊದಲು ಮಾಡಬೇಕು. ಸಂಸಾರದಲ್ಲಿ ಹೆಂಗಸರು ಹೀಗೆ ಮಾಡುವುದನ್ನು ನೇಮಯ್ಯ ಚಿಕ್ಕಂದು ನೋಡಿದ್ದನು. ಈಗ ಈ ಹೆಂಗಸು ಇದೇ ಯುಕ್ತಿಯನ್ನು ಎತ್ತಿದ್ದಳು. ಬರಿಯ ಒಂದು ಮನೆಯ ಮಾತಾಗಿದ್ದರೆ ಇದರ ಪರಿಣಾಮ ಬಹಳವಲ್ಲ ಎನ್ನಬಹುದು. ಇದು ಈಗ ಒಂದು ಸಂಸ್ಥಾನದ ವ್ಯವಹಾರದಲ್ಲಿ ಬಂದಿದೆ; ಬಹಳ ಅನರ್ಥಕ್ಕೆ ಕಾರಣವಾಗಿದೆ. ಇದನ್ನು ರಾಣಿಯೇ ಯೋಚಿಸಿರಬಹುದು; ಅಥವಾ ನಂಬಯ್ಯ ಅವಳಿಗೆ ಈ ಮಾತನ್ನು ಎತ್ತಿಕೊಟ್ಟಿರಬಹುದು. ನಂಬಯ್ಯ ಬಹುಸೂಕ್ಷ್ಮದ ಮನುಷ್ಯನೇನಲ್ಲ; ಆದರೂ ತನ್ನ ಪ್ರಯೋಜನ ತೊಡಕಿರುವ ಹೊತ್ತಿನಲ್ಲಿ ಇಷ್ಟನ್ನು ತೋರಿಕೊಳ್ಳಬಲ್ಲವನು. ತಾನು ರಾಣಿಯಲ್ಲಿ ಮಾತನಾಡುತ್ತಿರುವಾಗ ಅವನೂ ಸಣ್ಣಪ್ಪನೂ ಇವರ ಮಾತಿಗೆ ಕಿವಿಗೊಡುತ್ತ ಮೇಲಿಂದ ನೋಡುತ್ತಿದ್ದರು. ಇದಕ್ಕೆ ಸಣ್ಣಪ್ಪನೂ ಸೇರಿರಬೇಕು.

ತನ್ನ ಮನೆಗೆ ಬಂದು ಕೋಣೆಯಲ್ಲಿ ಕುಳಿತುಕೊಳ್ಳುವ ವೇಳೆಗೆ ನೇಮಯ್ಯನಿಗೆ ಇಷ್ಟು ವಿಷಯ ಸ್ಪಷ್ಟವಾಯಿತು. ಅದರ ಮೇಲೆ ತಾನು ಏನು ಮಾಡುವುದು ಎನ್ನುವುದು ಸ್ಪಷ್ಟವಾಗಲಿಲ್ಲ. ತನ್ನ ಮರ್ಯಾದೆಯು

ಮಾತನ್ನು ನೋಡಿದರೆ, ತಾನು ಒಡನೆ ಊರು ಬಿಟ್ಟು ಹೊರಡುವುದು ಚೆನ್ನ. ಆದರೆ ತಾನು ರಾಣಿಯ ಮನಸ್ಸಿಗೆ ಒಪ್ಪದ ಬರಿಯ ಒಬ್ಬ ನಗರವಾಸಿ ಅಲ್ಲ. ತಾನು ಊರು ಬಿಟ್ಟು ಹೊರಟರೆ ಊರೆಲ್ಲ ಏಕೆ ಎನ್ನುತ್ತದೆ; ಊರಿನಲ್ಲಿ ಕ್ಷೋಭೆ ಆಗುತ್ತದೆ; ರಾಣಿ ಏನಾದಾಳು? ನಂಬಯ್ಯ ಏನಾದಾನು? ಇದು ತನ್ನ ಸ್ವಾಭಿಮಾನದ ಅತಿರೇಕದ ಊಹೆಯೇನಲ್ಲ; ಈ ಹಿಂದೆ ನಗರದ ಜನ ರಾಣಿಗೆ ಮಲೆತು, ಇವನೊಂದಿಗೆ ಬಿರುಸು ಮಾತನಾಡಿದ್ದು ಉಂಟು. ನಾಳೆ ಊರಲ್ಲಿ ಗೊಂದಲ ಆದರೆ ಅದನ್ನು ತಡೆಯುವರು ಯಾರು? ನಾಯಕನೂ ಊರಲ್ಲಿಲ್ಲ. ಇರುವ ಜನ, ಸಮಯ ಸಿಕ್ಕಿದರೆ ಜಗಳ ಮಾಡಿಯೇವು, ಎನ್ನುವ ದುಡುಕು ಜನ. ಆದದ್ದಾಗಲಿ, ಇದಕ್ಕೆ ನಮ್ಮ ಹೊಣೆಯೇನು, ನಮಗೆ ಯಾವುದು ಸರಿ ಅದನ್ನು ಮಾಡಬೇಕು, ಎನ್ನಬಹುದೊ? ಊರಿನ ಕ್ಷೇಮಕ್ಕೆ ಯಾರು ಹೊಣೆ? ಬರಿಯ ರಾಣಿಯೆ? ರಾಣಿಗೆ ಬುದ್ಧಿ ಕೆಟ್ಟಿತ್ತು; ತನ್ನ ಹೊಣೆ ಯಿಲ್ಲವೆ? ಉಂಟು ಎನ್ನುವುದಾದರೆ ಈಗ ಏಕೆ ಇಲ್ಲ? ಈಗಲೂ ಅವಳಿಗೆ ಬುದ್ಧಿ ಕೆಟ್ಟಿದೆ ಅಷ್ಟೆ. ನಾಯಕರು ಆಳಿ ಬೆಳಸಿದ ಊರು; ತಮ್ಮವರು ಬಾಳಿ ಬೆಳಸಿದ ಊರು. ಸಣ್ಣ ದೊಡ್ಡ ಜೀವ ಒಂದು ಕಡೆಗೆ ಒಂದು ಲಕ್ಷ ಇದೆ. ಯಾವನೇ ಒಬ್ಬ ನನ್ನ ಹೊಣೆ ಏನು ಎಂದು ಇದನ್ನು ಬಿಟ್ಟು ಹೋಗಬಹುದೆ? ಬಿಡಲಿಲ್ಲ, ನನ್ನ ಹೊಣೆ ಹೌದು ಎಂದು ಎಷ್ಟರ ವರೆಗೆ ಇರಬಹುದು?

## ೮೬

ನೇಮಯ್ಯ ಕೈಮುಗಿದು ಹೊರಟ ಒಡನೆ ರಾಣಿ ಮಾಡದ ಮೇಲಣ ತನ್ನ ಕೋಣೆಗೆ ಹೋದಳು. ನಂಬಯ್ಯ ಸಣ್ಣವ್ವ ನಗುತ್ತ ಅವಳನ್ನು ಸ್ವಾಗತಿಸಿದರು. ಒಂದು ಯುದ್ಧದಿಂದ ಗೆದ್ದು ಬಂದವಳಂತೆ ರಾಣಿ ಹೆಮ್ಮೆಯಿಂದ ಹೆಜ್ಜೆ ಇಡುತ್ತ ಹೋಗಿ ಮಂಚದ ಮೇಲೆ ಕುಳಿತಳು.

ಸಣ್ಣವ್ವ ಬಂದು ಪಕ್ಕದಲ್ಲಿ ನಿಂತಳು; ನಂಬಯ್ಯ ಸ್ವಲ್ಪ ದೂರದಲ್ಲಿ ಗೋಡೆಯ ಹತ್ತಿರ ನಿಂತನು.

ರಾಣಿ ಸಣ್ಣವ್ವನನ್ನು ಎಡದ ಕೈಯಿಂದ ಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ನಂಬಯ್ಯನಿಗೆ, "ಕುಳ್ಳಿರು ನಂಬಯ್ಯ," ಎಂದಳು. ನಂಬಯ್ಯ ಕುಳಿತುಕೊಂಡನು. "ಒಡತಿಯ ಕಡೆಗೆ ಮುಖಮಾಡಿ ತಲೆಯೆತ್ತಿ ತುಂಬ ಮೆಚ್ಚಿಕೆಯಿಂದ, ಭಕ್ತಿಯಿಂದ, ಅವಳನ್ನು ನೋಡಿದನು. ರಾಣಿ, "ಸರಿಯಾಗಿ ಹೇಳಿದೆ ಅಲ್ಲ?" ಎಂದು ಕೇಳಿದಳು. ಪ್ರಶ್ನೆ ಇಬ್ಬರಲ್ಲಿ ಯಾರಿಗೂ ಆಗಬಹುದು.

ಸಣ್ಣವ್ವ, "ಚೆನ್ನಾಗಿ ಹೇಳಿದಿರಿ ಅಮ್ಮಾಜಿ. ಮುದುಕ ಕಕಮಕ ನಾದ," ಎಂದಳು.

ನಂಬಯ್ಯ, "ಕಕಮಕನಾಗದೆ? ಮಾಡಿದ ತಪ್ಪು ಬಯಲಿಗೆ ಬಂತು ಅಂತ ಜೀವ ನಡಗಿರಬೇಕು! ನಮ್ಮ ಕಪಟ ಇನ್ನೊಬ್ಬರಿಗೆ ತಿಳಿಯೋದಿಲ್ಲ ಅಂತ ಇವರ ಯೋಚನೆ. ನಮಗೊ ಇಂತವರನ್ನ ನೋಡಿ ನೋಡಿ ಪಾಟ," ಎಂದನು.

ರಾಣಿ: ಮೈಸೂರಿಂದ ಬಂದಮೇಲೆ ಪಟ್ಟದ ಮಾತು ಅಂದಿದ್ದೇವಿ. ಈಗ ಅದು ಮುಂದಕ್ಕೆ ಹೋಯಿತು.

ನಂಬಯ್ಯ: ಮುಂದಕ್ಕೆ ಹೋಗದೆ? ಅವ್ವನ್ನೇ ಗದ್ದರಿಸಿಕೊಳ್ಳೊ ಮಗ ಗದ್ದಿಗೆ ಏರಿ ಊರನ ಎಂಥ ಬಾಳಿಸೋದು? ಗಂಡಾದ ಆಯ್ತು? ಅನುಭವಬೇಡ? ಬುದ್ಧಿಬೇಡ? ಒಡತಿಯೋರದು ಒಂದು ಮಾತಿಗೆ ನಮ್ಮಾತು ನೂರಕ್ಕೆ ಸರಿಗಟ್ಟೋಲ್ಲ. ರಾಜ್ಯ ಆಳೋದು ಸುಮ್ಮನೇನಾ?

ಸಣ್ಣವ್ವ: ಮುದುಕನಿಗೆ ಪೂರಾ ಆಶೆ ಇತ್ತು, ಮಗಳು ರಾಣಿ ಆಗಿ ಬಿಡತಾಳೆ ಅಂತ. ಆ ಅಳುಮೂತಿ ರಾಣಿ ಆಗಿ ರಾಜ್ಯ ಒಂದು ಉಳೀಬೇಕೆ? ಅಮ್ಮಾಜಿಯವರೂ ರಾಣಿ, ಇವಳೂ ಒಂದು ರಾಣೀನೆ? ರಾಣಿ ಅನ್ನೋದು ಎಷ್ಟು ಸದರ!

ನಂಬಯ್ಯ: ಅದೇನು ಮುದುಕನ ಮಾತಿನ ನಯ! ತಾನೇ ರಾಜ; ಇಲ್ಲ ರಾಜನಿಗೆ ಹೆಚ್ಚು. ಅದೇನು ಬೆಣ್ಣೆ ಬೆಣ್ಣೆಯಾಗಿ ಮಾತು! ಅಳಿಯ ಗದ್ದಿಗೆ ಏರಿ ತಾನು ಎಲ್ಲಾ ಆದೇನೂ ಅಂತ ಕನಸು ಕಾಣತಾ ಇದ್ದ. ಪಾಪ, ಅದು ಮುಗೀತು.

ರಾಣಿ: ನಾಯಕರು ಹಾಸಿಗೆ ಹಿಡಿದು ಮಲಗಿದ್ದಾಗ ಬೆಕ್ಕಿನ ಹಂಗೆ ಹತ್ತಿರ ಸಾರಿ ಬಾಲ ಆಡಿಸಿ ಮಿಯಾಂವ್ ಅಂದು, ಮಗಳನ್ನ ಕೊಟ್ಟು ಸಂಬಂಧ ಮಾಡಿಕೊಂಡ. ಯಾರು ಕಾಣರು ಈ ತಂತ್ರ? ಈ ಮಂತ್ರ, ಮಾಟ? ಮಾಡಿಬಿಟ್ಟರೆ ಮುಗೀತು ಅಂತ ತಿಳಿದ. ನನ್ನಾಶೆ ಮಣ್ಣು ಕೂಡಿಸಿದ. ನನ್ನಗಿಣೀನ ಕೊಟ್ಟು ಮಗನ ಸಂಸಾರ ಕಟ್ಟಿ ಬಾಳೋದ ನೋಡೋಣ ಅಂದರೆ ನನಗಿಲ್ಲವಾಯ್ತು. ಅದೂ ಒಂದು ಹೆಣ್ಣು, ಇದೂ ಒಂದು ಹೆಣ್ಣೆ? ಎಲ್ಲಿ ನನ್ನ ಚಿನ್ನ, ನಿನ್ನ ಮುಖ ಇತ್ತತಾ!

ಹೀಗೆಂದು ರಾಣಿ ಸಣ್ಣವ್ವನ ಗಲ್ಲವನ್ನು ಹಿಡಿದು ತನ್ನ ಕಡೆಗೆ ತಿರುಗಿಸಿಕೊಂಡಳು; ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು; "ಈ ಹುಡುಗಿ ಶಾಂತವ್ವನಿಗಿಂತ ಎಷ್ಟೋ ಚೆಲುವೆ," ಎಂದುಕೊಂಡಳು.

ನಂಬಯ್ಯ ಸಂನ್ಯಾಸಿಯಲ್ಲ. ಸಂನ್ಯಾಸಿ ಆಗಿದ್ದರೂ ಈ ಸನ್ನಿವೇಶ ಅಪಾಯದ್ದು. ಅವನು ರಾಣಿಯ ಕಡೆ, ಆ ಹುಡುಗಿಯ ಕಡೆ, ದೃಷ್ಟಿ ಯಿಟ್ಟು ನೋಡಿದನು; ಹುಡುಗಿ ಬಹು ಚೆಲುವೆ ಎಂದು ಕಂಡು ಕೊಂಡನು.

ರಾಣಿ ಏನೋ ಮುಖ ತಿರುಹಿ ಅವನ ಕಡೆ ನೋಡಿದಳು; ಅವನ ಕಣ್ಣಿನಲ್ಲಿ ಮಿನುಗುತ್ತಿದ್ದ ಆಸೆಯನ್ನು ಗುರುತಿಸಿದಳು. ಅವಳಿಗೆ ಅವನ ಮೇಲೆ ಕೋಪ ಬಂದಿತು. ಆದರೂ ಅವಳು ಏನೂ ಹೇಳಲಿಲ್ಲ; ಕ್ಷಣ ಬಿಟ್ಟು, "ಹೋಗು ನಂಬಯ್ಯ, ಸವಣೂರಿಗೆ ಮರಾಟೆ ವಾಡಿಗೆ ಎರಡು ಕಾಗದ ಬರೆದುತಾ; ಈ ಮೈಸೂರ ಜನ ನಮ್ಮ ಮೇಲೇನಾದರೂ ಕೈಮಾ ಡಿದರೆ ನಿಮ್ಮ ನೆರವು ಬೇಕು ಎಂತ ಅವರಿಗೆ ತಿಳಿಸು. ಬಂದ ಸೈನ್ಯವನ್ನ ನಾವು ನೋಡಿಕೊಳ್ಳುತೇವೆ, ಮೇಲೆ ಲಕ್ಷ ಹೊನ್ನು ಸಲ್ಲಿಸುತೇವೆ, ಎಂತ ಹೇಳು," ಎಂದಳು.

ನಂಬಯ್ಯ ಎದ್ದು ಹೊರಕ್ಕೆ ಹೋದನು.

ರಾಣಿ ಸಣ್ಣವ್ವನಿಗೆ, "ಈ ನಂಬಯ್ಯ ಅಂತಾ ಒಳ್ಳೇವನಲ್ಲ. ನೀನು ಅವನ ಹತ್ತಿರ ಅತಿ ಸಲಿಗೆ ಮಾಡಬೇಡ," ಎಂದಳು.

ಸಣ್ಣವ್ವ ಇದರರ್ಥವನ್ನು ಚೆನ್ನಾಗಿ ಬಲ್ಲಳು. "ನಿನ್ನ ನಂಬಯ್ಯ ನಿನಗಿರಲಿ. ನಾನು ಅವನನ್ನು ಏನುಮಾಡಿಕೊಂಡೇನು," ಎಂದು

ಅವಳು ನಿಜವಾಗಿ ಉತ್ತರ ಹೇಳಬೇಕು; ಹೇಳುವಂತಿರಲಿಲ್ಲ. ಅವಳು, "ನಿಮ್ಮ ತಾವಿರತ ಯಾರು ನನ್ನ ಏನು ಮಾಡಿಯಾರು ?" ಎಂದಳು.

ರಾಣಿ, "ನಾಯಕ ನಿನ್ನ ಎಂಥದೂ ಮಾತೂ ಆಡಿಸಲಿಲ್ಲವೆ ತಂಗಿ?" ಎಂದಳು.

"ಅದೇನೂ ಕಾಣಲಿಲ್ಲ ಅಮ್ಮಾಜಿ. ಏನೋ ಒಂದು ತೆರನಾಗಿ ನೋಡತಾರೆ. ಬೇಡ ಅಂತ ಇಲ್ಲ; ಬೇಕು ಅಂತ ಇಲ್ಲ. ಇಷ್ಟಕ್ಕೆ ಅವರು ಮನೆಯಾಗೆ ಇದ್ದದ್ದು ಬಾಳ ಇಲ್ಲ."

"ಸರಿ, ಇನ್ನು ಅವಳು ಬೇರೆ."

"ಹೌದು. ಕಂಡದ್ದು ಮೊದಲು ಸವತಿ ಅಂತಲೇ ನಡಕೊಂಡರು ಚಿಕ್ಕ ರಾಣಿ."

"ಸಣ್ಣವ್ವ, ಅವಳನ್ನ ನೀನು ಚಿಕ್ಕರಾಣಿ ಅನ್ನಬೇಡ. ದೇವರು ಒಲಿದರೆ, ನೀನು ಚಿಕ್ಕರಾಣಿ ಆದೀಯಂತೆ. ಅವಳು ನನಗೆ ಒಲ್ಲದ ಸೊಸಿ. ಚಿಕ್ಕರಾಣಿ ಅಲ್ಲ. ಅವ ಮದುವಿಯಾದರೇನಾಯಿತು, ನಾವೊಲ್ಲದಾಗ ?"

"ಅವಳೀ ಅಲ್ಲ, ಅವಳ ಊಳಿಗ ಇದ್ದಾಳಲ್ಲ, ಆ ಕೆಂಚಿ, ಅವಳದೇನು ಪೆಡಸಾರ!"

"ಯಾಕೆ? ಏನು ಮಾಡಿದಳು ?"

"ಹವ್ವ! ಯಾತರದು ಮಾಡಲಿಲ್ಲ? ನಾನೇನೊಂದು ಊಳಿಗಕ್ಕೆ ಕಡಮೆ ಅವಳ ಕಣ್ಣಲಿ. ಮನೆಯಾಗ ನಡೀತಿರತಾಳೆ; ನಾ ಎದುರಿಗೆ ಬಂದರೆ, ನಾನೊಂದಕಂಬ ಅಲ್ಲ, ಕಸಪರಿಗೆ ಅಲ್ಲ, ಅಂತ ಹೋಗತಿರತಾಳೆ; ಮೊಖತಿರಿಗಿ ನೋಡೋದಿಲ್ಲ."

"ಚೆನ್ನಾಯಿತು."

"ಒಂದಿನ ನಾನು ಸುಮ್ಮನೆ ಶಾಂತವ್ವನತಾಕೆ ಹೋದಿ. ಬಾಗಿಲಾಗ ನಿಂತವಳನ್ನ ನೋಡಿ ಈ ಕೆಂಚಿ ತನ್ನೊಡತೀಗೆ, ಅವ್ವ, ಅದ್ಯಾರೊ ಬಂದಿದ್ದಾರೆ, ಅಂತಾಳೆ; ನಾ ಯಾರೂ ಅಂತ ಇವಳಿಗೆ ತಿಳೀಲೆ ತಿಳೀದು."

"ಸರಿ!"

"ಶಾಂತವ್ವ ಯಾರೋ ಅದು ಅಂತ ತಿರಿಗಿ ನೋಡಿದಳು. ನೋಡಿದರೂ ಅನ್ನಲಾ ಅವ್ವ?"

"ಏನೂ ಬೇಡ. ನೀನಂದ ಹಂಗೇ ಅನ್ನು."

"ತಿರುಗಿ ನೋಡಿದಳು. ನೋಡಿ, ಅಯ್ಯೋ ಸಣ್ಣವ್ವ, ಬಾ ಸಣ್ಣವ್ವ, ಎಂದು ನನ್ನ ಕರೆದಳು. ನನ್ನ ಯಾರೊ ಅಂದದ್ದು ಅವಳಿಗೂ ಸಮಾಧಾನ ಇಲ್ಲ."

"ಇಲ್ಲದೆ ಏನು? ನಿನ್ನೆದುರಿಗೆ ಹಂಗೆ ತೋರಿಸಿಕೊಂಡಳು. ಈ ಹೊತ್ತಲ್ಲ ನಾಳೆ ನೀ ರಾಣಿ ಆಗತಿ ಅಂತ ಅವಳು ಕಾಣಳೇನು? ನಿನ್ನ ಇಲ್ಲಿ ಕರತಂದಿರೋರು ಯಾರು?"

"ಇರಬಹುದು, ಅವ್ವಾಜಿ. ಅಂದರೆ ಹತ್ತುಸಲ ಕಂಡಾಗಲೂ ನೀವೂ ಅಂತ ಬಾಯಲ್ಲಿ ಒಂದು ತಪ್ಪುಮಾತೂ ಸುಳಿಸಲಿಲ್ಲ. ಹೊಂತ ಗಾತಿ. ಬಲೆ ಮುಚ್ಚು, ಬಲೆ ಮರೆ! ಮರ್ಮ ಇಷ್ಟೂ ಅಂತ ಅಲ್ಲ."

"ಮುಚ್ಚಲಿ ಬಿಡು. ಮುಚ್ಚೋದುಳ್ಳವರು ಮುಚ್ಚಿ ತಾನೇ ಇಡ ಬೇಕು. ಅಂದರೆ ಇವಳು ಬರದೆ ಇದ್ದಿದ್ದರೆ ನೇಮಯ್ಯ ನಮ್ಮ ಕೈಯಾ ಗಿರತಾ ಇದ್ದ. ಇವರು ಬಂದು ಈಗ ಭಾಗಾದಿ ಆದ."

"ನಿನ್ನ ಒಲ್ಲೆ, ನಿಮ್ಮಪ್ಪನ ಮನೆಗೆ ಹೋಗು ಅಂತ ಕಳಿಸಬಾರದೆ ಅವ್ವಾಜಿ? ಇಷ್ಟು ಬೇಸರ ಮಾಡಿಕೊಂಡಾದರೂ ಯಾಕಿಟ್ಟುಕೊಂಡಿರ ಬೇಕು?"

"ಮಗ ಉಂಟಲ್ಲ."

ಇಷ್ಟು ಹೊತ್ತಿಗೆ ನಂಬಯ್ಯ ಬಾಗಿಲಲ್ಲಿ ಕಾಣಿಸಿಕೊಂಡನು. ರಾಣಿ ಸಣ್ಣವ್ವನಿಗೆ, "ಇನ್ನು ನೀನು ಹೋಗು ನನ್ನ ಚಿನ್ನ! ನಾನು ಕೂತು ಎರಡು ಕಡತ ಬರಸಬೇಕು," ಎಂದಳು. ಸಣ್ಣವ್ವ ಹೊರಟು ಹೋದಳು.

## ೮೭

ನಂಬಯ್ಯ ಸವಣೂರು ನವಾಬರಿಗೆ, ಮರಾಟೆ ವಾಡಿಗೆ ಕಳುಹಿಸ ಬಹುದಾದ ಓಲೆಯ ನಾಲ್ಕು ಮಾತನ್ನು ಗುರುತು ಹಾಕಿಕೊಂಡು ಬಂದಿದ್ದನು. ರಾಣಿ ಒಡನೆ ಅದಕ್ಕೆ ಗಮನ ಕೊಡಲಿಲ್ಲ. "ಭಾಸ್ಕರಯ್ಯ ಹಿಂದಕ್ಕೆ ಬಂದನೆ? ನೋಡಿಸಬೇಕು ನಂಬಯ್ಯ" ಎಂದಳು.

ನಂಬಯ್ಯ: "ಅದಕ್ಕೆ ಜನಾನ ಬಿಟ್ಟಿದೀನಿ. ಹೊಂಬುಚದ ಪಾಳೇಗಾರ ಇವನಿಗೆ ಹೇಳಿಕಳುಹಿಸಿದ್ದುಂಟು, ಇವ ಇಲ್ಲಿಂದ ಹೋದದ್ದುಂಟು. ಮೈಸೂರು ಕಡೆಯಿಂದ ಒಬ್ಬ ಮನುಷ್ಯ ಬಂದದ್ದು ಉಂಟು. ಚೆನ್ನಗಿರಿ ಹಾಸಿ, ಶಿವಮುಗ್ಗಿ ಕುಂಸಿ ಹಾಸಿ ಲಿಂಗಣ್ಣಯ್ಯನ ಸಂಬಂಧ ಯಾರು ಏನು ಅಂತ ವಿಚಾರಿಸಿಕೊಂಡು ಹೊಂಬುಚಕ್ಕೆ ಬಂದನಂತೆ. ಭಾಸ್ಕರಯ್ಯ ಲಿಂಗಣ್ಣಯ್ಯನ ತಮ್ಮ, ನಗರದಾಗೇ ಇದ್ದಾನೆ ಅಂತ ತಿಳೀತು. ಹಿಂದೆ ಹೊಂಬುಚದ ಪಾಳೇಗಾರ ಅರಮನೇಗೆ ಮಲೆತಿದ್ದೋನು ಅನ್ನುವುದೂ ತಿಳೀತು. ಇವರು ಕಲೆತರು. ಆಮೇಲೆ ಏನಾಯಿತೊ ತಿಳೀದು. ಇಷ್ಟರಲ್ಲೆ ವರ್ತಮಾನ ಬರಬೇಕು."

"ನಾಯಕ ಹೇಳಿ ಕರಸಿದ್ದರೆ ಈಗ ಯಾಕೆ ಬಂದಿದ್ದಾನು?"

"ಅದು ಹೆಂಗೆ ತಿಳಿಬೇಕು ಒಡತಿಯೋರೆ? ಮೈಸೂರು ಕಡೆ ಮನುಷ್ಯ; ನಾಯಕರಿಂಗೆ ನೆರವಾಗಿ ಮಾತನಾಡಿದ; ಲಿಂಗಣ್ಣಯ್ಯನ ತಮ್ಮನ್ನ ಕರಸಿಕೊಂಡ: ಇಷ್ಟು ನಮಗೆ ತಿಳಿದದ್ದು."

"ಅಂತೂ ನಾ ಹೆತ್ತ ಈ ಮಗ ನನ್ನ ಇಷ್ಟು ಪಾಡು ಪಡಿಸತಾನಲ್ಲ! ಏನು ನನ್ನ ಹಣೇ ಬರಹಾನೊ!"

"ಅದಷ್ಟೊ ಕೆಟ್ಟಬರಹ, ಒಡತಿಯೋರೆ; ಏನೂ ಅಡ್ಡಿಯಿಲ್ಲ."

"ಏಗೋದೇ ಕಷ್ಟವಾಗಿದೆಯಲ್ಲ? ಬಿಡುಗಡೇನೇ ಕಾಣವೊಲ್ಲದೇ."

"ಒಡತೀರು ಒಮ್ಮೆ ಯೋಚನೆ ಮಾಡಿದ್ದಿರಿ, ಇಕ್ಕೇರೀಗೆ ಹೋಗಿ ನಿಂತು ಬಿಡೋದು ಅಂತ. ಮಾಡಿಬಿಡೋದುತಾನೆ?"

"ಬೇರೆ ಏನೂ ಆಗಲಿಲ್ಲ ಅಂದರೆ ಹಂಗೇ ಮಾಡೋದು. ಅರ್ಧ ಸೀಮೆ ನಮ್ಮ ಮನವಾಶ್ತೀಗೆ ಬೇಕು ಅಂದರೆ ನೇಮಯ್ಯ ಒಪ್ಪತಾರೆ. ಅಂದರೂ ನಗರ ಬಿಟ್ಟು ನಡೆಯೋ ಪಾಡಾಯ್ತಲ್ಲ!"

"ಬೇಡ ಅಂದರೆ ನೀವು ಇಲ್ಲೇ ಇರೋ ಹಂಗೆ ನಾ ಮಾಡಬಲ್ಲೆ, ಒಡತಿಯೋರೆ."

"ಏನ್ಮಾಡತಿ?"

"ಅದೆಲ್ಲ ನಿಮಗೆ ಬೇಡಿ. ಏನೋ ಮಾಡತೇನೆ. ನಿಮ್ಮ ಮನಸ್ಸಿನ ಕುತ್ತಾನ ಇಳಿಸತೇನೆ."

"ಏನೋ ಮಾಡಿ ?"

"ಹೌದು; ಏನೋ."

"ವಯ್ಯಾ ನಂಬಯ್ಯ, ಅಂತಾ ಮಾತನಾಡಬೇಡ, ಜೋಕೆ. ಸಾವಿರ ಮಾಡಿದರೂ ನಾಯಕ ನನ್ನ ಮಗ, ಕಂಡ್ಯಾ ?"

ರಾಣಿ ತನ್ನ ಅರ್ಥ ಗ್ರಹಿಸಿದಳೆಂದು ನಂಬಯ್ಯ ತಿಳಿದನು. ಅವಳು ಆ ಯೋಚನೆ ಬೇಡವೆಂದು ಬಾಯಲ್ಲಿ ಹೇಳಿದ್ದನ್ನು ಕೇಳಿದನು. ಆದರೆ ಅವಳ ಮನಸ್ಸು ತನ್ನ ಸಲಹೆಗೆ ಒಪ್ಪಿಗೆ ಕೊಟ್ಟಿದೆಯೆಂದು ಅವನ ನಿಶ್ಚಯವಾದ ತಿಳಿವಳಿಕೆ. ಅವನು ಆ ಮಾತನ್ನು ಮುಂದರಿಸಲಿಲ್ಲ.

ರಾಣಿ ನಂಬಯ್ಯ ಗುರುತು ಹಾಕಿ ತಂದಿದ್ದ ಹತ್ತು ಮಾತನ್ನು ಓದಿಸಿ ಕೇಳಿದಳು. ಅದರಲ್ಲಿ ಒಂದು ಮಾತು ಅರ್ಧ ಮಾತನ್ನು ತಿದ್ದ ಹೇಳಿದಳು. ಅವನು ಹೋಗಿ ಓಲೆಗಳನ್ನು ಬರೆದು ತರುತ್ತೇನೆ ಎಂದು ಎದ್ದನು.

ರಾಣಿ, "ಇರಲಿ. ನಾಳೆ ಅಲ್ಲವೆ, ಕಳುಹುವುದು? ಇಕ್ಕೇರಿಗೆ ಹೋಗೋದಾದರೆ ಏನು ಏರ್ಪಾಡು ಮಾಡುವುದು? ಸ್ವಲ್ಪ ನೋಡಿ ಹೇಳು," ಎಂದಳು.

ಇದು ತನ್ನನ್ನು ಹತ್ತಿರ ಕುಳ್ಳಿರಿಸಿಕೊಳ್ಳುವುದಕ್ಕೆ ರಾಣಿ ತೆಗೆದ ಒಂದು ನೆಪ ಎಂದು ನಂಬಯ್ಯನ ತಿಳಿವಳಿಕೆ. ಈ ಹೆಂಗಸಿನ ಸ್ವಭಾವದ ಯಾವ ಎಳೆಯೂ ಅವನಿಗೆ ತಿಳಿಯದೆ ಇರಲಿಲ್ಲ. ಅವನು ಆ ಒಂದೊಂದು ಎಳೆಯನ್ನೂ ಅನುಸರಿಸಿ ರಾಣಿಯ ಜೀವನದ ಮುಖ್ಯವಾದ ಅವಲಂಬನದ ಸ್ಥಾನವನ್ನು ಗ್ರಹಿಸಿದ್ದನು; ಅದರಿಂದಲೆ ಒಬ್ಬ ಗಣ್ಯ ವ್ಯಕ್ತಿಯಾಗಿದ್ದನು. ಈಗಲೂ ಅವಳ ಇಷ್ಟದಂತೆ ಅವಳು ಆಡಿದ ಮಾತಿಗೆ ಮಾತನ್ನು ಕೂಡಿಸುತ್ತ, ತನ್ನ ಅದೃಷ್ಟವನ್ನು ಬೆಳೆಯುವುದರಲ್ಲಿ ತೊಡಗಿದನು.

ರಾಣಿಯ ಹತ್ತಿರದ ಮನುಷ್ಯನಾಗಿ ನಂಬಯ್ಯ ಹತ್ತು ಕಡೆ ಹತ್ತು ಜನಕ್ಕೆ ಸಹಾಯ ನೀಡುವ ಸ್ಥಿತಿಯಲ್ಲಿ ಇದ್ದನು. ಇಂಥ ಸಹಾಯದ ಮರೆಯಲ್ಲಿ ಅನ್ಯಾಯ ಮಾಡಿ, ಲಾಭಪಡೆದು, ಅಧಿಕಾರಿಯ ಇಷ್ಟದಂತೆ ನಡೆದುಕೊಳ್ಳುವ ಜನ ಯಾವ ಕಾಲದಲ್ಲೂ, ಎಂಥ ಊರಿನಲ್ಲೂ,

ಕೆಲವರು ಇರುತ್ತಾರೆ. ನಂಬಯ್ಯ ನಾಡಲ್ಲೆಲ್ಲ ಇಂಥ ಜನವನ್ನು ಮಾಡಿಕೊಂಡಿದ್ದನು; ಅವರ ಮೂಲಕ ಎಲ್ಲಿ ಏನು ನಡೆದರೂ ಸುದ್ದಿಯನ್ನು ತರಿಸಿಕೊಳ್ಳುತ್ತಿದ್ದನು. ಅಂಥ ಸುದ್ದಿಯನ್ನು ರಾಣಿಗೆ ತಿಳಿಸಿ, ತಾನು ನೇಮಯ್ಯನಿಗಿಂತ ಎಷ್ಟು ಶಕ್ತ ಎನ್ನುವುದನ್ನು ತೋರಿಸಿಕೊಳ್ಳುತ್ತಿದ್ದನು. ನಾಯಕ ರಾಜನಾದರೆ ತನಗಿಲ್ಲಿ ಸ್ಥಳವಿಲ್ಲ; ಲಿಂಗಣ್ಣಯ್ಯನಂತೆ ತಾನು ಸೆರೆಯಲ್ಲಿರಬೇಕಾಗಬಹುದು. ರಾಣಿ ಎಲ್ಲ ಕಾಲಕ್ಕೂ ನಾಯಕನನ್ನು ತಳ್ಳಿಡುವುದು ಸಾಧ್ಯವಲ್ಲ; ಬಹಳವೆಂದರೆ ರಾಜ್ಯವನ್ನು ಭಾಗಮಾಡಿಕೊಂಡು ಒಂದು ಭಾಗಕ್ಕೆ ಒಡತಿಯಾಗಿ ನಿಲ್ಲಬಹುದು. ರಾಣಿಗೆ ಮೊದಲು ಈ ಸೂಚನೆಯನ್ನು ಮಾಡಿದ್ದವನು ಇವನೇ. ಈಗ ಅದು ಅವಳಿಂದ ಬಂದ ಸೂಚನೆ ಎಂಬಂತೆ ನಟಿಸುತ್ತಿದ್ದನು. ಈ ಸೂಚನೆ ಮೊದಲು ಮೂಡಿದ ಕಾಲಕ್ಕೆ ಮಗನನ್ನು ತೀರಿಸಿ ತಾಯಿಗೆ ಸಂತೋಷಮಾಡಿಯೇನು ಎಂದು ಯೋಚಿಸಲು ಇವನಿಗೆ ಧೈರ್ಯವಿರಲಿಲ್ಲ. ಈಚೆಗೆ ರಾಣಿ ಆಡಿದ್ದ ಕೆಲವು ಕಟುವಾದ ಮಾತಿನಿಂದ ಅವಳಿಗೆ ಈ ಸಲಹೆ ಕೂಡ ರುಚಿಸಬಹುದೆಂದು ಇವನಿಗೆ ತೋರಿದ್ದಿತು; ಅವನು ಅದನ್ನು ಮಾಡಿದ್ದನು, ರಾಣಿ ಅದನ್ನು ಬಹಳವೇನೂ ಖಂಡಿಸುವುದಿಲ್ಲ ಎಂದು ಗ್ರಹಿಸಿದ್ದನು. ಏನಿಲ್ಲವೆಂದರೆ ಅರ್ಧ ರಾಜ್ಯ, ಏರ್ಪಾಡು ಸರಿಹೋದರೆ ಒಟ್ಟು ರಾಜ್ಯ, ರಾಣಿಯ ಕೈಯಲ್ಲಿ ನಿಲ್ಲುವಂತೆ ತಾನು ಮಾಡಬೇಕು. ರಾಣಿ ಅಂತೂ ತನ್ನ ಕೈಯಲ್ಲಿದ್ದಾಳೆ.

ಹೀಗೆ ಯೋಚಿಸುತ್ತ ತನ್ನ ಬಾಳಿನ ಅಂತಿಮ ಧ್ಯೆಯವನ್ನೇ ಸಾಧಿಸಿದಂಥ ಒಂದು ಸಂತೋಷದಿಂದ ನಂಬಯ್ಯ ರಾಣಿಯೊಡನೆ ಸಲ್ಲಾಪ ಮಾಡುತ್ತ ಕುಳಿತನು.

## ೮೮

ಉಜನಿ ಬಂದು ನಾಲ್ಕು ಕಡೆ ಮಾಡಿದ ಕೆಲಸ ನಂಬಯ್ಯನ ಪಕ್ಷದ ಮನುಷ್ಯರಿಂದ ಅವನಿಗೆ ತಿಳಿದು ಬಂದಿತೆಂದು ಈ ಮೊದಲೆ ಕಂಡಿದೆ. ನಿಜದಲ್ಲಿ ಇದರ ಮಾತು ರಾಜ್ಯದ ವಾಡಿಕೆಯ ಕ್ರಮದಲ್ಲಿ ನೇಮಯ್ಯನ ಕಿವಿಗೂ ಬಂದಿದ್ದಿತು. ಆದರೆ ಖಚಿತವಾಗಿ ನಂಬುವಂತೆ ಬಂದಿರಲಿಲ್ಲ.

ಬೀದಿಯಲ್ಲಿ ಮಾತನಾಡುವವರು, ಹೀಗಾಯಿತಂತೆ, ಹಾಗಾಯಿತಂತೆ, ಎನ್ನಬಹುದು; ರಾಣಿಯ ಕಿವಿ ಕಚ್ಚಿ ಏಕಾಂತ ಹಾಡುವವರು ಕೇಳಿದ್ದನ್ನೆಲ್ಲ ಸುದ್ದಿ ಎಂದು ಕಿವಿಗೆ ಮುಟ್ಟಿಸಬಹುದು. ಆಡಳಿತದ ಹೊಣೆ ಹೊತ್ತವನು ಸುದ್ದಿ ಸರಿಯೆಂದು ನಿಶ್ಚಯಮಾಡಿಕೊಂಡಲ್ಲದೆ ಮಾತನಾಡುವಂತಿಲ್ಲ. ನೇಮಯ್ಯ ಈ ಸುದ್ದಿಯನ್ನು ಅಷ್ಟಾಗಿ ನಂಬಿರಲಿಲ್ಲ; ಆದ್ದರಿಂದ ಆದರ ಪ್ರಸ್ತಾಪವನ್ನು ಯಾರಲ್ಲಿಯೂ ಎತ್ತಿರಲಿಲ್ಲ.

ನಂಬಯ್ಯನಿಗೆ ನೇಮಯ್ಯನಿಗೆ ಗುಪ್ತವಾರ್ತೆ ಎಂದು ಬಂದರೂ ಶಿವಮುಗ್ಗಿ, ಕುಂಸಿ, ಹೊಂಬುಚದಲ್ಲಿ ರಾಜಾ ರಾಮಚಂದ್ರನ ಮಾತು ಅಷ್ಟೇನೂ ಗುಟ್ಟು ಮಾತಾಗಿ ನಡೆಯುತ್ತಿರಲಿಲ್ಲ. ಇದರ ಕಾರಣ, ಉಜನಿ ಅದನ್ನು ಗುಟ್ಟಾಗಿ ಇರಿಸಬೇಕೆಂದು ಪ್ರಯತ್ನಮಾಡದೆ ಇದ್ದದ್ದು. ಅವನು ಬಿದನೂರ ಗಡಿಯನ್ನು ಮುಟ್ಟುತ್ತಿದ್ದ ಹಾಗೆಯೇ ಇಲ್ಲಿಯ ಅರಮನೆಯ ಪರಿಸ್ಥಿತಿಯನ್ನು ತಿಳಿದುಕೊಂಡನು; ರಾಣಿಗೆ ವಿರೋಧ ವಾಗಿ ಮಾತನಾಡಿ ನಾಯಕನ ಪಕ್ಷದವರನ್ನು ಕೈಗೆಹಾಕಿಕೊಳ್ಳುವುದು ಸುಲಭ, ಎಂದು ಕಂಡುಕೊಂಡನು. ತಾನು ಬಂದಿರುವುದು ಒಬ್ಬ ಹಿರಿಯರ ಪರವಾಗಿ, ನಾಯಕನ ಹಿತವನ್ನು ಸಾಧಿಸುವುದಕ್ಕೆ, ಎಂಬಂತೆ ಮಾತನಾಡಿ, ತನಗೆ ನೆರವಾಗಬಹುದಾದ ಇಬ್ಬರ ಹೆಸರನ್ನು ತಿಳಿದು ಕೊಂಡನು. ಹೊಂಬುಚಕ್ಕೆ ಬಂದು ಪಾಳೆಯಗಾರನ ಮೂಲಕ ಭಾಸ್ಕರ ಯ್ಯನನ್ನು ಕರಸಿ, ಬಿದನೂರಿನ ಪ್ರಜೆಗಳ ಕೆಲವು ಪ್ರಮುಖರಿಂದ ಎಂಬಂತೆ, ಒಂದು ಪತ್ರವನ್ನು ಬರಸಿ ತೆಗೆದುಕೊಂಡನು. ಆದನ್ನು ಕೈಯಲ್ಲಿಟ್ಟುಕೊಂಡು, ಪಾಳೆಯಗಾರನನ್ನು ಜೊತೆಮಾಡಿಕೊಂಡು ಚಿತ್ರ ದುರ್ಗಕ್ಕೆ ಹೋದನು.

ಹೈದರನಿಗೆ ಬಿದನೂರ ಪ್ರಯಾಣಕ್ಕೆ ಒಂದು ಕಾರಣವಾಗುವಂತೆ ಈ ಕಾಗದ ಬೇಕಾಗಿದ್ದಿತು. ಉಜನಿ ಇದನ್ನು ಸಾಧಿಸಿದ್ದಾಯಿತು. ಜೊತೆಗೆ ಇದರಿಂದ ಮುಂದೆ ಹೈದರನಿಗೆ ಒಂದು ತೊಡಕು ಉಂಟಾಗ ಬಾರದು ಎನ್ನುವುದು ಅವನ ಉದ್ದೇಶ. ನಾಯಕನಿಗೆ ಸಹಾಯ ದೊರೆ ಯುತ್ತದೆಯೆಂದು ಈ ಕಾಗದ ಬರೆದುಕೊಟ್ಟವರು ಆಮೇಲೆ, ನಾಯಕನಿಗೆ ಸಹಾಯ ಮಾಡಿದ್ದಾಯಿತು, ಇನ್ನು ಹೊರಡು, ಎನ್ನುವಂತಾಗಬಾರದು.

ಅದಕ್ಕೆ ಅವರು ಕ್ಷೇಮದಿಂದಿರಬಾರದು. ಎಂದರೆ ಅವರು ಇಂಥಾ ಕಾಗದ ಬರೆದುಕೊಟ್ಟರು ಮುಂತಾದ ಮಾತು ಹೊರಕ್ಕೆ ತಿಳಿದು ರಾಣಿ ಅವರಿಗೆ ತೊಂದರೆ ಕೊಟ್ಟರೆ ಹೈದರನಿಗೆ ಅಡ್ಡಿ ಇಲ್ಲ. ಇದರಿಂದ ರಾಜ್ಯ ದಲ್ಲಿ ಕ್ಷೋಭೆ ಆದರೂ ಒಳ್ಳೆಯದೆ. ಬಾ ಎಂದು ಕರೆದು ಬರೆದ ಕಾಗದದ ಜೊತೆಗೆ ನಾಡಿನ ಅವ್ಯವಸ್ಥೆಯೂ ನವಾಬನಿಗೆ ಆಹ್ವಾನ ಕೊಟ್ಟಂತಾ ಯಿತು. ಹೀಗೆ ರಾಜಾ ರಾಮಚಂದ್ರ ತನ್ನ ಒಡೆಯ ಒಪ್ಪಿಸಿದ ಕಾರ್ಯ ವನ್ನು ಹದಿನಾರಾಣೆಗಿಂತ ಹೆಚ್ಚಾಗಿ ಸಾಧಿಸಿದ್ದನು.

ಹಿಂದು ಮುಂದು ತೋರದ ಇವನನ್ನು ಕುರಿತ ಸುದ್ದಿಯ ವಿಚಾರ ಏನಿರಬಹುದು ಎಂದು ಇತ್ಯರ್ಥಮಾಡಿಕೊಳ್ಳುವುದಕ್ಕೆ ಮೊದಲೆ ನೇಮ ಯ್ಯನಿಗೆ ರಾಣಿಯ ಅಪ್ರಸಾದ ತಾಗಿತ್ತು. ರಾಣಿಯ ಉದ್ದೇಶವೇನು, ತನ್ನ ಕರ್ತವ್ಯ ಏನು, ಎಂದು ಅವನು ಆ ದಿನವೆಲ್ಲ ಸಾವಧಾನವಾಗಿ ಯೋಚಿಸಿದನು. ಅರಮನೆಯಲ್ಲಿ ರಾಣಿಗೆ ಇವನಿಗೆ ನಡೆದ ಮಾತು, ಎಲ್ಲ ಇಂಥ ರಹಸ್ಯದಂತೆ, ಇಲ್ಲಿ ನಡೆದ ಒಂದು ಗಳಿಗೆಯಲ್ಲಿ ಊರಿನಲ್ಲಿ ಹತ್ತು ಜನರ ಕಿವಿಗೆ ಮುಟ್ಟಿತು. ಈ ಹತ್ತು ಜನರಲ್ಲಿ ರಾಮಾಶಾಸ್ತ್ರಿ ಒಬ್ಬ. ಅವನು ಸಂಜೆಯವರೆಗೆ ಸುಮ್ಮನಿದ್ದು, ದೀಪ ಹಚ್ಚಿದಮೇಲೆ ನೇಮಯ್ಯನ ಮನೆಗೆ ಬಂದನು.

## ೮೯

ನೇಮಯ್ಯ ಅವನನ್ನು ಪ್ರೀತಿಯಿಂದ ಬರಮಾಡಿಕೊಂಡು, "ಏನು ಸಂಗತಿ, ದಯಮಾಡಿದಿರಿ?" ಎಂದನು.

ರಾಮಾಶಾಸ್ತ್ರಿ, "ಈದಿನ ನಿಮ್ಮ ಅಮ್ಮಾಜಿಯವರು ನಿಮ್ಮೊಂದಿಗೆ ಆಡಿದ ಮಾತಿನ ಸಂಗತಿ ಸ್ವಲ್ಪ ಕಿವಿಗೆ ಬಿತ್ತು. ಅದು ಬಹಳ ಗೋಪ್ಯವಲ್ಲ ದಿದ್ದರೆ ನನಗೆ ತಿಳಿಯಬಹುದೆ ಎಂತ ಕೇಳುವುದಕ್ಕೆ ಬಂದೆ," ಎಂದನು.

"ಗೋಪ್ಯ ಎಂದರೆ ಗೋಪ್ಯ. ಅಲ್ಲ ಎಂದರೆ ಅಲ್ಲ. ನಿಮ್ಮಿಂದ ಬಚ್ಚಿಡುವ ಮಾತೇನಿದೆ? ಅಥವಾ ಬಚ್ಚಿಡಬೇಕು, ಕಿವಿಗೆ ಮುಟ್ಟಿದಮೇಲೆ ಬಚ್ಚಿ ಏನನ್ನ ಇಡುವುದು?"

"ಹಾಗಾದರೆ ಸಂಗತಿ ಏನು? ತಿಳಿಸುತೀರಾ?"

"ರಾಜ್ಯದ ಮಾತಾಗಿ ಹೇಳದೆ ಇದ್ದರೂ ಸ್ವಂತದ ಮಾತಾಗಿ ನಿಮಗೆ ಹೇಳಬಾರದ್ದು ಏನೂ ಇಲ್ಲ. ರಾಣಿಯವರು ಮಗನ ಮೇಲೆ, ಸೊಸೆಯ ಮೇಲೆ, ನನ್ನ ಮೇಲೆ, ಬಹಳ ಬೇಸರವಾಗಿದ್ದಾರೆ; ನಾನು ಸಂಸ್ಥಾನಕ್ಕೆ ದ್ರೋಹಿ ಅಂತ ತಿಳಿದಿದ್ದಾರೆ. ಮಗ ಗಾದಿ ಏರಿದರೆ ಸಂಸ್ಥಾನ ಹಾಳಾಗತ್ತೆ, ತಾವೇ ಅದನ್ನ ಇನ್ನಷ್ಟು ದಿನ ನಡಸಬೇಕು ಅಂತ ನಿಶ್ಚಯಿಸಿದ್ದಾರೆ."

"ಸರಿ. ನೀವು ಮಂತ್ರಿಯಾಗಿರಬಹುದು ಅಂತಾರೊ, ನಂಬಯ್ಯನ್ನ ಮಂತ್ರಿ ಮಾಡಿಕೊಳ್ಳುತ್ತಾರೊ ?"

"ಹೆಂಗಸಿನ ಮಾತು ಶಾಸ್ತ್ರಿಗಳೆ, ಕುಲ್ಲು ನುಡಿಯುವುದು ಬೇಡ. ಯಾವ ಹೆಣ್ಣಾದರೇನು, ನಮ್ಮ ಒಂದು ತಾಯಿ, ಒಂದು ತಂಗಿ."

ಶಾಸ್ತ್ರಿಗೆ ನೇಮಯ್ಯನ ಈ ಶುದ್ಧಮನಸ್ಸನ್ನು ಕಂಡು ಮೆಚ್ಚಿಗೆ ಅಷ್ಟಿಷ್ಟಲ್ಲ. ಅವನು ತುಂಬ ಸಂತೋಷದಿಂದ ನೇಮಯ್ಯನನ್ನು ಒಪ್ಪಿ ನೋಡುತ್ತ, "ನೀವೊಬ್ಬರು ನೇಮಯ್ಯ, ದೇವರಂಥ ಮನುಷ್ಯ. ಯಾವ ಹೊತ್ತಿನಲ್ಲಿ ಮುಟ್ಟಿದರೂ ಅಪಶ್ರುತಿ ನುಡಿಯೋದಿಲ್ಲ. ಹೋಗಲಿ ಬಿಡೀ ಅಪ್ಪ, ನನ್ನ ಮಾತು ತಪ್ಪಾಯಿತು. ದ್ರೋಹೀನ ಏನು ಮಾಡತಾರಂತೆ ?" ಎಂದನು.

"ಅವರೇನೂ ಹೇಳಲಿಲ್ಲ, ನಾನೇ ಹೇಳಿದೆ. ಆಳುವವರ ಮನಸ್ಸಿಗೆ ಕೇಡಿಗನಾಗಿ ಕಂಡು ನಾಡಲ್ಲಿ ನಿಲ್ಲುವುದು ನನಗೆ ಸರಿಯಲ್ಲ; ನಿಲ್ಲಿಸಿ ಕೊಂಡು ಸುಮ್ಮನಿರುವುದು ಇವರಿಗೆ ಸರಿಯಲ್ಲ. ನನ್ನ ಗಡೀಪಾರು ಮಾಡಬೇಕು, ಹೇಳಿದ ಒಡನೆ ಹೊರಡತೇನೆ, ನಾಳೆ ಬೆಳಗಾಗ ಊರಲ್ಲಿ ಇರೋದಿಲ್ಲ, ಎಂದೆ."

"ಅಪ್ಪಣೆ ಕೊಟ್ಟರೊ ?"

" . . . . "

"ಕೊಡಲಿಲ್ಲ. ಒಳ್ಳೇದು. ಹೆಂಗಸಿಗೆ ಬುದ್ಧಿ ತೀರಾ ಕೆಟ್ಟಿಲ್ಲ. ಯಾರನ್ನ ಬೇಕಾದರೆ ಏನಾದರೂ ಮಾಡಲಿ, ರಾಣಿ ಉಳೀಬಹುದು. ನಿಮ್ಮನ್ನ ನವಿಲುಗರಿಯಿಂದ ಸೋಕಿದರೆ ಅವರಿಗೆ ಪರಿಣಾಮ ಇಲ್ಲ. ಇದನ್ನ ಅಮ್ಮಾಜಿ ಬಲ್ಲರು. ಅದಕ್ಕೇ ಅಪ್ಪಣೆ ಕೊಟ್ಟಿಲ್ಲ."

"ನಾನೇನಂಥ ದೊಡ್ಡ ಪದಾರ್ಥ ಅಲ್ಲ ಶಾಸ್ತ್ರಿಗಳೆ! ಆದರೆ ಇದು ಬರೀ ರಾಣಿ ಮಾತು ನನ್ನ ಮಾತು ಆಗೋದಿಲ್ಲ. ಅವರು ಅಪ್ಪಣೇನೇ ಮಾಡಿದರು; ನಾನೇ ಹೊರಟೆ. ಜನ ಅವರಿಗೆ ಮಲೆತರು; ನನ್ನ ಎತ್ತಿ ಹಿಡಿದರು. ಇದರಿಂದ ಆದದ್ದೇನು? ನೋಡಿ, ಊರಿನಲ್ಲಿ ಎರಡು ಲಕ್ಷ ಜನ ಒಂದು ಯೋಚನೆ ಇಲ್ಲದೆ ಬಾಳತಾ ಇದೆ; ದೊಡ್ಡವರು ನಾಲ್ಕು ಜನ ಇದಾರೆ, ದೇಶಾನ ಕಾದುಕೊಳ್ಳತಾರೆ, ಅಂತ. ದೊಡ್ಡವರು ಅನ್ನೊ ನಾವು ನಮ್ಮ ಮರ್ಯಾದೇನ ದೊಡ್ಡದು ಮಾಡಿಕೊಂಡು, ನಮ್ಮ ಒಳ್ಳೇತನಾನ ಸ್ಥಾಪಿಸಿಯೇವು ಅಂದರೆ ಈ ಎರಡು ಲಕ್ಷ ಜನ ಜೇನು ಗೂಡನ್ನ ಕಲಕಿದ ಹಂಗೆ ತಳಮುಳಪಡುತದೆ. ಇದು ಬೇಡಾ ಅಂತ ಏನಾದರೂ ಸಹಿಸಿಕೊಂಡಿರೋದು. ಮಡಲಲ್ಲಿ ಮಲಗಿರೋ ಮಗು ಏಳಬಾರದು ಅಂದರೆ ತಾಯಿ ಮಿಸಕದೆ ಕುಳಿತಿರಬೇಕು."

"ಈ ನಿಮ್ಮ ಬುದ್ಧೀನ ಅಮ್ಮಾಜಿ ಬಲ್ಲರು, ನೇಮಯ್ಯ! ನೀವು ಹೀಗಂತೀರಿ, ಏನು ಮಾಡಿದರೂ ಸಹಿಸಿಕೊಳ್ಳತೀರಿ, ಅಂತ ತಿಳಿದೇ ಅವರು ಹೀಗಾಡುತಿರೋದು. ಸಹಿಸೋದಿಲ್ಲ ಅಂತ ತಿಳಿದ ನನ್ನಂತ ವರನ್ನ ಹತ್ತಿರಕ್ಕೆ ಬರಗೊಡೋದಿಲ್ಲ. ಅವರಿಗೆ ಬೇಕಾದ್ದೇನು? ಅವರಿಷ್ಟ ನಡೀಬೇಕು; ನೀವದನ್ನ ನಡಸಬೇಕು. ಅವರು ನಡಸಿದರೆ ಜನ ದೂರತದೆ; ನೀವು ನಡಸಿದರೆ ಹೊಣೆ ನಿಮ್ಮದು. ಗಡೀಪಾರು ಮಾಡಿ ಅಂತ ಹೇಳಿ ದಿರಲ್ಲ, ನೇಮಯ್ಯ, ಬೇರೆ ಒಂದು ಮಾತು ಹೇಳಿ."

"ಬೇರೆ ಮಾತು ನನಗೆ ತೋರಲಿಲ್ಲ ಶಾಸ್ತ್ರಿಗಳೆ."

"ನೀವು ಬುದ್ಧಿ ಇಲ್ಲದ ಹೆಂಗಸು, ಊರ ಜನ ನಿಮ್ಮನ್ನ ನಗತಾ ಇದೆ, ಮಗನಿಗೆ ಪಟ್ಟಕಟ್ಟಿ ಮರೆಯಾಗಿ ನಿಲ್ಲಿ, ಅನ್ನಿ. ಆಗ ನೀವು ನಿಜ ವಾಗಿ ಆಡಬೇಕಾದ ಮಾತು ಆಡತೀರಿ."

"ನನ್ನ ಮಗಳನ್ನ ನಾಯಕರಿಗೆ ಕೊಟ್ಟು ಮದುವೆ ಮಾಡಿ, ದೇವರು ನನ್ನ ಬಾಯಿ ಕಟ್ಟಿಬಿಟ್ಟರು ಶಾಸ್ತ್ರಿಗಳೆ."

"ಇದನ್ನ ನಾ ನಿಮಗೆ ಹತ್ತುಸಲ ಹೇಳಿದ್ದೇನೆ ನೇಮಯ್ಯ. ಸಂಬಂ ಅಂತ ಪಕ್ಷಪಾತ ಮಾಡಬಾರದು. ಸಂಬಂಧ ಅಂತ ಹೆಚ್ಚು ಶಿಕ್ಷೆಮಾಡ ಬಾರದು."

ನೇಮಯ್ಯ ಪ್ರತಿ ಹೇಳಲಿಲ್ಲ. ಕ್ಷಣಬಿಟ್ಟು ರಾಮಾಶಾಸ್ತ್ರಿ, "ಮೈಸೂರ ಪರವಾಗಿ ರಾಜ ಅನ್ನೋವನೊಬ್ಬ ಬಂದು ಏನೇನೊ ಮಾಡಿದಾ ಅಂತ ಸುದ್ದಿ ಬಂದಿದೆಯಲ್ಲ; ಇದನ್ನೀಗ ಯಾರು ನೋಡಿಕೊಳ್ಳೋರು ?" ಎಂದನು.

ನೇಮಯ್ಯ ಶಾಸ್ತ್ರಿಯ ಕಡೆ ದೃಷ್ಟಿಸಿ ನೋಡಿದನು. "ಇದು ಸುದ್ದಿಯಾಗಿದೆಯೇನು ?" ಎಂದು ಕೇಳಿದನು.

"ನೀವು ಧರ್ಮಿಷ್ಠರಾದದ್ದಕ್ಕೆ ಇದೂ ಒಂದು ಗುರುತು. ಸಂಬಂಧವಿಲ್ಲದವರೆಲ್ಲ ಈ ಮಾತನಾಡತಾ ಇದ್ದಾರೆ. ನಿಮ್ಮ ಹತ್ತಿರ ಯಾರೂ ಇದನ್ನು ಎತ್ತವೊಲ್ಲರು."

"ಆಯಿತಲ್ಲ. ಇದಿನ್ನೆಷ್ಟು ದಿವಸ ? ಲೋಕಾನ ಕಾಯೋ ದೇವರು ನಾಡನ್ನ ಕಾಯತಾರೆ. ನಾನಿನ್ನು ಮಾಡತಕ್ಕದ್ದೇನೂ ಇಲ್ಲ."

ನೇಮಯ್ಯ ಈ ಮಾತನ್ನು ತೀರ ನಿಸ್ಸಹಾಯದ ಆಳದಿಂದ ಹೇಳಿದನು. ಅದೃಷ್ಟ ತನ್ನನ್ನು ಏಕೆ ಇಂಥ ತೊಡಕಿನಲ್ಲಿ ಸಿಕ್ಕಿಸಿತು ?

"ಭಾಸ್ಕರಯ್ಯ ಅವನೊಂದಿಗೆ ಮಾತನಾಡೋದಕ್ಕೆ ಹೋಗಿದ್ದ ಅಂತ ತಿಳೀತು. ಅವನು ತಿರುಗಿ ಈ ಊರಿಗೆ ಬಂದಿಲ್ಲ. ಸುದ್ದಿ ಹರಡಿರೋದನ್ನ ನೋಡಿದರೆ ಅವನು ಬರದೆ ಇರೋದು ಒಳ್ಳೇದು. ಬಂದನೇ ನಾವು ನೀವೇ ಅವನನ್ನ ಸೆರೇಗೆ ಹಾಕಬೇಕು. ಅಣ್ಣನ ಜೊತೆಗೆ ತಮ್ಮನೂ ಬಂದಿಯಾಗಿ ಕೊಳೆತಾನು. ಇಷ್ಟಕ್ಕೆ ನಿಜವಾಗಿ ತಪ್ಪು ಅವರದಲ್ಲ. ಅವರಿಗನ್ಯಾಯ ಮಾಡಿ, ಅವರ ಮುಖಾನ ಬೇರೆ ಕಡೆಗೆ ತಿರುಗಿಸಿದೆವಲ್ಲಾ, ನಮ್ಮದೇ ತಪ್ಪು."

"ಹೌದು. ಲಿಂಗಣ್ಣಯ್ಯನ್ನ ಸೆರೆಗೆ ಹಾಕಿದಾಗಲೆ ಆಗದೂ ಅಂತ ನಾವು ತಡೀಬೇಕಾಗಿತ್ತು. ಇಷ್ಟು ದೂರ ಬಿಟ್ಟು ಕೊಟ್ಟದ್ದು ಈಗ ಈ ಕೇಡಿಗೆಲ್ಲ ಇಟ್ಟುಕೊಂಡಿತು."

"ಗಂಟು ಬಿಚ್ಚಿದ ಜಡೆ ಅಂತಾರೆ ನೇಮಯ್ಯ, ಇದನ್ನ ಹೆಣ್ಣುಮಕ್ಕಳು. ಗಂಟಿತ್ತೇ, ಜಡೆ ಇತ್ತು; ಅದು ಬಿಚ್ಚಿತು; ಹೆಣೆದಿರೋದು ಸ್ವಲ್ಪ ಸ್ವಲ್ಪ ಬಿಡಿಸಿಕೊಳ್ಳುತಾ ಬರುತ್ತೆ. ಲಿಂಗಣ್ಣಯ್ಯನ ಮಾತಿಗೆ ಏನು ಹೇಳತೀರಿ, ಅದನ್ನೇ ನಾಯಕರ ಮಾತಿಗೂ ಹೇಳಬೇಕು. ೨

ಹೋದ ಹತ್ತು ದಿನದಲ್ಲಿ ಮಗನ್ನ ಗಾದಿಮೇಲೆ ಕೂರಿಸಿದ್ದರೆ ಎಷ್ಟು ಚೆನ್ನಾಗಿರತಾ ಇತ್ತು ! ಯಾಕಪ್ಪ ತಡೆದೆವು? ಏನು ಅಂತ ನೋಡಿ ತಡೆದೆವು? ಈಗೇನಾಗಿದೆ? ಆ ಹೊತ್ತು ಕೂರಿಸಿದ್ದರೆ ಕೂತೇ ಬಿಡತಿದ್ದ ಹುಡುಗ. ಈಹೊತ್ತು ಕೂರಿಸೋಣ ಅಂದರೆ ಎಲ್ಲಿಲ್ಲದ ವಿಘ್ನ. ಜಡೆ ಬಿಚ್ಚಿದ್ದಲ್ಲ, ನೇಮಯ್ಯ, ತಲೆ ಕೆದರಿಕೊಂಡಿದೆ."

ನೇಮಯ್ಯ ನಿಟ್ಟುಸಿರು ಬಿಟ್ಟನು. ಕ್ಷಣ ಬಿಟ್ಟು, "ನೀವು ಬಂದದ್ದು ತುಂಬ ಉಪಕಾರ ಶಾಸ್ತ್ರಿಗಳೆ, ದಿನವೆಲ್ಲ ತೊಳಲಿದೆ, ದಾರಿ ಕಂಡಿರಲಿಲ್ಲ. ನೀವು ಬಂದು ಏನು ಮಾಡೋದು ಅಂತ ನಿಶ್ಚಯಮಾಡಿ ಕೊಟ್ಟಿರಿ," ಎಂದನು.

"ನಿಜವಾಗಿ? ನಿಶ್ಚಯ ಆಯಿತೆ?"

"ಆಗಿದೆ."

"ನೀವು ಮಾಡಿದ ನಿಶ್ಚಯ ಒಳ್ಳೆಯದೇ ಆಗಿರಬೇಕು. ಸಂತೋಷ ನೇಮಯ್ಯ. ಇಷ್ಟಾಗಲಿ ಅಂತಲೇ ನಾ ಬಂದೆ."

"ಬೇಸರದಿಂದ ನಾಡು ಬಿಟ್ಟುಹೋದೇನು ಅಂದೆ; ಹೋಗೋದಿಲ್ಲ. ಈ ಜನ ತೊಂದರೆಗೆ ಸಿಕ್ಕೀತು; ಹಂಗೆ ನಾ ನಡೆಯಲಾಗದು. ಆದದ್ದೆಲ್ಲ ಒಳ್ಳಿತು ಅಂತ ನಾಯಕರು ಬರೋದನ್ನ ಕಾಯಬೇಕು. ನಾಯಕರು ಬಂದದ್ದೆ ಸಂಗತಿ ಎಲ್ಲ ಹೇಳಿ, ನಿಮ್ಮನ್ನ ಅವರಿಗೊಪ್ಪಿಸಬೇಕು; ನಾನು ಬದಿಗೆ ನಿಲ್ಲಬೇಕು. ಸಂಸ್ಥಾನಕ್ಕೆ ಯಾವುದು ಕ್ಷೇಮ ಅಂತ ಯೋಚನೆ ಮಾಡಿ ಅವರು ನಡಸಿಕೊಳ್ಳಬೇಕು."

"ನೀವು ಬದಿಗೆ ನಿಂತೀರಿ. ಜನ ಒಪ್ಪೋದಿಲ್ಲ. ನಾಯಕರ ನಂಟೂ ಅನ್ನೋದನ್ನ ಸಂಕೋಚಕ್ಕೆ ಕಾರಣಮಾಡಿಕೊಳ್ಳಬೇಡಿ. ಅಷ್ಟೇ ಜನ ಹೇಳೋದು."

ಶಾಸ್ತ್ರಿ ಬಂದು ಮಾತನಾಡಿದ್ದರಿಂದ ನೇಮಯ್ಯನ ಮನಸ್ಸು ನಿರ್ಧಾರಕ್ಕೆ ಬಂದದ್ದು ನಿಜ. ನಂಟನಾದ ತಾನು ತಾಯಿ ಮಕ್ಕಳ ಮಧ್ಯೆ ಬಾಂಧವ್ಯ ಉಳಿಸುವುದಕ್ಕೆ ಮಾಡಿದ ಪ್ರಯತ್ನ ದೇಶಕ್ಕೆ ಹಾನಿತಂದಂತೆ ಅವನಿಗೆ ಕಂಡಿತು. ಬಾಂಧವ್ಯ ಉಳಿಯಲಿಲ್ಲ; ಸಂಸ್ಥಾನವೂ ಕೆಟ್ಟಿತು. ಬೇರೆಯ ಜನ ತನ್ನ ಸ್ಥಾನದಲ್ಲಿದ್ದಿದ್ದರೆ ಈ ತೊಂದರೆ ಆಗುತ್ತಿರಲಿಲ್ಲ.

ರಾಮಾಶಾಸ್ತ್ರಿ ನೇಮಯ್ಯನ ಸಂಗಡ ಇನ್ನು ಸ್ವಲ್ಪ ಹೊತ್ತು ಮಾತನಾಡುತ್ತಿದ್ದು, "ಇಲ್ಲಿ ನಡೆದಿರುವ ಸಂಗತಿಯನ್ನ ನಾಯಕರಿಗೆ ತಿಳಿಸುವುದು ಬೇಡವೆ?" ಎಂದು ಕೇಳಿದನು.

ನೇಮಯ್ಯ: ತಿಂಗಳಲ್ಲಿ ಬರತಾರೆ, ಮಧ್ಯೆ ತಿಳಿದು ಏನುಮಾಡಬಹುದು? ಬರಲಿ ಬಿಡಿ. ಹಬ್ಬದ ಸುದ್ದಿಯೇ ಮುಂದಾಗಿ ತಿಳಿಸುವುದಕ್ಕೆ?

ರಾಮಾಶಾಸ್ತ್ರಿ "ಅದೂ ಸರಿ" ಎಂದು, ಮತ್ತೆ ಕಾಣುವುದಾಗಿ ಹೇಳಿ ತನ್ನ ಮನೆಗೆ ಹೋದನು.

## ೬೦

ನಾಯಕ ಶಾಂತವ್ವ ಪಟ್ಟಣದಿಂದ ಹಿಂದಿರುಗಿ ಬರುತ್ತ ಶಿವಮುಗ್ಗಿಯನ್ನು ಮುಟ್ಟಿದಾಗ ಭಾಸ್ಕರಯ್ಯ ನಾಯಕನನ್ನು ಅಲ್ಲಿ ಕಂಡನು. "ತಾವು ಪಟ್ಟಣಕ್ಕೆ ಹೊರಟ ಸುಮಾರಿನಲ್ಲಿ ಮೈಸೂರಿನ ಸರ್ವಾಧಿಕಾರಿಯ ಕಡೆಯಿಂದ ಇಲ್ಲಿ ಒಬ್ಬ ಮನುಷ್ಯ ಬಂದು 'ಇಲ್ಲಿ ಏನು ಸಹಾಯ ಬೇಕು,' ಎಂದು ವಿಚಾರಿಸಿದ. ನಮ್ಮ ಅಣ್ಣ ಸೆರೆಯಲ್ಲಿರುವ ಮಾತು, ತಮಗೆ ಇನ್ನೂ ಪಟ್ಟ ಆಗದಿರುವ ಮಾತು, ಇದೆಲ್ಲ ಅವನಿಗೆ ತಿಳಿದಿತ್ತು. ಪಾಳೆಯಗಾರರೂ ಬಂದರು. ಮೊದಲಲ್ಲಿ ಇದು ತಮ್ಮ ಸಮ್ಮತಿಯಿಂದ ಆಗುತ್ತಿದೆ ಎಂತ ನಾವು ತಿಳಿದುಕೊಂಡೆವು. ಪಾಳೆಯಗಾರರು ಅವನ ಜೊತೆಗೆ ಹೋದರು. ಹಿಂದಿರುಗಲಿಲ್ಲ. ಇದು ಹೌದೊ ಅಲ್ಲವೊ ಎಂದು ಈಗ ನನಗೆ ಸಂದೇಹ ಆಗಿದೆ. ಈ ಸಂಗತಿ ರಾಣಿಯವರಿಗೆ ತಿಳಿದರೆ ನನಗೆ ತೊಂದರೆ ಮಾಡಿಯಾರು ಎಂತ ನಾನು ಊರಿಗೆ ಹೋಗಲಿಲ್ಲ. ಈಗ ತಮ್ಮ ಅಪ್ಪಣೆ ಹೇಗೆ ಆದರೆ ಹಾಗೆ ನಡೆಯುತ್ತೇನೆ," ಎಂದನು.

ನಾಯಕ ಈ ಮಾತನ್ನು ಕೇಳಿ ಆಶ್ಚರ್ಯಪಟ್ಟನು. ಮೈಸೂರಿನ ಅರಸರು ತನ್ನನ್ನು ಪಟ್ಟಣಕ್ಕೆ ಬರಮಾಡಿಕೊಂಡು, ತಾನು ಇಲ್ಲದ ವೇಳೆ ಇಲ್ಲಿ ಈ ವಿಚಾರಣೆಯನ್ನು ಮಾಡಿಸಿರಬಹುದೆ? ಹಾಗೆ ಮಾಡಿದ್ದರೆ ಅವರು ಎಂಥ ಕಪಟಿ? ಅದೆಷ್ಟು ವಿಶ್ವಾಸದಿಂದ, ಆದರದಿಂದ ನೋಡಿಕೊಂಡರು? ಪ್ರಾಯಶಃ ಅವರು ಈ ವಿಚಾರಣೆಯನ್ನು ನಡಸಿಲ್ಲ. ಎಂದ ಮೇಲೆ ಇದನ್ನು ಸರ್ವಾಧಿಕಾರಿ ಸ್ವತಃ ನಡಸಿರಬೇಕು. ಏತಕ್ಕೆ? ಸಂಸ್ಥಾನ

ದಿಂದ ಯಾರಾದರೂ ಏನಾದರೂ ದೂರು ಕಳುಹಿಸಿದ್ದರೊ? ಇಲ್ಲ ಆ ಪರಂಗಿ ಜನ ಅರಸರಿಗೆ ಕಳುಹಿಸಿದಂತೆ ಅವನಿಗೂ ಒಂದು ದೂರನ್ನು ಕಳುಹಿಸಿರಬಹುದೊ? ಒಳ್ಳೆಯದು. ಇದು ಹೇಗೇ ಇದ್ದರೂ ಇದರಿಂದ ಮುಂದೆ ಯಾವ ಕ್ರಮವೂ ನಡೆಯದಂತೆ ನೋಡಿಕೊಂಡರಾಯಿತು. ಇದಕ್ಕಾಗಿ ತಾನು ಅರಸರಿಗೆ ಒಂದು ಪತ್ರವನ್ನು ಬರೆದು ಸರ್ವಾಧಿಕಾರಿ ಈ ವಿಷಯದಲ್ಲಿ ಮುಂದರಿಯದಂತೆ ಅವನಿಗೆ ನಿರೂಪಿಸಬೇಕೆಂದೂ, ಆ ನಿರೂಪ ಅವನಿಗೆ ಮುಟ್ಟುವುದರಲ್ಲಿ ಸಾವಕಾಶವಾಗಿ ಅವನು ಮುಂದರಿದರೆ ಯಾವ ವಿಷಯಕ್ಕೂ ನಾಯಕರ ಅಪೇಕ್ಷೆಯಂತೆ ನಡೆಯಬೇಕು ಎಂಬರ್ಥಕ್ಕೆ ತನ್ನಲ್ಲಿಗೆ ಒಂದು ಅಧಿಕಾರ ಪತ್ರವನ್ನು ಕಳುಹಬೇಕೆಂದೂ, ಬೇಡುವುದು. ಹೀಗೆ ನಿಶ್ಚಯಿಸಿಕೊಂಡು ಅವನು ಭಾಸ್ಕರಯ್ಯನನ್ನು ಕುರಿತು, "ಹೊರಗಿನವರು ಬಂದು ಮಾತನಾಡಿದರೆ ಅವರೊಂದಿಗೆ ಇಷ್ಟು ಮಾತನ್ನು ನೀವು ಏಕೆ ಆಡಿದಿರಿ?" ಎಂದನು.

"ಎಚ್ಚರ ತಪ್ಪಿದೆ ಒಡೆಯರೆ. ಆ ಬಂದ ಮನುಷ್ಯ ರಾಮಚಂದ್ರಯ್ಯ ಅನ್ನೋವನಂತೆ. ಸರ್ವಾಧಿಕಾರಿ ಅವನಿಗೆ ಕೊಟ್ಟಿದ್ದ ಕಾಗದದಲ್ಲಿ 'ಇವರು ರಾಜಾ ರಾಮಚಂದ್ರ; ನಮ್ಮ ಪರವಾಗಿ ಬಂದಿದ್ದಾರೆ' ಎಂದು ಬರೆದಿತ್ತು. ಅದೇನು ನಯದ ಮಾತು, ಒಡೆಯರೆ, ಅವನದು! ಯಾರೇ ಆದರೂ ಅವನ ಬಲೆಗೆ ಬೀಳಬೇಕು. ಆಮೇಲೆ ನೋಡಿದೆ: ಆಚಾರವೆಲ್ಲ ಕಡಮೆ ಜಾತೀದು. ಎಲಾ ಇದೇನು, ಇಂಥ ಮನುಷ್ಯ ಇಷ್ಟು ನಯವಾಗಿದ್ದಾನೆ ಎಂತ ನನಗೆ ಆಶ್ಚರ್ಯವಾಯಿತು. ಅಣ್ಣ ಸೆರೆಯಲ್ಲಿ ಬಿದ್ದು ಬಹಳ ದಿನವಾಯಿತು. ಅವರಿಗೆ ಏನಾದರೂ ಬಿಡುಗಡೆ ಆಗುತ್ತೆಯೇನೊ ಅನ್ನೋ ಚಪಲಕ್ಕೆ ಸೋತೆ."

"ಯಾರನ್ನೂ ಒಂದು ಮಾತೂ ಕೇಳದೆ ಈ ಕೆಲಸ ಮಾಡಿಬಿಟ್ಟಿರಿ. ನೇಮಯ್ಯನವರನ್ನ, ಶಾಸ್ತ್ರಿಗಳನ್ನ . . ."

"ಇದು ನೇಮಯ್ಯನವರ ಹತ್ತಿರ ಹೋಗೋ ಮಾತೇ ಅಲ್ಲ, ಒಡೆಯರೆ; ತೋರಿದ್ದರೆ ಶಾಸ್ತ್ರಿಗಳನ್ನ ಕೇಳಬಹುದಾಗಿತ್ತು. ತೋರಿದ್ದರೆ ಏನು, ಹತ್ತಿರ ಇದ್ದಿದ್ದರೆ. ಆದರೆ ಸಂಗತಿ ತಿಳಿದದ್ದೆ ನಾನು ಹೊಂಬುಚಕ್ಕೆ ಬಂದಮೇಲೆ. ಒಂದು ಸಲ ಅವನ ಸಂಗಡ ಮಾತನಾಡಿದ ಮೇಲೆ

ನಗರಕ್ಕೆ ಹೋಗೋದು, ಯಾರನ್ನಾದರೂ ಕೇಳೋದು, ಅನ್ನೋ ಯೋಚನೆಯೇ ಹುಟ್ಟಲಿಲ್ಲ. ಅವನ ಮಾತು ದೇವಗರ್ಭ, ರಾಕ್ಷಸಗರ್ಭ, ಅನ್ನೋ ಹಾಗಿತ್ತು; ಆಂದುಕೊಂಡೊಡನೆ ಹಣ್ಣಾಗಬೇಕು. ಯಾರನ್ನೂ ಕೇಳಲಿಲ್ಲ; ಕೇಳೋಹಾಗಿರಲಿಲ್ಲ."

"ಒಳ್ಳೇದು ಭಾಸ್ಕರಯ್ಯ. ನೀವು ತಪ್ಪುದಾರಿ ಹಿಡಿದಿರಿ. ತಿಳಿಯ ಲಿಲ್ಲ ಅಂತೀರಿ; ಏನೂ ಮಾಡೋಹಾಗಿಲ್ಲ. ನಿಮ್ಮ ಕೆಲಸದಿಂದ ತೊಂದರೆ ಆಗದ ಹಾಗೆ ಏನಾದರೂ ಮಾಡಬೇಕಾಗಿದೆ. ಒಂದು ಓಲೆ ಕೊಡತೇವೆ. ಅದನ್ನ ಪಟ್ಟಣಕ್ಕೆ ತಕೊಂಡು ಹೋಗಿ ನೀವೇ ಅರಸರಿಗೆ ಮುಟ್ಟಿಸಿ, ಬೇಕಾದರೆ ಎರಡು ದಿವಸ ಕಾದು, ಅವರು ಕೊಡೋ ಎರಡು ಕಾಗದಾನ ತಗೊಂಡು ಬರಬೇಕು. ಎರಡು ಕಾಗದ ಕೊಡಬೇಕೂ ಅಂತ ಅರಸರನ್ನ ಬೇಡಿರತೇವೆ. ಒಂದು ಸರ್ವಾಧಿಕಾರಿಗೆ, ಒಂದು ನಮಗೆ. ಮೊದಲು ಸರ್ವಾಧಿಕಾರಿ ಕಾಗದಾನ ಅವನಿಗೆ ಮುಟ್ಟಿಸಿ, ಆಮೇಲೆ ನಮ್ಮ ಕಾಗದ ನಮ್ಮ ಹತ್ತಿರ ತರಬೇಕು. ತಿಳೀತೇನಪ್ಪ ?"

"ಅಪ್ಪಣೆ, ಒಡೆಯರೆ."

"ಇದನ್ನ ಕಂಡವರಿಗೆಲ್ಲ ಡಂಗುರ ಹೊಡಕೊಂಡು ಹೋಗಬಾರದು. ಯಾವ ಊರು ಅಂದರೆ ನಗರ ಅನ್ನಬೇಡಿ; ಶಿವಮೊಗ್ಗಿ ಅನ್ನಿ. ಅರಸರು ಮಾರೋಲೆ ಬರೆದು ಕೊಡದೆ ಅಲ್ಲಿಂದ ಹೊರಡಬೇಡಿ. ಅವರು ಕೊಟ್ಟ ಓಲೇನ ಭದ್ರವಾಗಿ ತಕ್ಕೊಂಡು ಬನ್ನಿ. ಯಾತ್ರೆ ಹೋಗಿದ್ದೆ ಅನ್ನಿ; ವ್ಯಾಪಾರಕ್ಕೆ ಬಂದಿದ್ದೆ ಅನ್ನಿ. ಬೇಕಾದ ಮಾತು ಹೇಳಿ ಈ ಕೆಲಸ ಮಾಡಿಕೊಂಡು ಬರಬೇಕು."

"ಅಪ್ಪಣೆ, ಒಡೆಯರೆ."

"ಒಳ್ಳೇದು ಇರಿ."

ನಾಯಕನು ತಾನು ನಿಶ್ಚಯಿಸಿಕೊಂಡಿದ್ದ ಅರ್ಥದಲ್ಲಿ ಒಡೆಯರಿಗೆ ತಾನೆ ಓಲೆ ಬರೆದನು. "ಮೊದಲ ಕ್ಷಣ ಈ ವಿಚಾರಣೆಯನ್ನು ತಾವೇ ಮಾಡಿಸಿರಬಹುದೆ ಎಂದು ನಾವು ಯೋಚಿಸಿದೆವು. ಮತ್ತೆ ಮನಸ್ಸಿನಲ್ಲಿ ತಿರುವಿಹಾಕಿದ್ದರಲ್ಲಿ ಹೀಗಲ್ಲ ಎಂದು ತೋರುತ್ತಿದೆ. ದೇವರ ಕೃಪೆಯಿಂದ ನಮ್ಮ ಈ ಎಣಿಕೆ ಸರಿಯಾಗಿ ಇರಲಿ, ಎಂದು ನಮ್ಮ ಹಾರೈಕೆ. ಹೇಗೇ

ಆದರೂ ನಮಗೆ ತಮಗೆ ಸಮಕ್ಷಮ ನಡೆದ ಮಾತಿನಲ್ಲಿ ತಾವು ಒಪ್ಪಿಗೆ ನೀಡಿದ ರೀತಿ, ಸಂಸ್ಥಾನದ ವಿಷಯದಲ್ಲಿ ಯಾವ ವಿವರದಲ್ಲೂ ತಾವಾಗಲಿ ತಮ್ಮ ಕಡೆಯಃ ಯಾರೇ ಆಗಲಿ ಪ್ರವೇಶಿಸದಂತೆ ಏರ್ಪಾಡು ಮಾಡಿ ಅನುಗ್ರಹಿಸಬೇಕು. ಈಗ ಒಪ್ಪಿಗೆಯಿಲ್ಲದೆ ಈ ವಿಚಾರಣೆ ನಡೆದಿದ್ದಲ್ಲಿ ಇದನ್ನು ಮಾಡಿದ್ದು ಅನುಚಿತ ಎಂದು ತಮ್ಮ ಸರ್ವಾಧಿಕಾರಿಗಳಿಗೆ ತಿಳಿಸಬೇಕು. ನಮಗೆ ಕಳುಹಿಸಿಕೊಡುವ ಅಧಿಕಾರ ಪತ್ರದಲ್ಲಿ ಸಂಸ್ಥಾನದ ವಿಷಯ ಯಾವತ್ತರಲ್ಲೂ ನಮ್ಮ ಅಭಿಪ್ರಾಯದಂತೆ ನಡೆಯತಕ್ಕದ್ದು ಎಂದು ಸ್ಪಷ್ಟವಾಗಿ ನಿರೂಪಿಸಿ ಕೊಡಬೇಕು. ನಾವು ಊರಲ್ಲಿಲ್ಲದ ವೇಳೆ ಇಂಥ ಸಂಗತಿ ನಡೆದು ನಮಗೆ ತುಂಬ ಕಳವಳವಾಗಿದೆ. ಇದರಿಂದ ನಮ್ಮ ಮೈತ್ರಿಗೆ ಭಂಗಬಾರದಂತೆ ಪ್ರಭುಗಳು ಬಾಂಧವ್ಯವನ್ನು ಕಾದು ಕೊಳ್ಳಬೇಕು ಎಂದು ಪ್ರಾರ್ಥಿಸುತ್ತೇವೆ. ಈ ಮಾತು ಇಲ್ಲಿಗೆ ನಿಲ್ಲದೆ ಮುಂದರಿದರೆ ತುಂಬ ಅನರ್ಥ ಸಂಭವಿಸೀತು ಎಂದು ನಮ್ಮ ಶಂಕೆ. ಎಲ್ಲವನ್ನೂ ಸರಿಪಡಿಸಿ ಎರಡು ಸಂಸ್ಥಾನಗಳನ್ನೂ ಕಾಯ್ದುಕೊಳ್ಳುವ ಶಕ್ತಿ ತಮಗೆ ಉಂಟು. ಕಿರಿಯನ ಮೇಲೆ ವಿಶ್ವಾಸವಿಟ್ಟು ಸರಿಯಾಗಿ ನಡಸಿಕೊಳ್ಳಬೇಕೆಂದು ವಿನಯಾರ್ಥ," ಎಂದು ತನ್ನ ಮನಸ್ಸಿನ ಸ್ಥಿತಿ ಯನ್ನೂ ತನ್ನ ಅಪೇಕ್ಷೆಯನ್ನೂ ಸ್ಪಷ್ಟಪಡಿಸಿದನು. ಭಾಸ್ಕರಯ್ಯ ಮರು ದಿನವೇ ಪಟ್ಟಣವನ್ನು ಕುರಿತು ಹೊರಟನು. ನಾಯಕ ಪರಿವಾರದೊಡನೆ ನಗರಕ್ಕೆ ಬಂದು ಸೇರಿದನು.

೯೧

ಅರಮನೆಗೆ ಹೊಗುತ್ತಿದ್ದಂತೆಯೆ ನಾಯಕನಿಗೆ ಇಲ್ಲಿಯ ಪರಿಸ್ಥಿತಿ ಬೇರೆಯಾಗಿದೆ ಎನ್ನುವುದು ಕಂಡಿತು. ತಾಯಿ ಆಗಲಿ ಆವಳ ಪರವಾಗಿ ಯಾರೇ ಆಗಲಿ, ಇವನನ್ನಾಗಲಿ ಶಾಂತವ್ವನನ್ನಾಗಲಿ ಕಾಣಲಿಲ್ಲ; ಕರೆದು ಕೊಳ್ಳಲಿಲ್ಲ. ನಂಬಯ್ಯ ದೂರದಲ್ಲಿ ಕಾಣಿಸಿಕೊಂಡನು; ಜನರಿಂದ ಅವಶ್ಯವಾದ ಕಾರ್ಯವನ್ನು ಮಾಡಿಸಿದನು; ತಾನು ಹತ್ತಿರ ಸುಳಿಯಲಿಲ್ಲ. ಅರಮನೆ ತನ್ನ ಮನೆ; ತಿಂಗಳ ದಿನ ಹೊರಗಿದ್ದು ಇಂದು ತಾನು ತನ್ನ ಮನೆಗೆ ಬರುತ್ತಿದೇನೆ ಎಂಬ ಸಂತೋಷ ನಾಯಕನ ಮನಸ್ಸಿನಲ್ಲಿ

ಮೂಡಲಿಲ್ಲ. ಅವನ ಮುಖ ಮ್ಲಾನವಾಯಿತು; ಹೊರಡುವಂದು ಮುನ್ನಿರುಳಾಗಿದ್ದ ಜೀವನ ಈಗ ನಟ್ಟಿರುಳ ಕತ್ತಲನ್ನು ಮುಟ್ಟಿದಂತೆ ಅವನಿಗೆ ಕಂಡಿತು. ಅರಮನೆಯನ್ನು ಹೊಕ್ಕವನೆ ಅವನು ಮೊದಲು ಅಲ್ಲಿ ಇಟ್ಟು ಹೋಗಿದ್ದ ಚಿಂತೆಯನ್ನು ಮತ್ತೆ ಹೊದೆದುಕೊಂಡನು.

ಶಾಂತವ್ವನಿಗೆ ಶಿವಮಗ್ಗಿಯಲ್ಲಿ ನಡೆದ ಮಾತುಕತೆ ತಿಳಿಯಿತು. ಆದರೆ ಅವಳು ಗಂಡನನ್ನು ಏನೂ ಕೇಳಲಿಲ್ಲ. ಅವನಾಗಿ ಮಾತನ್ನೆತ್ತಿದ್ದರೆ ಅವಳು ಸೂಚನೆ ಕೊಡಬಲ್ಲ ಚದುರೆ. ಆದರೆ ಈ ಗಂಡ ಹೆಂಡಿರು ಬಾಳಿದ್ದ ಆವರಣದಲ್ಲಿ ದಾಂಪತ್ಯ ಜೀವನ ಈ ಚೆಲುವನ್ನು ಬೆಳಸಿಕೊಂಡಿರಲಿಲ್ಲ. ಪಟ್ಟಣದಲ್ಲಿ ಹೊಸ ಒಂದು ಬೆಳಕಿನಿಂದ ಬೆಳಗಿದ ಗಂಡನ ಮುಖ ಶಿವಮಗ್ಗಿಯಲ್ಲಿ ಆ ಬೆಳಕನ್ನು ಕಳೆದುಕೊಂಡಿತೆನ್ನುವುದು ಶಾಂತವ್ವನಿಗೆ ತಿಳಿಯಿತು. ನಗರ ಹತ್ತಿರವಾದಂತೆ, ಆದರ ಕಾಡ ಕತ್ತಲಿನಂತೆ ಆ ಮುಖದ ಮೇಲೆ ಒಂದು ಕತ್ತಲು ಕವಿಯಿತೆಂದು ಅವಳಿಗೆ ತೋರಿತು. ಅರಮನೆಯನ್ನು ಮುಟ್ಟಿದಾಗ, ಅದರ ಒಳಹೊಕ್ಕಾಗ, ತನ್ನ ಗಂಡ ಎಷ್ಟೆಷ್ಟುನೊಂದ, ಅದರ ನಾಲ್ಕು ಪಟ್ಟು ಆವನ ಸಲುವಾಗಿ ಶಾಂತವ್ವ ನೊಂದಳು. ಪಾಪ ಈ ಜೀವ ಎಷ್ಟು ಸಂತೋಷವಾಗಿ ಮನೆಗೆ ಬಂದಿದ್ದರೆ ಬೇಡ! ಎಷ್ಟು ಜನ ಸ್ವಾಗತಿಸಿದ್ದರೆ ಬೇಡ! ತಿಂಗಳು ದಿನ ಹೊರಗಿದ್ದು ಅರಮನೆಗೆ ಬಂದರೆ, ಒಡೆಯ ಬಂದರೆಂದು ನಲಿಯುವ ಜನ ಇಲ್ಲವಾಯಿತೆ! ಒಡೆಯನ ಅದೃಷ್ಟ ಇನ್ನೂ ಒಳಿತಾಗಿಲ್ಲ.

ಗಂಡನಿಗಾಗಿ ನೋಯುವ ಹೊತ್ತಿನಲ್ಲಿ ಶಾಂತವ್ವ ತನ್ನ ಸ್ಥಿತಿಯನ್ನು ಗ್ರಹಿಸದೆ ಬಿಡಲಿಲ್ಲ. ಅರಮನೆಗೆ ಬರದೆ ತಾನು ತಂದೆಯ ಮನೆಗೆ ಹೋಗಿದ್ದರೆ, ದೊಡ್ಡಪ್ಪ ಎಷ್ಟು ಸಂಭ್ರಮದಿಂದ ಬರಮಾಡಿಕೊಳ್ಳುತ್ತಿದ್ದರು! ಇಲ್ಲಿ ಮನೆಯ ಸೊಸೆಯನ್ನು ತಮ್ಮ ವಸ್ತು ಎನ್ನುವ ಜನವಿಲ್ಲ. ಆ ಗಂಡನನ್ನು ಈ ಹೆಂಡತಿ ನೋಡಿಕೊಳ್ಳಬಹುದು; ಈ ಹೆಂಡತಿಯನ್ನು ಆ ಗಂಡ ನೋಡಿಕೊಳ್ಳಬಹುದು; ಉಳಿದ ಜನ ಯಾರಿಗೂ ಇವರ ಸುಖಬೇಕಿಲ್ಲ.

ಅರಮನೆಗೆ ಬಂದೊಡನೆ ಕೆಂಚವ್ವೆ ಒಡತಿಗೆ ಆವಶ್ಯಕವಾದ ಸೇವೆ ಮಾಡಿ ಅವಳ ಅಪ್ಪಣೆಪಡೆದು ತಮ್ಮೆಲ್ಲರ ಕ್ಷೇಮಸಮಾಚಾರವನ್ನು ತನ್ನ

ಅಜ್ಜಿಗೆ ನೇಮಯ್ಯನಿಗೆ ತಿಳಿಸಲು ಅವರ ಮನೆಗಳಿಗೆ ಹೋದಳು. ನೇಮಯ್ಯನಿಗೆ ದೇಹಸ್ಥಿತಿ ಸ್ವಲ್ಪ ಸರಿಯಾಗಿರಲಿಲ್ಲ. ಅವನು ಎಲ್ಲರ ಆರೋಗ್ಯವನ್ನು ಕುರಿತು ಪ್ರಶ್ನೆಮಾಡಿದನು; ಸಂಜೆಗೆ ಮುನ್ನ ಶಾಂತವ್ವನನ್ನು ಕಾಣಬೇಕೆಂಬ ತನ್ನ ಬಯಕೆಯನ್ನು ಸೂಚಿಸಿದನು. ಅಜ್ಜಿಯ ಮನೆಯಲ್ಲಿ ಕೆಂಚವ್ವೆಗೆ ನಗರದ ಸಂಗತಿ ತಿಳಿಯಿತು. ರಾಣಿ ನೇಮಯ್ಯನನು ಕಠಿನವಾಗಿ ನುಡಿಸಿದ್ದ ಸಂಗತಿ ಈ ಸುದ್ದಿಯಲ್ಲಿ ಸೇರಿತ್ತು. ಜೊತೆಗೆ ಮೈಸೂರಿಂದ ನಾಯಕ ಅವನ ರಾಣಿ ಹಿಂತಿರುಗಿ ಬರುವ ವೇಳೆಗೆ ಅರಮನೆಯ ಹತ್ತಿರ ಗುಂಪು ಸೇರುವುದು ರಾಣಿಗೆ ಇಷ್ಟವಿಲ್ಲ ಎಂದು ಊರ ಜನಕ್ಕೆ ಎಚ್ಚರಿಕೆ ಹೋಗಿದ್ದದ್ದೂ ತಿಳಿಯಿತು. ರಾಣಿಗೆ ಮೈಯಲ್ಲಿ ಚೆನ್ನಾಗಿಲ್ಲ ಎನ್ನುವುದನ್ನು ಕಾರಣವಾಗಿ ಹೇಳಿದ್ದಿತಾದರೂ ನಿಜವಾಗಿ ಆಕೆಗೆ ಏನೂ ತೊಂದರೆ ಆಗಿರಲಿಲ್ಲ. ತಿಂಗಳ ದಿನದಲ್ಲಿ ರಾಣಿ, ಸಣ್ಣವ್ವ ಮತ್ತು ಒಬ್ಬ ಚೇಟಿಯೊಡನೆ, ಹತ್ತಾರು ಸಲ ದೇವಗಂಗೆಗೆ ಹೋಗಿ ಮಿಂದು ಬಂದಿದ್ದಳು. ಅಲ್ಲಿ ಮೊದಲೆ ಹೋಗಿದ್ದೊ ಆಮೇಲೆ ಹೋಗಿಯೊ ನಂಬಯ್ಯ ರಾಣಿಯೊಂದಿಗೆ ಈ ನೀರಾಟದಲ್ಲಿ ಸೇರಿದ್ದನೆಂದು ಊರಿನಲ್ಲಿ ಗಾಳಿಸುದ್ದಿ.

ಕೆಂಚವ್ವೆ ಅರಮನೆಗೆ ಬಂದು ಈ ಸಂಗತಿಯನ್ನೆಲ್ಲ ತಿಳಿಸಿದಳು. ಶಾಂತವ್ವನಿಗೆ ದುಃಖ ಇಮ್ಮಡಿಸಿತು. ತನ್ನ ದೊಡ್ಡಪ್ಪ ದೇವರಂಥ ಮನುಷ್ಯ. ಅವನನ್ನು ತನ್ನ ಅತ್ತೆ ಧಿಕ್ಕರಿಸಿ ನುಡಿಸಿದರಂತಲ್ಲ! ತನ್ನನ್ನು ಈ ಮನೆಗೆ ಕೊಟ್ಟು ಆ ದೊಡ್ಡಪ್ಪ ತುಂಬ ಹೀನಾಯವನ್ನು ಸಹಿಸಬೇಕಾಯಿತು. ಬೀಗನಾಗದೆ ಇದ್ದರೆ ಆ ದಿಟ್ಟವಾದ ಚೇತನ ಯಾವ ಉತ್ತರವನ್ನು ಕೊಟ್ಟಿದ್ದರೆ ಬೇಡ ಎನ್ನುತ್ತಿತ್ತು? ಈಗ ಬೀಗನಾದ ತಪ್ಪಿಗೆ ಏನು ಹೇಳಿದರೂ ಕೇಳಿಕೊಂಡಿರಬೇಕು. ಇನ್ನು ತನ್ನನ್ನು ಕೈಹಿಡಿದ ಪುಣ್ಯವೊ ಏನೊ, ತನ್ನ ಗಂಡ ಈ ಹೆತ್ತ ತಾಯಿಗೇ ಇಷ್ಟು ಒಲ್ಲದೆ ಹೋಗಿದಾನೆ. ತಾನು ಆದರ ತೋರಿಸದಿದ್ದರೆ ಬೇಡ, ಬೇರೆ ಯಾರೂ ತೋರಿಸುವುದು ಕೂಡದು ಎಂದು ತಡೆಯುವಷ್ಟು ತಾಯಿಯಾದವರಿಗೆ ಮಗನ ವಿಷಯದಲ್ಲಿ ಬೇಸರ ಬರಬೇಕೆ?

ಇವಳು ಹೀಗೆ ಯೋಚಿಸುತ್ತಿರುವಲ್ಲಿ ಪರಿಚಾರಿಕೆ ಒಬ್ಬಳು ಬಂದು ಮಲ್ಲಿಗೆ ಸಗುನ ಕೆಂಚವ್ವೆಯನ್ನು ನೋಡಬೇಕೆನ್ನುತ್ತಾರೆ ಎಂದು ತಿಳಿಸಿದಳು. ಕೆಂಚವ್ವೆ ಅವರನ್ನು ನೋಡಲು ಹೊರಬಾಗಿಲಿಗೆ ಹೋದಳು.

ಮಲ್ಲಿಗೆ, "ಸ್ವಾಮಿಗಳು ಅಪ್ಪಣೆಮಾಡಿ, ನಾವು ನಾಯಕರ ಜೊತೆಗೆ ನಿಂತಿವಿ. ಮೈಸೂರಿಗೆ ಹೋಗೋದಿದ್ದತು ಅಂತ ಆಗ ಊರಿಗೆ ಹೋಗಾಕಾಗಲಿಲ್ಲ. ಈಗ ಅಪ್ಪಣೆ ಆದರೆ ಹೋಗಿ ಮೂರು ದಿನ ಇದ್ದು ತಿರಿಗಿ ಬರತೀವಿ," ಎಂದಳು.

"ಮದಿವೆ ಆಗಿ ಬರತೀರಾ ಮಲ್ಲಿಗೆ?"

"ಹೆಗ್ಗಡಿತೀನ ಕೇಳತೀವವ್ವ. ಆಗಂದರಾಗತೀವಿ. ಸಗುನ ಆಗೋನಾಂತ ಅಂತಾ ಇದಾನೆ."

"ಉಜ್ಜ, ಸಗುನನೇ ಅನ್ನಬೇಕು; ನೀ ಅನ್ನೋದು ಚಂದಾನ? ಇರಿ; ಕೇಳಿ ಬರತೀನಿ."

ಹೀಗೆಂದು ಕೆಂಚವ್ವೆ ಒಳಕ್ಕೆ ಹೋದಳು. ಶಾಂತವ್ವನ ಒಪ್ಪಿಗೆ ಪಡೆದು, ನಾಯಕನಿಗೆ ತಿಳಿಸಿ, ಅವನು ಅನುಮತಿ ಕೊಟ್ಟಮೇಲೆ ಹೊರಕ್ಕೆ ಬಂದು ಇವರಿಗೆ, "ಹೋಗಿ ಬನ್ನಿ ಅಂತಾರೆ. ಮದುವೆ ಆಗಿ ಬರಬೇಕಂತೆ. ಒಡತೀರು ನಿನಗೊಂದು ಪಾವಡ ಸಗುನಂಗೆ ಒಂದಟ್ಟಿ ಉಚಿತ ಕೊಡು ಅಂದಿದ್ದಾರೆ. ಇರಿ. ಅವನ್ನ ತಂದು ಕೊಡತೀನಿ, ಕೊಂಡು ಹೋಗುವಿರಂತೆ," ಎಂದಳು.

ಮಲ್ಲಿಗೆ ಸಗುನ ಕಾದಿದ್ದು ಉಚಿತದ ವಸ್ತ್ರಗಳನ್ನು ಪಡೆದು ಮದುವೆಯಾಗಲು ವಸ್ತಾರೆಯ ಕಡೆಗೆ ಹಗುರವಾಗಿ ನಡೆಯುತ್ತ ಹೊರಟರು.

## ೯೨

ನೇಮಯ್ಯನಿಗೆ ಮೈಯಲ್ಲಿ ಚೆನ್ನಾಗಿಲ್ಲ ಎನ್ನುವುದು ತಿಳಿದು ಶಾಂತವ್ವನಿಗೆ ಕಳವಳ. ಆದರೂ ಅವಳು ಒಡನೆಯೆ ಅರಮನೆಯನ್ನು ಬಿಟ್ಟು ಹೊರಡುವಂತಿರಲಿಲ್ಲ. ನಾಯಕನ ಕಷ್ಟಸುಖವನ್ನು ನೋಡಿಕೊಳ್ಳುವುದಕ್ಕೆ ಹತ್ತುಜನ ಇದ್ದರೂ ಇವಳು ಎಲ್ಲ ವಿವರವನ್ನೂ ತಾನೆ ಮೇಲೆ

ವಿಚಾರಿಸಿಕೊಳ್ಳುವಳು. ಅವನು ಮಧ್ಯಾಹ್ನ ವಿಶ್ರಾಂತಿ ಮುಗಿಸಿಕೊಂಡು ಉಪಹಾರ ಸ್ವೀಕರಿಸಿದ ಮೇಲೆ, ಶಾಂತವ್ವ ತಾನು ಹೋಗಿ ದೊಡ್ಡಪ್ಪ ನನ್ನು ನೋಡಿಕೊಂಡು ಬರುತ್ತೇನೆ ಎಂದು ಅವನಿಗೆ ತಿಳಿಸಿ ತವರು ಮನೆಗೆ ಹೋದಳು.

ನೇಮಯ್ಯನಿಗೆ ತಕ್ಕಷ್ಟು ಜ್ವರ. ಶಾಂತವ್ವ ಒಳಗೆ ಬಂದಾಗ ಅವನು ಹಾಸಿಗೆಯಿಂದ ಎದ್ದು ಕುಳಿತನು. ಶಾಂತವ್ವ ಹತ್ತಿರ ಬಂದು ಅವನ ಪಾದಕ್ಕೆ ತಲೆಯಿಟ್ಟು ನಮಸ್ಕಾರ ಮಾಡಿದಳು. "ಮಲಗಿ ಅಣ್ಣಯ್ಯ, ಆಯಾಸಮಾಡಿಕೋಬೇಡಿ," ಎಂದಳು. ನೇಮಯ್ಯ ಮತ್ತೆ ಹಾಸಿಗೆಯಲ್ಲಿ ಮಲಗಿದನು. ತುಂಬ ಅಕ್ಕರೆಯಿಂದ ಮಗಳ ಕಡೆ ನೋಡಿದನು. "ಈ ಒಂದು ದಿನಾನೆ ಶಾಂತವ್ವ, ನಾನು ನಿನ್ನ ಬರಮಾಡಿ ಕೊಳ್ಳಬಹುದು. ಇನ್ನುಮೇಲೆ ನೀನು ಈ ಮನೆಗೆ ಬರದೆ ಇರೋದೆ ಎಲ್ಲರಿಗೂ ಸಮ," ಎಂದನು.

ರಾಣಿಗೆ ದೊಡ್ಡಪ್ಪನಿಗೆ ನಡೆದಿದ್ದ ಮಾತಿನ ಪರಿಣಾಮ ಇದು ಎಂದು ಶಾಂತವ್ವ ಬಲ್ಲಳು. ಅವಳು ಮುಖ ತಗ್ಗಿಸಿಕೊಂಡಳು; ಪ್ರತಿ ಹೇಳಲಿಲ್ಲ.

"ಆದ ಸಂಗತಿಗೆ ಚಿಂತೆಮಾಡಿ ಗುಣ ಇಲ್ಲ. ಅಂದರೆ ತಾಯಿ, ನಿನ್ನ ನಿಮ್ಮ ತಂದೆ ತಾಯಿ ಇದ್ದು ನೋಡಿಕೊಂಡಿದ್ದರೆ ಇನ್ನಷ್ಟು ಒಳಿತಾ ಗಿತ್ತು. ನನ್ನ ಅದೃಷ್ಟ ಹೀನ ಆಗಿ ಅದು ನಿನ್ನನೂ ತಟ್ಟಿತವ್ವ. ನಾ ಮುಟ್ಟಿದ್ದೆಲ್ಲ ಜೊಳ್ಳಾಗತದೆ. ಮಣ್ಣು ಅನ್ನೋದು, ಮಾತು ಕೆಟ್ಟದೂ ಅಂತ ಅನ್ನೋದಿಲ್ಲ."

ಶಾಂತವ್ವನ ಕಣ್ಣಲ್ಲಿ ಹನಿ ಕೂಡಿತು. ದೊಡ್ಡಪ್ಪ ತುಂಬ ನೊಂದಿ ದಾನೆ; ಇವನಿಗೆ ಹರ್ಷ ಮೂಡುವಂಥ ಮಾತನ್ನಾಡಬೇಕು. ಏನನ್ನಾಡು ವುದು ತೋರಲಿಲ್ಲ.

"ಹಿರಿಯ ನಾಯಕರು ತೀರಿಕೊಂಡಾಗ ನಾನೂ ಪೀಠಕ್ಕೆ ಹೊರಟು ಹೋಗಿದ್ದರೆ ತುಂಬ ಚೆನ್ನಾಗಿತ್ತು. ಏನೋ ಯೋಚನೆ ಮಾಡಿ ಊರಾಗೆ ನಿಂತೆ. ಎಲ್ಲ ತಪ್ಪಾಯ್ತು."

"ಏನೂ ತಪ್ಪಾಗಿಲ್ಲ, ಅಣ್ಣಯ್ಯ. ಎಲ್ಲಾ ಒಳ್ಳೇದೇ ಆಗಿದೆ. ನಿಮ್ಮ ಮನಸ್ಸು, ನಿಮ್ಮ ಜೀವನಿಂದ ತಪ್ಪು ಅನ್ನೋದು ಆಗೋದು ಯಾತರದು ?"

"ನಾನು ತಪ್ಪುಮಾಡಿದೇ ಅಂತ ಅಲ್ಲವ್ವ. ಸಂದರ್ಭ ಅಂತಾದು. ತಾಯಿ ಮಗನಿಗೆ ಮನಸ್ಸು ಚೆನ್ನ ಇಲ್ಲ. ಎಂತಾದರೂ ತಾಯಿ ಮಗ, ಅವರಿಗೆ ಎಂತು ಸರಿ ಕಂಡರೆ ಅಂತ ನಡಕೊಳ್ಳಲಿ, ಅಂತ ನಾನು ಬಿಡಿಸಿ ಕೊಂಡು ದೂರ ಇರಬೇಕಾಗಿತ್ತು. ಮನಸ್ಸು ಮನಸ್ಸು ಬೆಸೀತೇನಂತ ಕಾವು ಕೊಡಲಿಕ್ಕೆ ನಿಂತೆ. ತಪ್ಪಾಯ್ತು. ತಾಯಿ ಮಗ ಎರಡು ಜೀವ ಅಲ್ಲ; ಏನಾದರೂ ಒಂದು ಜೀವ. ಅವರನ್ನ ಬಿಡಿಸತೇನೆ ಅನ್ನೋದು ತಪ್ಪೆಂತು ಬೆಸೀತೇನೆ ಅನ್ನೋದೂ ಅಂತೇ ತಪ್ಪು."

"ಉಂಟೆ ಅಣ್ಣಯ್ಯ ?"

"ಬೆಸೀತೇನೆ ಅಂತ ನಾವು ಹೋಗದೇ ಇದ್ದರೆ ಮೂರು ದಿನ ಮುಖ ಕಪ್ಪುಮಾಡಿಕೊಂಡು ನಾಲ್ಕನೇ ದಿನ ಅವರು ನಕ್ಕು ಸೇರಿರೋರು. ಮಧ್ಯೆ ನಾವು ನಿಂತದ್ದರಿಂದ ಅವರು ಕೂಡದ ಹಂಗೆ ತಡೆ ಆದೆವಿ."

"ಅಣ್ಣಯ್ಯ, ನೀವಿಲ್ಲದೆ ಇದ್ದಿದ್ದರೂ ಅವರ ಮಾತು ಈಗಿನಷ್ಟೇ ಅಂತ ಅನ್ನಿಸತದೆ ಅಣ್ಣಯ್ಯ. ಹೆಂಗಾದರೂ, ಆದ ಮಾತಿಗೆ ಚಿಂತೆ ಮಾಡಿ ಗುಣ ಇಲ್ಲ ಅಂದಿರಲ್ಲ, ಅದನ್ನೆ ಅಂದುಕೊಂಡು ಮನಸ್ಸು ಸಮ ಇರಿಸಿಕೋಬೇಕು."

"ಅದು ಸರಿ, ಅಮ್ಮಾಜಿ. ಆ ಮಾತಿಗೊಪ್ಪಿದೆ. ಈಗ ಇದೆಲ್ಲ ಯಾಕೆ ಹೇಳಿದ್ದು ಅಂದರೆ ನಿಮ್ಮತ್ತೆ ರಾಣಿ ಅಮ್ಮನವರು ನನ್ನ ಮಾತು ಕೆಟ್ಟದು ಮಾಡಿಕೊಂಡಿದ್ದಾರೆ. ನಾಯಕರನ್ನ ನಿನ್ನ ದೊಡ್ಡವರನ್ನಮಾಡಿ ಅವರನ್ನ ಕೆಡಿಸಬೇಕೂ ಅಂತ ನಾನು ಹೊರಟಿದ್ದೇನಿ ಅಂತಿದಾರೆ. ಇದು ನಿಜ ಅಲ್ಲ. ಆದರೂ ಅವರು ಹಂಗೆ ತಿಳಿದಿರೋವಾಗ ನಾನು ಹತ್ತಿರಲೆ ಸುಳೀತಾ ಇದ್ದರೆ ನಿನಗೆ ನಾಯಕರಿಗೆ ಕೆಟ್ಟದಾದೀತು. ಅದರಿಂದ ನಾ ಇನ್ನಮೇಲೆ ಸ್ವಲ್ಪ ದೂರ ನಿಲ್ಲೋದೂ ಅಂತ ಮಾಡಿಕೊಂಡಿದೇನೆ. ನಗರಾನೇ ಬಿಡೋದೂ ಅಂತಿದ್ದೆ. ದೊಡ್ಡವರು ಹೇಳದೆ ಇದ್ದರೆ ಇದ ಮಾಡಬಾರದು ಅಂತ ತೋರತಾ ಅದೆ. ಊರಾಗೆ ಇರೋದು, ಎಲ್ಲರ

ಹಂಗಿರೋದು. ಮಂತ್ರಿ ಅಲ್ಲ. ಮನೆವಾರ್ತೆ ಅಲ್ಲ. ಬೀಗನೂ ಅಲ್ಲ. ಹೀಗಿದ್ದರೆ ನಿಮ್ಮನೆ ಮಾತು ಚೆಂದವಾದೀತು ಅಂತ ತೋರುತಾ ಅದೆ."

ಶಾಂತವ್ವನ ಕಣ್ಣಿಂದ ಎರಡು ಹನಿ ನೀರು ಉದುರಿತು.

"ಕಣ್ಣೀರು ಹಾಕೊ ಕೆಲಸವಿಲ್ಲ. ಅಮ್ಮಾಜಿ. ನಾ ಬೇರೆ ಏನೂ ಆಗಲಿಲ್ಲ; ಯಾರನ್ನೂ ಬಿಡಲಿಲ್ಲ; ಇಲ್ಲೇ ಇದೇನಿ; ಸುಖವಾಗಿದೇನಿ. ನಿನ್ನ ನೋಡತಾ ಸಂತೋಷವಾಗಿದೇನಿ. ನಂಟರಿಗೆ ಒಳ್ಳೇದಾಗಲಿ ಅಂತ ಸ್ವಲ್ಪ ಬದೀಗೆ ನಿಂತಿದೇನಿ. ಯಾಕವ್ವ ಇದಕ್ಕೆ ಯೋಚನೆ?"

ಶಾಂತವ್ವ, "ನೀವು ನೊಂದಿರೆ ಅಂತ ಕಣ್ಣೀರು ಬಂತು ಅಣ್ಣಯ್ಯ. ನನ್ನ ಸಾಕಿ ನೀವು ಸುಖಪಡಲಿಲ್ಲ," ಎಂದಳು.

"ಓ ತನ್ನ ತಾಯಿ, ನಿನ್ನ ಸಾಕಿ ನನ್ನ ಜನ್ಮ ಸಾರ್ಥಕ ಆಯಿತು. ಅದು ಸಾರ್ಥಕ ಆಗಲಿ ಅಂತಲೇ ದೇವರು ನಿನ್ನ ನನ್ನ ಕೈಯಾಗಿಟ್ಟರು; ನೋಡಿಕೋ ಅಂದರು. ತಪಸ್ಸಿನ ಬುದ್ಧಿ ಇಲ್ಲ; ಲೋಕಾ ಬಿಡೋ ಧೈರ್ಯ ಇಲ್ಲ. ಮಂದಿನಡುವೆ ಇದ್ದುಕೊಂಡು ಏನ ಮಾಡೋದವ್ವ? ನೀನಿದ್ದೆ, ನಾನೊಂದು ಪದಾರ್ಥವಾಗಿ ಬಾಳಿದೆ. ಈಗಲೂ ನಾನು ಸಮಾಧಾನವಾಗಿರೋದು ನಿನ್ನ ನೋಡಿಕೊಂಡೇ."

ನೇಮಯ್ಯನಿಗೆ ಜ್ವರ ತಕ್ಕಷ್ಟು ಇದ್ದಿತು. ತೀರ ಆರೋಗ್ಯದಲ್ಲಿ ಅವನು ಇಷ್ಟು ಮಾತನ್ನು ಆಡುತ್ತಿರಲಿಲ್ಲವೇನೊ? ಅವನಿಗೇ ಇದು ತೋರಿರಬೇಕು.

"ಬಹಳಾ ಮಾತನಾಡಿದೆ ಅಮ್ಮಾಜಿ. ಹಸುಮಗು ನೀನು ಯಾಕೊ ದೊಡ್ಡಪ್ಪ ದೂರ ಆದರೂ ಅಂತ ಅಂದುಕೊಳ್ಳಬಾರದು. ಇದಕ್ಕಾಗಿ ಈ ಮಾತನ್ನ ಹೇಳಬೇಕಾಯ್ತು. ನಾಯಕರಿಗೂ ಇದನ್ನ ನಾ ಹೇಳಬೇಕು. ಈವತ್ತು ನಾಳೀಲಿ ಈ ಜ್ವರ ಬಿಟ್ಟರೆ ಬಂದು ಕಂಡು ಹೇಳೋದಾಗತದೆ. ಅಷ್ಟರಲ್ಲಿ ಮಾತಿಗೆ ಎಡೆ ದೊರೆತರೆ ನೀನೂ ಹೇಳಿ ಇಟ್ಟಿರು."

''ಆಯಿತು ಅಪ್ಪಾಜಿ.''

"ನಿಮ್ಮ ಅತ್ತೆಮ್ಮನವರ ಮಾತು ನಾನೆತ್ತ ಬಾರದು ಅಮ್ಮಾಜಿ. ಅಂದರೆ ಅವರ ದಾರಿ ಹತ್ತು ಜನಕ್ಕೆ ಒಪ್ಪೋದಾಗಲಿಲ್ಲ. ಅವರವರ ಕರ್ಮ ಅವರವರನ್ನ ನಡಸತದೆ; ಅದರ ಮಾತು ನಮಗೆ ಸೇರಿದ್ದಲ್ಲ.

ನೀನು ನಮ್ಮನೇ ಮಗು ಅಲ್ಲಿ ಬಾಳಬೇಕಾಗದೆ; ಅದರಿಂದ ಒಂದು ಮಾತು ನಿನಗೆ ಹೇಳಬೇಕು. ನಿನ್ನ ಚೇತನ ಒಳ್ಳೇದು; ಹೇಳದೆ ಇದ್ದರೂ ನೀನು ಚೆನ್ನ ನಡೀತೀಯ. ನಿನ್ನ ತಾಯಿ ಒಂದು ದೇವತೆ; ನಿಮ್ಮ ತಂದೆ ಧೀರ. ನೀ ಚೆನ್ನ ನಡೀದೆ ಬೇರೆ ಏನು ಮಾಡೀ? ಅಂದರೂ ಸಾಕಿದೋನು, ಹೇಳದೆ ಮನಸ್ಸು ನಿಲ್ಲವೊಲ್ಲದು. ಅವರು ಬೇಕಾದ್ದು ಮಾಡಲಿ, ಅಮ್ಮಾಜಿ, ಬೇಕಾದ್ದು ಆಡಲಿ, ನೀನು ಮನಸ್ಸನ್ನ ಸಮಾಧಾನವಾಗಿ ಇರಿಸಿಕೊ. ನಿನ್ನ ಯಜಮಾನನದು ತಪ್ಪು ಕಂಡರೆ ಕೋಪಿಸುವ ಜೀವ. ಕೋಪದ ಹೊತ್ತಿನಲ್ಲಿ ಹತ್ತರ ಇದ್ದು ಅವನ ಕೋಪಾನ ನಿನ್ನ ಕೈಯಾಗೆ ಹಿಡಿದಿಟ್ಟುಕೊ. ತಡದಳು ಅಂತ ನಿನ್ನ ಅವನು ಹೊಡೆದರೂ ಸಮ, ಹೆರವರನ್ನ ಹೊಡೆಯೋಕಿಂತ ಹೆಂಡತೀನ ಹೊಡೆದರೆ ಒಳಿತೂ ಅಂತನ್ನು. ಗಂಡ ಲೋಕಕ್ಕೆ ಕೆಟ್ಟವನಾಗದ ಹಂಗೆ ನೋಡಿಕೊಳ್ಳೋದು ಹೆಂಡತಿ ಧರ್ಮ. ಈ ಒಂದು ಮಾತು ಚೆನ್ನಾಗಿ ತಿಳಕೊ; ದೇವರು ನಿನ್ನ ಕಾಪಾಡತಾನೆ."

"ದೇವರು ಅವರನ್ನ ಕಾಪಾಡಲೀ ಅಂತ ಹರಸಿ ಅಣ್ಣಯ್ಯ. ಅವರಿಗೆ ಒಳಿತಾಗೋದಾದರೆ ನನ್ನ ಜೀವ ಬೇಕಾದರೆ ಕೊಡತೇನೆ; ಹೊಡೆಸಿಕೊಳ್ಳೋಕೆ ಏನಡ್ಡಿ?"

"ಅಯ್ಯೋ ನನ್ನ ತಾಯಿ ಹಾಗನ್ನಬೇಡ. ಗಂಡ ನಗತಾ ಇದ್ದರೆ ಹೆಂಡತಿ ಜೀವ ಕೊಡಬಹುದು; ಗಂಡ ಮುನಿಸಿಕೊಂಡು ಹೊಡೆದರೆ ತಡೆಯೋದು ಕಷ್ಟ. ಜೀವ ಕೊಟ್ಟರೆ ಒಲುಮೆ ಉಂಟು; ಹೊಡೆಸಿಕೊಂಡರೆ ಏನೂ ಇಲ್ಲವ್ವ. ಒರಳ ತುಂಬ ಹೊಟ್ಟುಹಾಕಿ ಕುಟ್ಟಿದ ಹಂಗಾಗತದೆ."

ಶಾಂತವ್ವ ಸುಮ್ಮನಿದ್ದಳು. ದೊಡ್ಡಪ್ಪನಿಗೆ ತನ್ನ ಗಂಡನ ಸ್ವಭಾವ ತಿಳಿದಿದೆ. ತಾನು ಮಾತನಾಡಿ ಏನು ಪ್ರಯೋಜನ? ಕ್ಷಣ ಬಿಟ್ಟು ನೇಮಯ್ಯ, "ಇದನ್ನ ನಿನಗೆ ಹೇಳಬೇಕು ಅಂತಲೇ ಕೆಂಚು ಕೈಲಿ ಹೇಳಿ ಕಳಿಸಿದೆ, ಅಮ್ಮಾಜಿ. ನೋಡಿ ತಿಂಗಳ ದಿನ ಆಗಿತ್ತು; ಈ ಜ್ವರ ಒಂದು; ನೋಡೇನೇ ಅನ್ನಿಸಿತು. ಹೋಗಿ ಬಾರವ್ವ. ಹಿರಿಯರ ತಪಸ್ಸು ನಿನ್ನ ಕಾಪಾಡಲಿ," ಎಂದನು.

ಬಿಡದಿಯ ಮನುಷ್ಯ ಶಾಂತವ್ವನ ಹತ್ತಿರ ಒಂದು ತಟ್ಟೆಯಲ್ಲಿ ಹಾಲು ಹಣ್ಣು ತಂದಿಟ್ಟನು. ಮನೆ ಮಗಳು ಮನೆಯಿಂದ ಏನೂ ಆಹಾರ ತೆಗೆದುಕೊಳ್ಳದೆ ಹೋಗಬಾರದು. ಶಾಂತವ್ವ ಎರಡು ಗುಟುಕು ಹಾಲನ್ನು ತೆಗೆದುಕೊಂಡಳು. ನೇಮಯ್ಯ ಮತ್ತೆ ಹಾಸಿಗೆಯಲ್ಲಿ ಎದ್ದು ಕುಳಿತನು. ಶಾಂತವ್ವ ಅವನಿಗೆ ಮೊದಲಿನಂತೆ ನಮಸ್ಕಾರಮಾಡಿ, "ನಾ ಬರತೇನೆ ಅಣ್ಣಯ್ಯ," ಎಂದು ಹೊರಟಳು.

"ಬರುತ್ತೇನೆ." ವಾಡಿಕೆಗಾಗಿ ಹೇಳಿದ ಮಾತು. ಅವಳು ಬರುವುದು ಎಷ್ಟೇ ಇಷ್ಟವಾದರೂ ಸದ್ಯಕ್ಕೆ ಬೇಡ ಎಂದು ದೊಡ್ಡಪ್ಪ ಹೇಳಿದ್ದನು. ದಿನ ಕಳೆದಂತೆ ಈ ಪರಿಸ್ಥಿತಿ ಒಳ್ಳೆಯದೇನಾಗಲಿಲ್ಲ.

ಶಾಂತವ್ವ ಅರಮನೆಗೆಂದು ಹೊರಟಾಗ ಅರಮನೆಯಿಂದ ಒಬ್ಬ ಕೋಲುಕಾರ ಬಂದು, ರಾಣಿ ಮರುದಿನ ನೇಮಯ್ಯ ಅರಮನೆಗೆ ಬರಬೇಕೆಂದು ಬೆಸಸಿದ್ದಾರೆ, ಎಂದು ಮನೆವಾರ್ತೆಗೆ ತಿಳಿಸುತ್ತಿದ್ದನು. ಶಾಂತವ್ವ ಅರಮನೆ ಮುಟ್ಟಿದಮೇಲೆ ಇದರ ಕಾರಣ ತಿಳಿಯಿತು. ಮೈಸೂರಿನ ಸರ್ವಾಧಿಕಾರಿ ನವಾಬ್ ಹೈದರಾಲಿ, ಸಂಸ್ಥಾನದಲ್ಲಿ ಆಡಳಿತ ಅವ್ಯವಸ್ಥೆ ಆಗಿದೆಯೆಂದು ತನಗೆ ದೂರು ಬಂದಿರುವುದರಿಂದ ಅದನ್ನು ಸರಿಪಡಿಸುವುದಕ್ಕಾಗಿ ತಾನು ಇಷ್ಟರಲ್ಲೇ ಬಿದನೂರ ಕಡೆ ಸೈನ್ಯದೊಡನೆ ಬರುವವನಾಗಿದ್ದೇನೆ, ಎಂದು ಹೇಳಿ ಕಳುಹಿಸಿದ್ದನು. ಅವನು ಕಳುಹಿಸಿದ ಓಲೆ ಅದೇ ಸಂಜೆ ರಾಣಿ ವೀರಮ್ಮಾಜಿಗೆ ಮುಟ್ಟಿತ್ತು.

೯೩

ವಸ್ತಾರೆಯ ಹೆಗ್ಗಡಿತಿ ರಾಣಿ ವೀರಮ್ಮಾಜಿಗೆ ಬರೆಸಿದ ಓಲೆ ರಾಣಿಯ ಕೋಪಕ್ಕೆ ನೆಪ ಮಾತ್ರ ಆಗಿದ್ದಿತು ಎನ್ನುವುದು ನಿಜ. ಆದರೆ ಆ ಓಲೆ ಬಾರದೆ ಇದ್ದರೆ ಆಗ ರಾಣಿ ಅಷ್ಟೆಲ್ಲ ಊಹೆಮಾಡುವುದಕ್ಕೆ ಕಾರಣ ಇರುತ್ತಿರಲಿಲ್ಲ. ತನ್ನ ಮಾತಿನಿಂದ ರಾಣಿಯ ಮನಸ್ಸು ನೋಯುತ್ತದೆ ಎಂದು ಹೆಗ್ಗಡಿತಿ ತಿಳಿದಿದ್ದಳು; ಆದರೆ ಅದು ಇಷ್ಟೆಲ್ಲ ಅನರ್ಥಕ್ಕೆ ಕಾರಣವಾಗುತ್ತದೆಯೆಂದು ಅವಳು ಊಹಿಸಿರಲಿಲ್ಲ. ನೇಮಯ್ಯನಿಗೆ ಕೆಟ್ಟ ಮಾತ

ನ್ನಾಡಿ ಕಳುಹಿಸಿದಮೇಲೆ ವೀರಮ್ಮಾಜಿ ಹೆಗ್ಗಡಿತಿಯ ಅಧಿಕಪ್ರಸಂಗಕ್ಕೆ ತಕ್ಕ ಶಾಸ್ತಿಯನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದಳು. ಸವಣೂರಿಗೆ ಮಾರಟ್ಟವಾಡಿಗೆ ಸಹಾಯವನ್ನು ಬೇಡುವ ಓಲೆಗಳನ್ನು ಬರೆಸಿ ಕಳುಹಿಸಿದ ಮೇಲೆ ರಾಣಿ ಹೆಗ್ಗಡಿತಿಗೆ ಒಂದು ಉತ್ತರವನ್ನು ಬರೆಯಿಸಿದಳು; ವಸ್ತಾರೆಯ ಕಡೆಗೆ ಕಳುಹಬೇಕಾದ ಇತರ ಓಲೆಗಳೊಂದಿಗೆ ಅದನ್ನು ಆ ನಾಲ್ಕಾರು ದಿನದಲ್ಲೇ ಕಳುಹಿಸಿಕೊಟ್ಟಳು. ಆ ಉತ್ತರ ಹೀಗೆ ಇದ್ದಿತು:

"ಬಿದನೂರು ನಗರದ ಸಂಸ್ಥಾನದಿಂದ ರಾಣಿ ವೀರಮ್ಮಾಜಿಯವರು ವಸ್ತಾರೆ ಹೆಗ್ಗಡಿತಿ ಗೌರಮ್ಮನವರಿಗೆ ಕಳುಹಿಸುತ್ತಿರುವ ನಿರೂಪ, ಅದಾಗಿ. ಹತ್ತು ದಿನದ ಹಿಂದೆ ನೀವು ನಮಗೆ ಕಳುಹಿಸಿಕೊಟ್ಟ ಬಿನ್ನಹದೋಲೆ ಸಮಕ್ಷಮ ಆಗಿದೆ. ನೀವು ನಂಟನ ಸಲುಗೆಯನ್ನು ಬಳಸಿಕೊಂಡು ಆಡಳಿತದ ವ್ಯವಹಾರದ ವಿಷಯದಲ್ಲಿ ನಿಮ್ಮ ಸ್ಥಾನವನ್ನು ಮರೆತು ಉಚಿತ ಅಲ್ಲದ ಮಾತುಗಳನ್ನು ಆಡಿದ್ದೀರಿ. ಆಡಳಿತದ ವಿಷಯ ಪ್ರತ್ಯೇಕ ಆಜ್ಞೆ ನಿಮಗೆ ಬರುತ್ತದೆ; ಇದರಲ್ಲಿ ನಂಟನ ಮಾತಿಗೆ ಪ್ರತಿಯಾಗಿ ಉತ್ತರ ಹೇಳುತ್ತಿದೇವೆ. ನಮ್ಮ ಅದೃಷ್ಟ ಕೆಟ್ಟದಾಗಿ ನಿಮ್ಮ ಹಿರಿಯರಾದ ನಮ್ಮ ಯಜಮಾನರು ತೀರಿಕೊಂಡ ಬಗ್ಗೆ ವ್ಯಥೆಪಡುತ್ತಿರುವ ನೀವು ನಮ್ಮ ವಿಷಯಕ್ಕೆ ಕೆಟ್ಟ ಮಾತುಗಳನ್ನು ಬರೆದು ಕಳುಹಿಸಿದ್ದೀರಿ. ಹೆಣ್ಮಕ್ಕಳನ್ನು ಕುರಿತು ಮರ್ಯಾದೆ ಇಲ್ಲದ ಗಂಡಸರು ಇಂಥ ಮಾತನ್ನಾಡಿದರೆ ಆಶ್ಚರ್ಯವಿಲ್ಲ. ತಾನೂ ಹೆಣ್ಣಾಗಿ ಗಂಡನ್ನು ಕಳೆದುಕೊಂಡು ಜನ ತನ್ನ ವಿಷಯಕ್ಕೆ ಯಾವ ಕೆಟ್ಟ ಮಾತನ್ನಾಡಬಹುದೊ ಎಂದು ಅಂಜಿ ನಡೆಯಬೇಕಾದ ಮರ್ಯಾದೆಯ ಹೆಂಗಸು ಇಂಥ ಮಾತನ್ನು ಬರೆಯಲಾಗದು. ನೀವು ವಯಸ್ಸಿನಿಂದ ಹಿರಿಯರು ಎಂದಿದ್ದೀರಿ. ವಯಸ್ಸಿನಿಂದ ಕಿರಿಯರಾದ ನಾವು ಈ ಮಾತನ್ನು ನಿಮಗೆ ತಿಳಿಸುವಂತೆ ನೀವು ಮಾಡಿಕೊಳ್ಳಬಾರದಾಗಿತ್ತು. ಹಾಗೆ ಮಾಡಿಕೊಂಡಿದೀರಾದ್ದರಿಂದ ಬೇರೆ ದಾರಿ ಕಾಣದೆ ಈ ಬುದ್ಧಿಯ ಮಾತನ್ನು ಹೇಳುತ್ತಿದೇವೆ. ಇದನ್ನು ನೀವು ಗ್ರಹಿಸಬೇಕು. ಮುಂದೆ ಯಾರಿಗೂ ಇಂಥ ಮಾತನ್ನು ಆಡಬಾರದು. ಬೇರೆಯವರಿಗೆ ಆಡದೆ ನಿಮ್ಮ ದೊಡ್ಡಸ್ತಿಕೆ ತುಂಬುವುದಿಲ್ಲ ಆದರೆ,

ನಮಗಂತೂ ಹೇಳಬಾರದು. ಇದನ್ನು ಈ ಸಲಕ್ಕೆ ತಿಳಿಯದವರ ಮಾತು ಎಂದು ಮನ್ನಿಸಲಾಗಿದೆ. ನಮ್ಮ ಮಕ್ಕಳಿಗೆ ಪಟ್ಟಕಟ್ಟುವ ಮಾತೂ ನೀವು ಹೇಳಬೇಕಾದದ್ದಲ್ಲ. ಹೆತ್ತ ನಮಗೆ ಇಲ್ಲದ ಪ್ರೇಮ ಸುತ್ತಿ ಬಳಸಿ ನಂಟು ಎನ್ನುವ ನಿಮಗೆ ಇದೆಯೆಂದು ನಾವು ಒಪ್ಪುವುದಿಲ್ಲ. ಬರಿಯ ಚಪಲಕ್ಕಾಗಿ, ನಗರದಿಂದ ದೂರ ಇದ್ದೇವೆ ಎಂಬ ಧೈರ್ಯದಿಂದ ನೀವು ಈ ಮಾತನ್ನು ಆಡಿದ್ದೀರಿ ಎಂದು ಕಾಣುತ್ತದೆ. ವಸ್ತಾರೆಯ ಹೆಗ್ಗಡಿತಿತನವನ್ನು ನೀವು ಸರಿಯಾಗಿ ನಡಸಿಕೊಳ್ಳಿ. ಬಿದನೂರು ನಗರದ ರಾಣಿತನವನ್ನು ಸರಿಯಾಗಿ ನಡಸಿಕೊಳ್ಳುವ ವಿಷಯವನ್ನು ರಾಣಿಯಾದವರಿಗೆ ಬಿಡಿ. ಈ ವಿಷಯದಲ್ಲಿಯೂ ಮತ್ತೆ ತಪ್ಪಿ ನಡೆಯುವುದು ಬೇಡ. ಹಾಗೆ ನಡೆದಲ್ಲಿ ಹೆಗ್ಗಡಿತಿತನಕ್ಕೆ ಇದಕ್ಕಿಂತ ಹೆಚ್ಚಿನ ಹವಣರಿತ ಜನವನ್ನು ನೇಮಿಸಬೇಕಾದೀತು. ನೀವೂ ಮನೆ ತಪ್ಪಿದ ನಿಮ್ಮ ಸೊಸೆಯೂ ಅವಳ ಮಗನೂ ಸಂಸ್ಥಾನದ ನೆರಳಲ್ಲಿ ಸುಖವಾಗಿ ಬಾಳಬೇಕೆಂದು ನಮ್ಮ ಅಪೇಕ್ಷೆ. ಹೀಗೆ ನಿರೂಪಿಸುವ ನಿಮ್ಮ ನಂಟು ರಾಣಿ ವೀರಮ್ಮಾಜಿ."

ಇದರ ಜೊತೆಗೆ ನಂಬಯ್ಯನಿಂದ ಸಣ್ಣದೊಂದು ಓಲೆ ಇದ್ದಿತು.

"ವಸ್ತಾರೆ ಹೆಗ್ಗಡಿತಿಯವರಿಗೆ ಬಿದನೂರು ನಗರದ ಸರ್ವಾಧಿಕಾರಿ ನಂಬಯ್ಯನವರು ರಾಣಿ ವೀರಮ್ಮಾಜಿಯವರ ಅಪ್ಪಣೆಯಿಂದ ಬರೆದು ಕಳುಹಿಸುತ್ತಿರುವ ನಿರೂಪ ಅದಾಗಿ.

ಸರ್ವಾಧಿಕಾರಿಯಾದ ನಾವು ಕ್ರಮವಾಗಿ ಈ ಅಧಿಕಾರಕ್ಕೆ ಬಂದಿದ್ದೇವೆ. ಈ ವಿಷಯ ಎಲ್ಲರಿಗೂ ತಿಳಿದಂತೆ ತಮಗೂ ತಿಳಿದಿರಬೇಕು. ನಾವು ನಿಮಗೆ ಈ ಮೊದಲು ಕಳುಹಿಸಿದ ಲೆಕ್ಕವನ್ನು ಮತ್ತೆ ನೋಡಿದ್ದಾಗಿದೆ. ಅದರಲ್ಲಿ ಏನೂ ತಪ್ಪಿಲ್ಲ. ನಿಮಗೆ ಯಾವುದೇ ಕಾರಣದಿಂದ ಅನನುಕೂಲ ಆಗಿದ್ದರೆ ನಿಮ್ಮಿಂದ ಆದಷ್ಟು ಕಾಣಿಕೆಯನ್ನು ಒಡನೆ ಕಳುಹಿಸಿ ಉಳಿದದ್ದನ್ನು ತಿಂಗಳು ಎರಡು ತಿಂಗಳಲ್ಲಿ ಕಳುಹಿಸಬಹುದು. ಸಂಸ್ಥಾನದ ವಿಷಯದಲ್ಲಿ ಭಕ್ತಿಯಿಂದ ನಡೆದುಕೊಂಡು ಹಿರಿಯರಿಂದ ಬಂದ ಸ್ಥಾನಮಾನಗಳನ್ನು ಕಾಪಾಡಿಕೊಳ್ಳುತ್ತೀರೆಂದು ನಂಬಿರುವುದಾಗಿದೆ. ಹೀಗೆ ಒಡತಿಯವರು ಅಪ್ಪಣೆ ಮಾಡಿದಾರೆ ಎಂಬುದಾಗಿ ತಿಳಿಸಿದೆ. ಬಿದನೂರ ನಗರ ಸಂಸ್ಥಾನದ ಸರ್ವಾಧಿಕಾರಿ ನಂಬಯ್ಯ."

೯೪

ಈ ಕಾಗದಗಳನ್ನು ನೋಡಿದಾಗ ಹೆಗ್ಗಡಿತಿಗೆ ಎಷ್ಟು ಕೋಪ ಬಂದಿತೆನ್ನುವುದನ್ನು ಹೇಳುವಂತಿಲ್ಲ. ಶಿವಪ್ಪ ಅವನ್ನು ಓದಬೇಕಾದರೆ ಬಹಳ ಹಿಂತೆಗೆದನು. ಅವನು ಓದಲಾರದೆ ಹಿಂತೆಗೆದು ಹಿಂತೆಗೆದು ಎಲ್ಲ ಮಾತನ್ನು ಓದಿ ಹೇಳಿದಮೇಲೆ ಹೆಗ್ಗಡಿತಿ, "ಎಲ, ನೋಡಿದ್ಯ ಇವಳ ದಿಟ್ಟತನ! ನನ್ನ ಮಾತ ಕೇಳಿ ಸ್ವಲ್ಪ ನಾಚತಾಳೇನೋ ಅಂತ ನಾ ತಿಳಿದರೆ, ನಾ ಯಾಕೆ ನಾಚಲಿ, ನಾ ಏನು ಗರತೀನೇ, ಎಂತ ಹೊರಟಿದಾಳಲ್ಲ! ಚೆನ್ನಾಯ್ತು," ಎಂದಳು. ಆಮೇಲೆ ಸ್ವಲ್ಪ ಬಿಟ್ಟು, "ನಮ್ಮಂತವರಿಗೆ ಇಂತವರು ಏನು ಹೇಳಿಯಾರು ತೋರೋದಿಲ್ಲ ಶಿವಪ್ಪ; ಆ ಕೆಲಸ ಮಾಡೋ ಬೇರೆ ಈ ಮಾತ ಆಡಳು ಯಾಕೆ?" ಎಂದಳು.

ಶಿವಪ್ಪ, "ಇಲ್ಲಿಗೆ ಮಾರೋಲೆ ಏನೋ ದಿಟ್ಟವಾಗಿ ಬರಿಸಿಯವರೆ, ಅವ್ವ; ಅಂದರೆ ಅಲ್ಲಿ ನಿಮ್ಮ ಓಲೆ ನೋಡಿದಾಗ ಅಷ್ಟೇನು ದಿಟ್ಟವಾಗಿರಲಿಲ್ಲ ಅಮ್ಮಾಜಿಯವರು," ಎಂದನು.

"ಅಂ, ಅದೂ ಸೈ ಅನ್ನಿ. ತಪ್ಪು ಮಾತು ಹೇಳಿದಿ ಅಂತ ನನ್ನ ದಂಡಿಸೋ ಓಲೆ ನೀವು ನೋಡಿದ್ದು ನನಗೆ ಸುಖ ಇಲ್ಲ. ಇಂತಾದ್ದು, ಹೆಂಡರಾಗಿ ಗಂಡನ ಮಾನ ತೆಗದಿ, ತಾಯಾಗಿ ಮಗಗೆ ಅನ್ಯಾಯ ಮಾಡಿದಿ, ರಾಣಿಯಾಗಿ ರಾಜ್ಯದ ಮರ್‍ಯಾದೆ ಕಳದಿ, ಅಂತ ನಾವಂದ ಮಾತ ಬೇರೆ ಮಂದಿ ನೋಡಿ, ಅವಳಿಗೆ ಸಂತೋಷ ಆಗಿದ್ದೀತ! ಆದರೆ ಏನು, ಬಿಡಪ್ಪ; ಇಂಥವರ ಮಾತ. ತಮ್ಮ ದಾರಿಯಂತೆ ತಾವು ನಡೀಬಹುದು ಅಂದರೆ ಏನಾದರೂ ಆಗಲಿ ಅಂತಾರೆ. ಆ ಪಾಪದಾಗೆ ಅಂತಾ ರುಚಿ ಅದೆ, ಶಿವ ಮಾಡಿದ ಈ ಸೃಷ್ಟೀಲಿ."

ಹೀಗೆಂದು ಹೆಗ್ಗಡಿತಿ ಮತ್ತೆ, "ಇದಾಯಿತು ಶಿವಪ್ಪ, ಇದರಿಂದ ನಮಗೆ ಆಗಬೇಕಾದ್ದೇನಿತ್ತು, ಬಿಡಿ. ಅವರು ಕಳುಹಿರೋ ಲೆಕ್ಕ ಈಗ ಇನ್ನೊಮ್ಮೆ ನೋಡಿ ಅದೆಂತಾದ್ದು ಅಂತ ತಿಳಿದು ಬಗೆಹರಿಸಿಬಿಡಿ. ಕಂತೋ ಕಾಣಿಕೆಯೋ ಮುಟ್ಟಲ್ಲ ಅಂತ ನೆಪ ಮಾಡಿಕೊಂಡು ರಾಣ್ಯಮ್ಮ ಆಗ ದೊರೆನ್ನ ಹೆಗ್ಗಡೆ ಅಂದಾಳು. ಅಜ್ಜಿ ಓಲೆ ಬರೆದೆ ಅಂತ ಮೊಮ್ಮಗಗೆ ದಂಡನೆ ಆದಾತು. ಆದನ್ನ ಸ್ವಲ್ಪ ನೋಡುತೀರಾ?" ಎಂದಳು.

ಶಿವಪ್ಪ: "ಲೆಕ್ಕ ನೋಡಿದೀನಿ ಅವ್ವ. ಅದೇನು ಬಹಳ ವ್ಯತ್ಯಾಸ ಅಲ್ಲ. ಬೆಳೆ ಕೆಟ್ಟಿತು ಅಂತ ಬಿಡತಿ ಕೇಳಿದ್ದಿವಿ; ಅವರು ಇಲ್ಲ ಅನ್ನಲಿಲ್ಲ ಉಂಟು ಅನ್ನಲಿಲ್ಲ. ಬಿಟ್ಟಿದಾರೆ ಅಂತ ನಾವು ತಿಳಿದಿವಿ; ಇಲ್ಲ ಅಂತ ಅವರಂತಾರೆ. ಅದಷ್ಟು ಕಳಿಸಿ ಅಂದಿದಾರಲ್ಲ. ಅಷ್ಟು ಉಳಿಸಿಕೊಂಡು ಮಿಕ್ಕಾದ್ದನ್ನ ಕಳುಸೋದು. ಅವರೇನು ನಿಮ್ಮ ತಂಟೆಗೆ ಬರೋಲ್ಲ."

ಹೆಗ್ಗಡಿತಿ: ಒಳಿತೇ ಆಯ್ತು. ಹಂಗೇ ಮಾಡಿ.

ಈ ನಿರ್ಧಾರದ ಪ್ರಕಾರ ವಸ್ತಾರೆಯ ವಳಿತದ ಗ್ರಾಮಗಳಿಂದ ನಾಯಕರ ಬೊಕ್ಕಸಕ್ಕೆ ಹೋಗಬೇಕಾದ ಕಾಣಿಕೆಯಲ್ಲಿ ಅರ್ಧವನ್ನು ಶಿವಪ್ಪ, ಇದಾದ ಎರಡು ಮೂರು ದಿನದಲ್ಲಿ ಒಮ್ಮೆ, ಇನ್ನರ್ಧವನ್ನು ತಿಂಗಳು ಬಿಟ್ಟು ಇನ್ನೊಮ್ಮೆ, ನಗರಕ್ಕೆ ಕಳುಹಿಸಿ ಮುಟ್ಟಿಸಿದನು. ಕಳುಹಿಸಿ ಎಂದರೆ ಹಣವನ್ನು ಕಳುಹಿಸಿ ಎಂದಲ್ಲ. ನಗರದಲ್ಲಿದ್ದ ಹೆಗ್ಗಡಿತಿಯ ಸಾಹುಕಾರನಿಗೆ ಒಂದು ಕಾಗದ ಒಮ್ಮೆ, ಇನ್ನೊಂದು ಕಾಗದ ಒಮ್ಮೆ, ಬರೆದು ಇದನ್ನು ಏರ್ಪಾಡುಮಾಡಿದನು. ಮಧ್ಯೆ ಗ್ರಾಮಗಳಿಂದ ಸಾಹುಕಾರನ ವಶಕ್ಕೆ ಬತ್ತ, ಅಡಕೆ ಮುಂತಾದ ಸಾಮಾನು ಸಾಕಾದಷ್ಟು ಹೋಗಿ ಲೆಕ್ಕಕ್ಕೆ ಸೇರುವಂತೆ ಏರ್ಪಾಡುಮಾಡಿದನು.

೯೫

ಎರಡನೆಯ ಸಲದ ಓಲೆಯನ್ನು ರಂಗ ಕಲ್ಲ ತೆಗೆದುಕೊಂಡು ಹೋದರು. ಅವರು ತಮ್ಮ ಕೆಲಸವನ್ನು ಮುಗಿಸಿಕೊಂಡು ಹಿಂದಿರುಗುವ ದಿನ ಸರಿಯಾಗಿ ಸಗುನ ಮಲ್ಲಿಗೆ ನಗರವನ್ನು ಬಿಟ್ಟು ವಸ್ತಾರೆಯ ಕಡೆಗೆ ಹೊರಟರು. ನಗರವನ್ನು ಬಿಟ್ಟೊಡನೆ ಇವರು ಜೊತೆಯಾದರು.

ಸಗುನ ಮಲ್ಲಿಗೆ ಮದುವೆಯಾಗುವರೆನ್ನುವುದು ಇವರಿಗೆಲ್ಲಾ ನಿಜವಾಗಿ ಸಂತೋಷ. ಮಲ್ಲಿಗೆ ರಂಗನನ್ನು ಕುರಿತು ಹೆಗ್ಗಡಿತಿ ತನ್ನ ವಿಷಯಕ್ಕೆ ಕೋಪಮಾಡಿಕೊಂಡರೇನೊ ಎಂದು ಕೇಳಿದಳು.

"ಅಂ, ಕೋಪಾನೇ ಮಾಡಿದರು ಈ ಮಾತು ಕೇಳಿದಾಗ. ಆ ಮೇಲೆ ತಾವೇ, ನನಗೆ ಹಂಗೇ ಆಗಬೇಕು, ನಾ ಊಂ ಅಂದಿದ್ದರೆ ಅವಳು

ಸ್ವಾಮಿ ತಾವ ಹೋಗುತಿದ್ದಳೇನು? ಜೀತ ಹಟಮಾಡಿತು ಅಂತ ಹೆಗ್ಗಡಿತಿ ಹಟ ಮಾಡಿದರೆ ಹಿಂಗೆ ಆಗೋದು, ಅಂದರು. ಬರೋ ವರ್ಸ ಚಿಕ್ಕಿ ನಿನ್ನ ಹಂಗೆ ಬಿಗೀ ಹಿಡಿದರೆ ಅವಳು ಸ್ವಾಮಿಾ ತಾವ ಹೋಗೋದು ಬೇಡ, ಹೆಗ್ಗಡಿತೀನೇ ಹುಂ ಅಂತಾರೆ."

ಕಲ್ಲ ನಕ್ಕನು. ಮಲ್ಲಿಗೆ ಸಗುನ ಕೂಡ ನಕ್ಕರು. ಅಂತೂ ಮಲ್ಲಿಗೆ ವಸ್ತಾರೆಯ ಜೀತದ ಹೆಣ್ಮಕ್ಕಳಿಗೆ ತಮಗೆ ಬೇಡದವರನ್ನು ಮದುವೆಯಾಗ ಬೇಕಾದದ್ದಿಲ್ಲ ಎಂಬ ಸ್ವಾತಂತ್ರ್ಯವನ್ನು ಸಾಧಿಸಿಕೊಟ್ಟಂತಾಯಿತು.

ಕಲ್ಲ ರಂಗ, ಮಲ್ಲಿಗೆ ಸಗುನ ಇವರನ್ನು, ಇವರೆಲ್ಲ ಪಟ್ಟಣಕ್ಕೆ ಹೋಗಿದ್ದ ವಿಷಯವಾಗಿ ಈ ಮಾತು ಆ ಮಾತು ಕೇಳಿದರು. ಅದು ಅಷ್ಟೇನು ದೂರದ ಸೀಮೆ ಅಲ್ಲ, ಅಲ್ಲಿಯ ಜನ ತಮ್ಮಂತೆಯೇ ಇರಬೇಕು, ಎಂದು ಇವರ ವಿವೇಕ ಬಲ್ಲದು. ಆದರೂ ಎಂದೂ ಹೋಗದ ಊರು, ಅದರ ವಿಷಯ ಏನು ಕೇಳಿದರೂ ಕೌತುಕವೆ. ಅರಸರು, ಅವರ ಸಿಂಹಾಸನ, ಅವರ ಒಡವೆ, ವಸ್ತು, ಜನರ ವೇಷಭೂಷಣ, ಎಲ್ಲದರ ಮಾತೂ ಆಯಿತು. ನಾಲ್ಕು ದಿನದಲ್ಲಿ ಇವರು ವಸ್ತಾರೆಗೆ ಬಂದು ಸೇರಿದರು.

ಸಂಜೆ ಹೆಗ್ಗಡಿತಿ ಚಾವಡಿಯಲ್ಲಿ ಕುಳಿತಿದಾಳೆ. ನಾಲ್ವರು ಬಂದರು. ರಂಗ ಕಲ್ಲ ನಗರಕ್ಕೆ ಹೋಗಿದ್ದವರು. ಇನ್ನಿಬ್ಬರು ಯಾರು? ಹೆಗ್ಗಡಿತಿಗೆ ಒಡನೆ ತಿಳಿಯಲಿಲ್ಲ. ಮಲ್ಲಿಗೆ ದೂರದಲ್ಲಿ ನೆಲದಮೇಲೆ ಅಡ್ಡಬಿದ್ದಳು. "ನಾನು, ಮಲ್ಲಿಗೆ, ಹೆಗ್ಗಡಿತ್ಯೋರೆ; ಶರಣಾದೆ; ಹೊಟ್ಟ್ಯಾಗೆ ಇಟಕೋಬೇಕು," ಎಂದಳು. ಸಗುನನೂ ನೆಲಕ್ಕೆ ಬಿದ್ದು ನಮಸ್ಕಾರ ಮಾಡಿ ಎದ್ದು ನಿಂತನು.

ಹೆಗ್ಗಡಿತಿಗೆ ಗುರುತಾಯಿತು. ಶಿವಪ್ಪ ಬೇರೆ, "ಮಲ್ಲಿಗೆ ಸಗುನ; ಮೈಸೂರಿಗೆ ಹೋಗಿದ್ದರಲ್ಲ, ನಾಯಕರೊಂದಿಗೆ; ನಾಯಕರು ಹಿಂದಕ್ಕೆ ಬಂದಿರಬೇಕು, ಬಂದಿದಾರೆ," ಎಂದನು.

ಇವರನ್ನು ನೋಡಿ ಹೆಗ್ಗಡಿತಿಗೆ ನಿಜವಾಗಿ ಬಹು ಸಂತೋಷ. ಜೀತ ಆಸ್ತಿ, ಹಿಂದಕ್ಕೆ ಬಂದಿತು, ಎಂದಷ್ಟೇ ಅಲ್ಲ. ನಿಜವಾಗಿ ಅವಳಿಗೆ ಒಂದು ಭಯ ಉಂಟು. ಇವಳ ಹತ್ತಿರ ಬಾಳಲಾರೆ, ನಾ ಬೇರೆ ಎಲ್ಲಾದರೂ ಹೋಗುತೇನೆ, ಅಂತ ಜೀತದ ಹೆಣ್ಣೊ ಗಂಡೊ ಒಂದು ಹೇಳಿದರೆ

ಆಯಿತು, ಆಗ್ಯೆ ತಾನು ಒಳ್ಳೆಯ ಧಣಿ ಅಲ್ಲ. ತಾಯಿ ಒಳ್ಳೆಯವ ಳಾದರೆ ನೀನು ತಾಯಲ್ಲ ಎಂತ ಮಗು ಯಾತಕ್ಕೆ ಹೇಳುತ್ತದೆ? ಮಗು ತಪ್ಪು ಮಾಡಬಹುದಲ್ಲ? ಮಾಡಲಿ. ಅದನ್ನು ಸಹಿಸಿಕೊಳ್ಳದೆ ನೀನು ಎಂಥ ತಾಯಾದೆ? ಕಟ್ಟುನಿಟ್ಟು ಮಾಡಬೇಕು; ಆದರೆ ಅದು ಅತಿ ಯಾಗಬಾರದು. ಮಲ್ಲಿಗೆಯ ವಿಷಯದಲ್ಲಿ ತಾನು ಮಾಡಿದ ಕಟ್ಟುನಿಟ್ಟು ಅತಿಯಾಯಿತೆಂದು ಹೆಗ್ಗಡಿತಿಗೆ ತೋರಿತ್ತು. ಒಂದು ಸಲ ಅವಳು ಸ್ವಾಮಿಯ ಹತ್ತಿರ ಹೋದಾಗಲೇ ಧಣಿ ನನ್ನ ಶಿಸ್ತು ಅತಿಯಾಯಿತು ಎಂತ ತಿಳಿಯಬೇಕಾಗಿತ್ತು. ಹಾಗೆ ಮಾಡದೆ ಅವಳು ಮತ್ತೆ ನಗರಕ್ಕೆ ಹೋಗುವ ಹಾಗೆ ತಾನು ಬಲವಂತಮಾಡಿದ್ದಳು. ಹೀಗೆ ಹೋದ ಜೀತ ಮತ್ತೆ ಬಾರದೆ ನಿಂತಿದ್ದರೆ ಇವಳು ಏನುಮಾಡುವಂತಿತ್ತು? ಮಲ್ಲಿಗೆ ಸಗುನ ನಿಲ್ಲಲಿಲ್ಲ; ಮತ್ತೆ ಬಂದರು; ತನ್ನನ್ನು ಒಳ್ಳೆಯವಳನ್ನು ಮಾಡಿದರು.

ಹೆಗ್ಗಡಿತಿ ಮಲ್ಲಿಗೆಯನ್ನು ಕುರಿತು, "ಏನೇ ಮಲ್ಲಿಗೆ, ಚಂದಾ ಗಿದೀಯಾ? ಸಗುನ, ನೀನು ಪಟ್ಟಣಕ್ಕೆ ಹೋಗಿದ್ದು ಬಂದಿರಂತೆ. ನಾಯಕರು, ಚಿಕ್ಕರಾಣಿ, ಚೆನ್ನವಾಗಿಬಂದರಾ," ಎದು ಕೇಳಿದಳು.

"ಚೆಂದಾಗಿದ್ದಾರವ್ವ. ನಾವೂ ಚೆಂದಾಗಿದ್ದೀವಿ. ಅವ್ವಾವರು ನೀವು ಚೆಂದಾಗಿರಬೇಕವ್ವ".

"ನಾವು ಚಂದಾಗೇ ಇದೀವೇಳು. ಊರಾಗಿರೋ ಮಂದಿಗೆ ಏನು ತೊಂದರೆ? ನೀನೂ ಸಗುನ ಇನ್ನೂ ಮದಿವ್ಯಾಗಿಲ್ಲ ಅಂದರು ಶಿವಪ್ಪ. ಯಾಕೆ ಹಿಂಗೆ ಮಾಡಿದಿ?"

"ಹೆಗ್ಗಡಿತಿ ಕಟ್ಟಿಸಿದ ತಾಯಿತಿ ಗಟ್ಟಿಅವ್ವ. ನೀವು ಆಗಲಿ ಅಂದ ಮೇಲಲ್ಲವೆ ನಾವು ಮದಿವಿ ಆಗೋದು? ನಮಗೆ ಬೇಕಾಯ್ತು, ನಾವು ಮದಿವಿ ಆದಿವಿ, ಅನ್ನೋಕೆ ನಾವೇನು ಗೌಡರು ಕೆಟ್ಟವೇನವ್ವ?"

"ಕೆಟ್ಟವಿ ಅನ್ನೋಮಾತು ಆಡಬೇಡ ಬಿಡು. ಬಿಟ್ಟಿತು ಅನ್ನು. ಏನೋ ಸಗುನ, ಜವರನಿಗೆ ನೀನು ತಪ್ಪು ಹೊನ್ನು ಕೊಡಬೇಕು. ಅವನಿಗೆ ಅಂತಿದ್ದ ಹೆಣ್ಣನ್ನ ಅವನ ತಪ್ಪಿಸಿ ನೀ ಮದಿವೆ ಆಗೋಕೆ. ಇದ್ದರೆ ಕೊಡು, ಇಲ್ಲದಿದ್ದರೆ ಶಿವಪ್ಪನ್ನ ಕೇಳು ಕೊಡುತಾರೆ."

"ಆಯಿತವ್ವ."

"ಒಳಿತು, ಹೋಗಿ, ನಾಳೇನೇ ಮದಿವೆ ಆಗಿ. ಇಷ್ಟು ದಿನ ಸುಮ್ಮನಿದ್ದದೇ ಚೆನ್ನಲ್ಲ. ಮಲ್ಲಿಗೆ ಎಂತಾ ಚದುರೆ; ಹುಡುಗಿ ನಾಯಿ ಹಂಗೆ ನಿನ್ನ ಹಿಂದೆ ಹಿಂದೆ ಅಲೆಸಿಕೊಂಡು ತಿಂಗಳದಿನ ಹಿಂಗೆ ನಡದಿದಾಳಲ್ಲ, ಏನು ಹೇಳೋದು."

"ನಿಜವಾಗಿ ಹಂಗೆ ಮಾಡಿದಾನವ್ವ; ದಿನಾ ಇವನ ರಾಮಾಣ್ಯ! ಇಲ್ಲಿ ಮದಿವೆ ಆಗೋನ, ಊರಿಗೆ ಹೋಗಿ ತಾಯ್ತಿ ಕಟ್ಟಿಕೊಳ್ಳೋಣ, ಅಂತ. ಸ್ವಾಮಿ ಹುಂ ಅನ್ನೋತನಕ ಕಿಮಕ್ ಕಮಕ್ ಅನ್ನಲಿಲ್ಲ. ಆಮೇಲೆ ಇವಂದು ಏಸೊಂದು ಅವಸರ!"

ಎಲ್ಲ ಗೊಳ್ಳೆಂದು ನಕ್ಕರು. ಮಲ್ಲಿಗೆ ತಾನು ಏನು ಹೇಳಿದೆನೊ ಎಂದು ಬೆಪ್ಪಾದಳು. ನೆನೆದುಕೊಂಡು ತಾನೂ ನಕ್ಕಳು. ಸಗುನ ಒಬ್ಬ ನಾಚಿಕೊಂಡು ಸುಮ್ಮನಿದ್ದನು.

ದನಗಳ ಜೊತೆಗೆ ಹೋಗಿದ್ದ ಜವರ ಇಷ್ಟರಲ್ಲಿ ಬಂದನು. ಈ ಏರ್ಪಾಡಿನ ಸಂಗತಿಯನ್ನು ತಿಳಿದು ಒಪ್ಪಿದನು. ಇಷ್ಟಕ್ಕೆ, ಒಪ್ಪದೆ ಬೇರೆದಾರಿ ಏನಿದ್ದಿತು? ಮರುದಿನ ಮದುವೆಯಾಯಿತು. ಓಲಗ ತಾಳ ತಮಟೆಯ ಸಂಭ್ರಮವೇ ಸಂಭ್ರಮ. ಜೀತಕ್ಕೆಲ್ಲ ಹೆಗ್ಗಡಿತಿಯ ಆತಿಥ್ಯದಲ್ಲಿ ಊಟನಡೆಯಿತು. ಚಾವಡಿಯ ಮುಂದೆ ಹೆಗ್ಗಡಿತಿಯ ಎದುರಲ್ಲಿ ಕೋಲಾಟ ನಡೆಯಿತು. ಶಾಸ್ತ್ರಕ್ಕಾಗಿ ಸಗುನ ಮಲ್ಲಿಗೆ ಕೋಲು ಹಾಕಿದರು. ಹೆಣ್ಮಕ್ಕಳು ಒಂದು ಪಕ್ಕಕ್ಕೆ ನಿಂತು, "ಕಟ್ಟಣಿ ಕೋಲ ಕಟ್ಟ್ಯವಳೇ ನಮ್ಮ ಪಟ್ಟದ ರಾಣಿ ಬರತವಳೇ" ಹಾಡನ್ನು ಹಾಡಿದರು.

ಸಂಭ್ರಮ ಮುಗಿದು ಜೀತ ಹಟ್ಟಿಗೆ ಹಿಂದಿರುಗಿದಮೆಲೆ ಹೆಗ್ಗಡಿತಿ ಶಿವಪ್ಪನಿಗೆ, "ಮಲ್ಲಿಗೆ ಪುಣ್ಯಮಂತಿ, ಶಿವಪ್ಪ. ಒಲಿದ ಗಂಡಿನ ಮದಿವಿಯಾದಳು. ಹೆಣ್ಣ ಜೀವಕೆ ಇದು ಬಲು ಸವಿ," ಎಂದಳು.

ಶಿವಪ್ಪ, "ಮನೆ ಮನೆಯಾಗೂ ಹೆಣ್ಣಜೀವ ಇದ ಸವೀತಿರಬೇಕಲ್ಲವ್ವ," ಎಂದನು.

"ಇಲ್ಲ, ಶಿವಪ್ಪ, ನಿಮಗೆ ತಿಳೀದು. ಇದರ ಸವಿ ಬೇರೆ. ಇದನ್ನ ಕಂಡವರು, ಉಣ್ಣುಅಂದರೆ ಜೊತೆಗೆ ನರಕಾ ಉಂಡೇವು, ಅಂತಾರೆ. ನಗರದ ಆ ನಿಮ್ಮ ರಾಣಿಯಮ್ಮನ್ನ ನೋಡಿ."

ಶಿವಪ್ಪನಿಗೆ ಇದು ಏನು ಎಂದು ಅರ್ಥ ತಿಳಿದಂತಾಯಿತು. ಇನ್ನರ್ಥ ಏನು ಎಂದು ತಿಳಿಯಬೇಕಾದರೆ ಇನ್ನೆರಡು ಮಾತನಾಡ ಬೇಕು. ರಾಣಿಯ ಪ್ರಸಕ್ತಿ ಬಂದದ್ದರಿಂದ ಅವನು ಮಾತನ್ನು ಮುಂದ ರಿಸದೆ ಸುಮ್ಮನಾದನು. ಇತ್ತೀಚಿಗೆ ಹೆಗ್ಗಡಿತಿ ದಿನಕ್ಕೆ ಎರಡು ಸಲ ರಾಣಿಯ ಮಾತನ್ನೆತ್ತುವಳು, ಕೆಟ್ಟಮಾತನ್ನು ಹೇಳುವಳು. ಇದಕ್ಕೆ ತಾನು ಅವಕಾಶ ಕೊಡುವುದು ಅವನಿಗೆ ಸಮ್ಮತವಲ್ಲ. ಮೊದಲಾಗಿ, ರಾಣಿ ಎಂತಿದ್ದರೂ ರಾಣಿ, ಅವಳ ಮಾತು ತಾವು ಬಹಳ ಎತ್ತಬಾರದು; ಎರಡನೆಯದಾಗಿ ಇಲ್ಲಿ ಆಡಿದ ಮಾತು ಗಾಳಿಯಲ್ಲಿ ಅಲ್ಲಿ ಕಿವಿಗೆ ಮುಟ್ಟಿತು ಎಂದರೆ ಹೆಗ್ಗಡಿತಿ ಪಾಡು ತನ್ನ ಪಾಡು ಕಷ್ಟಕ್ಕೆ ಬಂದರೂ ಬಂದೀತೆ.

ಶಿವಪ್ಪ ಮರುಮಾತಾಡದ್ದರಿಂದ ಹೆಗ್ಗಡಿತಿ ಆ ವಿಷಯವನ್ನು ಬಿಟ್ಟಳು.

೯೬

ಶಾಂತವ್ವ ಬಂದು ನೋಡಿಕೊಂಡು ಹೋದಮೇಲೆ ನೇಮಯ್ಯನ ಜ್ವರ ಇಳಿಯಿತು. ಅದು ಒಂದು ಜಾತಿಯ ಮರೆಯ ಜ್ವರ. ಅವನಲ್ಲಿ ಸ್ವಲ್ಪ ಮನಸ್ಸಿನ ಬೇಸರದಿಂದ ಬಂದದ್ದೂ ಇರಬಹುದು. ಮರುದಿನ ರಾಣಿಯ ಅಪ್ಪಣೆಯಂತೆ ಅವನು ಅರಮನೆಗೆ ಹೋದನು. ತನಗೆ ಮೈಯಲ್ಲಿ ಚೆನ್ನಾಗಿಲ್ಲ, ತಾನು ಮಾತಾಡಲಾರೆ, ಊರ ಪರವಾಗಿ ಮಾತ ನಾಡಲು ರಾಮಾಶಾಸ್ತ್ರಿಗಳನ್ನು ಬರಮಾಡಿ, ಎಂದು ಮರ್ಯಾದೆಯಿಂದ ಬಿನ್ನವಿಸಿದನು.

ರಾಣಿ ಇದೆಲ್ಲಕ್ಕೂ ಸಿದ್ಧವಾಗಿದ್ದಳು. ಶಾಸ್ತ್ರಿ ಬರಲಿ ಎಂದಳು; ಮಗನಿಗೆ ಹೇಳಿಕಳುಹಿಸಿದಳು. ನಂಬಯ್ಯ ಅಲ್ಲಿಯೆ ಇದ್ದನು; ಆದರೆ ನಾಯಕ ಅವನು ಇರಕೂಡದೆಂದು ತಿಳಿಸಿದನು.

ಎಲ್ಲರೂ ಸೇರಿದಮೇಲೆ ಅವಳು ಆ ಮೊದಲು ನೇಮಯ್ಯನಿಗೆ ಹೇಳಿದ್ದ ಮಾತನ್ನು ಮತ್ತೆ ಹೇಳಿ, "ನಾವು ಮಕ್ಕಳಿಗೆ ರಾಜ್ಯ ಕೊಡ ಬಾರದು ಅಂತ ಎಂದಾಗಲಿ ಅಂದುಕೊಂಡವರಲ್ಲ. ತಂದೆ ರಾಜ್ಯ ಮಗ ನಿಗಲ್ಲದೆ ಬೇರೆ ಯಾರಿಗಾಗತದೆ? ಲಿಂಗಣ್ಣಯ್ಯನ್ನ ಬಿಡಸದೆ ತಾವು

ರಾಜ್ಯ ಒಲ್ಲೆ ಅಂದರೆ, ಹಿರಿಯರಿಗೆ ದ್ರೋಹ ಮಾಡಿದವನು ಇವರಿಗೆ ದ್ರೋಹಮಾಡದೆ ಬಿಡತಾನೆಯೆ, ಅವನ್ನ ಬಿಡಿಸುವ ಮಾತು ಬೇಡ, ಅಂದೆವು ಅಷ್ಟೆ. ಇಷ್ಟಕ್ಕಾಗಿ ಹೊರಗಿನ ಜನವನ್ನ ಇಲ್ಲಿ ಕಾಲಿಕ್ಕು ಎಂತ ಕರೆದರೆ ಸಂಸ್ಥಾನಕ್ಕೆ ಉಳಿಗಾಲವೆ?" ಎಂದಳು.

ಇದಕ್ಕೆ ನಾಯಕ ಉತ್ತರ ಹೇಳಬೇಕು. ನೇಮಯ್ಯ ಶಾಸ್ತ್ರಿ ಬಾಯಿಹಾಕುವಂತಿಲ್ಲ; ಸುಮ್ಮನಿದ್ದರು. ನಾಯಕನೂ ಬಾಯಿ ತೆರೆಯಲಿಲ್ಲ.

ಮಾತು ಮುಂದರಿಯಬೇಕಾದರೆ ತಾನೋ ನೇಮಯ್ಯನೋ ಮಾತ ನಾಡಬೇಕು ಎಂದು ಗ್ರಹಿಸಿ ಶಾಸ್ತ್ರಿ ಕ್ಷಣಬಿಟ್ಟು, "ಹೆತ್ತತಾಯಿ ಹೊಟ್ಟೇಲಿ ಹುಟ್ಟಿದ ಮಕ್ಕಳು ಈ ಮಾತ ಕೇಳದೆ ಏನಡ್ಡಿ? ಆದರೆ ನಾಯಕರು ಯಾರನ್ನಾದರೂ ಕರೆಸಿದರು ಅಂತ ನಾವು ತಿಳಿಯಲಿಲ್ಲ," ಎಂದನು.

"ಮತ್ತೆ ಮೈಸೂರ ಪಡೆ ಇತ್ತ ಮುಖಮಾಡಿ ಹೊರಟುಬರು ತಿದೆಯಲ್ಲ."

ಚೆನ್ನಬಸವ ಇನ್ನೂ ಸುಮ್ಮನೆಯೆ ಇದ್ದನು. ಶಾಸ್ತ್ರಿ, "ಅಮ್ಮಾಜಿ ಯವರ ಮನಸ್ಸಿನ ಶಂಕೆಯನ್ನ ನಾಯಕರು ಪರಿಹಾರಮಾಡಬೇಕು," ಎಂದನು.

ನಾಯಕ ಇನ್ನು ಸಮ್ಮನಿರಲಾಗದೆ, "ನಾವು ತಪ್ಪು ಮಾಡಿರುವುದು ನಿಶ್ಚಯ ಆದರೆ ದೊಡ್ಡವರು ದಂಡಿಸಬಹುದಲ್ಲ," ಎಂದನು.

ಶಾಸ್ತ್ರಿ: ಅಂಥದೇನೂ ಇಲ್ಲ ಅಂತ ನಮ್ಮ ತಿಳಿವಳಿಕೆ. ಅದನ್ನ ತಾವು ಅಪ್ಪಣೆ ಕೊಡಿಸಬೇಕು.

ನಾಯಕ: ಲಿಂಗಣ್ಣಯ್ಯನ ವಿಚಾರಣೆ ಹಂಗೆ ಇದೂ ಒಂದು ವಿಚಾರಣೇನಾ ಏನು? ಯಾರು ಕರೆದರು, ಯಾರು ಬಂದರು, ಯಾರು ಕಂಡರು, ಹೇಳಿರಲ್ಲ!

ನಾಯಕನ ಧ್ವನಿಯಲ್ಲಿ ಹೊಸಬನಿ ಒಂದು ಸೇರಿತ್ತು. ರಾಣಿಗೆ ನೇಮಯ್ಯನಿಗೆ ಶಾಸ್ತ್ರಿಗೆ ಮೂವರಿಗೂ ಇದು ಕಂಡಿತು. ರಾಣಿ ಇದನ್ನು ನಿರೀಕ್ಷಿಸಿದ್ದಳು. ಈ ಚರ್ಚೆಯ ಹೊತ್ತಿನಲ್ಲಿ ನಂಬಯ್ಯ ಇರಲಿ ಎಂದು ಅವಳ ಮನಸ್ಸು. ನಾಯಕ ಅವನು ಇರಕೂಡದು ಎಂದಿದ್ದನು. ನಂಬಯ್ಯ

ಇರಬೇಕೆಂದು ತಾನು ಹಟಮಾಡಿದರೆ ನಾಯಕ ಚರ್ಚೆಗೆ ಬರುವುದಿಲ್ಲ ಎಂದೇ ಅವನ ಮಾತಿನಲ್ಲಿ ಧ್ವನಿ ಇತ್ತು. ತಾನು ಮನಸ್ಸನ್ನು ಜಿತ ಮಾಡಿಕೊಂಡಿರುವಂತೆ ಮಗನೂ ಏನೊ ಜಿತಮಾಡಿಕೊಂಡಿದ್ದಾನೆಂದು ಅವಳು ಗ್ರಹಿಸಿದಳು.

ನಾಯಕನ ಧ್ವನಿಯ ರೀತಿಯಿಂದ ನೇಮಯ್ಯನಿಗೆ ಭಯ ಆಯಿತು. ಶಾಸ್ತ್ರಿಗೆ ಸಂತೋಷ. ಪ್ರೀತಿಯಿಂದ ಬಾಳಬೇಕಾದ ಎರಡು ಜೀವ ಕಾದುವುದು ನೇಮಯ್ಯನಿಗೆ ಇಷ್ಟವಿಲ್ಲ. ಶಾಸ್ತ್ರಿ, "ಎಸರು ಕುದಿಯದೆ ಬೇಳೆ ಬೇಯುವುದುಂಟೆ, ಒಳಗಿರುವ ಮಾತು ಹೊರಕ್ಕೆ ಬರಲಿ, ಒಂದು ಮುಕ್ತಾಯವನ್ನು ಮುಟ್ಟಲಿ," ಎಂದುಕೊಂಡನು.

ರಾಣಿ ಏನೂ ಉತ್ತರ ಹೇಳದೆ ಇರಲು ಶಾಸ್ತ್ರಿ, "ಮೈಸೂರಿನ ಸರ್ವಾಧಿಕಾರಿಗೆ ನಮ್ಮವರು ಯಾರಾದರೂ ಹೇಳಿಕಳುಹಿಸಿದರೆಂದು ಅಮ್ಮಾಜಿಯವರಿಗೆ ತಿಳಿಯ ಬಂದಿದೆಯೇನೊ," ಎಂದನು.

ರಾಣಿ, "ಬೇರೆ ಏನೂ ಇಲ್ಲ. ನಾವು ಈಗಾಗಲೆ ಹೇಳಿದಷ್ಟೆ ನಮಗೆ ತಿಳಿದಿರೋದು," ಎಂದಳು.

ನೇಮಯ್ಯ, "ನಾನು ಮಾತನಾಡ ಬಾರದು. ಆದರೂ ಇಷ್ಟು ಅರಿಕೆಮಾಡಿದರೆ ತಪ್ಪಲ್ಲ. ಆ ಹೊತ್ತೆ ನಾನು ಅಮ್ಮಾಜಿಯವರಿಗೆ ಇದನ್ನು ಬಿನ್ನೈಸಿಕೊಂಡೆ. ಮೈಸೂರಿಂದ ಯಾರೇ ಬಂದದ್ದಕ್ಕೆ ನಾವು ಯಾರೂ ಹೊಣೆ ಅಲ್ಲ. ಮನೆ ಸೊಸೆ ಈ ಮಾತಿಗೆ ಹೋಗಿಲ್ಲ. ನಾನು ಕಂಡ ದ್ದರಲ್ಲಿ ವಸ್ತಾರೆ ಹೆಗ್ಗಡಿತೀನೂ ಇಂಥ ಹೆಜ್ಜೆ ಇಟ್ಟವರಲ್ಲ. ಆ ನಿಯೋಗಿ ಗಳು ಬಂದದ್ದು ಆ ಕಡೆ ಮಂದಿ ಯೋಚಿಸಿದ್ದರಮೇಲೆ. ಈ ಸರ್ವಾ ಧಿಕಾರಿ ಬರುವುದೂ ಆ ಕಡೆ ಮಂದಿ ಯೋಚಿಸಿರುವುದರಮೇಲೆ. ಹೀಗೆ ಅಂತ ನಾವು ಮುಂದೆ ಮಾತಾಡಿದರೆ ಒಳ್ಳೆತು. ಅರಸರು ಸರ್ವಾಧಿಕಾರಿ ಒಂದು ಯೋಚನೆ ಮಾಡಿ ಇದೆರಡೂ ಆಯಿತೊ; ಇಲ್ಲ ಅರಸರ ಯೋಚನೆ ಯಿಂದ ನಿಯೋಗಿಗಳು ಬಂದು, ಅರಸರು ಕಾಣದೆ ಈ ಸರ್ವಾಧಿಕಾರಿ ಬರತಾನೊ; ಇದನ್ನ ನಾವು ನೋಡಬಹುದು. ಮುಂದೆ ಏನು ಮಾಡೋದು ಅದನ್ನ ಯೋಚಿಸಿದರೆ ಆಯಿತು," ಎಂದನು.

ನೇಮಯ್ಯನ ಮಾತಿನಿಂದ ತಾಯಿ ಮಕ್ಕಳ ಮಧ್ಯೆ ದೂಷಣೆ ಪ್ರತಿ

ದೂಷಣೆ ನಡೆಯುವುದು ತಪ್ಪಿತು. ರಾಣಿ, "ಹಂಗೇ ಆಗಲಿ. ನಾವು ಕರೆದರೂ ಬಿಟ್ಟರೂ ಅವರು ಬರೋದು ನಿಜವಾಯ್ತಲ್ಲ. ನಮಗನ್ನಿಸೋದು ಅರಸರೇ ಇದನ್ನ ಮಾಡಿದ್ದಾರೆ ಅಂತ," ಎಂದಳು.

ನಾಯಕ: ನನಗೆ ಹಂಗೆ ತೋರಲಿಲ್ಲ. ಅರಸರ ಮನಸ್ಸು ನಮ್ಮ ದೇವಗಂಗೆ ನೀರಿನಂತೆ. ತಿಳಿಯಲ್ಲಿ ತಿಳಿ. ಹೊರಗೊಂದು ಹೇಳತಾ ಒಳಗೊಂದು ಮಾಡೋ ಚೇತನ ಅಲ್ಲ ಅವರದು. ಇದು ಈ ಸರ್ವಾಧಿಕಾರೀ ಏರ್ಪಾಡು. ಅರಸರಿಗೆ ಹೇಳಿ ಕಳಿಸಿದ್ದಾಗಿದೆ. ಅವರು ಈ ಸರ್ವಾಧಿಕಾರೀನ ತಡೆದು ನಿಲ್ಲಿಸತಾರೆ.

ರಾಣಿ: ನಿಲ್ಲಸದೆ ಇದ್ದರೆ ಮುಂದೆ ಏನು?

ತಾನು ಬಾಯಿ ಹಾಕದೆ ಮಾತು ಮುಂದರಿಯುವಂತಿಲ್ಲ ಎಂದು ತಿಳಿದು ಶಾಸ್ತ್ರಿ ಮಾತನ್ನೆತ್ತಿಕೊಂಡನು. "ಸರ್ವಾಧಿಕಾರಿ ದಳದೊಂದಿಗೆ ಬರುತೇನೆ ಎಂತ ಹೇಳಿದ್ದಾನೆ. ಹೊರಟು ಅಷ್ಟು ದಾರಿ ಬಂದಿದ್ದರೂ ಬಂದಿದ್ದನೇ. ನಾಡನ್ನ ನಗರಾನ ಕಾಯೋಮಾತು ಗೊತ್ತಾಗಬೇಕು. ಇಂಥದಾಗಬೇಕೂ ಅಂತ ಅಪ್ಪಣೆ ಮಾಡೋರುಯಾರು ಅಪ್ಪಣೆಯಾಗಬೇಕು. ಆಡಳಿತ ಇದುವರೆಗೆ ನಡೆದಂತೆ ನಡೆಯೋದು ಸಾಧ್ಯವಿಲ್ಲ."

ರಾಣಿ: ಇದುವರೆಗೆ ಏನು ಅಂಥಾದ್ದು ಆದ್ದು?

ಶಾಸ್ತ್ರಿ: ಏನಾದರೂ ತಪ್ಪಾಯ್ತು ಅಂತಲ್ಲ. ಜೀತಾನ, ಗರಡಿಗಳನ್ನ, ಗೌಡ ಮಕ್ಕಳನ್ನ, ಕರೆದು ಕೂಡಿಸಬೇಕು. ಯಾರು ಎಲ್ಲಿ ನಿಲ್ಲಬೇಕೂ ಅಂತ ಹೇಳಬೇಕು. ನಡಸೋ ಮಂದಿ ಯಾರು ಅಂತ ನೇಮಿಸಿ ನಿಲ್ಲಿಸಬೇಕು. ಇದನೆಲ್ಲ ಅಮ್ಮಾಜಿಯವರು ಮಾಡೋದಕ್ಕಾಗೊದಿಲ್ಲ.

ಮಗ ಎದುರಿಗೆ ಇಲ್ಲದಿದ್ದರೆ ರಾಣಿ, "ಯಾಕೆ ಆಗೋದಿಲ್ಲ," ಎಂದು ಹೆಳುತ್ತಿದ್ದಳೇನೋ! ಅವನನ್ನು ಎದುರಿಗೆ ಇರಿಸಿಕೊಂಡು ಈ ಗಂಡಿನ ಕೆಲಸವನ್ನೂ ತಾನೇ ಮಾಡುತ್ತೇನೆ ಎನ್ನುವುದಕ್ಕೆ ಅವಳಿಗೆ ಬಾಯಿ ಬಾರಲಿಲ್ಲ. ಅವಳು, "ಆ ವಿವರಕ್ಕೆ ಬೇರೆ ಏರ್ಪಾಡು ಆಗಬೇಕು ತಾನೇ. ಆಡಳಿತ ಸದ್ಯಕ್ಕೆ ಈಗಿನಂತೆಯೇ ಇರಬಹುದು," ಎಂದಳು.

ಶಾಸ್ತ್ರಿ: ನಾಯಕರಿಗೆ ಇಷ್ಟರಲ್ಲೆ ಪಟ್ಟಕಟ್ಟಬೇಕು ಅಂತ ಅಮ್ಮಾಜಿ

ಯೋಚನೆ ಮಾಡಿದ್ದಿರಿ. ಈಗ ಅದನ್ನ ಮಾಡಿಬಿಟ್ಟರೆ ಬಹು ವಿಷಯ ಸುಲಭ ಆಗುತ್ತೆ.

ರಾಣಿ: ಏನಿಂಥಾ ಅವಸರದಲ್ಲಿ? ನಾಡನ್ನ ಕಾಯಬೇಕಾಗಿ ಬಂದ ಹೊತ್ತಿನಲ್ಲಿ ನಗರದಲ್ಲಿ ಹಬ್ಬಮಾಡುತಾ ಇರೋಕಾಗತದೆಯೆ?

ಶಾಸ್ತ್ರಿ: ಹಬ್ಬಹರವು ಮುಂತಾದ್ದು ಮುಂದಕ್ಕೆ ನಡೀಬಹುದು. ಈಗ ನಾಯಕರು ರಾಜ್ಯವಹಿಸಿಕೊಂಡರೂ ಅಂತ ಗಾದಿ ಏರೋ ಅಷ್ಟು ಶಾಸ್ತ್ರ ನಡಸಿದರೆ ಸಾಕು. ಜನವೆಲ್ಲ ಇದನ್ನ ಬಯಸತಾರೆ.

ರಾಣಿ: ನೀವು ಯಾವಾಗಲೂ ಹೀಗೇ ಶಾಸ್ತ್ರಿಗಳೆ. ನೀವೇನೋ ಬಯಸಿದ್ದು, ನಾನೇನೋ ಬೇಡಾ ಅಂದದ್ದು, ಅನ್ನೋಹಾಗೆ ಮಾತನಾಡತೀರಿ. ಹಿಂದೆ ಇಂಥಾ ಮಾತನಾಡಿದಿರಿ; ಸಭೆ ಬಿಟ್ಟು ಹೊರಟು ಹೋದಿರಿ. ತಿರಿಗಿ ಅದೇ ಮಾತನ್ನ ಆಡತಾ ಇದ್ದೀರಿ.

ಶಾಸ್ತ್ರಿ: ತಿರಿಗಿ ಬೇಕಾದರೆ ಸಭೆಬಿಟ್ಟು ಹೋಗುತೇನೆ ಅಮ್ಮಾಜಿಯವರೆ. ನಮಗೆ ನಿಮ್ಮ ಸನ್ನಿಧಿಯಲ್ಲಿ ಮಾತನಾಡೋದು ಬರಲಿಲ್ಲ.

ನೇಮಯ್ಯ ಶಾಸ್ತ್ರಿಗಳ ಕಡೆ ನೋಡಿ ಕೈಯಿಂದ, ತಡೆದುಕೊಳ್ಳಿ, ಎಂದು ಸನ್ನೆಮಾಡಿದನು. ರಹಸ್ಯವಾಗಿ ಏನೂ ಅಲ್ಲ; ಉಳಿದವರೂ ಅದನ್ನು ನೋಡುವಂತಿತ್ತು.

ಶಾಸ್ತ್ರಿ ಇದು ನ್ಯಾಯ ಎಂದು ಗ್ರಹಿಸಿದನು. ಪ್ರತಿಯೊಬ್ಬರೂ ತಮ್ಮ ದೊಡ್ಡಸ್ತಿಕೆಯ ಯೋಚನೆ ಮಾಡಿದರೆ ಕೆಲಸ ಹಾಗೆಯೇ ನಿಂತು ಹೋಗುವುದು. ಅವನು ಮಾತನ್ನು ಮುಂದರಿಸಿದನು: "ಒಪ್ಪಿದೆ ನೇಮಯ್ಯನೋರೆ, ನನ್ನ ಮಾತು ತಪ್ಪಿತು; ಮನ್ನಿಸಬೇಕು ಅಮ್ಮಾಜಿಯವರೆ. ಸತ್ಯಂಬ್ರೂಯಾತ್ ಪ್ರಿಯಂ ಬ್ರೂಯಾತ್ ಅಂತಾರೆ ಹಿರಿಯರು. ನಾನು ಸತ್ಯಂ ಬ್ರೂಯಾತ್ ಅನ್ನೋದರಲ್ಲಿ ಪ್ರಿಯಂ ಬ್ರೂಯಾತ್ ಅನ್ನೋದನ್ನ ಮರೀತೇನೆ. ನಿಮಗೆ ಬೇಕಾದ್ದನ್ನಲ್ಲವೆ ನಾನು ಹೇಳತಾ ಇರೋದು? ಅದನ್ನ ನಡಸಿಬಿಡೋಣಾಗಲಿ. ಅದು ತಮಗೂ ಸಂತೋಷ; ಜನಕ್ಕೂ ಸಂತೋಷ."

ರಾಣಿ: ಆಗತ್ಯ ಆಗಬಹುದು ಅಂದೇವು. ಅಂದರೆ ಈ ಕಷ್ಟದ ಹೊತ್ತಿನಲ್ಲಿ ಕೈಯಾಗಿನ ಸೂತ್ರಾನೆಲ್ಲ ಇನ್ನೊಂದು ಕೈಗೆ ದಾಟಸೋದು ಸರಳವಲ್ಲ.

ಶಾಸ್ತ್ರಿ: ನಾಯಕರು ಏನಪ್ಪಣೆ ಮಾಡತಾರೋ ನನಗೆ ತಿಳಿಯದು. ತೀರಾ ದಾಟಿಸೋಕಾಗದ ಕೆಲಸಾನ ಅಮ್ಮಾಜಿಯವರ ಕೈಲಿಟ್ಟುಕೊಂಡು, ಗಂಡಾಡಳಿತಾನೆಲ್ಲ ಅವರಿಗೆ ಒಪ್ಪಿಸಬಹುದಂತ ನನಗೆ ತೋರತದೆ.

ರಾಣಿ: ನೀವೇನಂತೀರಿ ನೇಮಯ್ಯ?

ನೇಮಯ್ಯ: ಈ ಮಾತಿನಲ್ಲಿ ನನ್ನನ್ನ ಏನೂ ಕೇಳಬಾರದು, ಅಮ್ಮಾಜಿಯವರೆ. ನೀವು ಪ್ರೀತಿಯಿಂದ ಬಾ ಅಂದಿರಿ. ಬಂದಿದೇನೆ. ಮಾತು ಸಮನಾಗಿರಲಿ ಅಂತ ಒಂದು ಎರಡು ಶಬ್ದ ಆಡಿದ್ದೇನೆ. ಎಂತು ನಡೆಯೋದು ಅನ್ನೋದನ ಹಿರಿಯರು ತಾವು ನಿರ್ಣಯಮಾಡಿರಿ. ಉಳಿದೋರೆಲ್ಲ ನಿಮ್ಮ ಮಾತಿನಂತೆ ನಡಸೋದಾಗಲಿ.

ನೇಮಯ್ಯನಮೇಲೆ ಭಾರಹಾಕಿ ಅವನ ಸಂಕೋಚವನ್ನು ಬಳಸಿಕೊಳ್ಳಬೇಕೆಂದು ರಾಣಿಯ ಯೋಚನೆ. ಅವನು ತೀರ ಅಚ್ಚಮನದಿಂದ ಉತ್ತರ ಕೊಟ್ಟು ಅವಳ ಸಂಚನ್ನು ಕೆಡಿಸಿದನು.

ಶಾಸ್ತ್ರಿ ಹೇಳಿದ ರೀತಿಯಲ್ಲಿ ತಪ್ಪು ಹುಡುಕುವಂತಿರಲಿಲ್ಲ. ರಾಣಿ, "ಶಾಸ್ತ್ರಿಗಳು ಹೇಳಿದಂತೆ ಆಗಬಹುದು ಅಂದರೆ ನಮ್ಮ ಅಡ್ಡಿ ಇಲ್ಲ. ಹಣ ಕಾಸು ಬರೋದು ಹೋಗೋದು ನಾವು ನೋಡಬೇಕಾಗತದೆ. ಸವಣೂರು ಮಾರಟ್ಟವಾಡಿಗೆ ಓಲೆ ಬರಸಿ ಕಳಿಸಿದ್ದಾಯ್ತು. ಅತ್ತಣಿಂದ ಜನ ಬಂದರೆ ಅವರನ್ನ ಸುದಾರಿಸಿಕೊಳ್ಳಬೇಕು. ಪಡೆ ಕೂಡಿಸೋದು ಪಡೆವಳರನ್ನ ನೇಮಿಸೋದು, ನಾಡು ಕಾಯೋದು, ಇದರ ಏರ್ಪಾಡು ನಿಮ್ಮ ಕೆಲಸ ಆಗತದೆ," ಎಂದಳು.

ಶಾಸ್ತ್ರಿ: ನಾಯಕರು ಇದಕ್ಕೆ ಒಪ್ಪಿದರೆ ನಾವು ಮುಂದಿನ ಏರ್ಪಾಡಿಗೆ ನೋಡಬಹುದು.

ನಾಯಕ: ಆಗಬಹುದು; ಅಡ್ಡಿ ಇಲ್ಲ. ಅಂದರೆ, ಬೇಕು ಬೇಡದ್ದನ್ನ ಶಾಸ್ತ್ರಿಗಳು ನಮ್ಮಿಂದ ತಿಳಿದು ನಡಸಿಕೊಂಡು ಬರಬೇಕು. ಯಾವುದಕ್ಕೂ ಬೇರೆ ಯಾರನ್ನೂ ಹೊಣೆ ಮಾಡಬಾರದು.

ನಂಬಯ್ಯನನ್ನು ಎಂದು ನಾಯಕನ ಅರ್ಥ.

ರಾಣಿ: ಬೇರೆ ಯಾರು ನಂಬಯ್ಯ. ಆ ಪಾಪಿ ಮಾಡಿದ ತಪ್ಪೇನು?

ನಾಯಕ: ಇದು ಹಣಕಾಸಿನ ಲೆಕ್ಕದ ಮಾತು. ಲಿಂಗಣ್ಣಯ್ಯ ಏನು ಮಾಡಿದರು ಅಂತ ಸೆರೇಲಿದ್ದಾರೆ, ನಂಬಯ್ಯ ಅದನ್ನ ಮಾಡಿದ್ದಾನೇ ಅಂತ ಜನ ಹೇಳತಾ ಇದ್ದಾರೆ. ಇದನ್ನ ಭದ್ರಮಾಡಿಕೊಳ್ಳಬೇಕು. ಇಲ್ಲ ಅಂದರೆ ನಾವು ಉಳಿಯುವಂತಿಲ್ಲ.

ರಾಣಿ: ಹತ್ತು ವರ್ಷದಿಂದ ನಾವು ನಂಬಯ್ಯನ್ನ ಕಂಡಿದ್ದೀವಿ. ಅವನು ಕಳ್ಳನಲ್ಲ. ಈ ಕಷ್ಟ ಹರಿದಮೇಲೆ ವಿಚಾರಣೆ ಮಾಡಿಸೋಣ.

ನಾಯಕ: ವಿಚಾರಣೆ ಮಾಡಬೇಕೂ ಅಂತ ನಮ್ಮ ಮನಸ್ಸೇನೂ ಇಲ್ಲ. ಆಗಿರೋದಾಗತಾ ಇನ್ನು ಮುಂದೆ ಅವನು ಹಣಕಾಸಿನ ವ್ಯವಹಾರ ನಡಸೋದು ಬೇಡಾ ಅನ್ನೋದು ಅಷ್ಟೆ ನಮ್ಮ ಯೋಚನೆ. ಆ ಕೆಲಸಾನ ಶಾಸ್ತ್ರಿಗಳು ವಹಿಸಿಕೊಳ್ಳಬೇಕು.

ಶಾಸ್ತ್ರಿ: ಬೇಡಿ ಪ್ರಭುಗಳೆ, ಈ ಹೊಣೆ ನನಗೆ ಬೇಡಿ. ಅಮ್ಮಾಜಿ ಯವರ ಸನ್ನಿಧಿಗೆ ತಮ್ಮ ಮಾತು ಏನಿದ್ದರೂ ಮುಟ್ಟಿಸಿ ಅಪ್ಪಣೆ ತರೋ ಅಷ್ಟು ಕೆಲಸಾನ ವಹಿಸಿಕೋತೇನೆ. ಹಣ ಕಾಸಿನ ಕೆಲಸ ಬೇಡಿ.

ನಾಯಕ: ಎಲ್ಲಕ್ಕಿಂತ ದೊಡ್ಡ ಮಾತು ಇದು. ನಾಡೆಲ್ಲ ಹಣ ಕಳುಹಿಸತದೆ. ಹಣ ಎರಚಿ ನಾಡನ್ನ ಕಾಯಬೇಕಾಗತದೆ. ಇದನ್ನ ನೋಡಿಕೊಳ್ಳೋ ಮಂದಿ ನಂಬಿಕೆ ಜನ ಆಗಿರಬೇಕು.

ಶಾಸ್ತ್ರಿ: ಎಷ್ಟು ನಂಬಿಕೆ ಜನವಾದರೂ ಅವರಿಗೆ ಉಳಿಗಾಲ ಇರ ಲಾರದು. ಲಿಂಗಣ್ಣಯ್ಯ ಸೆರೆಗೆ ಹೋದ. ನಂಬಯ್ಯ ಅದರ ದಾರಿ ಯಲ್ಲಿದ್ದಾನೆ. ನಾನು ಆ ದಾರಿ ನಡೆಯೋಕೆ ಮೊದಲು ಮಾಡಲಾರೆ.

ನೇಮಯ್ಯ: ಅಮ್ಮಾಜಿಯವರು ಇದಕ್ಕೇನಾದರೂ ದಾರಿ ತೋರಿ ದರೆ ಇದ್ದೀತು.

ಇದಕ್ಕೆ ಒಪ್ಪದೆ ಇದ್ದರೆ ಆಡಳಿತ ತನ್ನ ಕೈಯಲ್ಲಿ ಇರುವುದು ಎಂಬ ಮಾತಿಗೂ ಧಕ್ಕೆ ಬರಬಹುದು ಎಂದು ರಾಣಿಗೆ ಶಂಕೆ. ಅವಳು, "ನಮ್ಮ ಮನೆವಾರ್ತೆ ಲೆಕ್ಕಾಚಾರ ನಂಬಯ್ಯ ಎಂದಿನಂತೆ ನೋಡಿಕೊಳ್ಳತಾನೆ. ಬೊಕ್ಕಸದ ಲೆಕ್ಕಾನ ಶಾಸ್ತ್ರಿಗಳಿಗೆ ಒಪ್ಪಿಸಬಹುದು. ಇರುವುದೇನು ಅಂತ ನೋಡಿಕೊಂಡು ಮುಂದಕ್ಕೆ ಬರುವುದು ಹೋಗೋದನ್ನ ಸರಿಯಾಗಿ ವಿಚಾರಿಸಿಕೊಳ್ಳಲಿ. ಸರಿಯಾಗಬಹುದು," ಎಂದಳು.

ನೇಮಯ್ಯ: ಒಪ್ಪಿಕೊಳ್ಳಿ ಶಾಸ್ತ್ರಿಗಳೆ.

ಶಾಸ್ತ್ರಿ: ಒಪ್ಪಬೇಕು ಅಂದರೆ ಬೇರೆ ಏನು ಮಾಡಲಿ?

ನಾಯಕ: ಹೀಗೆ ಆಗಬಹುದು.

ಇಲ್ಲಿಗೆ ಸದ್ಯಕ್ಕೆ ಒದಗಿದ ವಿಪತ್ತನ್ನು ಹೇಗೆ ಎದುರಿಸುವುದು ಎಂದು ನಿಶ್ಚಯಿಸಿದಂತಾಯಿತು. ಏರ್ಪಾಡು ಬಹುಮಟ್ಟಿಗೆ ಇದ್ದಂತೆ ಇರುತ್ತ ತಾನೇ ಯಜಮಾನಿಯಾಗಿ ಇರುವೆನೆಂದು ರಾಣಿಗೆ ಸಂತೋಷ. ನಾಡನ್ನು ಕಾಯುವುದು ತನ್ನ ಹೊಣೆಯಾಗಿರುತ್ತ ಆ ರಕ್ಷಣೆಯ ಕೆಲಸ ತನ್ನ ಕೈಗೆ ಬಂದಿತೆನ್ನುವುದು ನಾಯಕನಿಗೆ ಸಮಾಧಾನ. ಜಗಳವಾಗದೆ ಯಾವುದೋ ಮಧ್ಯ ಮಾರ್ಗ ಸಿಕ್ಕಿತೆಂದು ನೇಮಯ್ಯನ ಮನಸ್ಸಿಗೆ ಸುಖ. ರಾಜ್ಯದ ಕೆಲಸದಲ್ಲಿ ನಾಯಕ ಪ್ರಮುಖನಾದ, ರಾಣಿ ಹೆಸರಷ್ಟಕ್ಕೆ ಅಧಿಕಾರಿಯಾಗಿರುತ್ತಾಳೆ, ಎಂದು ಶಾಸ್ತ್ರಿಗೆ ಸಮಾಧಾನ.

ನಂಬಯ್ಯ ಮರೆಯಲ್ಲಿದ್ದನು; ನಾನು ಕೆಟ್ಟೆ, ನನ್ನನ್ನು ಕಾಯುವವರಿಲ್ಲದೆ ಹೋದರು, ಎಂದು ದುಃಖಪಟ್ಟನು. ಅವನಿಗೆ ರಾಣಿಯನ್ನು ಕುರಿತು ಅಸಮಾಧಾನವಾಯಿತು; ನಾಯಕನನ್ನು ಕುರಿತು ದ್ವೇಷ ಉರಿದು ಎದ್ದಿತು.

## ೯೭

ಶಿವಮುಗ್ಗಿಯಿಂದ ಹೊರಟು ಭಾಸ್ಕರಯ್ಯ ಯಾತ್ರಿಕನಂತೆ ಪ್ರಯಾಣ ಮಾಡಿ, ಹತ್ತುದಿನದೊಳಗಾಗಿ ಪಟ್ಟಣವನ್ನು ಮುಟ್ಟಿದನು. "ನಗರದ ನಾಯಕರು ಇಲ್ಲಿದಾರೆ ಎಂದು ಕೇಳಿದೆ. ಯಾತ್ರೆಗೆ ಸಹಾಯ ಬೇಡಬೇಕು. ಅವರಿಗೆ ತಿಳಿಸಿ," ಎಂದು ಅರಮನೆಯ ಬಾಗಿಲ ಸೇವಕರನ್ನು ಕೇಳಿದನು. ರಾಜಮಾತೆ ಈ ಮಾತನ್ನು ಕೇಳಿ ಅವನನ್ನು ಒಳಕ್ಕೆ ಬರಮಾಡಿಕೊಂಡಳು; ಯಾರು ಏನು ಎಂದು ವಿಚಾರಿಸಿದಳು. ಅವನು ಸಂಗತಿಯನ್ನೆಲ್ಲ ಅರುಹಿದನು; ನಾಯಕ ಕೊಟ್ಟಿದ್ದ ಓಲೆಯನ್ನು ಅರಸರಿಗೆ ಮುಟ್ಟಿಸಬೇಕೆಂದು ಒಪ್ಪಿಸಿದನು.

ರಾಜಮಾತೆ, "ಒಳಿತು. ಸಂಜೆಗೆ ಉತ್ತರ ಬರಸಿ ಇಟ್ಟಿರುತ್ತೇವೆ. ನೀವು ಹೋಗಿ ಸ್ನಾನಮುಗಿಸಿಕೊಂಡು, ದೇವರ ದರ್ಶನಮಾಡಿ

ಕೊಂಡು ಊಟಮಾಡಿ ವಿಶ್ರಮಿಸಿಕೊಳ್ಳಿ. ಸಂಜೆ ನಿಮಗೆ ಹೇಳಿ ಕಳುಹಿಸುತ್ತೇವೆ," ಎಂದಳು.

ತಾಯಿ ಮಗ ಇಬ್ಬರೂ ಕುಳಿತು ನಾಯಕನ ಓಲೆಯನ್ನು ನೋಡಿದರು; ತುಂಬ ವ್ಯಥೆಪಟ್ಟರು. ತಮ್ಮ ಕೊರಳಿಗೆ ಸುತ್ತಿದ ಹಾವು ತಮ್ಮ ಹತ್ತಿರ ಬಂದ ಜನವನ್ನೂ ಕಚ್ಚುತ್ತಿದೆ, ಇಬ್ಬರೂ ಬದುಕೋಣ ಎಂದು ಯೋಚಿಸಿದರೆ ನಮ್ಮಿಂದ ಇವರು ಕೆಡುವಂತಾಗಿದೆಯಲ್ಲ, ಎಂದು ದುಃಖಿಸಿದರು.

ಒಳಿತು; ಅನಿವಾರ್ಯವಾದ ಮಾತು; ಅನುಭವಿಸದೆ ದಾರಿ ಇಲ್ಲ. ಅರಸರು ವೀರಣ್ಣನನ್ನು ಕರೆಸಿ ಎರಡು ಓಲೆ ಬರೆಸಿದರು. ಸರ್ವಾಧಿಕಾರಿ ನವಾಬನಿಗೆ ಬರೆದ ಓಲೆ ಹೀಗೆ ಇದ್ದಿತು:

"ಸಂಸ್ಥಾನದ ಸರ್ವಾಧಿಕಾರಿಗಳು ನವಾಬ್ ಹೈದರಲ್ಲಿ ಖಾನ್ ಸಾಹೇಬರವರಿಗೆ. ಇಮ್ಮಡಿ ಕೃಷ್ಣರಾಜ ಒಡೆಯರ್ ಮಹಾಪ್ರಭು ಮಾಡುತ್ತಿರುವ ನಿರೂಪ. ಬಿದನೂರು ನಗರದ ಆಡಳಿತದಲ್ಲಿ ಏನೋ ಅವ್ಯವಸ್ಥೆ ಆಗಿದೆಯೆಂದು ನಿಮ್ಮಲ್ಲಿ ದೂರು ಬಂದು, ನೀವು ಅಲ್ಲಿಯ ಸಂಗತಿಗಳನ್ನು ಸರಿಪಡಿಸುವ ಯೋಚನೆ ಮಾಡಿದ್ದೀರೆಂದು ನಮಗೆ ತಿಳಿದುಬಂದಿದೆ. ನಗರದ ವಿಷಯ ಮೊದಲೆ ನಮ್ಮ ಗಮನಕ್ಕೆ ಬಂದು ನಾವು ಅಲ್ಲಿಯ ನಾಯಕರನ್ನು ಬರಮಾಡಿಕೊಂಡು ಸಂಭಾಷಣೆ ನಡಸಿದ್ದಾಗಿದೆ. ಅವ್ಯವಸ್ಥೆ ಏನೂ ಇಲ್ಲ ಎಂದೂ ತಾವು ಇಷ್ಟರಲ್ಲೇ ರಾಜ್ಯದ ಸೂತ್ರವನ್ನು ವಹಿಸಿಕೊಳ್ಳುವರಾಗಿ ಇದ್ದೇವೆಂದೂ ಅವರು ನಮಗೆ ತಿಳಿಸಿದಾರೆ. ಆದಕಾರಣ ನೀವು ವೃಥಾ ಶ್ರಮಪಡುವ ಕೆಲಸವಿಲ್ಲ. ನೀವು ಕೂಡ ಸೀರ್ಯ ಚಿತ್ರದುರ್ಗ ಪ್ರಾಂತಗಳಲ್ಲಿ ಬಹುಕಾಲ ಕಾಳಗ ನಡಸಿ ದಣಿದಿದ್ದೀರಿ. ಈ ಕಾರಣದಿಂದ ನೀವು ಈ ನಿರೂಪವನ್ನು ಕಂಡ ಒಡನೆ ನಗರವನ್ನು ಕುರಿತು ಮಾಡಿರುವ ಯೋಚನೆಯನ್ನು ನಿಲ್ಲಿಸತಕ್ಕದ್ದು. ಒಂದು ಕಾಲದಲ್ಲಿ ಸಾಮಂತವಾಗಿದ್ದು ಈಗ ಮಿತ್ರಭಾವದಿಂದ ನಡೆದುಕೊಳ್ಳುತ್ತಿರುವ ನೆರೆಯ ಸಂಸ್ಥಾನದ ವಿಷಯದಲ್ಲಿ ಅಚಾತುರ್ಯದಿಂದ ನಡೆದಂತಾಗಬಾರದೆಂದು ಈ ನಿರೂಪವನ್ನು ಕಳುಹಿಸಿದ್ದೇವೆ. ರಾಜಭಕ್ತಿನಿಷ್ಠರಾದ ನಿಮ್ಮಂಥ ಅಧಿಕಾರಿಗಳಿಗೆ ಬೇರೆ ಹೇಳತಕ್ಕದ್ದು ಏನಿದೆ?

ಎಂಬವಾಗಿ ರಾಯಸದ ವೀರಣ್ಣನಿಂದ ಬರಸಿದ ನಿರೂಪ. ಇಮ್ಮಡಿ ಕೃಷ್ಣರಾಜ ಒಡೆಯರವರು."

ನಾಯಕನಿಗೆ ಬರೆದ ಉತ್ತರ ಹೀಗಿದ್ದಿತು: "ಬಿದನೂರು ನಗರದ ಸಂಸ್ಥಾನದ ನಾಯಕ ಕುಮಾರರು ಶ್ರೀ ಚೆನ್ನಬಸವ ನಾಯಕರ ಸಮುಕ್ಷಮಕ್ಕೆ. ಮೈಸೂರು ಸಂಸ್ಥಾನದ ಮಹಾಪ್ರಭು ಶ್ರೀಮನ್ಮಹಾರಾಜ ಇಮ್ಮಡಿ ಕೃಷ್ಣರಾಜ ಒಡೆಯರವರು ಅಟ್ಟಿದ ವಿಶ್ವಾಸದ ಓಲೆ ನಿರೂಪ ಆದಾಗಿ, ತಾವು ನಮ್ಮ ಕಡೆಗೆ ಕಳುಹಿಸಿದ ಪತ್ರಿಕೆ ಮುಟ್ಟಿದೆ. ನಮ್ಮ ಸರ್ವಾಧಿಕಾರಿಗಳು ನಗರವನ್ನು ಕುರಿತು ಮಾಡಿರುವ ಯೋಚನೆ ನಮಗೆ ತಿಳಿದು ನಡೆದದ್ದಲ್ಲ. ಅವರು ಈಗ ಎರಡು ತಿಂಗಳಿಂದ ಗಡಿನಾಡಿನಲ್ಲಿರುತ್ತ, ಅಲ್ಲಿ ಅವರಿಗೆ ಮುಟ್ಟಿದ ಸುದ್ದಿಯ ಕಾರಣದಿಂದ ಆ ಯೋಚನೆಯನ್ನು ತಾವೆ ಮಾಡಿದ್ದಾರೆ. ಈ ವಿಷಯದಲ್ಲಿ ನಮ್ಮನ್ನು ಕುರಿತು ತಾವು ಅನ್ಯಥಾ ಯೋಚಿಸಿ ಶಂಕಿಸ ಕೆಲಸವಿಲ್ಲ. ನಿಮ್ಮ ಪತ್ರ ಬಂದೊಡನೆ ನಾವು ನಮ್ಮ ಸರ್ವಾಧಿಕಾರಿಗಳಿಗೆ ಅವರು ಮಾಡಿರುವ ಯೋಚನೆಯನ್ನು ಅಲ್ಲಿಗೇ ಬಿಡಬೇಕೆಂದು ನಿರೂಪ ಕಳುಹಿಸಿದ್ದೇವೆ. ಅವರು ಸಂಸ್ಥಾನದ ಕಡೆಗೆ ಸೇನೆಯೊಡನೆ ಬರಲಾರರು. ಹಾಗೆ ಬಂದಲ್ಲಿ ಅವರನ್ನು ದಾರಿಯಲ್ಲಿ ವಿಶ್ವಾಸದಿಂದ ಕಂಡು ಇದನ್ನೇ ನಿರೂಪವೆಂದು ಅವರಿಗೆ ತಾವು ತೋರಿಸುವ ಏರ್ಪಾಡು ಮಾಡಬಹುದು. ಅವರು ರಾಜಾಜ್ಞೆಯನ್ನು ಶಿರಸಾ ನಡಸತಕ್ಕವರು. ಮಿತ್ರಪಕ್ಷದ ಸರ್ವಾಧಿಕಾರಿ ಸೇನಾಪತಿಯನ್ನು ವಿಶ್ವಾಸದಿಂದ ಕಾಣತಕ್ಕದ್ದು ಎಂಬ ವಿಚಾರವಾಗಿ ನಾವು ಪ್ರಾಜ್ಞರಾದ ತಮಗೆ ಹೇಳತಕ್ಕದ್ದೇನಿದೆ ಎಂಬದಾಗಿ ರಾಯಸದ ವೀರಣ್ಣನಿಂದ ಬರಸಿದ ವಿಶ್ವಾಸದ ಓಲೆಯ ನಿರೂಪ. ಶ್ರೀ ಇಮ್ಮಡಿ ಕೃಷ್ಣರಾಜ ಒಡೆಯರವರು."

ಓಲೆಗಳನ್ನು ಬರೆಸಿ ಓದಿಸಿ ಕೇಳಿ ಒಡೆಯರು ನವಾಬನಿಗೆ ಬರೆದ ಕಾಗದದಲ್ಲಿ ಕೊನೆಗೆ ತಮ್ಮ ಕೈಯಿಂದ ನಾಲ್ಕು ಮಾತನ್ನು ಸೇರಿಸಿದರು. "ಹೈದರ್, ಇದು ನೀನು ಅರಮನೆಯ ಮಗು ಎಂಬದಾಗಿ ಸೇರಿಸುತ್ತಿರುವ ಮಾತು. ನೀನು ರಾಜ್ಯವನ್ನು ವಿಸ್ತಾರಮಾಡಿದ್ದೀಯೆ. ಶಕ್ತನೆನಿಸಿಕೊಂಡಿದ್ದೀಯೆ. ಶತ್ರುಗಳನ್ನು ಭಯದಲ್ಲಿಟ್ಟಿದ್ದೀಯೆ. ಇದೆಲ್ಲ ಅರಮನೆಯ

ಅನ್ನದ ಪ್ರಭಾವ ಎಂದು ಹೇಳುತ್ತಿದೀಯೆ, ನೀನು ನಮಕ್ ಹರಾಮ್ ಅಲ್ಲ ಎಂದು ಲೋಕ ಹೊಗಳಿದೆ. ಇದು ನಿಜ ಎಂದು ನಾವು ಬಲ್ಲೆವು. ನೀನು ನಗರದ ಮೇಲೆ ಹೋದರೆ ನಮಗೆ ಅಪಯಶಸ್ಸು ಕೊಡುತ್ತದೆ. ಹೋಗುವುದು ಬೇಡ. ನಿನಗೆ ದೇವರು ಒಳಿತು ಮಾಡಲಿ. ಶ್ರೀಕೃಷ್ಣ."

ಭಾಸ್ಕರಯ್ಯ ದೇವಾಲಯದಲ್ಲಿ ಊಟ ಮಾಡಿ ಅಲ್ಲಿಯೆ ವಿಶ್ರಮಿಸಿಕೊಂಡಿದ್ದನು. ರಾಜಮಾತೆ ಅವನಿಗೆ ಹೇಳಿಕಳುಹಿಸಿ ಈ ಪತ್ರಗಳನ್ನು ಅವನ ಕೈಗೆ ಕೊಟ್ಟು, "ನೀವು ಬೇಗನೆ ಹಿಂತಿರುಗಬೇಕು. ನಮ್ಮ ನವಾಬ ನಗರದ ಕಡೆ ಹೊರಡುವ ಮುನ್ನ ಪತ್ರವನ್ನು ಅವನಿಗೆ ಮುಟ್ಟಿಸಬೇಕು. ಇದು ನಿಮ್ಮಿಂದ ಸಾಧ್ಯವೆ ?" ಎಂದು ಕೇಳಿದಳು.

ಭಾಸ್ಕರಯ್ಯ, "ನಮ್ಮ ನಾಯಕರು ಹಾಗೆಂದೆ ಅಪ್ಪಣೆ ಮಾಡಿದ್ದಾರೆ. ತಮ್ಮಲ್ಲಿ ಅರಿಕೆ ಮಾಡಿದೆನಲ್ಲ," ಎಂದನು.

ರಾಜಮಾತೆಯ ಅನುಮತಿಯಿಂದ ಆಗಲೆ ಹಿಂತಿರುಗಿ ಪ್ರಯಾಣ ಹೊರಟನು.

ಅರಸರು ಆಮೇಲೆ ತಾಯನ್ನು ಕುರಿತು, "ಇದೇನೊ ಇವನ ಏರ್ಪಾಡು ಬೇರೆ ಇದೆ; ನನಗೆ ತಿಳಿಯುವುದಿಲ್ಲ. ನಮಕ್ ಹರಾಮ್ ಅಲ್ಲದಿರಬಹುದು; ಆದರೆ ಇವನ ಆಶೆಗೆ ಪಾರವಿಲ್ಲ," ಎಂದರು.

ರಾಜಮಾತೆ: ಪ್ರತ್ಯಕ್ಷ ನಮಕ್ ಹರಾಮ್ ಆಗಲೊಲ್ಲೆ ಎನ್ನುತ್ತಾನೆ. ಆದರೆ ಒಡೆಯನ ಆಜ್ಞೆಯನ್ನೇ ನಡಸುತ್ತಾನೆ ಎಂಬ ನಮಕ್ ಹಲಾಲ್ ಏನೂ ಅಲ್ಲ. ನಂಬಿದವರನ್ನು ಕೆಡಿಸಿದರು ಅಂತ ಈಗಾಗಲೆ ಜನ ನಮ್ಮನ್ನು ಹೇಳುತ್ತಿದಾರೆ. ಬಿದನೂರು ನಗರ ನಂಬಿತು, ಅದೂ ಕೆಟ್ಟಿತು, ಎಂದು ಹೇಳುವಂತೆ ಆಗದಿರಲಿ.

ರಾಜರಾಜಮಾತೆಯರ ಮನಸ್ಸು ಈ ಸಮಯದಲ್ಲಿ ತುಂಬ ಖಿನ್ನವಾಗಿತ್ತು. ಬರ್ಕಿ ಶ್ರೀನಿವಾಸರಾಯ ತಾನು ಸರ್ವಾಧಿಕಾರವನ್ನು ವಹಿಸಿಕೊಳ್ಳಲಾರೆ ಎಂದು ತಿಳಿಸಿಬಿಟ್ಟಿದ್ದನು. ಸೇನೆಯ ಮುಖ್ಯ ಜನ, "ರಾಜರಿಗೆ ದ್ರೋಹಮಾಡಿದರೂ ಮಾಡಿಯೇವು. ಸರ್ವಾಧಿಕಾರಿಗೆ ದ್ರೋಹಮಾಡಲಾರೆವು," ಎಂದು ಹೇಳತ್ತಿದಾರೆ ಎಂದು ಇವರ ಮನಸ್ಸಿಗೆ ತೋರಿದ್ದಿತು.

ಇವರಿಗೆ ಇದು ಒಂದು ವಿಚಿತ್ರವಾದ ಅದ್ರೋಹ, ದೇವರನ್ನು ತೊರೆದು ಪೂಜಾರಿಯನ್ನು ಎತ್ತಿ ಹಿಡಿಯುವ ಧರ್ಮ, ಎನ್ನಿಸಿತು.

## ೯೮

ಭಾಸ್ಕರಯ್ಯ ಬಿಲ್ಲಿನಿಂದ ಹೊರಟ ಒಂದು ಬಾಣದಂತೆ ನೇರವಾಗಿ ಅರಸರ ನಿರೂಪಗಳನ್ನು ತೆಗೆದುಕೊಂಡು ಚಿತ್ರದುರ್ಗದ ಕಡೆಗೆ ಹೊರಟನು. ಈ ವೇಳೆಗೆ ಹೈದರ್ ನಗರದ ಕಡೆಗೆ ಹೊರಟಿದ್ದರೂ ಹೊರಟಿರಬಹುದೆಂದು ಅವನಿಗೆ ಒಂದು ಯೋಚನೆ ಉಂಟು. ಆದ್ದರಿಂದ ಅವನು ಮೊದಲು ಶಿವಮುಗ್ಗಿಯ ದಿಕ್ಕಿನಲ್ಲೆ ಪ್ರಯಾಣ ಮಾಡಿದನು. ಅದಕ್ಕೆ ತಕ್ಕಂತೆ ಅವನು ಬೀರೂರನ್ನು ಮುಟ್ಟುವ ವೇಳೆಗೆ ಹೈದರನ ಸೈನ್ಯ ಚಿತ್ರದುರ್ಗದಿಂದ ಹೊರಟಿದೆ ಎಂಬ ಸುದ್ದಿ ಅಲ್ಲಿಗೆ ಬಂದಿದ್ದಿತು. ಮೊದಲು ಶಿವಮುಗ್ಗಿಗೆ ಹೋಗಿ ಅಲ್ಲಿಂದ ಅವನು ಬರುವ ದಾರಿಯಲ್ಲಿ ಎದುರಾಗಿ ನಡೆದು ದಾರಿಯಲ್ಲಿ ಅವನಿಗೆ ಅರಸರ ನಿರೂಪವನ್ನು ಮುಟ್ಟಿಸಬೇಕ ಎಂದು ಭಾಸ್ಕರಯ್ಯ ನಿಶ್ಚಯಿಸಿಕೊಂಡನು.

ಇವನು ಶಿವಮುಗ್ಗಿಯಿಂದ ಬಹು ದೂರ ಪ್ರಯಾಣಮಾಡಬೇಕಾಗಲಿಲ್ಲ. ಹೈದರನ ಸೇನೆ ಅಲ್ಲಿಗೆ ಹತ್ತಿರ ಹತ್ತಿರ ಬಂದುಬಿಟ್ಟಿದ್ದಿತು.

ದಾರಿಯಲ್ಲಿ ನದಿಯ ಪಕ್ಕದ ಒಂದು ನೆರಳಾದ ಪ್ರದೇಶದಲ್ಲಿ ವಾಬನು ಬಿಡಾರ ಮಾಡಿದ್ದನು. ಭಾಸ್ಕರಯ್ಯ ಅದರ ಆವರಣವನ್ನು ಮುಟ್ಟಿ, "ಪಟ್ಟಣದಿಂದ ಅರಸರ ಓಲೆಯನ್ನು ತಂದಿದ್ದೇನೆ. ಸರ್ವಾಧಿಕಾರಿಗಳಿಗೆ ಅದನ್ನು ಮುಟ್ಟಿಸಬೇಕು. ಅವರಿಗೆ ಸಂಗತಿ ತಿಳಿಸಿರಿ," ಎಂದು ಹೇಳಿದನು.

ಆಳು ಹೋಗಿ ಈ ಸಂಗತಿಯನ್ನು ಉಜನಿಗೆ ತಿಳಿಸಿದನು; ಉಜನಿ ಒಡೆಯನ ಹತ್ತಿರ ಹೋಗಿ ಈ ಮಾತನ್ನು ಹೇಳಿದನು.

"ಪಟ್ಟಣದಿಂದ ಬಂದಿದಾನೆಯೆ? ಅರಸರು ಓಲೆ ಬರೆಯುವ ಸಂಗತಿ ಏನಿರಬಹುದು?"

"ಹೋಗಿ ನೋಡಿಕೊಂಡು ಬರುತ್ತೇನೆ."

"ಹೋಗಿ ನೋಡು, ಅಡ್ಡಿಯಿಲ್ಲ. ಆದರೆ ಬಹು ಮುಖ್ಯವಾದ ವಿಷಯವಲ್ಲದೆ ಇದ್ದರೆ ನಾನು ಈಗ ಓಲೆಗಳನ್ನು ನೋಡಲಾರೆ."

"ಅಪ್ಪಣೆ, ಜನಾಬ್."

ನವರಾತ್ರಿಯಲ್ಲಿ ಅರಸರಿಗೆ ಅತಿಥಿಗಳಿಗೆ ನಡೆದಿದ್ದ ಮಾತಿನ ಒಂದು ಸ್ವಲ್ಪ ನಸಕುಮಸಕಾಗಿ ಇವನಿಗೆ ಸುದ್ದಿಯಾಗಿ ಬಂದಿದ್ದಿತು; ಆದರ ಮೇಲೆ ಓಲೆ ತನಗೆ ಇಷ್ಟವಲ್ಲದ ಸಂಗತಿಯನ್ನು ಕುರಿತಿದೆಯೆಂದು ಹೈದರನ ಊಹೆ. ಹೈದರ್ ಓಲೆಯನ್ನು ನೋಡಲು ಹಿಂತೆಗೆಯುತ್ತಿದಾನೆಂದು ಉಜನಿಗೆ ತೋರಿತು. ಅವನು ಭಾಸ್ಕರಯ್ಯ ನಿಂತಿದ್ದ ಸ್ಥಳಕ್ಕೆ ಬಂದನು; ಇವನನ್ನು ಕಂಡು ಸ್ವಲ್ಪ ಆಶ್ಚರ್ಯಪಟ್ಟನು. "ನಮಸ್ಕಾರ ಭಾಸ್ಕರಯ್ಯನವರೆ," ಎಂದನು.

ಭಾಸ್ಕರಯ್ಯ: ನಮಸ್ಕಾರ, ರಾಜರೆ.

"ಇಲ್ಲಿ ನಾವು ರಾಜರಲ್ಲ, ಸ್ವಾಮಿ; ಅದೆಲ್ಲಾ ನಿಮ್ಮೂರಲ್ಲಿ."

"ಒಂದು ಊರಲ್ಲಿ ರಾಜರಾಗಿ ಇನ್ನೊಂದು ಊರಲ್ಲಿ ಆಳಾಗುತಾರೆಯೇ ಸ್ವಾಮಿ?"

"ನಾವಿಲ್ಲಿ ಸ್ವಾಮಿನೂ ಅಲ್ಲ, ಸ್ವಾಮಿ; ಬರೀ ಅಷ್ಟು ಗುರಿಕಾರರು. ಸುಮ್ಮನೆ ಗುರಿಕಾರರೆ ಅನ್ನಿ; ಅದಕ್ಕೆ ಹೆಚ್ಚಿನ ಮರ್ಯಾದೆ ಬೇಡ."

"ಸಂತೋಷ ಗುರಿಕಾರರೆ, ನಿಮ್ಮ ನವಾಬ್ ಸಾಹೇಬರನ್ನು ನೋಡಬೇಕು."

"ಪಟ್ಟಣದಿಂದ ಯಾರೋ ಓಲೆ ತಂದಿದ್ದಾರೆ ಅಂದರಲ್ಲ. ಅದು ನೀವೇಯೇನು?"

"ಹೌದು, ಗುರಿಕಾರರೆ."

"ನೀವು ಯಾವಾಗ ಸ್ವಾಮಿ ನಮ್ಮ ಶಾಮಯ್ಯನ ಹೋಬಳಿಗೆ ಸೇರಿದಿರಿ?

"ಶಾಮಯ್ಯನ ಹೋಬಳಿ ಎಂದರೆ?"

"ಶಾಮಯ್ಯ ನಮ್ಮ ಅಂಚೆ ಇಲಾಖೆ ಮುತ್ಸದ್ದಿ. ಓಲೆ ತರೋ ಜನಕ್ಕೆಲ್ಲ ಅವನೇ ಯಜಮಾನ. ಆ ಮಹಾರಾಯ ನಿಮ್ಮನ್ನೆಲ್ಲಿ ಹಿಡಿದ?"

"ನನ್ನ ಯಾವ ಶಾಮಯ್ಯನೂ ಹಿಡಿಯಲಿಲ್ಲ ಗುರಿಕಾರರೆ. ದೊಡ್ಡೋರೊಬ್ಬರು ಅರಸರ ಹತ್ತಿರ ಕಳುಹಿಸಿದರು. ಅರಸರು ಸರ್ವಾಧಿಕಾರಿಗಳಿಗೆ ಓಲೆ ಒಂದು ಕೊಡು ಎಂದರು. ಆಗಲಿ ಮಹಾಸ್ವಾಮಿ ಎಂತ ಅದನ್ನ ತೆಗೆದುಕೊಂಡು ಬಂದೆ."

"ದೊಡ್ಡೋರೊಬ್ಬರು ಅರಸರ ಹತ್ತಿರ ಕಳುಹಿಸಿಕೊಟ್ಟರು, ಅರಸರು ಸರ್ವಾಧಿಕಾರಿಗಳಿಗೆ ಓಲೆ ಕೊಟ್ಟರೆ ? ನಮ್ಮ ಅರಸರು ನಿಮಗೆ ಇಷ್ಟು ಸುಲಭವಾಗಿ ಸಿಕ್ಕಬೇಕಾದರೆ ಕಳುಹಿಸಿದವರು ಬಹಳ ದೊಡ್ಡೋರಿರಬೇಕಲ್ಲ. ನಿಮ್ಮ ನಾಯಕರು ಕಳುಹಿಸಿದರೊ ? "

"ಇರಬಹುದಲ್ಲ."

"ಓಲೆ ಕೊಡಿ; ಸರ್ವಾಧಿಕಾರಿಗಳಿಗೆ ಮುಟ್ಟಿಸುತೇನೆ."

''ದೊಡ್ಡೋರ ಕಾಗದ; ಅದನ್ನ ಅವರಿಗೆ ಮುಖತಃ ಕೊಡುವುದು ಸರಿ ಅಲ್ಲ ? ''

"ಹಾಗೆಯೇ ಮಾಡಿ."

"ಹಾಗಾದರೆ ಅವರಲ್ಲಿಗೆ ಕರೆದುಕೊಂಡು ಹೋಗಿ, ಮತ್ತೆ."

"ಕರೆದುಕೊಂಡು ಹೋಗೋಣ, ಭಾಸ್ಕರಯ್ಯನವರೆ; ಅವಸರ ಮಾಡಿಕೊಳ್ಳಬೇಡಿ; ನಿಮಗೆ ಒಂದು ಸಂಗತಿ ತಿಳಿಯದು ಎಂತ ಕಾಣುತದೆ."

" ಎನು ಸಂಗತಿ ? "

"ನಮ್ಮ ನವಾಬರಿಗೆ ಓದುಬರಹ ಬರೋದಿಲ್ಲ; ಇಂಥ ಓಲೆ ಬಂದರೆ ಅದನ್ನ ಯಾರಾದರೂ ಓದಿ ಹೇಳಬೇಕು."

"ಆಗಬಹುದಲ್ಲ. ಓಲೆ ಒಪ್ಪಿಸತೇನೆ. ಯಾರನ್ನಾದರೂ ಕರೆಯಿರಿ, ಓದಿ ಹೇಳಲಿ."

"ಈಗ ಅದನ್ನ ಓದುವವರು ಯಾರೂ ಹತ್ತಿರ ಇಲ್ಲ."

"ನಾ ಬೇಕಾದರೆ ಓದಿ ಹೇಳುತೇನೆ."

"ಏನೂ ಅಡ್ಡಿ ಇಲ್ಲ. ಅದರಲ್ಲಿ ಏನಿದೆ ನಿಮಗೆ ತಿಳಿದಿದೆಯೇನು ?"

"ಸುಮಾರು ಏನು ತಿಳಿದಿದೆ."

"ಹಾಗಾದ ಮೇಲೆ ನಿಮ್ಮಿಂದ ಅದನ್ನ ಓದಿಸಬಹುದು. ಇರಿ; ನವಾಬರನ್ನ ಕೇಳಿಬರುತೇನೆ."

ಹೀಗೆಂದು ಹೇಳಿ ಉಜನಿ ನವಾಬನ ಬಳಿಗೆ ಹೋಗಿ ಸಂಗತಿಯನ್ನೆಲ್ಲ ತಿಳಿಸಿ ಭಾಸ್ಕರಯ್ಯನನ್ನು ಒಳಕ್ಕೆ ಬರಮಾಡಿದನು.

ಭಾಸ್ಕರಯ್ಯ ಒಳಕ್ಕೆ ಹೋಗಿ ದೂರದಿಂದ ನವಾಬನಿಗೆ ನಮಸ್ಕಾರ ಮಾಡಿ ನಿಂತನು.

"ಗುರಿಕಾರರು ನೀವು ಹೇಳಿದ ಮಾತನ್ನು ತಿಳಿಸಿದಾರೆ. ಕಾಗದದಲ್ಲಿ ಏನಿದೆ ಹೇಳಿ; ಆಮೇಲೆ ಓದಬಹುದು."

"ಅದನ್ನ ಓದು ಅಂದರೆ ಓದುತೇನೆ ಸ್ವಾಮಿ; ಅದರಲ್ಲಿ ಏನಿದೆ ಎಂತ ನಾನು ಹೇಳೋದು ಸರಿಯಲ್ಲ."

"ಒಳ್ಳೇದು; ಕಾಗದ ಕೊಡಿ."

ಭಾಸ್ಕರಯ್ಯ ಕಾಗದವನ್ನು ತೆಗೆದನು. ಅದರ ಜೊತೆಯಲ್ಲಿ ಆ ಇನ್ನೊಂದು ಕಾಗದವೂ ಇತ್ತು. ಉಜನಿ ಕೈನೀಡಿದನು ; ಇವನು ಒಂದು ಕಾಗದವನ್ನು ಕೊಟ್ಟನು.

ನವಾಬ, "ಆ ಕಾಗದ ಯಾರಿಗೆ ? " ಎಂದನು.

"ನಗರದ ನಾಯಕರಿಗೆ, ಸ್ವಾಮಿ."

"ಅದರಲ್ಲಿ ಏನಿದೆ ಎಂತಲೂ ನಿಮಗೆ ತಿಳಿದಿದೆಯೊ ? "

"ಸುಮಾರು ತಿಳಿದಿದೆ ಸ್ವಾಮಿ."

"ಒಳ್ಳೇದು, ಈ ಕಾಗದವನ್ನು ಓದಿ ಹೇಳಿ."

ಭಾಸ್ಕರಯ್ಯ ಕಾಗದವನ್ನು ಓದಿ ಹೇಳಿದನು. ನವಾಬ ನೆಟ್ಟದೃಷ್ಟಿಯಿಂದ ಅವನ ಕಡೆ ನೋಡುತ್ತ ಅದನ್ನು ಕೇಳಿದನು. ಓದಿ ಆದಮೇಲೆ, "ಈ ಕಾಗದದಲ್ಲಿ ಈ ಮಾತು ಇರುವುದು ನಿಮಗೆ ತಿಳಿದಿತ್ತು ? " ಎಂದನು.

"ಸುಮಾರು ತಿಳಿದಿತ್ತು ಸ್ವಾಮಿ."

"ಉಜನಿ, ಈ ಮನುಷ್ಯ ಅಯೋಗ್ಯನಾಗಿ ಕಾಣುತ್ತಾನೆ. ಇಲ್ಲವೆ ಈ ಕಾಗದಾನ ಮೋಸದಿಂದ ಬರೆಸಿ ತಂದಿದಾನೆ; ಇಲ್ಲವೆ ಅರಸರು ಕೊಟ್ಟ ಕಾಗದಾನ ಕದ್ದು ಓದಿ ತಂದಿದಾನೆ. ಇವನನ್ನ ಜೋಪಾನವಾಗಿ ನೋಡಿಕೊ. ಸಂಗತಿ ಏನು ವಿಚಾರಿಸೋಣ."

"ಸ್ವಾಮಿ ನಾನೇನೂ ತಪ್ಪುಮಾಡಿಲ್ಲ. ನನ್ನ ತಡೆಯಬಾರದು. ಇನ್ನೊಂದು ಕಾಗದ ಇದೆ, ಇದನ್ನ ನಾಯಕರಿಗೆ ಮುಟ್ಟಿಸಬೇಕು."

ಉಜನಿ, "ಕಾಗದ ನೀವೇ ಸೃಷ್ಟಿ ಮಾಡಿದ್ದಾದರೆ ಮುಟ್ಟಿಸದೆ ಇದ್ದರೆ ಏನು ತಪ್ಪು ?" ಎಂದನು.

ಭಾಸ್ಕರಯ್ಯ, "ನನ್ನಾಣೆ ಗುರಿಕಾರರೆ ನಾ ಅಂಥ ಕೆಲಸಮಾಡೋನಲ್ಲ," ಎಂದನು.

ನವಾಬ, "ಸಾಕು ಸುಮ್ಮನಿರಿ ಬಹಳ ಮಾತನಾಡಬೇಡಿ," ಎಂದು ಉಜನಿಗೆ, "ಉಜನಿ, ಇವನ್ನ ನೋಡಿಕೊ, ಈ ಸಂಗತಿ ವಿಚಾರಿಸೋಣ," ಎಂದನು.

ಭಾಸ್ಕರಯ್ಯ ತತ್ಕಾಲಕ್ಕೆ ಉಜನಿಯ ವಶದಲ್ಲಿ ಸೆರೆಯಾಗಿ ನಿಂತನು. ಉಜನಿ ನವಾಬನ ಅಪ್ಪಣೆಯನ್ನು ಪಡೆದು ಅವನನ್ನು ಮರುದಿನ ಚಿತ್ರದುರ್ಗಕ್ಕೆ ಕಳುಹಿಸಿದನು.

ಈ ಮೊದಲು ಹೋದ ಪಾಳಯಗಾರ ಅಲ್ಲಿ ಇವರ ಅಂಕೆಯಲ್ಲಿ ಇರುತ್ತಿದ್ದನು. ಭಾಸ್ಕರಯ್ಯ ಈಗ ಅವನಿಗೆ ಜೊತೆಯಾದನು.

೯೯

ಬಿದನೂರು ಸಂಸ್ಥಾನದ ಆಡಳಿತದ ಹೊಸ ಏರ್ಪಾಡು ಒಡನೆ ವ್ಯವಹಾರಕ್ಕೆ ಬಂದಿತು. ನಂಬಯ್ಯ ಅರಮನೆಯ ಆಡಳಿತ ಅಷ್ಟಕ್ಕೆ ಅಧಿಕಾರಿಯಾಗಿ ನಿಂತನು. ಸಂಸ್ಥಾನದ ಬೊಕ್ಕಸದ ಯಾಜಮಾನ್ಯವನ್ನು ಶಾಸ್ತ್ರಿ ವಹಿಸಿಕೊಂಡನು. ಆ ದಿನವೇ ನಾಯಕ ಹೈದರನಿಗೆ ಅವನು ಯಾವುದೇ ನೆಪಕ್ಕಾಗಿ ನಗರಕ್ಕೆ ಬರುವುದು ಬೇಡವೆಂದು ತಿಳಿಸಿ ಒಂದು ಓಲೆಯನ್ನು ಕಳುಹಿಸಿದನು.

ಹೊಸ ವ್ಯವಸ್ಥೆ ವ್ಯವಹಾರಕ್ಕೆ ಬಂದ ಹತ್ತು ದಿನದಲ್ಲಿ ನಾಯಕನು ಎರಡು ಸಲ ಬೊಕ್ಕಸದ ಚಾವಡಿಗೆ ಬಂದು ಹಣ ಬಂದು ಹೋದದ್ದರ ಲೆಕ್ಕಗಳನ್ನು ವಿಚಾರಿಸಿಕೊಂಡನು. ಸ್ಪಷ್ಟವಾಗದೆ ಇದ್ದ ಒಂದೆರಡು ವಿವರದಲ್ಲಿ ನಂಬಯ್ಯನನ್ನು ಕೇಳಿ ತಿಳಿಯಿರಿ ಎಂದು ಅಪ್ಪಣೆಮಾಡಿದನು. ನಂಬಯ್ಯ ಕದ್ದಿದ್ದನೊ ಇಲ್ಲವೊ; ಪ್ರಾಯಶಃ ಸಂಸ್ಥಾನದ ಇಂಥ ಎಲ್ಲ ಅಧಿಕಾರಿಗಳಂತೆ ಅವನ ತಪ್ಪು ಕೂಡ ಅಜಾಗ್ರತೆ ಮಾತ್ರ ಆಗಿದ್ದಿರ

ಬೇಕು; ಆದರೆ ಇಂಥ ಮಾತಿಗಾಗಿ ಲಿಂಗಣ್ಣಯ್ಯ ಸೆರೆಗೆ ಹೋಗಿದ್ದನು; ನಂಬಯ್ಯನಿಗೆ ತಾನೂ ಸೆರೆಗೆ ಹೋಗಬೇಕಾದೀತೋ ಎಂಬ ಭಯ ಹುಟ್ಟಿತು.

ತಪ್ಪು ಪ್ರಮಾಣವಾಗದಿದ್ದರೂ ನಾಯಕ ಮಾತ್ಸರ್ಯದಿಂದ ತನ್ನನ್ನು ಹಾಳುಮಾಡಲು ಹೊರಟಿದ್ದಾನೆ ಎಂದು ಅವನ ಮನಸ್ಸಿಗೆ ನಿಶ್ಚಯವಾಯಿತು. ತಾಯಿಗೆ ಬೇಡದ ಈ ಮಗ, ಮತ್ಸರದಿಂದ ತನ್ನನ್ನು ಕೆಡಿಸಲು ಹೊರಟಿರುವವನು, ಏತರ ಮನುಷ್ಯ? ತನ್ನ ಕ್ಷೇಮಕ್ಕಾಗಿ ಇವನನ್ನು ತೀರಿಸಿಕೊಳ್ಳಬೇಕು ಎಂದು ನಂಬಯ್ಯ ಯೋಚಿಸಿಕೊಂಡನು; ತಾನು ಹೀಗೆ ಮಾಡುವುದು ರಾಣಿಗೆ ಇಷ್ಟವಾದೀತು ಎಂದು ನೆನೆದನು.

ಹತ್ತು ವರ್ಷದ ಗಳಿಕೆಯಿಂದ ನಂಬಯ್ಯ ಇಕ್ಕೇರಿಯ ಪ್ರಾಂತ ದಲ್ಲಿ ನಾಲ್ಕು ಉಂಬಳಿಯ ಗ್ರಾಮಗಳನ್ನು ಕೊಂಡು ಕೊಂಡಿದ್ದನು. ಉಂಬಳಿಕಾರನಾಗಿ ಅವನು ಒಂದು ಸಣ್ಣ ದಳವನ್ನು ಸೇರಿಸುವ ಪಡೆವಳ ನಾಗಿದ್ದನು. ಅವನ ಕೈಯಲ್ಲಿ ನೂರು ಜೀತ ಉಂಟು.

ನಾಯಕನ ವಿಷಯದಲ್ಲಿ ಒಂದು ನಿಶ್ಚಯಕ್ಕೆ ಬರುವ ಮೊದಲೆ ಇವನು ತನ್ನ ಉಂಬಳಿಯಿಂದ ಶಕ್ತರಾದ ಇಬ್ಬರು ಜೀತಗಾರರಿಗೆ ಬರ ಹೇಳಿ ಕಳುಹಿಸಿದ್ದನು. ಅವರು ಬರುವ ವೇಳೆಗೆ ಇವನ ಮನಸ್ಸೂ ನಿಶ್ಚಯಕ್ಕೆ ಬಂದಿದ್ದಿತು. ಒಂದು ಪ್ರಾಣಿಗೆ ಇದರ ಸುಳಿವು ಕೊಡದೆ ನಂಬಯ್ಯ ತನ್ನ ಈ ಆಳುಗಳ ಮೂಲಕ ನಾಯಕನನ್ನು ಮುಗಿಸಿಕೊಳ್ಳು ವುದಕ್ಕೆ ಹೊತ್ತು ಕಾಯುತ್ತಿದ್ದನು.

ನಾಯಕ ರಾತ್ರಿಯ ವೇಳೆ ಒಬ್ಬನೇ ವೇಷ ಮರೆಸಿಕೊಂಡು ಹೊರಟು ಊರಲ್ಲಿ ಸುತ್ತುವುದನ್ನು ಒಂದು ವಾಡಿಕೆ ಮಾಡಿಕೊಂಡಿದ್ದನು. ಪೂರ್ವದಲ್ಲಿ ಅರಸರು ಹೀಗೆ ಮಾಡಿ ಪ್ರಜೆಗಳ ಮನಸ್ಸನ್ನು ತಿಳಿಯು ತ್ತಿದ್ದರು ಎಂದು ಇವನು ಕೇಳಿದ್ದನು. ಅದರಂತೆ ಮಾಡಬೇಕು ಎಂದು ಆಶೆ; ಜೊತೆಗೆ ಇದು ಇವನ ಸ್ವಭಾವದ ಪ್ರವೃತ್ತಿಯನ್ನು ತೃಪ್ತಿಪಡಿಸು ತ್ತಿದ್ದಿತು.

ಈ ದಿನಗಳಲ್ಲಿ ಒಂದು ತಿಂಗಳ ರಾತ್ರಿ ಇವನು ಹೀಗೆ ಹೊರಟಾಗ ತಕ್ಕಷ್ಟು ನಿರ್ಜನವಾದ ಸ್ಥಳದಲ್ಲಿ ಅವನ ಮೇಲೆ ಬಿದ್ದು ಅವನನ್ನು ಊರ

ಹೊರಕ್ಕೆ ಹೊರಿಸಿಕೊಂಡು ಹೋಗಿ ಹೂಳಿಸಬೇಕೆಂದು ನಂಬಯ್ಯ ಗೊತ್ತು ಮಾಡಿಕೊಂಡನು. ಅರಮನೆಯಿಂದ ಸರಿಯಾದ ದೂರದಲ್ಲಿ ಕಾದಿದ್ದು, ನಾಯಕ ಹೊರಕ್ಕೆ ಹೊರಟಾಗ ಈ ಸೇವಕರನ್ನು ಕರೆದುಕೊಂಡು ಮೆಲ್ಲನೆ ಅವನ ಹಿಂದೆ ಹೋದನು. ಇವರು ಏನು ಮಾಡಬೇಕು ಎನ್ನುವುದನ್ನು ನಂಬಯ್ಯ ಅವರಿಗೆ ಚೆನ್ನಾಗಿ ಪಾಠ ಮಾಡಿದ್ದನು. ಅವರ ಕೆಲಸಕ್ಕೆ ಬೇಕಾದ ಸಾಧನ ಅವರ ಕೈಯಲ್ಲಿದ್ದವು.

ಹಿರಿಯ ಮಠದ ಕಡೆಗೆ ದೊಡ್ಡ ಬೀದಿಯ ಒಂದು ಕೊನೆಯನ್ನು ಮುಟ್ಟಿ ನಾಯಕ ಪಕ್ಕಕ್ಕೆ ತಿರುಗಬೇಕು. ಚಂಡಾಲರಲ್ಲಿ ಒಬ್ಬ ಫಕ್ಕನೆ ಅವನ ಎದುರಿಗೆ ಬಂದು ಒಂದು ಕುಣಿಕೆಯನ್ನು ಹಾಕಿ ಅವನ ಕೈಗಳನ್ನು ಒಟ್ಟಿಗೆ ಬಿಗಿದನು. ಅದೇ ಹೊತ್ತಿಗೆ ಹಿಂದಿನಿಂದ ಮತ್ತೊಬ್ಬ ಅವನ ತಲೆ ಕೊರಳಷ್ಟಕ್ಕೆ ಒಂದು ಚೀಲವನ್ನು ಕವುಚಿ ಕುಣಿಕೆಯೆಳೆದು ಬಿಗಿಯಾಗಿ ಕಟ್ಟಿದನು. ಇದೇನಾಯಿತು ಎಂದು ನಾಯಕನಿಗೆ ತಿಳಿಯ ಬಹುದಾದುದಕ್ಕೆ ಮುನ್ನ ಅವನ ಕಾಲುಗಳಿಗೂ ಒಂದು ಕಟ್ಟು ಬಂದಿತು. ಇಬ್ಬರೂ ಅವನನ್ನು ಎತ್ತಿ ಒಂದು ಪಟ್ಟಿಯಲ್ಲಿ ಸುತ್ತಿಕೊಂಡರು. ಒಬ್ಬನು ಅವನನ್ನು ಬೆನ್ನಮೇಲೆ ಬೀಳನ್ನು ಹೊರುವಂತೆ ಹೊತ್ತು ವೇಗದಿಂದ ನಡೆಯ ತೊಡಗಿದನು.

ನಾಯಕನಿಗೆ ಉಸಿರು ಕಟ್ಟಿತು; ಅರೆಮರವಾಯಿತು. ಆದರೆ ಇದು ಯಾರೊ ತನ್ನನ್ನು ಹೊತ್ತುಕೊಂಡು ಹೋಗುತ್ತಿದಾರೆ, ಕೊಲೆ ಮಾಡಿಯಾರು, ಎಂದು ಅವನಿಗೆ ಅರಿವು ಇದ್ದಿತು. ಶಂಕೆಯಿಲ್ಲದೆ ನಡೆಯುತ್ತಿದ್ದ ವೇಳೆಯಲ್ಲಿ ಇವರು ಮೇಲೆ ಬಿದ್ದದ್ದರಿಂದ ಅವನು ಅಸಹಾಯವಾಗಿ ಬಲಿಯಾಗಿದ್ದನು. ಅಂಥ ನಿಶ್ಶಂಕೆಯ ಮನುಷ್ಯನಲ್ಲ ದಿದ್ದರೆ ಇವರ ಕೆಲಸ ಇಷ್ಟು ಸುಲಭವಾಗುತ್ತಿರಲಿಲ್ಲ. ಚಂಡಾಲರು ಹಿಡಿದ ದಾರಿಯಲ್ಲಿ ಸ್ವಲ್ಪ ದೂರದಲ್ಲಿ ಒಂದು ಕವಲಿತ್ತು. ಅಲ್ಲಿ ಅವರು ಬಲದ ಕವಲನ್ನು ಹಿಡಿಯಬೇಕು; ಅದರಲ್ಲಿ ಸ್ವಲ್ಪ ದೂರ ಹೋದರೆ ಇವರು ತೋಡಿದ್ದ ಗುಂಡಿ ಸಿಕ್ಕುವುದು. ಊರಿಗೆ ಹೊಸಬರು; ರಾತ್ರಿ ಬೇರೆ; ಬಲಕ್ಕೆ ಹೋಗದೆ ಇವರು ಎಡದ ಕವಲನ್ನು ಹಿಡಿದರು. ಸ್ವಲ್ಪ ದೂರ ನಡೆದ ಮೇಲೆ ತಾವು ಗುಂಡಿ ತೋಡಿದ್ದ ಸ್ಥಳ ಸಿಕ್ಕದೆ, "ಎಲ್ಲಿ ಬಂದೆವೊ?

ಇಲ್ಲೇ ಇರಬೇಕಲ್ಲ ?" ಎಂದು ಒಬ್ಬರೊಡನೆ ಒಬ್ಬರು ಮೆಲ್ಲನೆ ಮಾತನಾಡಿಕೊಂಡರು.

ಇವರು ಹೀಗೆ ದಾರಿಯಲ್ಲಿ ನಿಂತು ತಾವು ಮಾಡಿದ ಗುಂಡಿ ಎಲ್ಲಿ ಎಂದು ಹತ್ತು ಗಜ ಅತ್ತ ಇತ್ತ ನಡೆದು ನೋಡುತ್ತಿದಾರೆ; ನಾಯಕನನ್ನು ಸುತ್ತಿರುವ ಪಟ್ಟಿಯ ಮೂಟೆ ದಾರಿಯ ಪಕ್ಕದಲ್ಲಿ ಬಿದ್ದಿದೆ. ಮಧ್ಯೆ ಎದುರ ಕಡೆಯಿಂದ ಯಾರೊ ಜನ ಬರುವುದು ಕಂಡಿತು. ಅವರಲ್ಲಿ ಒಬ್ಬನು ಒಂದು ದೊಂದಿಯನ್ನು ಹಿಡಿದಿದ್ದನು; ಆ ಸ್ಥಳದಲ್ಲಿ ಜನದ ಧ್ವನಿಯನ್ನು ಕೇಳಿ ಅದನ್ನು ಬೀಸಿ ಬೆಳಕು ಮಾಡಿದನು. ಅವನ ಜೊತೆಯ ಮನುಷ್ಯ, "ಯಾರೊ ಅಲ್ಲಿ ಮಾತನಾಡುವುದು ?" ಎಂದು ಪ್ರಶ್ನೆ ಕೇಳಿದನು.

ಚಂಡಾಲರಿಗೆ ಏನು ಮಾಡುವುದಕ್ಕೂ ಅವಕಾಶ ಇರಲಿಲ್ಲ. ಅವರು ಭಯದಲ್ಲಿ ಉಳಿದೆಲ್ಲವನ್ನೂ ಮರೆತರು. ದಾರಿಯ ಜನ ಹತ್ತಿರ ಬರುವ ಮುನ್ನ ಹಿಂತಿರುಗಿ ಊರ ಕಡೆಗೆ ಓಟಕಿತ್ತರು. ಅವರು ಹೊತ್ತು ತಂದಿದ್ದ ಮೂಟೆ ದಾರಿಯ ಮೇಲೆಯೇ ಬಿದ್ದಿದ್ದಿತು.

## ೧೦೦

ಎದುರುಗಡೆಯಿಂದ ಬಂದ ಜನ ಅದರ ಬಳಿ ನಿಂತರು. ದೊಂದಿಯ ಮನುಷ್ಯ, "ಅಯ್ಯನವರೆ, ಇಲ್ಲಿ ಏನೊ ಬಿದ್ದದೆ," ಎಂದನು. ಅವನ ಜೊತೆಯ ಮನುಷ್ಯ "ಏನು ಅಂತಿ, ಬಸವಯ್ಯ ?" ಎಂದನು.

ದೊಂದಿ ಹಿಡಿದಿದ್ದವನು ಹಿರಿಯಮಠದ ಸೇವಕ ಬಸವಯ್ಯ; ಜೊತೆಯವನು ಹಿರಿಯಮಠದ ಅಯ್ಯ. ಬಸವಯ್ಯ ಅಯ್ಯನಿಗೆ, "ಇದೇನೊ ಮೂಟೆ ಕಾಣತದೆ," ಎಂದನು.

ಅಯ್ಯ: ಇದೇನು ಹಿಂಗೆ ವೈ ಕೈ ಅನ್ನೋಹಂಗಿದೆಯಲ್ಲ! ಈ ಕಟ್ಟು ಬಿಚ್ಚು ಬಸವಯ್ಯ, ಏನೊ ನೋಡುವ.

"ಬಿಚ್ಚೋದು ಕಷ್ಟ ಅಯ್ಯನವರೆ. ಮಠಕ್ಕೆ ಹೊತ್ತು ತರತೀನಿ. ಅಲ್ಲೇ ಬಿಚ್ಚೋಣ. ಬೇಗನೆ ಬಿಚ್ಚಿದರೆ ಉಸಿರಿದ್ದು ಉಳಿದರೂ ಉಳೀಬಹುದು."

ಅಯ್ಯನಿಗೆ ಇದು ಸರಿ ಎಂದು ಕೋರಿತು; "ಹೌದು. ಎತ್ತು. ನಾವೊಂದು ಕಡೆ ಹಿಡೀತೇನೆ," ಎಂದು ಹೇಳಿ ಅವನು ಮೂಟೆಯ ಒಂದು ಕಡೆಯನ್ನು ತೆಗೆದುಕೊಂಡನು. ಅಯ್ಯನಿಂದ ಕೆಲಸ ಮಾಡಿಸುವುದು ಬಸವಯ್ಯನಿಗೆ ಇಷ್ಟವಿಲ್ಲ. ಈಗ ವಿಧಿಯಿಲ್ಲದೆ ಅವನು ಅಯ್ಯನ ಸಹಾಯ ವನ್ನು ತೆಗೆದುಕೊಂಡನು. ಮೂಟೆಯನ್ನು ಹೊತ್ತುಕೊಂಡು ಇವರು ಮಠದ ಕಡೆಗೆ ಹೊರಟರು.

ಬಸವಯ್ಯ ಅಯ್ಯನಿಗೆ, "ನಾಯಕರ ತಾವು ಹೋಗಬೇಕು ಎಂದಿರೇ? ಮಧ್ಯೆ ಇದೊಂದು ಬಂತು," ಎಂದನು.

"ಹೋಗೋಣಂತೆ. ಇದನ್ನ ಮುಗಿಸಿಕೊಂಡು ಹೋಗೋದು," ಎಂದು ಅಯ್ಯ ಉತ್ತರ ಕೊಟ್ಟನು.

ಇವರ ಈ ವಾಕ್ಯಗಳು ಅರ್ಥವಾಗಬೇಕಾದರೆ ಇವರು ಮಠದಿಂದ ಹೊರಟ ಸಂದರ್ಭ ಏನು ಎನ್ನುವುದನ್ನು ವಿವರಿಸಬೇಕು.

ರಾತ್ರಿ ವಾಡಿಕೆಯಂತೆ ಬಂದ ಜನಕ್ಕೆ ಅನ್ನ ನೀಡಿ ಎಲ್ಲ ಕೆಲಸ ವನ್ನೂ ಮುಗಿಸಿ ಬಸವಯ್ಯ ಮಠದ ಕೈಸಾಲೆಯಲ್ಲಿ ತನ್ನ ಸ್ಥಳದಲ್ಲಿ ಮಲ ಗಿದ್ದನು. ಅಯ್ಯ ಒಳಗಡೆ ಪೂಜೆಯ ಮನೆಯ ಬಾಗಿಲಲ್ಲಿ ಕುಳಿತು, ವಾಡಿಕೆಯಂತೆ ತನ್ನ ಧ್ಯಾನದಲ್ಲಿ ಮುಳುಗಿದ್ದನು.

ಇದ್ದದಿದ್ದಂತೆ ಅಯ್ಯ, "ಯಾರೊ ಅದು ಬಸವಯ್ಯ? ಕೂಗಿ ದರಲ್ಲ," ಎಂದನು.

ಬಸವಯ್ಯ ನಿದ್ದೆ ಹೋಗಿರಲಿಲ್ಲ. ಅವನಿಗೆ ಯಾವ ದನಿಯೂ ಕೇಳಿ ಸಿರಲಿಲ್ಲ; ಯಾರು ಬಂದಂತೆಯೂ ತೋರಿರಲಿಲ್ಲ. ಅಯ್ಯನ ಮಾತು ಕಿವಿಗೆ ಬಿದ್ದು ಅವನು ತಟ್ಟನೆ ಎದ್ದು ಕುಳಿತನು; "ಯಾರೂ ಇಲ್ಲವಲ್ಲ ಅಯ್ಯನವರೆ," ಎಂದನು.

"ಎಲಯ್ಯ, ಚೆನ್ನಾಗಿ ಕೇಳಿಸಿತು ನನಗೆ. 'ಅಯ್ಯನವರೇ' ಅಂತ ಕೂಗಿದ್ದು. ನಾಯಕರ ಧ್ವನಿ ಇದ್ದ ಹಂಗಿತ್ತು. ಇದೇನಿರಬಹುದು?"

"ಈ ಹೊತ್ತಿನಲ್ಲಿ ನಾಯಕರು ಇಲ್ಲಿ ಏನು ಬಂದು ಕರೆದಾರು?"

"ಮುಖ ಮರಸಿಕೊಂಡು ಊರುಸುತ್ತುತ ನೋಡುವಾ ಅಂತ ಬರಬಹುದಲ್ಲ. ದನಿಯೇನೊ ಕೇಳಿಸಿತು."

"ನಾ ಕೈಸಾಲಿಯಾಗಿದ್ದೀನಿ. ನಂಗೆ ಕೇಳಿಸಲಿಲ್ಲೀ."

"ಎಲಯ್ಯ, ಅದು ಸಂತೋಷದಾಗ ಕರದದ್ದಲ್ಲವೊ. ಅಯ್ಯೋ ಅಂತ ಕರದಹಂಗಿತ್ತು. ನಡಿ, ಹೋಗಿ ನೋಡೋವ; ಏನಾಗಿರ ಬಹುದೊ."

ಬರಿಯ ಭ್ರಾಂತಿಗೆ ಗುರು ಇಷ್ಟು ಬೆಲೆ ಕೊಡುತ್ತಿರುವುದು ಬಸವಯ್ಯನಿಗೆ ಸಮ್ಮತವಿಲ್ಲ; ಆದರೆ ಹಿರಿಯರ ಮಾತಿಗೆ ಅವನು ಅಡ್ಡಿ ಹೇಳುವವನಲ್ಲ. "ಬಂದೆ ಅಯ್ಯನೋರೆ, ಹೋಗೋಣಂತೆ. ದೊಂದಿ ಹಚ್ಚಿ ತರತೀನಿ," ಎಂದು ಉತ್ತರ ಹೇಳಿ ಅವನು ಮಠದ ಮನೆಯೊಳಕ್ಕೆ ಹೋಗಿ ಬೇಗನೆ ಒಂದು ದೊಂದಿಯನ್ನು ಹಚ್ಚಿತಂದನು.

ಸ್ವಾಮಿ ಈ ಮೊದಲೆ ಬಂದು ಬಾಗಿಲಲ್ಲಿ ನಿಂತಿದ್ದನು; ಬಸವಯ್ಯ ಬಂದೊಡನೆ ವೇಗದಿಂದ ನಡೆದು ಊರೊಳಕ್ಕೆ ಬರುವ ದಾರಿಯಲ್ಲಿ ಮುಂದರಿದನು.

ಈ ಪ್ರಯಾಣದಲ್ಲಿ ಇವರು ಯಾರೊ ಮಾತನಾಡುವ ದನಿಯನ್ನು ಕೇಳಿದರು; ಯಾರು ಅಲ್ಲಿ, ಎಂದರು; ದಾರಿಯಲ್ಲಿ ಒಂದು ಮೂಟೆಯನ್ನು ಕಂಡರು. ಈಗ ಅದನ್ನು ಎತ್ತಿಕೊಂಡು ಮಠದ ಕಡೆಗೆ ನಡೆಯುತ್ತಿದ್ದರು.

ಕೆಲವು ನಿಮಿಷದಲ್ಲಿ ಇವರು ಮಠವನ್ನು ಮುಟ್ಟಿದರು. ಒಳಕ್ಕೆ ಹೋಗುತ್ತ ಬಸವಯ್ಯ ಆಳುಗಳಿಗೆ ಹುಯಿಲಿಕ್ಕಿ, "ಒಂದು ಕುಡುಲು ತಾ. ಯಾರಾದರೊಬ್ಬರು; ಬೇಗನೆ ತನ್ನಿ," ಎಂದು ಕೂಗಿದನು.

ಮೂಟೆಯನ್ನು ಕೈಸಾಲೆಯಲ್ಲಿರಿಸಿ ಬಸವಯ್ಯ ಒಳಕ್ಕೆ ಓಡಿಹೋಗಿ ಪೂಜೆಯ ಮನೆಯಲ್ಲಿ ಉರಿಯುತ್ತಿದ್ದ ದೀಪದ ಕಂಬವನ್ನು ತಂದು ಅದ ಪಕ್ಕದಲ್ಲಿರಿಸಿದನು. ಅಷ್ಟು ಹೊತ್ತಿಗೆ ಆಳು ತಂದಿದ್ದ ಕುಡುಗೋಲನ್ನು ತೆಗೆದುಕೊಂಡು ಮೂಟೆಯ ನಾಲ್ಕು ಕಡೆ ಕಟ್ಟಿದ್ದ ಹಗ್ಗದ ಕಟ್ಟುಗಳನ್ನು ಕುಯ್ದನು.

ಮೂಟೆಯನ್ನು ತರುತ್ತಿರುವಾಗಲೆ ಇವರಿಗೆ ಒಳಗಿನ ಮನುಷ್ಯ ಜೀವಂತನಾಗಿದ್ದಾನೆ ಎಂದು ತೋರುತ್ತಿದ್ದಿತು.

ಅಯ್ಯ, "ಮೆಲ್ಲನೆ ಬಸವಯ್ಯ, ಮೆಲ್ಲನೆ ಗಾಯಮಾಡೀಯೆ," ಎಂದನು.

ಬಸವಯ್ಯನಿಗೂ ಈ ಭಯ ಉಂಟು; ಗಾಯವಾಗದಂತೆ, ಆದರೂ ವೃಥಾ ಸಾವಕಾಶವಾಗದಂತೆ, ಅವನು ಕಟ್ಟುಗಳನ್ನು ಸರಸರ ಕುಯ್ದು ಹಾಕಿದನು. ಆಳಿನ ಸಹಾಯದಿಂದ ಪಟ್ಟಿಯ ಸುರುಳಿಯನ್ನು ಬಿಡಿಸಿ ಸುತ್ತಿದನು; ಒಳಗಿದ್ದ ದೇಹವನ್ನು ಹೊರಕ್ಕಿಟ್ಟನು.

ಅಯ್ಯ, "ಶಿವನೆ, ಶಿವನೆ. ನಾಯಕರ ಹಂಗಿದೆಯಲ್ಲೊ! ನೀರು ತಾ, ನೀರುತಾ. ನೀರು ಚಿಮುಕಿಸು; ಉಸಿರು ನೋಡು. ಶಿವನೇ! ಶಿವನೆ!" ಎಂದನು.

ಬಸವಯ್ಯ ಮೈಗೆ ಕಟ್ಟಿದ್ದ ಕಟ್ಟುಗಳನ್ನು ಕುಯ್ದು ಬಿಚ್ಚಿದನು. ಮುಖಕ್ಕೆ ಹಾಕಿದ್ದ ಚೀಲವನ್ನು ಕುಯ್ದು, ಹರಿದು ಸೆಳೆದುಹಾಕಿದನು. ಮುಖ ಕಾಣದೆಯೆ ಸ್ವಾಮಿ ಊಹಿಸಿದ್ದಂತೆ ಇವರ ಎದುರಿಗೆ ನಾಯಕನ ದೇಹ ಬಿದ್ದಿದ್ದಿತು.

೧೦೧

ಆಳು ನೀರು ತಂದನು. ಸ್ವಾಮಿ ಪಕ್ಕದಲ್ಲಿ ಕುಳಿತು ತನ್ನ ಸೆರಗಿನಿಂದ ಗಾಳಿ ಹಾಕಿದನು. ಬಸವಯ್ಯ ಮೈಮುಟ್ಟಿ, "ರಾಜನಾಗಿ ಉಸಿರದೆ. ಯಾತರದೂ ಬಯ ಇಲ್ಲ," ಎಂದು ಉಬ್ಬಿ ಹೇಳಿದನು.

ಕೆಲವು ನಿಮಿಷ ಇವರು ಕೈಕಾಲನ್ನು ತಡವಿದರು; ತಲೆಗೆ ಒಂದು ದಿಂಬನ್ನು ಕೊಟ್ಟು ಮೇಲೆ ಅಯ್ಯನ ಒಂದು ಹೊದಿಕೆಯನ್ನು ಹೊದಿಸಿದರು. ಅಯ್ಯ ತಲೆಯ ಹತ್ತಿರ ಕುಳಿತು ನಾಯಕನ ಕುರುಳನ್ನು ನೇವರಿಸುತ್ತ, "ನನ್ನ ಅಪ್ಪಾಜಿ ನನ್ನ ಕೂಗಿರಬೇಕು. ಹತ್ಯೇಕಾರರು ಮೇಲೆ ಬಿದ್ದ ಹೊತ್ತಿನಲ್ಲಿ ಅಯ್ಯನವರೆ ಅಂದಿದಾರೆ. ಅದೇ ನನಗೆ ಕೇಳಿಸಿದ್ದು," ಎಂದನು.

"ಹತ್ಯೇಕಾರರು ಮೇಲೆ ಬಿದ್ದದ್ದೆಲ್ಲಿ? ನಾಯಕರೂ ಕೂಗಿದ್ದರೂ ಅದು ಮಠಕ್ಕೆ ಕೇಳಿಸೋದು ಎಲ್ಲಿ?" ಎಂದು ಬಸವಯ್ಯನ ಯೋಚನೆ. ಆದರೆ ನಾಯಕ ಕರೆದಹಾಗಿತ್ತು ಎಂದು ಹೇಳಿ ಹೋದವರಿಗೆ ನಾಯಕ ಈ ಪಾಡಿನಲ್ಲಿ ಸಿಕ್ಕಿರಬೇಕಾದರೆ ಅಯ್ಯನ ಮಾತನ್ನ ಅಲ್ಲ ಅಂತ ಹ್ಯಾಗೆ ಹೇಳೋದು? ಅಯ್ಯನ ಮಾತು ಹೌದು ಆದರೆ ಹೇಗೆ ಹೌದಾಯಿತು?

ತನ್ನ ಕಿವೀಗೆ ಕೇಳಿಸೋದಲ್ಲ. ಅಯ್ಯನ ಕಿವೀಗೆ ಕೇಳಿಸಿತ ಇಲ್ಲಿ ಕೂಗಿದರೆ ನಮ್ಮ ಕೂಗು ಕೈಲಾಸದಲ್ಲಿ ಕೇಳಿಸೋದಿಲ್ಲವೆ ಶಿವ ಕಿವೀಗೆ? ಅಯ್ಯನ ಕಿವಿ ಒಂದು ರೀತೀಗೆ ಶಿವನ ಕಿವಿಯಂತೆ.

ಹತ್ತು ನಿಮಿಷ ಕಳೆದ ಮೇಲೆ ನಾಯಕ ನೀಳವಾಗಿ ಉಸಿರು ಸೆಳೆ ಕೊಂಡನು. ಮೆಲ್ಲನೆ ಕಣ್ಣನ್ನು ತೆರೆದು ಅಯ್ಯನನ್ನು ನೋಡಿದನು ಮೊದಲ ಕ್ಷಣ ಅವನಿಗೆ ಸ್ವಾಮಿ ಗುರುತು ಸಿಕ್ಕಲಿಲ್ಲ ಎಂದು ಕಾಣುತ್ತ ನೋಟ ಏನನ್ನೂ ಗ್ರಹಿಸಲಿಲ್ಲ. ಕ್ಷಣ ಕಳೆದು ತಾನು ನೋಡುತ್ತಿರುವು ಗುರುವಿನ ಮುಖವನ್ನು ಎಂದು ಅವನು ತಿಳಿದನು. ಕೈಗಳನ್ನು ಜೋ ಸುವುದಕ್ಕೆ ಪ್ರಯತ್ನಮಾಡಿ, ಬಾಯಿಂದ ಕಂಪಿತ ಸ್ವರದಲ್ಲಿ, "ಶರ ಅಯ್ಯನವರೆ!" ಎಂದನು.

ಅಯ್ಯ, "ದೇವರು ನಿಮ್ಮನ್ನ ಕಾಯಲಿ," ಎಂದು ಹೇಳಿ, ಆಳನ ತನ್ನ ಹತ್ತಿರ ಕರೆದು, "ಬಾ ನನ್ನ ಪಾದಮುಟ್ಟು. ಆಣೆ ಇಟ್ಟುಕೊ ಈಗೇನು ಕಂಡಿದ್ದಿ ಇದರ ಮಾತು ಯಾರಿಗೂ ಬಾಯಿ ಬಿಡೋದಿ ಅನ್ನು," ಎಂದನು.

ಆಳು ಬಂದು ಅವನ ಕಾಲನ್ನು ಮುಟ್ಟಿದನು; "ಬಿಡೋದಿ ಅಯ್ನೋರೆ," ಎಂದನು.

ಬಸವಯ್ಯ, "ಆಣೆ ಇಕ್ಕೊ," ಎಂದನು.

ಆಳು, "ನಿಮ್ಮ ಪಾದದಾಣೆ ಅಯ್ನೋರೆ, ಬಾಯಿ ಬಿಡೋದಿಲ್ಲ ಎಂದನು.

ಬಸವಯ್ಯ ತಾನಾಗಿ ಅಯ್ಯನ ಪಾದವನ್ನು ಮುಟ್ಟಿ, "ನನ್ನದೂ ಆ ಅಯ್ನೋರೆ. ಇದರ ಮಾತು ಬಾಯಿ ಬಿಡೋದಿಲ್ಲ," ಎಂದು ಶಪ ಮಾಡಿದನು.

ಆಗತಾನೆ ಚೇತರಿಸಿಕೊಳ್ಳುತ್ತಿದ್ದ ನಾಯಕನಿಗೆ ಈ ವ್ಯಾಪಾ ಅರ್ಥವಾಯಿತು. ಅಯ್ಯನ ಎಚ್ಚರಿಕೆಯನ್ನು ನೋಡಿ ಅವನಿಗೆ ಬ ಸಂತೋಷ ಆಯಿತು.

ಆಳೂ ಬಸವಯ್ಯನೂ ಅಯ್ಯನ ಅಪ್ಪಣೆಯ ಮೇರೆಗೆ ನಾಯಕನನ ಎತ್ತಿಕೊಂಡು, ಅಯ್ಯ ಮಲಗುವ ಕೋಣೆಯಲ್ಲಿ ಅವನ ಮಂಚದ ಮೇ

ಮಲಗಿಸಿದರು. ನಾಯಕ, "ಅಯ್ಯೊ, ಅಯ್ಯೊ. ಬೇಡಿರಣ್ಣ. ಅಯ್ಯನವರ ಹಾಸಿಗೆ," ಎಂದು ಕ್ಷೀಣ ಸ್ವರದಿಂದ ಹೇಳಿದನು. ಅಯ್ಯ, "ನಾವು ಈ ಹಾಸಿಗೆಯಲ್ಲಿ ಮಲಗಿದ್ದು ನಮಗೆ ನೆನವಿಲ್ಲ, ಇಕ್ಕೊ ನೋಡಿ ನಮ್ಮ ಹಾಸಿಗೆ," ಎಂದು ಕೆಳಗಿದ್ದ ಒಂದು ಚಾಪೆಯನ್ನು ತೋರಿಸಿದನು.

ಅಯ್ಯ ಎಷ್ಟೋ ದಿನದಿಂದ ಬಂದ ಆ ಮೆತ್ತನೆಯ ಹಾಸಿಗೆಯನ್ನು ದಿನವೂ ಚೊಕ್ಕಟವಾಗಿ ಹಾಸಿ ಸರಿಪಡಿಸುವನು; ಅದರಲ್ಲಿ ತನ್ನ ದೇವರೊ ಗುರುವೊ ಮಲಗಿದಾನೆ ಎಂದು ಊಹಿಸಿಕೊಂಡು ಕೆಳಗೆ ಚಾಪೆಯ ಮೇಲೆ ಆವನ ಊಳಿಗವಾಗಿ ಮಲಗುವನು. ಇಂದು ದೇವರ ಅಥವಾ ಗುರುವಿನ ಹಾಸಿಗೆಯ ಮೇಲೆ ಅವನು ಅವರ ಸೇವಕನಾದ ನಾಯಕ ಕುಮಾರನನ್ನು ಮಲಗಿಸಿದನು; ತನ್ನ ತಪಸ್ಸಿನ ಬಲದಿಂದ ಅವನನ್ನು ಕಾಪಾಡಿ ಉಳಿಸಿಕೊಂಡನು.

## ೧೦೨

ತಮ್ಮ ಹೊರೆಯನ್ನು ದಾರಿಯಮೇಲೆ ಎಸೆದು ನಗರದ ಕಡೆಗೆ ಓಡಿದ ಚಂಡಾಲರು ತಾವು ನಾಯಕನನ್ನು ತಾಗಿದ ಚೌಕಕ್ಕೆ ಬರುವ ವೇಳೆಗೆ ಕೇರಿಯ ಕಾವಲ ಜನ ಅವರಿಗೆ ಎದುರಾದರು. ಇವರು ಓಡುತ್ತಿರುವುದನ್ನು ಕಂಡು ಅವರಲ್ಲೊಬ್ಬನು, "ಯಾರೊ ಅದು ನಿಲ್ಲಿ," ಎಂದು ಕೂಗಿದನು. ಇವರು ನಿಲ್ಲಲಿಲ್ಲ; ಮುಂದಕ್ಕೆ ಓಡಿದರು. ಕಾವಲವರು ನಾಲ್ವರು ಇವರನ್ನು ಅಟ್ಟಿ ಹಿಡಿದು ಚೌಕಕ್ಕೆ ಎಳೆದು ತಂದರು.

ಇವರಿಗೆ ಕಾಯುತ್ತ ಅಲ್ಲಿ ಸ್ವಲ್ಪ ಮರೆಯಲ್ಲಿ ನಿಂತಿದ್ದ ನಂಬಯ್ಯ ಇವರು ಓಡಿ ಬಂದದ್ದನ್ನೂ ಇವರನ್ನು ಅಟ್ಟಿ ಕಾವಲ ಜನ ಹಿಡಿದು ತಂದದ್ದನ್ನೂ ನೋಡಿದನು. ಇವರು ಏನಾದರೂ ಹೇಳಿ ಅನಾಹುತ ಆದೀತೆಂದು ಅಂಜಿ ಕಾವಲ ಜನದ ಹತ್ತಿರ ಬಂದು, "ಯಾರಯ್ಯ ನೀವು, ಕಾವಲ ಜನವೆ ? ಇವರು ಯಾರು ?" ಎಂದು ಕೇಳಿದನು.

ಕಾವಲ ಒಬ್ಬ ಇವನು ಯಾರು ಎಂದು ನೋಡಿ ಗುರುತಿಸಿ, "ಯಾರೊ ತಿಳಿಯಲಿಲ್ಲ ನನ್ನೊಡೆಯ; ಇತ್ತ ಓಡಿಬರುತಾ ಇದ್ದರು; ಹಿಡಿದು ನಿಲ್ಲಿಸಿದಿವಿ," ಎಂದನು.

ಕಾವಲ ಇನ್ನೊಬ್ಬ, "ಮನೆವಾರ್ತೆ ನಂಬಣ್ಣನವರಲ್ಲವೇನೊ? ಅವರೇ ವಿಚಾರಿಸಲಿ," ಎಂದನು.

ನಂಬಯ್ಯ, "ಕರತನ್ನಿ, ಚಾವಡಿಗೆ ಹೋಗೋಣ. ಅಲ್ಲಿ ವಿಚಾರಿಸೋಣ," ಎಂದು ಹೇಳಿದನು.

ಇವರೆಲ್ಲ ಬೀದಿಯಲ್ಲಿ ಸ್ವಲ್ಪದೂರ ನಡೆದ ಮೇಲೆ ಕಾವಲ ಹಿರಿಯ, "ಅಪ್ಪಣೆ. ಆದರೆ ನಾವು ನಿಲ್ಲತೀವಿ ನನ್ನೊಡೆಯ; ಎರಡಾಳು ಬಂದು ಇವರನ್ನ ಚಾವಡಿಯಾಗೆ ಬಿಡತಾರೆ," ಎಂದನು.

ನಂಬಯ್ಯ, "ಆಗಬಹುದು," ಎಂದದ್ದರ ಮೇಲೆ ಕಾವಲ ಇಬ್ಬರು ಬಂದಿಗಳಿಬ್ಬರನ್ನೂ ಹಿಡಿದು ಜೊತೆಗೆ ಬಂದರು; ಉಳಿದವರು ಅಲ್ಲಿಯೇ ನಿಂತರು.

ಮುಂದೆ ನಡೆಯುತ್ತ ನಂಬಯ್ಯ ಚಂಡಾಲರಿಗೆ, "ಯಾಕೊ ಹಂಗೆ ಓಡಿದಿರಂತೆ? ದೈಯ ಕಂಡಿತೇನೊ?" ಎಂದು ಕೇಳಿದನು.

ಅವರಲ್ಲಿ ಒಬ್ಬ, "ಹೌದು, ಒಡೇರೆ, ಅದು ಏನೊ ಕಂಡಹಂಗೆ ಆತು," ಎಂದನು.

"ಯಾರೋ ಹಳ್ಳಿಯವರು ಇದ್ದಹಂಗೆ ಕಾಣುತೀರಲ್ಲೊ. ನಗರ ದಾಗೆ ಈ ಹೊತ್ತಿನಾಗೆ ಅಲೆಯೋದು ಬಾರದು ಅಂತ ತಿಳೀದಾ?"

"ಇಲ್ಲ ಒಡೇರೆ."

"ಒಳ್ಳೇದು; ಚಾವಡೀಲಿ ಬೆಳಗಾಗೋತನಕ ಇರಿ; ಆಮೇಲೆ ಏನು ಎತ್ತ ತಿಳಿಸಿ ನಿಮ್ಮ ಪಾಡಿಗೆ ನೀವು ಹೋಗುವಿರಂತೆ."

"ಅಪ್ಪಣೆ, ಒಡೇರೆ."

ಇವರೆಲ್ಲ ಚಾವಡಿಯನ್ನು ಮುಟ್ಟಿದರು. ಪಹರೆಯವನಿಗೆ ಹೇಳಿ ಒಂದು ಕೋಣೆಯಲ್ಲಿ ಚಂಡಾಲರನ್ನು ಬಿಟ್ಟು ನಂಬಯ್ಯ ಕಾವಲ ಜನ ವನ್ನು ಹಿಂದಕ್ಕೆ ಕಳುಹಿಸಿದನು. ಆಮೇಲೆ ಇವರ ಹತ್ತಿರ ಬಂದು ಪಹರೆ ಯವನು ದೂರ ಇರುವುದನ್ನು ನಿಶ್ಚಯಮಾಡಿಕೊಂಡು, "ಏನಾಯ್ತೊ? ಯಾಕೆ ಓಡಿದಿರಿ? ಎಲ್ಲಾ ಸರಿಯಾಯ್ತಲ್ಲ?" ಎಂದು ಕೇಳಿದನು.

ಚಂಡಾಲರಲ್ಲಿ ಹಿರಿಯ, "ಎಲ್ಲಾ ಸರಿಹೋಯ್ತು, ಒಡೇರೆ," ಎಂದನು; ಜೊತೆಗಾರನನ್ನು ಇವನು ಕಾಣದಂತೆ ಎಡಕೈಯಿಂದ ಚುಚ್ಚಿ

ಅವನು ಏನು ಹೇಳಬೇಕೆನ್ನುವುದನ್ನು ತಿಳಿದುಕೊಳ್ಳಬೇಕು ಎಂದು ಸನ್ನೆಮಾಡಿದನು.

"ಒಳ್ಳೇದು, ನಿಮ್ಮನ್ನ ಈಹೊತ್ತೆ ಊರಿಗೆ ಕಳುಹೋಣ ಅಂತ ಎರಡು ಹೊನ್ನು, ಎರಡು ತುತ್ತು ಬುತ್ತಿ, ತಂದಿದ್ದೆವು. ರಾತ್ರಿ ಇಲ್ಲಿರ ಬೇಕಾಯಿತಲ್ಲ; ಹೊನ್ನಿರಲಿ; ಬುತ್ತಿ ತಕೊಳ್ಳಿ. ಬೆಳಗಾಗ ಬಂದು ವಿಚಾರಣೆ ಮಾಡಿಸಿದ ಹಂಗೆಮಾಡಿ ನಿಮ್ಮನ್ನ ಬಿಡಸತೇವೆ."

"ಅಪ್ಪಣೆ, ಒಡೇರೆ."

ನಂಬಯ್ಯ ಅವರ ಕೈಗೆ ಎಲೆಯಲ್ಲಿ ಸುತ್ತಿದ ಎರಡು ಉಂಡೆ ಅನ್ನ ವನ್ನು ಕೊಟ್ಟನು. ಅದರಲ್ಲಿ ಹಿರಿಯ, "ನಾಳೆ ಹೆಂಗೂ ಇಲ್ಲಿರತೀವಲ್ಲ, ಒಡೇರೆ; ಇದನ್ನ ಈಗಲೇ ಉಣತೀವಿ," ಎಂದನು.

ನಂಬಯ್ಯ, "ನಿಮ್ಮ ಇಷ್ಟ," ಎಂದು ಹೇಳಿ ಪಹರೆಯವನ ಬಳಿ ಹೋಗಿ, "ಇವರನ್ನ ಭದ್ರವಾಗಿ ನೋಡಿಕೊ. ಬೆಳಗಾಗ ಮಠದ ಕೇರಿ ಕಾವಲವರು ಬರತಾರೆ. ಏನು ಎತ್ತ ವಿಚಾರಿಸಿ ಆಮೇಲೆ ಇವರನ್ನ ಬಿಡ ಬಹುದು. ಜೋಕೆ," ಎಂದು ಹೇಳಿ ಹೊರಟು ಹೋದನು.

ಪಹರೆಯವನು, "ಈ ಮನೆವಾರ್ತೆ ಮನುಷ್ಯನದು ಎಷ್ಟು ಅಪ ನಂಬಿಕೆ ಸ್ವಭಾವ! ಸಣ್ಣಪಣ್ಣವರು ತಂದುಬಿಟ್ಟರೆ ಹೋಗಂದರೂ ಅಂದೇವಲ್ಲ; ಮನೆವಾರ್ತೆ ತಂದುಬಿಟ್ಟವರನ್ನ ಹೋಗು ಅಂದೇವಾ?" ಎಂದುಕೊಂಡನು.

ಮೂರನೆಯ ಜಾವದ ಪಹರೆಯವನು ಬಂದಾಗ ಇವನು ಈ ಇಬ್ಬರನ್ನು ಅವನಿಗೆ ಒಪ್ಪಿಸಿದನು. ಅವನು ದೊಂದಿ ಹಿಡಿದು ಇವರ ಕಡೆ ನೋಡಿ, "ಇವರೇನು ಒಳ್ಳೆ ತುಂಡುಗಳ ಹಂಗೆ ಒರಗಿದ್ದಾರೆ," ಎಂದನು.

ಬೆಳಗಾಗ ಬೇರೆ ಪಹರೆ ಬಂದಾಗ ಇವರು ಇನ್ನೂ ಮಲಗಿಯೇ ಇದ್ದರು. ಹೊಸ ಪಹರೆಯವನು ಬಂದು ಇವನನ್ನು ನೋಡಿ, ಇವರೇನು ಜೀವದೊಂದಿಗೆ ಇರೋ ಹಂಗೆ ಕಾಣಲಿಲ್ಲಪ್ಪ," ಎಂದನು.

ಹಳೆಯ ಪಹರೆಯವನು ಇವರನ್ನು ಕೂಗಿದನು; ಇವರು ಏಳಲಿಲ್ಲ. ಬಾಗಿಲು ತೆಗೆದು ನೋಡಿದ್ದಾಯಿತು; ಇಬ್ಬರೂ ಸತ್ತಿದ್ದರು.

ಪಹರೆಯವನು ಇವರ ಮುಖವನ್ನು ನೋಡಿ, "ಯಾವುವೋ ಹಳ್ಳೀ ಮುಂಡೇವು. ನಗರಕ್ಕೆ ಬಂದು ಎಲ್ಲೋ ಚನ್ನಾಗಿ ಅಪೀಮು ತಂದು ತಿಂದವೆ, ತಣ್ಣಗೆ ಕಣ್ಣುಮುಚ್ಚಿಕೊಂಡವೆ," ಎಂದನು.

ಅವರು ರಾತ್ರಿ ತಿಂದ ಅನ್ನದ ಉಂಡೆಯಲ್ಲಿ ಆ ಅಫೀಮು ಸೇರಿದ್ದಿರಬೇಕು. ಆ ಉಂಡೆಗಳನ್ನು ಇವರಿಗೆ ಯಾರು ಕೊಟ್ಟರೆಂದು ಪಹರೆಯವರಿಗೆ ತಿಳಿಯದು. ನಂಬಯ್ಯನಿಗೆ ಇವರು ಸತ್ತ ವಿಷಯ ತಿಳಿದು ತಮಗೆ ಏನು ತೊಂದರೆಯೋ ಎಂದು ಇವರಿಗೆ ಭಯ. ಹಳೆಯ ಪಹರೆಯವನು ನಂಬಯ್ಯನ ಮನೆಗೆ ಬೇಗನೆ ಹೋಗಿ, "ಹೀಗೆ ಅಜಾಗ್ರತೆಯಾಗಿದೆ, ಇದರಲ್ಲಿ ನಮ್ಮ ತಪ್ಪಿಲ್ಲ," ಎಂದು ಹೇಳಿ, "ಕಾಪಾಡಬೇಕು," ಎಂದು ಬೇಡಿಕೊಂಡನು.

ನಂಬಯ್ಯ ಬಂದನು. "ಅಯ್ಯೋ ಮುಂಡೇವೆ, ನಗರಕ್ಕೆ ಬಂದ ಈ ವಿಷ ತಿಂದು ಸಾಯುತವೆ. ಪುಂಡಾಟ ಏನೋ ಮಾಡಿದ್ದಾವು ಅಂತ ಕಾಣುತದೆ; ಅದರ ವಿಚಾರಣೆ ಜವರಾಯ ಮಾಡಬೇಕು," ಎಂದನು. ಈ ಮಾತು ಆ ಮಾತು ಆಡಿ ಕೊನೆಯಾಗಿ, "ಹೊರಹಟ್ಟಿ ಜನ ಇದ್ದಹಂಗೆ ಇದಾರೆ. ಅವರಿಗೆ ಯಾರಿಗಾನ ಹೇಳಿಕಳುಹಿಸಿ ಮಣ್ಣುಮಾಡೋಕೆ ಏರ್ಪಾಡು ಮಾಡಿ," ಎಂದನು.

ಪಹರೆಯವರು, "ಅಪ್ಪಣೆ," ಎಂದರು; "ಮನೆವಾರ್ತೆ ನಂಬಣ್ಣ ಕೆಟ್ಟೋರಲ್ಲ; ಪರದೇಶಿ ಹೈಕಳು ಯಾವುವೋ ಎರಡು ಸತ್ತರೆ ಅವಕೆ ಮಣ್ಣುಮಾಡಿಸು ಅನ್ನೋವರೆಗೆ ಯೋಚನೆ ಮಾಡತಾರಲ್ಲ," ಎಂದುಕೊಂಡರು.

ನಂಬಯ್ಯ ಮನೆಗೆ ಹೋದನು. ಮನಸ್ಸಿನಲ್ಲಿ, "ನಾಯಕನ ಕೆಲಸ ಮುಗಿಯಿತು. ಅದನ್ನು ನಾನು ಮುಗಿಸಿದೆ ಎಂತ ಹೇಳಬಹುದಾದ ಈ ಇಬ್ಬರ ಕೆಲಸಾನೂ ಮುಗಿಯಿತು. ಇನ್ನು ನಾನು ನಿಶ್ಚಿಂತೆಯಾಗಿರಬಹುದು," ಎಂದುಕೊಂಡನು.

೧೦೩

ಬೆಳಗಾಗಿ ಇವನು ಅರಮನೆಗೆ ಹೋಗುವ ಹೊತ್ತಿಗೆ ನಾಯಕ ಮನೆಯಲ್ಲಿಲ್ಲ ಎಂಬ ಮಾತು ಹೊರಟಿತ್ತು. ಅವನು ಊರು ಸುತ್ತ ಹೊರಟಾಗ ಅರಮನೆಯ ಕಾವಲು ಅವನನ್ನು ನೋಡಿದ್ದಿತು. ವಾಡಿಕೆಯಂತೆ ಒಬ್ಬನು ಅವನ ಜೊತೆಗೆ ಹೋಗಲು ಹೊರಟನು. ವಾಡಿಕೆಯಂತೆ ಅವನು, "ಬೇಡ, ಬೇಗ ಬಂದುಬಿಡತೇವೆ, 'ಮಲ್ಲಿಗೆ' ಅಲ್ಲವೆ," ಎಂದಿದ್ದನು. ಇವನು, "ಹೌದು. ಒಡೇರೆ," ಎಂದಿದ್ದನು. 'ಮಲ್ಲಿಗೆ' ಆ ಹೊತ್ತಿನ ಅರಮನೆಯ ಕಾವಲ ಮಾತು. ದಿನವೂ ನಾಯಕ ಇಂಥ ಬಂದು ಗುರುತಿನ ಮಾತನ್ನು ಕೊಡುತ್ತಿದ್ದನು; ಆದಿನ ಅವನು ಕೊಟ್ಟಿದ್ದ ಗುರುತಿನ ಮಾತು "ಮಲ್ಲಿಗೆ."

ನಾಯಕ ಯಾವಾಗಲೋ ಹಿಂದಕ್ಕೆ ಬಂದಿರಬೇಕು ಎಂದೇ ಕಾವಲ ಜನದ ತಿಳಿವಳಿಕೆ. ನನ್ನ ಪಹರೆ ಮುಗಿದ ಮೇಲೆ ಬಂದಿರಬೇಕು, ನನ್ನ ಪಹರೆ ಮೊದಲಾಗುವ ಮೊದಲು ಬಂದಿರಬೇಕು, ಎಂದು ಒಬ್ಬೊಬ್ಬನೂ ಯೋಚಿಸಿಕೊಂಡಿದ್ದರು. ಬೆಳಗಾಗ ಬಹು ಹೊತ್ತಾದರೂ ಅವನ ಯಾವಾಗ ಗರಡಿಯ ಮನೆಗೆ ಬರಲಿಲ್ಲ ಆಗ ಓಜ ದೊಡ್ಡತೊಟ್ಟಿಯೊಳಕ್ಕೆ ಬಂದು, "ನಾಯಕರು ಗರಡಿಗೆ ಬರಲಿಲ್ಲವೆ, ನೋಡು," ಎಂದು ಬಾಗಿಲವರಿಗೆ ಹೇಳಿದನು.

ಇದರ ಮೇಲೆ ಇವರು ಹೋಗಿ ನೋಡಿದ್ದರಲ್ಲಿ ನಾಯಕ ರಾತ್ರಿ ಸುತ್ತುವುದಕ್ಕೆ ಹೋದವನು ಹಿಂತಿರುಗಿ ಬರಲಿಲ್ಲ ಎನ್ನುವ ಮಾತು ಸಿದ್ಧವಾಯಿತು. ಒಡನೆಯೆ ಇದು ರಾಣಿಗೆ ಶಾಂತವ್ವನಿಗೆ ವರದಿ ಆಯಿತು.

ನಾಯಕ ಇವರಿಗೆ ಯಾರಿಗೂ ಹೇಳದೆ ಹತ್ತುದಿನ ಕಣ್ಮರೆಯಾಗುವುದು ಇವರಿಗೇನು ಹೊಸತಲ್ಲ. ಆದರೆ ಅಂತ ಸಂದರ್ಭದಲ್ಲಿ ಅವನು ಮುಂಜಾನೆ ಎದ್ದು ಹೊರಡುವನು; ಉಪಹಾರ ತೆಗೆದುಕೊಂಡು ಹೊರಡುವನು; ಬಾಗಿಲ ಪಹರೆಯವರಿಗೆ, "ವಾರ ಹತ್ತು ದಿನದಾಗೆ ಬರುತೀವಿ ಅನ್ನೊ," ಎಂದಿರುವನು. ಈ ಸಂದರ್ಭ ಬೇರೆಯಾಗಿತ್ತು; ರಾತ್ರಿ ಹಿಂದಿರುಗುತ್ತೇನೆಂದು ನಿರೀಕ್ಷಿಸಿ ಹೊರಟಿದ್ದವನು ಹಿಂದಿರುಗಿ ಬಂದಿರಲಿಲ್ಲ.

ರಾಣಿಯ ಮನಸ್ಸಿನಲ್ಲಿ ಎರಡು ಶಂಕೆ ಮೂಡಿದುವು. ಹಿಂದಿನ ದಿನ ಬಂದ ಸುದ್ದಿಯಲ್ಲಿ ಹೈದರ್ ಶಿವಮುಗ್ಗಿಯನ್ನು ಮುಟ್ಟಿದ್ದನು. ಮಗ ಗುಟ್ಟಾಗಿ ಹೋಗಿ ಅವನನ್ನು ಸೇರಿ ನಗರಕ್ಕೆ ಅವನ ಸೇನೆಯೊಡನೆ ಬರುವ ಯೋಚನೆಯನ್ನು ಮಾಡಿದನೊ? ನಂಬಯ್ಯ ಏನಾದರೂ ದ್ವೇಷ ಸಾಧಿಸುವುದರಲ್ಲಿ ಅವನ ಪ್ರಾಣಕ್ಕೆ ಅಪಾಯ ಮಾಡಿದನೊ?

ಈಗಾಗಲೆ ನಾಯಕ ಅಧಿಕಾರಕ್ಕೆ ಬಂದಂತೆಯೆ; ಅವನು ಹೈದರನ ಹತ್ತಿರ ಹೋಗಿರಲಾರನು. ಹೋಗಿದ್ದರೆ ಅವನೊಡನೆ ಒಳ್ಳೆಯ ಮಾತನ್ನಾಡಿ ಅವನು ನಗರಕ್ಕೆ ಬಾರದಂತೆ ತಡೆಯುವುದಕ್ಕೆ ಹೋಗಿರಬೇಕು. ಅವನು ಇಂಥ ಸಾಹಸವನ್ನು ಮಾಡುವ ಮನುಷ್ಯನೆ; ಆದರೆ ಇದಕ್ಕೆ ಈ ರೀತಿ ಏಕೆ ಹೊರಟಾನು?

ನಂಬಯ್ಯ ಅವನನ್ನು ಏನಾದರೂ ಮಾಡಿಸಿರಬಹುದು. ಹೀಗೆಂದು ಕೊಂಡಾಗ ರಾಣಿಗೆ ಜೀವ ಹಿಡಿದಂತಾಯಿತು. ತಾನು ಮಗನ ಮೇಲೆ ಕೋಪಮಾಡಿದ್ದುಂಟು; ಇಂಥ ಮಗ ಹುಟ್ಟದೆ ಇದ್ದಿದ್ದರೆ ಚೆನ್ನಾಗಿತ್ತು ಎಂದದ್ದುಂಟು. ಆದರೆ ಅವನ ಜೀವಕ್ಕೆ ಅಪಾಯ ಮಾಡುವ ಮಾತಿಗೆ ಈ ತಾಯಿ ಉಸುರು ಒಪ್ಪುವುದಾಗಿರಲಿಲ್ಲ. ಆದರ ಮೇಲೆ ಇವಳಿಗೆ ಇನ್ನೊಂದು ಧೈರ್ಯ. ನಂಬಯ್ಯ ಅಂಜುಪುರುಕ; ಇಂಥ ಮಾತನ್ನು ಬಾಯಲ್ಲಿ ಆಡುವನಾದರೂ ಕೈಯಲ್ಲಿ ಮಾಡುವಷ್ಟು ಕೆಚ್ಚು ಅವನ ಎದೆಯಲ್ಲಿಲ್ಲ.

ಶಾಂತವ್ವ ಇಷ್ಟೆಲ್ಲ ಯೋಚನೆ ಮಾಡುವ ಸ್ಥಿತಿಯಲ್ಲಿರಲಿಲ್ಲ. ಮನೆಯಿಂದ ಹೊರಟ ವೇಳೆ ಗಂಡ ಹಿಂದಕ್ಕೆ ಬಂದೇನೆಂದು ಹೊರಟಿದ್ದನು; ಹಿಂದಕ್ಕೆ ಬಂದಿರಲಿಲ್ಲ. ಅವನಿಗೆ ಏನೊ ಆಗಿದೆ ಎಂದು ಅವಳಿಗೆ ನಿಶ್ಚಯ. ಏನಾಗಿದೆಯೊ, ಯಾರು ಹೇಳಬೇಕು? ಯಾರು ಕಾಯಬೇಕು? ದೇವರು ಬಲ್ಲ, ದೇವರೇ ಕಾಯಬೇಕು.

ನಂಬಯ್ಯ ಬಂದನು; ಎಲ್ಲರೊಂದಿಗೆ ವ್ಯಾಕುಲದಲ್ಲಿ ಸೇರಿದನು; ರಾಣಿಯ ಎದುರಿಗೂ ಸುಳ್ಳನ್ನು ನಟಿಸಿದನು. ರಾಣಿ, ಇವನು ಏನೂ ಮಾಡಿಲ್ಲ, ಎಂದು ತಿಳಿದುಕೊಂಡಳು.

ನಾಯಕ ರಾತ್ರಿ ಅರಮನೆಯಿಂದ ಹೊರಟವನು ಹಿಂದಕ್ಕೆ ಬರಲಿಲ್ಲ, ಏನಾದನೋ ಎಂದು ತಾಯಿ ಹೆಂಡತಿ ಚಿಂತಿಸುತ್ತಿದಾರೆ, ಎಂದು ಊರಲ್ಲೆಲ್ಲ ಸುದ್ದಿ ಹರಡಿತು. ಮಲ್ಲಯ್ಯ ನೇಮಯ್ಯನಿಗೆ, ಶಾಸ್ತ್ರಿಯ ಮನೆಗೆ, ಹೇಳಿಕಳುಹಿಸಿದನು.

ಈ ಹಿರಿಯರು ಬಂದರು; ಅರಮನೆಯಲ್ಲಿ ಕುಳಿತು ಏನಾಗಿರ ಬಹುದು ಎಂದು ಯೋಚಿಸಿದರು. ಸ್ವಲ್ಪಹೊತ್ತು ಮಾತನಾಡಿ ಏನೂ ಬಗೆಹರಿಯದೆ, ನಾಲ್ಕು ಕಡೆಗೆ ಜನವನ್ನು ಕಳುಹುವುದು ಎಂದು ಕೊಂಡರು.

ಈ ಎಲ್ಲ ಮಾತು ಮೆಲ್ಲನೆ ಮಠಕ್ಕೆ ಮುಟ್ಟಿತು.

ರಾತ್ರಿಯ ಅಪಘಾತದಿಂದ ನಾಯಕನ ಸತ್ವ ಉಡುಗಿದ್ದಿತು. ಚಂಡಾಲರು ಕುತ್ತಿಗೆಗೆ ಬಿಗಿದಿದ್ದ ಚೀಲದ ಕುಣಿಕೆಯಿಂದ ಅವನ ಕೊರಳು ಉಳುಕಿ ತುಂಬ ನೋಯುತ್ತಿದ್ದಿತು. ಕೊರಳ ಬಲಗಡೆ ಉಳುಕಿದಂತೆ ಎಡತೊಡೆ ಅಂಗಾಲ ಬದಿ .ಯಾವುವೊ ನರ ಆಳುಕಿ ಜೋಮು ಹಿಡಿದಂತಾಗಿ ಆ ತೊಡೆ ಕಾಲು ಸ್ವಾಧೀನ ತಪ್ಪಿದ್ದವು.

ನೋವಿನಿಂದ ನಾಯಕನಿಗೆ ರಾತ್ರಿ ನಿದ್ದೆಬಂದಿರಲಿಲ್ಲ. ಸ್ವಾಮಿ ತನ್ನ ಮೂಲಿಕೆಯ ತೋಟಕ್ಕೆ ಹೋಗಿ ಒಂದು ಸೊಪ್ಪನ್ನು ತಂದು ಸ್ವಲ್ಪ ಬೆಲ್ಲ ದೊಡನೆ ಇವನಿಗೆ ತಿನ್ನಿಸಿದ್ದನು. ಅದರಿಂದ ನೋವು ಸ್ವಲ್ಪ ಮರೆತು ಒಂದು ರೀತಿಯ ಮಂಪರ ಬಂದಂತಾಗಿತ್ತು.

## ೧೦೪

ನಾಯಕ ಬೆಳಗಾಗ ಎಚ್ಚೆತ್ತಾಗ ಸ್ವಾಮಿ ಪಕ್ಕದಲ್ಲಿ ಕುಳಿತಿದ್ದನು. "ಏನು ನನ್ನ ರಾಜ, ಸ್ವಲ್ಪ ಏನಾದರೂ ನಿದ್ದೆ ಬಿದ್ದಿತೆ?" ಎಂದು ಕೇಳಿದನು.

"ಸ್ವಲ್ಪ ಬಂದಹಂಗಾಯಿತು ಅಯ್ಯನವರೆ," ಎಂದು ನಾಯಕ ಹೇಳಿದನು.

ಸ್ವಾಮಿ ಅವನ ಎದೆಯ ಮೇಲೆ ಕೈಯಿಟ್ಟು ನೋಡಿ, "ಜೀವ ಅಷ್ಟು ಕುಗ್ಗಿಯದೆ; ಬೇರೆ ಏನೂ ಇಲ್ಲ. ನೋವಿಗೆ ಜ್ವರ ಬಂದಾತು; ಅದಕ್ಕೆ ಒಂದು ಹಸರು ಕೊಡುತೇವಿ," ಎಂದನು.

ನಾಯಕ, “ಬೇಕಾದ್ದು ಕೊಡಿರಿ, ಏನೂ ಕೊಡಬೇಡಿರಿ. ನೀವು ದಿನಕೆ ಒಮ್ಮೆ ಮುಟ್ಟಿದರೆ ಸಾಕು, ನಾವು ಬದುಕುತೇವಿ,” ಎಂದನು.

ಭಾವಕ್ಕೆ ವಶವಾಗದೆ ಸುಳಿಯುತ್ತಿದ್ದ ಸ್ವಾಮಿ ನಾಯಕನ ಈ ಮಾತಿನಿಂದ ಮರುಕಗೊಂಡನು. “ನಿಮ್ಮ ಮನಸ್ಸು ಹಿಂಗೆ ಇರೋ ಹೊತ್ತಿಗೇ ರಾತ್ರಿ ಆ ಹೊತ್ತಲ್ಲಿ ಶಿವ ನಿಮ್ಮ ಹಂಗೆ ದನಿಮಾಡಿ ನಮ್ಮನ ಅಲ್ಲಿಗೆ ತಂದ,” ಎಂದನು.

“ದನಿ ಶಿವ ಮಾಡಿರಬೇಕು; ಮನ ಏನೋ ನಮ್ಮದೇ.”

“ಏನು, ನಮ್ಮನ್ನ ನೆನೆದಿರೋ ?”

“ಬೀದಿ ಕೊನೆಗೆ ಬಂದದ್ದೆ ಈ ಕಡೆಗೆ ಕಣ್ಣೆಸೆದಿವಿ. ಅಯ್ಯನವರು ದೇವರ ಮುಂದೆ ,ಅಡಿ ನೆನೆಯುತಾ ಕುಳಿತಿರತಾರೆ ಅಂದುಕೊಂಡೆವಿ. ಅದೇ ನೆನವು. ಘಳ್ಳನೆ ಕೈ ಬಿಗಿಯಿತು; ಮುಖಕ್ಕೆ ಕತ್ತಲು ಕವಿಯಿತು. ಆ ಅನ್ನೋಕೆ ಇಲ್ಲದಹಾಂಗೆ ಬಾಯಮೇಲೆ ಕಟ್ಟುಬಂದಿತು. ಆಮೇಲೆ ನಾವು ಕಂಡದ್ದು ಬಾಗಿ ನೋಡುತಾ ಇದ್ದ ನಿಮ್ಮ ಕಣ್ಣನೆ.”

“ಶಿವನ ತಂತ್ರವೇ ಇಂತು ನನ್ನ ರಾಜ. ಕತ್ತಲಾಗಿ ಮುಚ್ಚುತಾನೆ, ಬೆಳಕಾಗಿ ಹರೀತಾನೆ. ಎಮ್ಮೆ ಏರಿ ಕೊಲ್ಲುತಾನೆ. ಎತ್ತ ಏರಿ ಕಾಯುತಾನೆ. ಲೋಕದ ಎಲ್ಲಾ ಆಟಾನ್ನು ಅವನೊಬ್ಬ ನಿಂತು ಆಡುತಾನೆ. ಎಲ್ಲ ಅವನಾಟಾನೆ ; ಎಲ್ಲ ; ಎಲ್ಲ.”

ಸ್ವಲ್ಪ ಹೊತ್ತು ಬಿಟ್ಟು ಸ್ವಾಮಿ, “ಮಾತನಾಡೋದು ಕಷ್ಟ ಅಲ್ಲ ?” ಎಂದು ಕೇಳಿದನು.

“ಇಲ್ಲ, ಯಾಕೆ ?”

“ಇದು ಯಾರ ಕೆಲಸ ಅನ್ನೋದು ಒಂದು ತಿಳೀಬೇಕು. ಚಿಕ್ಕ ರಾಣಿಯವರಿಗೆ ಯಾರಾದರೊಬ್ಬರು ಧೈರ್ಯದ ಮಾತು ಹೇಳಬೇಕು.”

ವೈರಾಗ್ಯದಲ್ಲಿದ್ದ ಸ್ವಾಮಿಯ ಪ್ರಪಂಚ ಜ್ಞಾನ ನಾಯಕನ ಮನಸ್ಸಿನ ಯೋಚನೆಗೇ ರೂಪು ಕೊಟ್ಟಿತ್ತು.

“ಯಾರು ಮಾಡಿದ್ದು ಅಂತ ಎಣಿಸೋಕೆ ನಮಗೆ ಮನಸ್ಸಿಲ್ಲ.”

ನಾಯಕನಿಗೆ ತಾಯ ವಿಷಯ ಸಂದೇಹ ಎಂದು ಸ್ವಾಮಿ ಅರ್ಥ ಮಾಡಿಕೊಂಡನು. “ಸರಿತಾನೆ,” ಎಂದನು.

''ಚಿಕ್ಕರಾಣಿಯವರಿಗೆ ಭಯಪಡೋ ಕೆಲಸ ಇಲ್ಲ ಎಂತ ಒಂದು ಮಾತು ಮುಟ್ಟಿಸಬೇಕು, ಹೇಳುತೇವಿ.''

''ಒಳ್ಳೇತು.''

ಊರಿನಿಂದ ಸುದ್ದಿಬಂದದ್ದು ಇದಾದ ಸ್ವಲ್ಪ ಹೊತ್ತಿನ ಮೇಲೆ. ನಾಯಕ ತನ್ನ ತಾಯಿ ನಂಬಯ್ಯ ತಾವು ಏನೂ ಕಾಣದವರಂತೆ ನಡೆದು ಕೊಳ್ಳುತ್ತಿರುವುದನ್ನು ಕೇಳಿ ಮನಸ್ಸಿನಲ್ಲಿ ಇಬ್ಬರ ಮೇಲೆಯೂ ಸಮನಾಗಿ ತಪ್ಪು ಹೇರಿದನು. ಭಯಪಡಬೇಡ ಎಂದು ಹೇಳಿಕಳುಹಿಸುವುದಾದರೆ ನೇಮಯ್ಯನಿಗೆ ಶಾಸ್ತ್ರಿಗೂ ಹೇಳಿಕಳುಹಿಸಬೇಕಲ್ಲವೆ ಎಂದು ಅವನಿಗೆ ತೋರಿತು.

ಸ್ವಾಮಿ: ಅವರೂ ಭಯಪಟ್ಟಿರುತಾರೆ ಉಂಟು. ಹಂಗೆ ನೋಡಿದರೆ ಊರು ಊರೇ ಭಯಪಟ್ಟಿರುತದೆ. ಎಲ್ಲರಿಗೂ ಧೈರ್ಯದ ಸುದ್ದಿ ಬೇಕು.

ನಾಯಕ: ನ್ಯಾಯವಾಗಿ ನಾವು ಈಗಲೇ ಅರಮನೆಗೆ ಹೋಗ ಬಹುದು. ಎಲ್ಲರಿಗೂ ಧೈರ್ಯ ನೀಡಬಹುದು. ಆದರೆ ಅದು ಈಗ ಸರಿಹೋಗೋಲ್ಲ.

" ಯಾಕಂತೀರಿ ? "

" ಹೋದಮೇಲೆ ಏನಾಯಿತು ಅಂತ ಹೇಳಬೇಕು, ಯಾರ ತಪ್ಪು ಅಂತ ವಿಚಾರಿಸಬೇಕು. ಈಗ ಬೇರೆ ಕೆಲಸ ಅದೆ. ಈ ಗೊಂದಲ ಎದ್ದರೆ ಅದು ಕೆಡುತದೆ."

" ನಿಜ. ಗೊಂದಲ ಬೇಡ ಅಂತ, ಇರೋ ಮಾತು ಹೇಳದೇ ಇರ ಆಗೋದಿಲ್ಲ. ಒಮ್ಮೆ ಇದು ಮಾಡಿದವರು ಮತ್ತೆ ಇನ್ನೊಂದ ಮಾಡಿ ಯಾರು."

" ಆದಕಿನ್ನ ಹೆಚ್ಚಾಗಿ ಹೇಳದೇ ಇರೋದು ತೀರ ಸುಳ್ಳಾಗತದೆ; ತಪ್ಪುಮಾಡಿದ್ದನ್ನು ಬಿಟ್ಟುಕೊಂಡು ಬಂದು ಕೊಲೆ ಘಟ್ಟಕ್ಕೆ ಬಂತು. ಕೊಲೆಮಾಡ ಬಂದದ್ದನ್ನು ಬಿಟ್ಟುಕೊಂಡು ನಡದರೆ ಬೇರೆ ಏನಾದರೂ ಆಯಿತೆ."

"ನೀವು ತಲೆ ಮರಸಿಕೊಂಡಿದ್ದರೂ ಅದು ಆಗಬಹುದಲ್ಲ."

“ಅಹ, ಅದನ್ನು ಮಾಡೋ ಅವಸರ ಇಲ್ಲ ಕಾಣಿರಾ. ಕಾಲಿಗೆ ತಾಕಿದ ಕಲ್ಲ ಕಿತ್ತು ಒಗೆದು ಆಯಿತು. ತಿರುಗಿ ಯಾಕೆ ನೆಲ ಅಗೀತಾರೆ?”

“ಚಿಕ್ಕ ರಾಣಿಯವರಿಗೆ . . . .”

“ಆ ಭಯ ಇಲ್ಲ. ಆಗದವರು ಕೂಡ ಅವರಿಗೆ ಏನಾರ ಮಾಡೋಣ ಅನ್ನೋದಿಲ್ಲ. ಹಾವನ್ನು ತಂದು ಅವರ ಹಾಸಿಗೆ ಮೇಲೆ ಬಿಟ್ಟರೆ ಅದು ಹೆಡೆ ಎತ್ತಿ ಅವರನ್ನ ತಾಯಿ ಅಂತ ಕಾಯತದೆ.”

“ಹಾ ನನ್ನ ತಾಯಿ, ನನ್ನ ಕಂದ.”

“ಆಕೆ ಬುದ್ಧಿ ಪೂರಾ ನೇಮಯ್ಯನವರ ಬುದ್ಧೀನೆ. ಹೆಣ್ಣು ಅನ್ನೋದರಿಂದ ಇಷ್ಟು ಬನಿ ಹೆಚ್ಚು, ಬಳುಕು ಹೆಚ್ಚು.”

ಹತ್ತಿರದ ಗಿಡಗಳಲ್ಲಿ ಸುತ್ತಿ ನಾಲ್ಕು ಸೊಪ್ಪನ್ನು ತಂದು ಅರೆದು ಸ್ವಾಮಿ ನಾಯಕನ ಕೊರಳಿಗೆ, ತೊಡೆಗೆ ಕಾಲಿಗೆ, ಲೇಪ ಮಾಡಿದನು. ಅದರಿಂದ ನಾಯಕನಿಗೆ ಸಂಜೆಯ ವೇಳೆಗೆ ನೋವು ಗುಣವಾಯಿತು, ಜೋಮು ಕಡಮೆಯಾಯಿತು.

ನಾಯಕನ ಸೂಚನೆಯ ಪ್ರಕಾರ ಸ್ವಾಮಿ ಆ ಸಂಜೆ ಬಸವಯ್ಯನ ಕೈಯಲ್ಲಿ ಚಿಕ್ಕರಾಣಿಗೆ ಪ್ರಸಾದ ಕಳುಹಿಸಿದನು. ಬಸವಯ್ಯ ಅದನ್ನು ತೆಗೆದುಕೊಂಡು ಹೋಗಿ, “ನಾನೇ ಸ್ವಂತ ಅವರ ಕೈಗೆ ಕೊಡಬೇಕಂತೆ, ಕೈಕಾಲು ತೊಳೆದುಕೊಂಡು ಸ್ವಂತ ಅವರೆ ತಕೊಳ್ಳಬೇಕಂತೆ,” ಎಂದನು.

ಸ್ವಾಮಿ ಯಾವಾಗಲಾದರೂ ಪ್ರಸಾದ ಕಳುಹಿಸುವುದುಂಟು; ಇಂಥ ನಿಯಮವನ್ನು ಮಾಡುವುದೂ ಉಂಟು. ಈ ದಿನ ನಾಯಕನನ್ನು ಕುರಿತು ಮನೆಯವರು ಕಳವಳಪಡುತ್ತಿರುವಾಗ ಪ್ರಸಾದ ಬರುವುದೇನೂ ಆಶ್ಚರ್ಯವಿಲ್ಲ.

ಶಾಂತವ್ವ ತುಂಬ ಚಿಂತೆಯಲ್ಲಿದ್ದಳು; ಸ್ವಾಮಿ ತನ್ನ ಮೇಲೆ ಕನಿಕರದಿಂದ ಸಮಾಧಾನಕ್ಕಾಗಿ ಪ್ರಸಾದ ಕಳುಹಿಸಿದಾರೆ ಎಂದು ತಿಳಿದುಕೊಂಡಳು. ಪ್ರಸಾದ ತೆಗೆದುಕೊಳ್ಳಲು ಸಿದ್ಧವಾಗಿ ಬಸವಯ್ಯನನ್ನು ಒಳಗೆ ಬರಹೇಳಿ ಕಳುಹಿಸಿದಳು.

ಕೆಂಚವ್ವೆ ರಾಣಿಯ ಪಕ್ಕದಲ್ಲಿ ನಿಂತಿದ್ದಳು. ಬಸವಯ್ಯ, “ನೀನು ಒಸಿ ಆಚೆ ಇರವ್ವ,” ಎಂದನು. ಅವಳು ಹೊರಗೆ ಹೋದಮೇಲೆ

ಶಾಂತವ್ವನ ಕೈಯಲ್ಲಿ ಪ್ರಸಾದವನ್ನು ಹಾಕಿ, "ನಾಯಕರು ಸುಖವಾಗಿ ದಾರೆ; ಸದ್ಯ ಯಾರಿಗೂ ತಿಳಿಸಬೇಡ ಅಂತಾರೆ," ಎಂದನು.

ದಿನವೆಲ್ಲ ಕಳವಳದಲ್ಲಿ ಆಳಿದ್ದು ಇದ್ದದಿದ್ದಂತೆ ಈ ಸುದ್ದಿಯನ್ನು ಕೇಳಿ ಮನಸ್ಸಿಗೆ ಏನೋ ಆಗಿ ಶಾಂತವ್ವ ಬಸವಯ್ಯನ ಕಡೆ ನಿಟ್ಟಿಸಿ ನೋಡುತ್ತ ಕಣ್ಣಿಗೆ ಕತ್ತಲು ಕವಿದಂತಾಗಿ ಇದ್ದಲ್ಲಿಯೇ ಮೈಮರೆತು ಕುಳಿತಳು.

ಬಸವಯ್ಯ ಬಾಗಿಲಿಗೆ ಬಂದು ಕೆಂಚವ್ವೆಗೆ, "ಅವ್ವ ಅವರನ್ನು ನೋಡಿಕೊ ಅವ್ವ," ಎಂದು ಹೇಳಿ ಯಾರಾದರೂ ನಿಲ್ಲಿಸಿ ಮಾತನಾಡಿಸುವುದಕ್ಕೆ ಅವಕಾಶ ಕೊಡದೆ ಮಠವನ್ನು ಕುರಿತು ಧಾವಿಸಿದನು.

## ೧೦೫

ನಾಯಕನಿಗೆ ಚೆನ್ನಾಗಿ ಗುಣವಾಗಿ ಅವನು ಸುಮಾರು ಎಂದಿನಂತೆ ಓಡಿಯಾಡಬಹುದು ಎನ್ನುವುದಕ್ಕೆ ಹದಿನೈದು ದಿನ ಹಿಡಿಯಿತು.

ಈ ವೇಳೆಗೆ ಹೈದರ್ ಹೆಜ್ಜೆ ಹೆಜ್ಜೆಯಾಗಿ ನಗರದ ಕಡೆಗೆ ಬರುತ್ತಿದಾನೆಂದು ದಿನವೂ ಸುದ್ದಿಬರುತ್ತಿದ್ದಿತು. ಸವಣೂರ ನವಾಬನ ಸೈನ್ಯ ಊರಿನಿಂದ ಹೊರಡುವುದರಲ್ಲಿದೆ ಎಂದೂ ವಿರೋಧಿ ಸೈನ್ಯ ನಗರಕ್ಕೆ ಬರುವ ಮುನ್ನ ನಗರವನ್ನು ಸೇರಬಲ್ಲದೆಂದೂ ಧೈರ್ಯದ ಮಾತೂ ಬಂದು ಸೇರಿತು.

ಹೈದರ್ ಹೊಸದುರ್ಗದಿಂದ ಹೊರಟು ಚೆನ್ನಗಿರಿ, ಹೊಳೆಹೊನ್ನೂರು ಮಾರ್ಗವಾಗಿ ಶಿವಮಗ್ಗಿಗೆ ಬಂದನು. ಶಿವಮಗ್ಗಿ ಬಿದನೂರಿನ ಒಂದು ಪಾಳೆಯ. ಅವನು ಅದನ್ನು ಶ್ರಮವಿಲ್ಲದೆ ಕೈವಶಮಾಡಿಕೊಂಡನು. ಅಲ್ಲಿದ್ದ ಹಣಕಾಸು ಕಣಜವನ್ನು ತೆಗೆದುಕೊಂಡನು. ಅಲ್ಲಿ ಮೂರು ದಿನ ಇದ್ದು ಮತ್ತೊಂದು ಹೆಜ್ಜೆ ಮುಂದಿಟ್ಟು ಕುಂಸಿಯನ್ನು ಹೊಕ್ಕು ಆ ಪ್ರಾಂತ್ಯವನ್ನು ಕೈವಶಮಾಡಿಕೊಂಡನು.

ನಗರದ ರಾಜ್ಯ ನಿಜವಾಗಿ ಇಂಥ ಒಬ್ಬ ಹಗೆಯನ್ನು ತಡೆಯುವ ಏರ್ಪಾಡನ್ನು ಮಾಡಿಕೊಂಡಿರಲಿಲ್ಲ. ಅವರವರ ದೇಶದಲ್ಲಿ ಅವರವರು

ಬಾಳಬೇಕು ಎಂಬ ಪೂರ್ವದ ಕಲ್ಪನೆಯ ರಾಜ್ಯ ಅದು. ಹಗೆ ಸುಲಭ ವಾಗಿ ಬಾರದಂತೆ ಬಿದನೂರು ಕಾಡಿನಲ್ಲಿ ಮರೆಸಿಕೊಂಡಿದ್ದಿತು. ಇಂಥ ಹಗೆ ಹುಡುಕಿಕೊಂಡು ಬಂದರೆ ಕಾಡಿನಲ್ಲಿ ದಾರಿ ತಿಳಿಯಲಿಲ್ಲವೆಂದೊ ದಾರಿಯಲ್ಲಿ ಹೊಳೆ ಅಡ್ಡಲಾಗಿದೆಯೆಂದೊ ಯಾತ್ರೆ ಕೆಲವು ದಿನ ಸಾವಕಾಶ ವಾಗಬಹುದು ಹೊರತು ದಾರಿಯಲ್ಲೆ ಅವನನ್ನು ನಿಲ್ಲಿಸಬಲ್ಲ ಸೈನ್ಯ ಇವರಿಗೆ ಇರಲಿಲ್ಲ. ಕುಂಸಿಯವರೆಗೆ ಅಂಥ ಕಾಡೇನೂ ಇಲ್ಲದ್ದರಿಂದ ಹೈದರ್ ಅಲ್ಲಿಯವರೆಗೆ ಸುಲಭವಾಗಿಯೇ ಬಂದನು. ಅಲ್ಲಿಂದಾಚೆ ಯಾರಾದರೂ ಬಲ್ಲವರು ದಾರಿ ತೋರಿಸಬೇಕು. ನಗರದ ಜನ ಕಾಡಿನಲ್ಲಿ ಅಲ್ಲಿ ಇಲ್ಲಿ ಮರೆಯಲ್ಲಿದ್ದು ಇವರ ಜನವನ್ನು ಸ್ವಲ್ಪ ಕಾಡಬಹುದು; ಇದರಿಂದ ಬಹಳ ತೊಂದರೆ ಆದೀತೆಂದು ಹೈದರ್ ತಿಳಿದಿರಲಿಲ್ಲ.

ಇತ್ತ ನಾಯಕ ಮಠದಲ್ಲಿ ಹಾಸಿಗೆಯಲ್ಲಿ ಬಿದ್ದಿದ್ದನು. ಊರಿಗೆ ಹೋಗಿ ರಾಣಿ ನಂಬಯ್ಯ ಇವರನ್ನು ಕುರಿತು ವಿಚಾರಣೆಯನ್ನು ಮೊದಲಿ ಡುವುದಕ್ಕೆ ಅವನಿಗೆ ಇಷ್ಟವಿಲ್ಲ. ತಾನು ಸ್ವತಃ ಹೈದರನ ಬಳಿಗೆ ಹೋಗಿ ಅವನೊಂದಿಗೆ ಮಾತನಾಡಿ ಅವನು ಮುಂದರಿಯದಂತೆ ನಿಲ್ಲಿಸಬೇಕೆಂದು ಅವನ ಯೋಚನೆ. ಇದಕ್ಕೆ ಇನ್ನೂ ಸಾಕಾದಷ್ಟು ತ್ರಾಣ ಬಂದಿಲ್ಲ. ದಿನವೂ ಹೈದರ್ ಮುಂದು ಮುಂದಕ್ಕೆ ಬರುತ್ತಿರುವ ಸುದ್ದಿಯನ್ನು ಕೇಳುತ್ತ ತನ್ನ ಅಸಹಾಯ ಸ್ಥಿತಿಯನ್ನು ಕುರಿತು ಮತ್ತೆ ಮತ್ತೆ ಕುದಿಯುತ್ತ ಅವನು ಗಳಿಗೆಗಳನ್ನು ಎಣಿಸುತ್ತ ಬೇಸರದಲ್ಲಿದ್ದನು. ಮಧ್ಯೆ ಅವನನ್ನು ಒಂದು ಯೋಚನೆ ಕಾಡುತ್ತಿತ್ತು. ಭಾಸ್ಕರಯ್ಯ ಏಕೆ ಮೈಸೂರಿಂದ ಹಿಂದಿರುಗಲಿಲ್ಲ ?.

ನಾಯಕ ಏನಾದನೆಂದು ತಿಳಿಯದೆ ರಾಣಿ, ನೇಮಯ್ಯ, ಶಾಸ್ತ್ರಿ, ಮುಂದು ಮುಂದಕ್ಕೆ ಬರುತ್ತಿರುವ ನವಾಬನನ್ನು ಹೇಗೆ ನಿಲ್ಲಿಸುವುದು ಎಂದು ಯೋಚಿಸಿದರು. ರಾಣಿ ಹೈದರನಿಗೆ ಒಂದು ಕಾಗದ ಬರೆಯುವು ದೆಂದು ನಿಶ್ಚಯಿಸಿದರು. ಹೈದರನನ್ನು ತಮ್ಮ ಊರಿಗೆ ಬರಬಿಡುವುದು ತಪ್ಪು ಎನ್ನುವ ವಿಷಯದಲ್ಲಿ ಇವರಲ್ಲಿ ಒಂದೆ ಅಭಿಪ್ರಾಯ ಇದ್ದಿತು. ರಾಣಿ, "ಅವನು ಹಣಕ್ಕಾಗಿ ಬರುತ್ತಿದಾನೆ; ಹಣ ಕೊಡುತ್ತೇವೆ, ಹಿಂದಿರುಗಿ ಹೋಗು, ಎನ್ನೋಣ," ಎಂದಳು.

ಶಾಸ್ತ್ರಿ, "ಹೀಗೆಂದರೆ ಅವನು ಮತ್ತಷ್ಟು ಮುಂದೆ ಬಂದು ಬೆದರಿಸ್ತ್ತಾನೆ; ನಾಯಕರು ತಿಳಿಸಿದಂತೆ ನೀನು ಇಲ್ಲಿ ಬರುವ ಕೆಲಸವಿಲ್ಲ ಎಂದಷ್ಟೇ ಹೇಳೋಣ," ಎಂದನು.

ನೇಮಯ್ಯ, "ನಾಯಕರು ಈ ಮಾತಷ್ಟನ್ನೇ ಹೇಳಬಹುದಾಗಿತ್ತು; ಅರಸರನ್ನು ಕಂಡಿದ್ದೇವೆ ಎನ್ನಬಹುದಾಗಿತ್ತು; ನಾವು ಹಾಗೆನ್ನುವಂತಿಲ್ಲ," ಎಂದನು.

ಕೊನೆಗೆ ರಾಣಿಯ ಸಲಹೆಯಂತೆ ಬರೆದ ಒಂದು ಓಲೆ ಅವಳ ಹೆಸರಿನಲ್ಲಿ ಕುಂಸಿಗೆ ಹೋಯಿತು.

## ೧೦೬

ಕುಂಸಿಯನ್ನು ಕೈಗೆ ತೆಗೆದುಕೊಂಡು ತನ್ನ ದಳಗಳ ವ್ಯವಸ್ಥೆಯನ್ನು ನೋಡಿಕೊಂಡಮೇಲೆ ಹೈದರ್ ಮೊದಲು ಲಿಂಗಣ್ಣಯ್ಯನನ್ನು ಸೆರೆಯಿಂದ ಬಿಡಿಸಿದನು; ಅವನನ್ನು ತನ್ನ ಬಿಡಾರಕ್ಕೆ ಬರಮಾಡಿಕೊಂಡು, "ನಾವು ನಗರಕ್ಕೆ ಹೊರಟಿದ್ದೇವೆ. ನೀವು ಈ ಪ್ರಾಂತ್ಯವನ್ನು ಬಲ್ಲವರು, ನಮಗೆ ಸಹಾಯ ಮಾಡಬೇಕು," ಎಂದನು.

ಲಿಂಗಣ್ಣಯ್ಯ, "ಆಗಬಹುದು, ಸ್ವಾಮಿ. ಆದರೆ ತಾವು ಏನು ಕೆಲಸವಾಗಿ ನಗರಕ್ಕೆ ಹೊರಟಿರೋಣಾಗಿದೆ. ಅಪ್ಪಣೆ ಕೊಡಬೇಕು," ಎಂದನು.

"ಅದನ್ನು ನೀವು ಈಗಾಗಲೆ ಕಂಡಿದೀರಿ. ನಿಮ್ಮಂತೆ ಅನ್ಯಾಯವಾಗಿ ಇತರರು ಹಿಂಸೆಗೆ ಗುರಿಯಾಗಿದಾರೆಯೆಂದು ಕೇಳಿದೇವೆ. ಈ ಅವ್ಯವಸ್ಥೆಯನ್ನು ಸರಿಪಡಿಸುವುದಕ್ಕೆ ಹೊರಟಿದೇವೆ."

"ತಾವಾಗಿ ಈ ಕೆಲಸಕ್ಕೆ ಹೊರಟರೆ ಇಲ್ಲಿಯ ಜನ ತಮಗೆ ಸಹಾಯ ಮಾಡಲಾರರು, ಸ್ವಾಮಿ."

"ಈಗಾಗಲೇ ಬೇಕಾದಷ್ಟು ಜನ ಸಹಾಯ ಮಾಡಿದಾರೆ."

"ತಾವು ನಾಯಕರ ಇಷ್ಟದ ಪ್ರಕಾರ ಹೊರಟಿದೀರಿ ಎಂತ ತಿಳಿದು ಸಹಾಯ ಮಾಡಿದಾರೆ. ನಾಯಕರ ಇಷ್ಟದಂತೆ ಆದರೆ ನಾನೂ ಸಹಾಯ ಮಾಡುತೇನೆ."

"ನಿಮ್ಮ ನಾಯಕರ ವಿಷಯ ನಿಮಗೆ ತಿಳಿಯದು ಅಂತ ಕಾಣು ತ್ತದೆ. ರಾಣಿ ಅವರನ್ನು ಕೊಲ್ಲಿಸಿದವರು ಅಂತ ಸುದ್ದಿ ಹೊರಟಿದೆ. ಕೇಳಲಿಲ್ಲವೊ ? "

"ನಾಯಕರು ಅರಮನೆ ಬಿಟ್ಟು ಎತ್ತಲೊ ಹೋದವರು ಹಿಂದಕ್ಕೆ ಬರಲಿಲ್ಲ ಎಂತ ಅಷ್ಟುಮಾತ್ರ ತಿಳಿಯಿತು. ಕೊಲ್ಲಿಸಿದ ಮಾತು, ರಾಣಿ ಯವರು ಅನ್ನುವ ಮಾತು, ತಿಳಿದಿಲ್ಲ."

"ಹಿಂದಿನಿಂದ ಇವರಿಗೆ ವಿವಾದ ಇತ್ತು ಅಂದಮೇಲೆ ಇದು ಏನು ಆಶ್ಚರ್ಯ ? "

"ಸಂಸಾರದ ಮಾತು ಒಂದು ನೂರಿರುತ್ತದೆ ಸ್ವಾಮಿ. ಅದಕ್ಕಾಗಿ ಹೆತ್ತ ತಾಯಿ ಮಗನ್ನ ಕೊಲ್ಲಿಸಿದರು ಅನ್ನೋಕಾಗೊದಿಲ್ಲ."

ಹೈದರ್ ಉಜನಿಯನ್ನು ಕರೆದು ಅವನಿಗೆ ಮೆಲ್ಲನೆ ಏನನ್ನೋ ಹೇಳಿದನು. ಉಜನಿ ಇವನ ಹತ್ತಿರ ಬಂದು, "ಸ್ವಲ್ಪ ಹೀಗೆ ಬನ್ನಿ, ನಿಮ್ಮೊಂದಿಗೆ ಒಂದು ಮಾತನಾಡಬೇಕು," ಎಂದನು.

ಲಿಂಗಣ್ಣಯ್ಯ ಹೈದರನನ್ನು ಕುರಿತು, "ಸ್ವಾಮಿ, ತಾವು ನನಗೆ ಏನು ಹೇಳಬೇಕಾದರೂ ನೇರವಾಗಿ ಹೇಳೋಣಾಗಲಿ. ನಿಮ್ಮ ಕೋಲುಕಾರರ ಗುರಿಕಾರರ ಸಂಗಡ ಮಾತನಾಡುವುದಕ್ಕೆ ಬಿಡುವುದು ಬೇಡ," ಎಂದು ಹೇಳಿದನು.

ಉಜನಿ ಬೆಪ್ಪಾಗಿ ಸುಮ್ಮನೆ ನಿಂತನು. ನವಾಬನಿಗೆ ತುಂಬ ಕೋಪ. ಅವನು, "ನೀವು ನಮ್ಮೊಂದಿಗೆ ಚರ್ಚೆಮಾಡುವುದಕ್ಕೆ ಹೊರಟಿರಿ. ನಮಗೆ ಇದು ವಾಡಿಕೆಯಿಲ್ಲ. ಈ ಮಾತನ್ನು ನಿಮಗೆ ತಿಳಿಸುವುದಕ್ಕೆ ನಾವು ರಾಜಾ ಅವರನ್ನು ಕರೆದೆವು," ಎಂದನು.

"ಸ್ವಾಮಿ ನನ್ನ ಮಾತು ಹೆಚ್ಚಾದರೆ ಮನ್ನಿಸಬೇಕು. ನನ್ನ ರೀತಿ ನಿಮಗೆ ವಾಡಿಕೆಯಿಲ್ಲ. ಆದರೂ ನನಗೆ ಬಂದಹಾಗೆ ನಾನು ಮಾತ ನಾಡಬೇಕು. ಇವರ ಹೆಸರು ಉಜನಿ ಅಲ್ಲವೆ? ನಮಗೆ ಇವರನ್ನ ರಾಜರು ಅಂತ ಅಪ್ಪಣೆಯಾಗುತ್ತೆ ? "

"ಹೌದು, ಅದು ನಾವು ಅವರಿಗೆ ಕೊಟ್ಟಿರುವ ಮರ್ಯಾದೆ."

"ತಿರಿಗಿ ಕೇಳುತೇನೆ, ಮನ್ನಿಸಬೇಕು. ಮೈಸೂರರಸರಿಗೆ ರಾಜರು ಅಂತ ಹೆಸರು. ಅವರಲ್ಲಿ ನೀವಿದೀರಿ. ಅವರು ನಿಮ್ಮನ್ನು ನವಾಬರು ಅಂತಾರಂತೆ. ನಿಮ್ಮಲ್ಲಿ ಇವರಿದಾರೆ; ತಾವು ಇವರನ್ನು ರಾಜರು ಅಂತ ಕರೆಯೋಣಾಗುತ್ತದೆ. ಇವರ ಕೈಕೆಳಗಿನ ಮನುಷ್ಯನ್ನ ಇವರು ಮತ್ತೆ ನವಾಬ ಅನ್ನುವುದು ತಮ್ಮ ಪದ್ಧತೀನೆ? ಬೇಸರವಾಗದೆ ಇದ್ದರೆ ಅಪ್ಪಣೆ ಕೊಡಬೇಕು."

ಉಜನಿ, "ಏನರಿ, ನೀವು ಸೆರೆಯಲ್ಲಿದ್ದವರು, ನಿಮ್ಮನ್ನ ನವಾಬರು ಬಿಡಿಸಿದಾರೆ, ಅನುವುದನ್ನೆ ನೀವು ಮರೆತಿದೀರಿ," ಎಂದನು.

ಲಿಂಗಣ್ಣಯ್ಯ ಹೈದರನನ್ನು ಕುರಿತು, "ಇದು ತಮ್ಮ ಮಾತು ಎಂತ ತಿಳಿಯಲೆ, ಸ್ವಾಮಿ?" ಎಂದನು.

"ಹಾಗಂದರೆ ಅದಕ್ಕೆ ಏನು ಹೇಳುತೀರಿ?"

"ಸ್ವಾಮಿ, ನಾನು ಯಾರು ಅನ್ನುವುದನ್ನು ತಾವೂ ಮರೆತಿದೀರಿ ಅಂತ ಹೇಳುತೇನೆ."

"ನೀವು ಯಾರು ಅಂತ?"

"ಈ ರಾಜ್ಯದ ಮಂತ್ರಿ ಅಂತ ಸ್ವಾಮಿ. ತಾವು ಮೈಸೂರಿನ ಮಂತ್ರಿಗಳು. ನಾನು ಇಲ್ಲಿಯ ಮಂತ್ರಿ. ಮಂತ್ರಿಯಾಗಿದ್ದವನು ಸೆರೆಗೆಹೋದರೆ ಮನುಷ್ಯ ಸಣ್ಣವನಾಗಲಿಲ್ಲ. ನೀವು ಗುರಿಕಾರರನ್ನ ರಾಜ ಅಂದರೆ ಅಷ್ಟರಿಂದ ಅವರು ದೊಡ್ಡವರಾಗುವುದಿಲ್ಲ. ನನ್ನನ್ನ ನಿಮ್ಮ ಸರೀಕ ಎಂತ ತಿಳಿದು ಮಾತನಾಡಿಸಿ. ನಮ್ಮಿಬ್ಬರ ಮಾತೂ ಸರಿ ಹೋಗುತ್ತೆ."

ಮಾತು ಹರಿದ ದಾರಿ ತಪ್ಪಿತು ಎಂದು ಹೈದರನಿಗೆ ತೋರಿತು. ಲಿಂಗಣ್ಣಯ್ಯನನ್ನು ಸೆರೆಯಿಂದ ಬಿಡಿಸಿದ ಕಾರಣ ತಾನು ಅವನಿಗೆ ಹಿರಿಯ ಎಂಬ ನಿಲುವಿನಿಂದ ತಾನು ಮಾತನಾಡಿದ್ದು ಇದಕ್ಕೆ ಕಾರಣ ಎಂದು ಅವನು ಗ್ರಹಿಸಿದನು. ಸಾಲದ್ದಕ್ಕೆ ಅವನೊಂದಿಗೆ ಮಾತನಾಡುವ ಬಹು ಜನ ಇವನು ಹಿರಿಯ ಎಂಬ ನಿಲುವಿನಿಂದ ಮಾತನಾಡಿ ಆಡಿ ಇವನಿಗೆ ದೊಡ್ಡತನದ ಮಾತುಗಾರಿಕೆ ಪದ್ಧತಿಯಾಗಿ ಹೋಗಿತ್ತು. ತಾನೂ ದೊಡ್ಡವನೆ ಎಂಬ ದೃಷ್ಟಿಯಿಂದ ಈ ಮನುಷ್ಯನಂತೆ ಮಾತ

ನಾಡುವರೊಂದಿಗೆ ನಡೆದುಕೊಳ್ಳುವ ರೀತಿ ಅವನಿಗೆ ಮರೆತುಹೋಗಿತ್ತು. ಮೈಸೂರಿನ ಬ್ರಾಹ್ಮಣರು, ಸಂಬಳ ಒಂದು ಕೊಟ್ಟರೆ ಸಾಕು, ಯಾವ ಬೈಗುಳನ್ನು ಬೈದರೂ ಕೇಳಿ ಸಹಿಸಿಕೊಳ್ಳುವರು; ಮಲೆನಾಡಿನ ಈ ಮನುಷ್ಯನ ರೀತಿ ಬೇರೆಯಾಗಿದ್ದಿತು.

ಹೈದರ್, "ಒಳ್ಳೆಯದು, ಲಿಂಗಣಯ್ಯನವರೆ; ನೀವು ಬೇಸರ ಮಾಡಿಕೊಳ್ಳಬೇಡಿ. ನಾನು ನಿಮಗೆ ಮರ್ಯಾದೆಗೆ ಕಡಮೆ ಮಾತನ್ನು ಹೇಳಬೇಕು ಅಂತ ಇರಲಿಲ್ಲ. ಮಾತು ಎತ್ತಲೋ ಹೋಯಿತು. ನಾಳೆ ಮತ್ತೆ ಬನ್ನಿ; ಈ ಮಾತನಾಡೋಣ. ಈಗ ನನಗೆ ಬೇರೆ ಕೆಲಸ ಇದೆ," ಎಂದನು.

ಲಿಂಗಣ್ಣಯ್ಯ, "ಅಪ್ಪಣೆ ಸ್ವಾಮಿ," ಎಂದು ಹೇಳಿ ತನ್ನ ಬಿಡಾರಕ್ಕೆ ಹೋದನು.

೧೦೭

ಹೈದರ್ ಆ ರಾತ್ರಿ ಎಲ್ಲ ಸಂಗತಿಯನ್ನೂ ನೆನೆದು ಯೋಚಿಸಿಕೊಂಡು ತನ್ನ ಕೆಲಸ ನಡೆಯಬೇಕಾದರೆ ಲಿಂಗಣ್ಣಯ್ಯನನ್ನು ಸ್ವಲ್ಪ ಉಬ್ಬಿಸಬೇಕು ಎಂದು ನಿರ್ಣಯಿಸಿದನು. ಯಾವ ಯಾವ ಮಾತನ್ನು ಆಡುವುದು ಎಂದು ಆಲೋಚಿಸಿ ಇಟ್ಟುಕೊಂಡು ಎರಡು ದಿನ ಪ್ರಯಾಣಮಾಡಿ ಅನಂತಪುರಕ್ಕೆ ಬಂದು ಅಲ್ಲಿ ಅವನನ್ನು ಪುನಃ ಕರೆಸಿದನು.

ಲಿಂಗಣ್ಣಯ್ಯ ಬಂದು ಕುಳಿತವೇಳೆಗೆ ಸರಿಯಾಗಿ ರಾಣಿ ಬರೆಸಿದ ಕಾಗದ ನವಾಬನ ಕೈಗೆ ಬಂದಿತು.

ಹೈದರ್ ಆ ಕಾಗದವನ್ನು ಓದಿಸಿ ಕೇಳಿ, "ನೋಡಿ, ಲಿಂಗಣ್ಣಯ್ಯ, ನಿಮ್ಮ ರಾಣೀ ಸಾಹೇಬಾ ಬರೆಸಿರುವ ಕಾಗದ. ಹತ್ತು ದಿವಸದ ಹಿಂದೆ ನಾಯಕ ಕಾಗದ ಬರೆಸಿದರು. ಮುಂದಕ್ಕೆ ಹೆಜ್ಜೆ ಇಡಬೇಡಿ ಎಂತ ನಮ್ಮ ಅರಸರು ಎನ್ನುವ ಹಾಗೆ ನಮಗೆ ಆಜ್ಞೆಮಾಡಿದರು. ಈಗ ಅವರಿಲ್ಲ. ಈ ಅಮ್ಮ ತಿರಿಗಿ ಯಜಮಾನಿ ಆಗಿದಾರೆ. ನಾವು ಹೋಗಿ ಸಂಗತಿ ಏನು ಅಂತ ನೋಡಬೇಕು ಹೌದೊ, ಅಲ್ಲವೊ ?" ಎಂದನು.

"ಸ್ವಾಮಿ, ನಾನು ಕಾಡಿನಲ್ಲಿ ಬೆಳೆದ ಮನುಷ್ಯ; ನನಗೆ ನಿಮ್ಮ ನಯ ಬರುವುದಿಲ್ಲ. ಹೇಳು ಅಂದರೆ ಹೇಳುತೇನೆ; ಕೋಪಮಾಡಬಾರದು."

"ಇಲ್ಲ, ಹೇಳಿ."

"ನೋಡಿ, ಸ್ವಾಮಿ; ನೀವು ಹೊರಟಿರುವುದು ನಾಯಕರ ಪರವಾಗಿ ದೂರು ಬಂದಿದೆ ಎಂತ. ನಾನು ನಾಯಕರ ಕಡೆಯ ಮನುಷ್ಯ; ರಾಣಿ ಕಡೆಯ ಮನುಷ್ಯ ಅಲ್ಲ. ನನ್ನನ್ನ ನಿಮ್ಮ ಪರವಾಗಿ ನಗರಕ್ಕೆ ಕಳುಹಿಸಿ. ನಾಯಕರ ಸಂಗತಿ ಏನು, ರಾಣಿಯವರ ಮನಸ್ಸು ಏನು, ನಮ್ಮ ಹಿರಿಯರು ಇದ್ದಾರೆ ಅಲ್ಲಿ ನೇಮಯ್ಯ ಅನ್ನುವರು, ಅವರೇನಂತಾರೆ, ಎಲ್ಲಾ ಕೇಳಿ ತಿಳಿದುಕೊಂಡು ಬರುತೇನೆ. ರಾಣಿಯವರು ನಿಜವಾಗಿ ನಾಯಕರಿಗೆ ವಿರೋಧವಾಗಿದ್ದರೆ, ನಾನು ಸತ್ಯಮಾಡುತೇನೆ, ನಿಮ್ಮನ್ನ ನಾನೇ ನಗರಕ್ಕೆ ಕರಕೊಂಡು ಹೋಗುತೇನೆ."

"ಇಲ್ಲದೆ ಇದ್ದರೆ?"

"ನೀವು ನಗರಕ್ಕೆ ಯಾಕೆ ಬರಬೇಕು? ಒಬ್ಬರು ಬನ್ನಿ, ರಾಜರ ಪ್ರತಿನಿಧಿಗಳು ಎಂತ ಔತಣ ಉಣ್ಣಿ. ನಾಯಕರ ಮಿತ್ರರು ಎಂತ ಸಂಸ್ಥಾನ ನಿಮ್ಮನ್ನ ಮರ್ಯಾದೆಯಿಂದ ನೋಡಿಕೊಳ್ಳತದೆ."

"ಈ ಕಾಗದದಿಂದ ನಿಮಗೆ ತಿಳಿಯುವುದಿಲ್ಲವೆ ನಾಯಕರ ಕೆಲಸ ಮುಗಿದಿದೆ ಎಂತ?"

"ಸ್ವಾಮಿ ನಾಯಕರ ವಿಷಯಕ್ಕೆ ಮಾತ್ರ ನೀವು ಹೀಗೆ ತಿಳಿಯ ಬೇಡಿ. ಹುಡುಗನಿಂದ ಅವರು ಒಂದು ಸಿಂಹದಮರಿ. ಹೆಡೆ ಎತ್ತಿದ ಹಾವನ್ನ ತುಡುಕೋದು ಅವರಿಗೆ ಆಟ. ತಕ್ಕಹಾಗೆ ಅವರಿಗೆ ಅದು ಏನೂ ಮಾಡೋದಿಲ್ಲ. ಈ ಹೊತ್ತು ಇಲ್ಲಿ, ನಾಳೆ ದುರ್ಗದಲ್ಲಿ, ಅನ್ನೋದು ಅವರಿಗೆ ಸಾಮಾನ್ಯ. ಕತ್ತು ಕಿವಿಚಿ ಮಣ್ಣುಮಾಡಿಸಿ ಮುಂದೆ ಹೋದೆ ಎಂತ ನೀವಿದ್ದರೆ ಹರಿದಾರಿ ದೂರದಲ್ಲಿ ಅವರು ಎದುರಿಗೆ ಬರುತಾರೆ."

"ನೀವು ಹೊಗಳುತಿರೋದು ಯಾರೋ ಮಾಟಗಾರನನ್ನ."

"ಚೆನ್ನಾಗಿ ಹೇಳಿದಿರಿ, ಸ್ವಾಮಿ. ನಿಜಕ್ಕೆ ಅವರು ಮಾಟಗಾರರು. ನೀವು ಇಲ್ಲಿ ಸುಮ್ಮನೆ ನಾಲ್ಕು ದಿನ ಇರಿ; ನಾಯಕರಿಂದ ಓಲೆ ಬರತದೆ. ಇನ್ನು ನಾಲ್ಕು ದಿನ ಕಾಯಿರಿ; ಅವರನ್ನೇ ಕಾಣತೀರಿ. ನಾಯಕರು ಏನಾದರೂ ಆಗಿದಾರೆ ಅನ್ನುವುದನ್ನು ಮಾತ್ರ ಮರೆಯಿರಿ."

"ನಮಗೆ ಹಾಗೆ ಕಾಣುತಾ ಇಲ್ಲ ಲಿಂಗಣ್ಣಯ್ಯ. ನಾವು ಈ ಕೆಲಸ ಮುಂದರಿಸಬೇಕು. ನೀವು ಸಹಾಯ ಮಾಡಿದರೆ ನಿಮಗೆ ನಾವು ಮರ್ಯಾದೆ ಮಾಡುವರು. ನೀವೇ ನಗರಕ್ಕೆ ನಮ್ಮ ರಾಜರ ಪರ ಯಜಮಾನರಾಗಿ ನಿಲ್ಲಬಹುದು. ಬೇಡ ಅಂದರೆ ಪಟ್ಟಣದಲ್ಲಿರಿ; ನಾವು ನಿಮ್ಮನ್ನ ನೋಡಿಕೊಳ್ಳುತೇವೆ."

"ನೋಡಿಕೊಳ್ಳುತೇವೆ ಎಂದರೆ ಈಕಡೆ ಬೇರೆ ಅರ್ಥ ಆಗುತ್ತೆ, ಸ್ವಾಮಿ. ಇಷ್ಟಕ್ಕೆ ನಾನು ಪಟ್ಟಣಕ್ಕೆ ಏನು ಬಂದೇನು? ನಾವು ಈ ಕಾಡಿನಲ್ಲಿ ಬೆಳೆದ ಜನ. ಈ ಮರಗಳನ್ನ ಇಲ್ಲಿಂದ ಕಿತ್ತು ಮೈಸೂರಲ್ಲಿ ನೆಡುವುದಕ್ಕೆ ಆಗುತ್ತೆಯೆ ಸ್ವಾಮಿ? ನಮ್ಮ ಮಾತೂ ಅಷ್ಟೆ. ಅವು ನಿಂತಿವೆ; ನಾವು ನಡೆಯೋ ಮರ."

"ಇಲ್ಲೇ ಇರಿ ಅಂತಲೂ ಹೇಳಿದೆನಲ್ಲ. ರಾಜರ ಪರವಾಗಿ ನೀವೇ ಆಡಳಿತ ನೋಡಿಕೊಳ್ಳಿ."

"ನಮಗೆ ಬೇಡಿ ಸ್ವಾಮಿ, ಆ ಮಾತು. ನಾಯಕರು ಕೂತ ಗಾದೀ ಮೇಲೆ ನಾವು ಕೂತರೆ ದೈವ ಮೆಚ್ಚದು"

"ನಾಯಕರ ಗಾದೀ ಮೇಲೆ ಅಲ್ಲ; ರಾಜರ ಪ್ರತಿನಿಧಿ ಆಗಿ."

"ಅದೂ ನಮಗೆ ಹೇಸಿಕೆ ಸ್ವಾಮಿ. ಗಂಡ ತೀರಿಕೊಂಡ ಅಂತ ಮುಪ್ಪಿನಲ್ಲಿ ಬೇರೆ ಗಂಡನ್ನ ಕೂಡಿದಂತೆ, ನೋಡೊ ಕಣ್ಣಿಗೆ ನಗೆಗೇಡು."

"ಹಾಗಾದರೆ ನೀವು ನಮಗೆ ಸಹಾಯ ಮಾಡೋಕಾಗೊದಿಲ್ಲ?"

"ಆ ಮಾತು ನನ್ನ ಬಾಯಲ್ಲಿ ಬರೋದಿಲ್ಲ ಸ್ವಾಮಿ. ಅಗತ್ಯ ನೀವು ಹೇಳಿದ್ದನ್ನ ಒಂದು ಚೂರು ತಪ್ಪದೆ ಮಾಡಿಕೊಡತೇನೆ."

"ಬಾಯಲ್ಲಿ ಹೇಳತೀರಿ ಅಷ್ಟೆ."

"ತಲೆಯಿಂದ ನಡಸುತೇನೆ ಸ್ವಾಮಿ. ನೀವು ಮಿತ್ರರಾಗಿರಬೇಕು, ಅಷ್ಟೆ ಸ್ವಾಮಿ; ಶತ್ರು ಅಂತ ಬರಬಾರದು."

"ಆಯಿತು ಲಿಂಗಣ್ಣಯ್ಯ. ನಿಮಗೆ ಒಳ್ಳೇದು ಮಾಡೋಣ ಅಂತ ಸೆರೆಯಿಂದ ಬಿಡಿಸಿದೆವು. ನೋಡಿದರೆ ನೀವು ನಮಗೆ ಅಡ್ಡೀನೆ ಆದೀರಿ ಅಂತ ಕಾಣುತದೆ. ನಾವು ನಗರ ಮುಟ್ಟುವವರೆಗೆ ನಿಮ್ಮನ್ನ ಬಂದಿಯಾಗೇ ಇರಿಸಬೇಕಂತ ಕಾಣುತದೆ."

"ಆಗಬಹುದು ಸ್ವಾಮಿ. ಈ ನಮ್ಮ ಜನ ನಾಯಕರನ್ನ ಬಿಟ್ಟು ನಿಮ್ಮನ್ನು ಒಪ್ಪಿಕೊಳ್ಳಲಾರದು."

೧೦೮

ಲಿಂಗಣ್ಣಯ್ಯನನ್ನು ಅತ್ತ ಕಳುಹಿಸಿ ನವಾಬ ಒಂದು ನಿಮಿಷ ಹಾಗೆಯೆ ಕುಳಿತನು. ಉಜನಿ ಬಂದು ಹತ್ತಿರ ನಿಂತು, "ನಾಯಕರು ಬಂದಿದಾರೆ," ಎಂದನು.

ಹೈದರ್ ಸಾಮಾನ್ಯವಾಗಿ ಬೆಚ್ಚುವ ಮನುಷ್ಯನಲ್ಲ. ಈ ಮಾತನ್ನು ಕೇಳಿ ಬೆಚ್ಚಿದನು. ಲಿಂಗಣ್ಣಯ್ಯನ ಮಾತನ್ನು ನಿಜ ಮಾಡುವಂತೆ ನಾಯಕ ಆಕ್ಷಣ ಅಲ್ಲಿ ಬೈತಾಳಬೇಕೆ? ಇಲ್ಲ ಅವನು ಬಂದಿರುವ ಸಂಗತಿ ಲಿಂಗಣ್ಣಯ್ಯನಿಗೆ ತಿಳಿದೇ ಇದ್ದಿತೊ?

"ಎಲ್ಲಿದಾರೆ?"

"ಬಾಗಿಲಲ್ಲಿ ನಿಂತಿದಾರೆ."

"ಪಕ್ಕದ ಕುಟಿಯಲ್ಲಿ ಕುಳ್ಳಿರಿಸಬಾರದಿತ್ತೆ?"

"ಒಲ್ಲೆವೆಂದರು. ಸಾಧ್ಯವಾದರೆ ತಮ್ಮನ್ನು ಒಡನೆಯೆ ಕಾಣಬೇಕೆಂದರು."

"ಎಷ್ಟು ಜನ ಬಂದಿದ್ದಾರೆ? ಪರಿವಾರ ಇದೆಯೆ?"

"ಪರಿವಾರ ಇಲ್ಲ. ಒಬ್ಬರೆ ಬಂದಿದಾರೆ. ಜೊತೆಗೆ ಒಬ್ಬ ಜಂಗಮಯ್ಯ ಇದಾನೆ."

"ಮತ್ತೆ ಇವರು ನಾಯಕರು ಎಂದು ಹೇಗೆ ಬಲ್ಲೆ?"

"ನಗರದ ನಾಯಕರು ಬಂದಿದಾರೆ ಎಂತ ಹೇಳಿ ಎಂದರು. ನೋಡೋಕೂ ಹಂಗೇ ಕಾಣತಾರೆ."

"ಒಳ್ಳೇದು ಕರಕೊಂಡು ಬಾ; ಕೂರಿಸಿ ಅಲ್ಲೇ ಹತ್ತಿರ ಇರು."

ಉಜನಿ ಹೊರಕ್ಕೆ ಹೋಗಿ ನಾಯಕನನ್ನು ಕರೆತಂದನು. ನಾಯಕ ಒಳಗೆ ಬರಬೇಕಾದರೆ ಬಾಗಿಲಲ್ಲಿ ತಲೆಬಾಗಲಿಲ್ಲ. ಮಂಡಿಯನ್ನು ಹಿಂದಕ್ಕೆ ಬಾಗಿ ತಲೆ ಎತ್ತಿದಂತೆ ಒಳಗೆ ಬಂದನು. ಹೈದರ್ ಇವನ ಈ ಅಸಾಧಾರಣ ರೀತಿಯನ್ನು ಗಮನಿಸಿದನು.

ಹೈದರ್ ಪೀಠದಿಂದ ಏಳಲಿಲ್ಲ; ತಾನು ನಮಸ್ಕಾರ ಮಾಡಲಿಲ್ಲ. ನಾಯಕ ಸಹಜ ರೀತಿಯಿಂದ ಕೈಮುಗಿದು ಮುಂದೆ ಹೆಜ್ಜೆ ಇಟ್ಟನು; ಹೈದರ್ ಆಮೇಲೆ ನಮಸ್ಕಾರ ಮಾಡಿ ನಾಯಕನಿಗೆ ತನ್ನ ಬಳಿಯ ಪೀಠ ವನ್ನು ತೋರಿದನು.

ನಾಯಕ ಬಂದು ಅದರಮೇಲೆ ಕುಳಿತ ಕ್ಷಣ ಹೈದರನ ಕಡೆ ನೋಡಿ, "ಸೇವಕರು ತಮಗೆ ನಮ್ಮ ಪರಿಚಯ ಹೇಳಿದರೊ? ನಾವು ನಗರದ ಚಿನ್ನಬಸವ ನಾಯಕರು," ಎಂದನು.

"ಹೇಳಿದರು. ಆದರೆ ನಾಯಕರು ಏನೋ ಆದರು ಎಂದು ಸುದ್ದಿ ಬಂದಿತು. ಆದ್ದರಿಂದ ಅವರು ಬರಬಹುದು ಎಂದು ನಾವು ಎಣಿಸಿರಲಿಲ್ಲ."

"ಹೌದು; ನಮಗೆ ಒಂದು ಗಂಡ ಒದಗಿತ್ತು; ಉಳಿದದ್ದೆ ಹೆಚ್ಚಾ ಯಿತು. ಅದರಿಂದ ಹತ್ತು ದಿನ ಹಾಸಿಗೆ ಹಿಡಿದು ಮಲಗಿದ್ದೆವು; ಗುಣ ವಾದೊಡನೆ ನಿಮ್ಮಲ್ಲಿ ಬಂದೆವು."

"ತುಂಬ ಸಂತೋಷ."

"ನಾವು ನಿಮಗೆ ಒಂದು ಕಾಗದ ಬರೆದು ಕಳುಹಿಸಿದೆವು. ತಾವು ಅದನ್ನು ಗಮನಿಸಿದ್ದೀರಿ ಎಂದು ತಿಳಿಯುತ್ತೇವೆ."

"ಒಂದು ಕಾಗದ ಬರದದ್ದು ಬಂದಿತು. ಈಗಲೂ ಕಾಗದ ಬರೆಯ ಬಹುದಾಗಿತ್ತಲ್ಲ, ತಾವೇ ಬಂದಿರಿ ಏಕೆ?"

"ಹಿಂದಿನ ಕಾಗದದಲ್ಲಿ ನಾವು ಮಾಡಿದ ಪ್ರಾರ್ಥನೆಯನ್ನು ತಾವು ನಡಸಲಿಲ್ಲ. ನಾವು ನಿಮ್ಮ ಅರಸರನ್ನು ನವರಾತ್ರಿಯಲ್ಲಿ ಪಟ್ಟಣದಲ್ಲಿ ಸಂದರ್ಶಿಸಿದೆವು. ಆಗ ನೀವು ಯಾರಾದರೂ ಇತ್ತ ಬಂದೀರಿ ಎಂಬ ಮಾತು ಏನೂ ಇರಲಿಲ್ಲ. ನಾವು ಹಿಂದಿರುಗಿ ಇಲ್ಲಿಗೆ ಬಂದಾಗ ಇದು ಕಿವಿಗೆ ಬಿದ್ದಿತು. ಇದು ಅನವಶ್ಯಕ ಎಂದು ನಿಮ್ಮ ಸರ್ವಾಧಿಕಾರಿಗಳಿಗೆ ತಿಳಿಸಬೇಕು ಎಂದು ನಿಮ್ಮ ಅರಸರಲ್ಲಿ ಬಿನ್ನವಿಸಿ ಒಂದು ಓಲೆ ಬರೆದೆವು. ಅದಕ್ಕೆ ಈ ವೇಳೆಗೆ ಉತ್ತರ ಬರಬೇಕಾಗಿತ್ತು; ಬಂದಿಲ್ಲ. ಈ ಮಧ್ಯೆ ನೀವು ನಗರದ ಮೇಲೆ ಬರುತ್ತಿರುವುದು ತಿಳಿದು ಆ ಕಾಗದವನ್ನು ಬರೆದು ನಿಮಗೆ ಕಳುಹಿಸಿದೆವು. ನೀವು ನಮಗಾಗಿ ಇದನ್ನೆಲ್ಲ ಮಾಡುತ್ತಿರುವುದಾಗಿ ವದಂತಿ. ನಾವು ಸುಖವಾಗಿದೇವೆ, ನೀವು ಬರುವುದು ಅನವಶ್ಯಕ,

ಎಂದು ನಾವೇ ಕಾಗದ ಬರೆದು ಕಳುಹಿಸಿದರೂ ನೀವು ಮುಂದರಿಯು ತ್ತಿರುವುದು ಏಕೆ ಎಂದು ನಮಗೆ ತಿಳಿಯಲಿಲ್ಲ. ಅದರ ಮೇಲೆ, ಎದುರಿಗೇ ಕಂಡು ಮಾತನಾಡೋಣವೆಂದು ನಾವೇ ಬಂದಿದೇವೆ."

ಇವನು ಇಷ್ಟು ಮಾತನ್ನು ಆಡುತ್ತಿರುವಾಗ ಹೈದರನ ಮನಸ್ಸು ಬಹು ಬೇಗನೆ ಕೆಲಸ ಮಾಡುತ್ತಿತ್ತು. ನಾಯಕನ ಮಾತು ಮುಗಿಯುವ ವೇಳೆಗೆ ಅವನು ಒಂದು ನಿಶ್ಚಯಕ್ಕೆ ಬಂದಿದ್ದನು.

"ತಾವು ಬರುವುದಾಗಿ ಒಂದು ಮಾತು ಹೇಳಿಕಳುಹಿಸಿ ಬರಬಹು ದಾಗಿತ್ತು. ಇಲ್ಲ ನೀವು ಬರುತ್ತೀರಿ ಎಂದು ರಾಣಿಯವರು ಒಂದು ಓಲೆ ಬರೆಯಬಹುದಾಗಿತ್ತು. ಇಲ್ಲ ನೀವಾದರೂ ತಕ್ಕ ಪರಿವಾರದೊಡನೆ ಸರಿ ಯಾದ ರೀತಿಯಲ್ಲಿ, ಸರಿಯಾದ ಹೊತ್ತಿನಲ್ಲಿ, ಬರಬಹುದಾಗಿತ್ತು. ಇದು ಯಾವುದನ್ನೂ ಮಾಡದೆ ಈಗ ಬಂದಿರುವಂತೆ ಬಂದರೆ ನಾವು ನಿಮ್ಮನ್ನು ನಾಯಕರು ಎಂದು ತಿಳಿಯುವುದು ಹೇಗೆ?"

"ಓಹೊ, ನಿಮಗೆ ಆ ಸಂದೇಹವಿದೆಯೆ? ನ್ಯಾಯ ತಾನೆ. ನೀವು ಕುಂಸಿಯಲ್ಲಿ ಲಿಂಗಣ್ಣಯ್ಯ ಎಂಬ ನಮ್ಮ ಮನುಷ್ಯನನ್ನು ಸೆರೆಯಿಂದ ಬಿಡಿಸಿದಿರಂತೆ. ಅವರನ್ನು ಕರೆಸೋಣಾಗಲಿ. ಅವರು ನಮ್ಮನ್ನು ಗುರುತಿಸುತ್ತಾರೆ."

"ಲಿಂಗಣ್ಣಯ್ಯ ಗುರುತಿಸಿದ ಮಾತ್ರಕ್ಕೆ ನಮ್ಮ ಸಂದೇಹ ಹರಿಯು ತ್ತದೆ ಎನ್ನಲಾರೆವು. ಆತ ಮಾತನಾಡಿದ ರೀತಿ ನಮಗೆ ಅಷ್ಟಾಗಿ ಒಪ್ಪಿಗೆ ಆಗಲಿಲ್ಲ."

"ಬೇರೆ ಏನು ಮಾಡಬೇಕು ತಿಳಿಸಿರಿ."

"ಲಿಂಗಣ್ಣಯ್ಯನನ್ನೇ ಕರಸುತ್ತೇವೆ. ಅವನು ನಿಮ್ಮ ಗುರುತು ಒಪ್ಪಿದರಲ್ಲವೆ ಮುಂದಿನ ಮಾತು."

"ಆಗಬಹುದು."

ನವಾಬ ಉಜನಿಯನ್ನು ಕರೆದು, "ಲಿಂಗಣ್ಣಯ್ಯನನ್ನು ಸ್ವಲ್ಪ ಕರೆದು ತಾ," ಎಂದನು. ಲಿಂಗಣ್ಣಯ್ಯ ಕೆಲವು ನಿಮಿಷದಲ್ಲಿ ಬಂದನು. ಕೆಲಸವೇನು ಎಂದು ಉಜನಿ ಅವನಿಗೆ ಹೇಳಿರಲಿಲ್ಲ. ಅವನು ಒಳಗೆಬಂದು ನವಾಬನ ಜೊತೆಗೆ ಬೇರೆಯವರು ಇರುವುದನ್ನು ಕಂಡು ದೂರದಲ್ಲೆ ನಿಂತನು.

ಹೈದರ್, "ಬನ್ನಿ ಲಿಂಗಣ್ಣಯ್ಯ, ನೀವು ಇವರನ್ನು ಬಲ್ಲಿರಿ ಅಲ್ಲ, ನಿಮ್ಮ ಮಾತಿನಂತೆ ಆಗಿದೆ," ಎಂದನು.

ಲಿಂಗಣ್ಣಯ್ಯನಿಗೆ ಆಗ ಈ ಮಾತಿನ ವ್ಯಂಗ್ಯ ತಿಳಿಯಲಿಲ್ಲ. ಅವನು ಮುಂದಕ್ಕೆ ಬಂದನು. ಜೊತೆಗಿದ್ದ ವ್ಯಕ್ತಿಯ ಮುಖವನ್ನು ನೋಡಿದನು.

## ೧೦೯

ಅವನ ಮುಖ ತಕ್ಷಣ ಸಂತೋಷ ಆಶ್ಚರ್ಯಗಳಿಂದ ತುಂಬಿತು. ಅವನು; "ಶರಣಾದೆ ಪ್ರಭುಗಳೆ. ತಾವು ಸುಖವಾಗಿದೀರಿ, ಚಿಂತೆಗೆ ಕಾರಣವಿಲ್ಲ, ಎಂದು ನಾನು ಈಗತಾನೆ ನವಾಬ ಸಾಹೇಬರಿಗೆ ಹೇಳಿ ಹೋದೆ. ಆದರೆ ಒಡೆಯರನ್ನ ಇಷ್ಟು ಬೇಗ ಇಲ್ಲಿ ಕಂಡೇನು ಎಂತ ಯೋಚಿಸಲಿಲ್ಲ," ಎಂದನು.

ನಾಯಕ, "ನಾವು ಯಾರು ಎಂದು ನವಾಬ್ ಸಾಹೇಬರಲ್ಲಿ ಅರಿಕೆ ಮಾಡಿ, ಲಿಂಗಣ್ಣಯ್ಯ. ನಾವೇ ಹೌದೇ ಎನ್ನುವ ವಿಷಯ ಅವರಿಗೆ ಸಂದೇಹ ಇರುವಂತೆ ಕಾಣುತ್ತದೆ. ಕುಳ್ಳಿರಿ," ಎಂದನು.

"ತಮ್ಮನ್ನು ನೋಡಿದರೆ ಕಾಣುವುದಿಲ್ಲವೆ ಪ್ರಭುಗಳೆ? ಸಂದೇಹ ಏತರದು? ಹೌದೊ ಅಲ್ಲವೊ ಎನ್ನುವುದು ಯಾವ ಮಾತಾದೀತು?" ಎನ್ನುತ್ತ ಲಿಂಗಣ್ಣಯ್ಯ ದೂರದಲ್ಲಿ ಮರ್ಯಾದೆಯಿಂದ ಕುಳಿತನು.

ಹೈದರ್ ಲಿಂಗಣ್ಣಯ್ಯನಿಗೆ, "ನಾಲ್ಕು ದಿನ ಇರಿ, ಅವರಿಂದ ಓಲೆ ಬರುತ್ತೆ, ಇನ್ನು ನಾಲ್ಕು ದಿನ ಇರಿ ಅವರನ್ನೇ ಕಾಣುತೀರಿ, ಎಂತ ನೀವು ಹೇಳಿದಾಗಲೇ ಇದರಲ್ಲೇನೊ ಇದೆ ಎಂತ ನಮಗೆ ತೋರಿತು, ಲಿಂಗಣ್ಣಯ್ಯ. ನಾಯಕರು ಅಂತ ಯಾರನ್ನೋ ಮುಂದು ಮಾಡುವುದಕ್ಕೆ ಇವರು ಸಂಚು ಮಾಡಿದಾರೆ ಎಂದುಕೊಂಡೆವು. ಅಂದರೆ ನೀವು ಯೋಚಿಸಿದ್ದಕ್ಕಿಂತ ಮುಂದಾಗಿ ಇವರು ಬಂದುಬಿಟ್ಟರು."

"ನಾಯಕರು ನಿಮ್ಮ ಹತ್ತಿರ ಬರುವುದಕ್ಕೆ ಸಂಚು ಏನು ಸ್ವಾಮಿ?"

"ನಾವು ನಾಯಕರಲ್ಲ, ಬೇರೆ ಯಾರೋ ಬಂದಿದೇವೆ, ನಾಯಕರು ಎಂತ ಬರುವುದನ್ನ ನಾವೂ ನೀವೂ ಸಂಚಿನಿಂದ ಏರ್ಪಡಿಸಿದೇವೆ, ಎಂತ ನವಾಬರ ಅಭಿಪ್ರಾಯ," ಎಂದು ನಾಯಕ ವಿವರಿಸಿದನು.

ಲಿಂಗಣ್ಣಯ್ಯ, "ಹೌದೇ ಸ್ವಾಮಿ?" ಎಂದು ನವಾಬನನ್ನು ಕೇಳಿದನು.

ನವಾಬ, "ಹಾಗೆಂದರೆ ಏನು ಹೇಳುತೀರಿ?" ಎಂದನು.

ಲಿಂಗಣ್ಣಯ್ಯ, "ನೀವು ನವಾಬರು ಹೌದೇ ಎಂದರೆ ತಾವು ಏನೇನು ಹೇಳತೀರೊ ಅದನ್ನೆಲ್ಲ ನಾಯಕರು ಹೇಳುತಾರೆ. ತಾವು ನವಾಬರು ಹೌದೇ? ತಾವು ಏನು ಹೇಳುತೀರಿ?" ಎಂದನು.

ನಾಯಕ, "ಲಿಂಗಣ್ಣಯ್ಯ, ಹಾಗೆ ಮಾತನಾಡಬೇಡಿ. ವರ್ಷದ ದಿನ ಸೆರೆಯಲ್ಲಿದ್ದು ತಾಳ್ಮೆ ಕಳಕೊಂಡಿದ್ದೀರ ಹೇಗೆ? ಕೇಳಿದ ಮಾತು ನಿಜ ಅಂತ ತಿಳಿದು ಉತ್ತರ ಹೇಳಬೇಕು," ಎಂದನು.

"ಅಪ್ಪಣೆ ಪ್ರಭುಗಳೆ. ನನ್ನ ತಾಳ್ಮೆ ಕೆಟ್ಟಿದೆ ನಿಜ. ತಾವೇ ಅಪ್ಪಣೆ ಕೊಡೋಣಾಗಲಿ."

"ನಾವು ನಾಯಕರು ಹೌದೋ ಅಲ್ಲವೊ ಅಂತ ನವಾಬರಿಗೆ ಸಂದೇಹ. ನಾವು ಪರಿವಾರ ಇಲ್ಲದೆ ಬಂದಿದೇವೆ. ನಾಳೆ ನಗರಕ್ಕೆ ಹೇಳಿಕಳುಹಿಸಿ, ಪರಿವಾರ ಬರಲಿ, ಅದರ ಮಧ್ಯೆ ನಿಲ್ಲುತೇವಿ. ಆಗ ನವಾಬರು ಒಪ್ಪುತಾರೆ. ಆಗಬಹುದೆ ನವಾಬರೆ?"

"ತಾವು ನನ್ನ ಸಂದೇಹವನ್ನು ಹಾಸ್ಯದಿಂದ ನಿವಾರಿಸಲಾರಿರಿ. ನಮಗೆ ಇದು ಕಾಣುತ್ತಿರುವುದು ಹೀಗೆ. ನಾಯಕರನ್ನು ರಾಣಿ ಇಷ್ಟುದಿನ ಕಡೆಗಣಿಸಿದರು; ಅವರ ಕಡೆಯಿಂದ ದೂರು ಬಂದಿತು; ನಾವು ಸಹಾಯ ಮಾಡಲು ಹೊರಟೆವು. ಪ್ರತಿಪಕ್ಷ ನಾಯಕರನ್ನು ಕೊಲೆ ಮಾಡಿದೆ; ನಾವು ಬರದಂತೆ ಮಧ್ಯದಲ್ಲೇ ನಿಲ್ಲಿಸಲು ಅವರಿಂದ ಒಂದು ಕಾಗದ ಬರೆಸಿದಂತೆ ಮಾಡಿದೆ; ರಾಣಿಯವರಿಂದ ಒಂದು ಕಾಗದ ಬರುವಂತೆ ಮಾಡಿದೆ. ಇಷ್ಟರಲ್ಲಿ ನಾಯಕರು ಇಲ್ಲಿ ಬರುತ್ತಾರೆ ಎಂದು ಲಿಂಗಣ್ಣಯ್ಯ ನವರಿಂದ ಹೇಳಿಕಳುಹಿಸಿದೆ; ಈಗ ಒಬ್ಬರನ್ನು ನಾಯಕರು ಎಂದು ಇಲ್ಲಿಗೆ ಕರೆತಂದಿದೆ. ಈ ನಮ್ಮ ತಿಳಿವಳಿಕೆ ತಪ್ಪು ಎಂದು, ನೀವು ನಾಯಕರು ಎಂದು, ಸ್ಪಷ್ಟವಾಗುವವರೆಗೆ ನಾವು ನಮ್ಮ ಈ ಮೊದಲ ಉದ್ದೇಶದಂತೆ ನಡೆಯಬೇಕು."

"ತಮ್ಮ ಸಂದೇಹ ಇದುವರೆಗೆ ನಮಗೆ ನಿಜವಿರಬಹುದು ಎಂದು ಕಂಡಿತು. ಈಗ ಅದು ನಿಜವಲ್ಲವೆನ್ನುವುದು ಕಂಡುಬಂದಿದೆ. ಒಳ್ಳೆಯದು. ನೀವು ನ್ಯಾಯವನ್ನು ಹಿಡಿದು ನಡೆಯುವಂತಿಲ್ಲ. ಆದ್ದರಿಂದ ನಿಮಗೆ ಈ ಮಾತನ್ನು ನಾವು ಹೇಳಬೇಕಾಗಿದೆ. ಕೇಳಿ. ನಾವು ಬಿದನೂರು ನಗರದ ನಾಯಕರು; ನಿಮ್ಮ ಅರಸರ ಮಿತ್ರರು. ನೀವು ಅರಸರ ಸರ್ವಾಧಿಕಾರಿಗಳಾಗಿದ್ದು ನಮ್ಮ ರಾಷ್ಟ್ರದ ಮೇಲೆ ದಂಡೆತ್ತಿ ಬಂದಿದೀರಿ; ಇದು ಮಿತ್ರದ್ರೋಹ; ಜೊತೆಗೆ ರಾಜದ್ರೋಹ. ನಿಮ್ಮ ರಾಜರು ನಮ್ಮ ವಿಷಯದಲ್ಲಿ ನಿಮ್ಮ ಈ ನಡತೆಯನ್ನು ಒಪ್ಪುವುದಿಲ್ಲ; ಸಂದೇಹವಿದ್ದರೆ ಅವರಿಗೆ ವಿಷಯಗಳನ್ನು ತಿಳಿಸಿ ಅಪ್ಪಣೆ ಪಡೆದುಕೊಳ್ಳಿರಿ. ನೀವು ಸತ್ಯವಂತ ರಾಜಭಕ್ತ ಸರ್ವಾಧಿಕಾರಿಯೇ ಆದರೆ ನಿಮ್ಮ ರಾಜರ ಮನಸ್ಸನ್ನು ತಿಳಿದುಕೊಳ್ಳದೆ ನಮ್ಮ ರಾಷ್ಟ್ರದಲ್ಲಿ ಇನ್ನು ಒಂದೆ ಹೆಜ್ಜೆ ಮುಂದರಿಯಬಾರದು; ಹಾಗಲ್ಲದಿದ್ದರೆ ನಿಮ್ಮ ಇಷ್ಟದಂತೆ ನಡೆಯಬಹುದು; ನೀವು ನಿಮ್ಮ ರಾಜರ ಅಂಕೆಯಲ್ಲಿ ನಿಂತಿದೀರೊ ಇಲ್ಲವೊ ನೋಡಿಕೊಳ್ಳಿರಿ. ಅಂತರ್ಯವನ್ನು ನಿಜವಾಗಿ ಕೇಳಿ ನ್ಯಾಯ ಅಲ್ಲ ಎಂದದ್ದನ್ನು ತೊರೆದು ಬದುಕಿರಿ; ಅಂತರ್ಯವನ್ನು ವಂಚಿಸಿದರೆ ನಿಮಗೆ ಒಳ್ಳೆಯದಾಗುವುದಿಲ್ಲ. ಯೋಚಿಸಿರಿ. ನಾವು ಬರುತ್ತೇವೆ."

ಹೀಗೆಂದು ನಾಯಕ ಹೊರಡಲು ಅನುವಾಗಿ ಎದ್ದನು. ಲಿಂಗಣ್ಣಯ್ಯನೂ ಎದ್ದನು. ನವಾಬ, "ತಡೆಯಿರಿ; ತಾವು ಹೊರಡುವ ಯೋಚನೆಯನ್ನು ಮಾಡಬೇಡಿ. ಈ ಸಂಚಿನ ವಿಷಯವನ್ನು ನಾವು ಪರಿಶೋಧಿಸಿ ಒಂದು ನಿಶ್ಚಯಕ್ಕೆ ಬರುವವರೆಗೆ ತಾವು ನಮ್ಮೊಂದಿಗೆ ಇರಬೇಕು," ಎಂದನು.

"ನಾವಾಗಿ ನಿಮ್ಮಲ್ಲಿ ಬಂದಿಯಾಗಿರುವುದಕ್ಕೆ ಬಂದೆವೆಂದು ತಿಳಿದಿರಾ ? ಸಂಚು ನಡಸುವವರು ನಾವು ಬಂದಿರುವಂತೆ ಬರುವರೆ ? "

"ಸಂಚಿನ ಮನುಷ್ಯರು ಹೇಗೆ ಬಂದರೂ ಅಡ್ಡಿಯಿಲ್ಲ. ಉಜನಿ ..."

ಲಿಂಗಣ್ಣಯ್ಯನಿಗೆ ಬಹುಕೋಪ ಬಂದಿತು. ಅವನು, "ಏನಯ್ಯ ನವಾಬರೆ . . . ." ಎಂದು ಏನೋ ಹೇಳಹೊರಟನು. ಅವನನ್ನು ತಡೆದು ನವಾಬ, "ಅಯ್ಯಾ ನಿಮ್ಮ ನಾಲಿಗೆ ಜೋಕೆಯಾಗಿರಲಿ. ಹರಟ

ದರೆ ಅದನ್ನು ಸೀಳಿಸಿಯೇವು," ಎಂದು ಹೇಳಿ ಆ ವೇಳೆಗೆ ಅಲ್ಲಿಗೆ ಬಂದಿದ್ದ ಉಜನಿಗೆ, "ಉಜನಿ, ಇವರು ತಾವು ನಾಯಕರು ಎನ್ನುತ್ತಿದಾರೆ. ಲಿಂಗಣ್ಣಯ್ಯ ಹಾಗೆಯೇ ಹೇಳುತ್ತಿದಾರೆ. ಇಲ್ಲಿಯ ಸಂಗತಿ ನೋಡಿದರೆ ಇದು ಹೌದೋ ಅಲ್ಲವೊ ಎಂತ ನನಗೆ ಸಂದೇಹ. ಇದನ್ನು ವಿಚಾರಿಸಿ ಗೊತ್ತು ಮಾಡುವವರೆಗೆ ಈ ಹಿರಿಯರನ್ನ ನಮ್ಮ ಹತ್ತಿರದ ಕುಟಿಯಲ್ಲಿ ಇಳಿಸಿಕೊಂಡರು. ಅವರನ್ನು ಮರ್ಯಾದೆಯಿಂದ ನೋಡಿಕೊ. ಅವರು ಎಲ್ಲಿಗೇ ಆಗಲಿ ಹೋಗಿಬರಬೇಕೆಂದರೆ ಅಡ್ಡಿಮಾಡಬೇಡ; ವಿಷಯ ಶೋಧನೆ ಆದಮೇಲೆ ಇವರು ನಾಯಕರು ಎಂದು ತಿಳಿದರೆ ಇವರ ಕ್ಷಮೆಯನ್ನು ಬೇಡಬೇಕಾಗುವ ಸ್ಥಿತಿಗೆ ತರಬೇಡ. ಮರ್ಯಾದೆ ಹೆಚ್ಚಾದರೆ ತಪ್ಪಿಲ್ಲ; ಕಡಮೆಯಾಗಬಾರದು. ಮಧ್ಯೆ ಇವರು ನಮ್ಮನ್ನು ಬಿಟ್ಟು ಹೋಗದಂತೆ ಮಾತ್ರ ನೋಡಿಕೊ. ತಿಳಿಯಿತೆ ? " ಎಂದನು.

ಉಜನಿ: ಅಪ್ಪಣೆ.

"ಈ ಲಿಂಗಣ್ಣಯ್ಯ ಬುದ್ಧಿವಂತರು. ಈ ಸಂದರ್ಭದಲ್ಲಿ ಇವರ ನಡತೆಯನ್ನೂ ನಾವು ಪರೀಕ್ಷಿಸಬೇಕಾಗಿದೆ. ಇವರನ್ನೂ ಭದ್ರವಾಗಿ ನೋಡಿಕೊ. ಮರ್ಯಾದೆಯಿಂದ ನೋಡಿಕೊ."

ಉಜನಿ: ಅಪ್ಪಣೆ.

ನವಾಬ: (ನಾಯಕನಿಗೆ), "ತಾವು ಪಕ್ಕದ ಕುಟಿಯಲ್ಲೆ ಇದ್ದು ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು." (ಲಿಂಗಣ್ಣಯ್ಯನಿಗೆ), "ಕೋಪ ಬೇಡಿ, ಲಿಂಗಣ್ಣಯ್ಯ; ಸತ್ಯದಿಂದ ನಡೆದವರಿಗೆ ನಮ್ಮಿಂದ ಲೇಶ ಅನ್ಯಾಯ ಆಗುವುದಿಲ್ಲ. ಸದ್ಯ ಸ್ವಲ್ಪ ತೊಂದರೆ ಆಗುತ್ತದೆ. ಅದರ ಕಾರಣ ನಾವು ಈ ಮೊದಲು ನಿಮ್ಮ ನಾಯಕರನ್ನು ಕಾಣದ್ದು."

ಲಿಂಗಣ್ಣಯ್ಯ: ಕಂಡಿದ್ದರೂ ನಿಮಗೆ ಅವರ ಮುಖ ಜ್ಞಾಪಕ ಮರೆಯುತಿತ್ತು. ಒಳ್ಳೇ ಮಾತಿನಿಂದ ಕಳ್ಳತನ ಮುಚ್ಚೋದಿಲ್ಲ ಸ್ವಾಮಿ. ನೀವೇನು ಮಾಡೀರಿ, ನಿಮ್ಮ ಸ್ವಭಾವ ಹೀಗೆ. ಆಡಿ, ನಿಮ್ಮ ಅಂತರಾತ್ಮ ಪ್ರೇರಿಸಿದ ಹಾಗೆ.

ನಾಯಕ: ಇದೇ ನಿಮ್ಮ ನಿಶ್ಚಯವೊ ?

ನವಾಬ: ಹೌದು.

ನಾಯಕ: ನೀವು ತಪ್ಪುಮಾಡುತಿದ್ದೀರಿ.

ನವಾಬ: ಇರಬಹುದು.

ನಾಯಕ: ಇದರಿಂದ ಕೆಡಕಾಗುತ್ತದೆ.

ನವಾಬ: ನಾವು ಅದಕ್ಕೆ ಸಿದ್ಧರಾಗಿದೇವೆ.

ನಾಯಕ: ನಿಮಗೆ ಕೆಡಕು ಅಂತ ಅಲ್ಲ. ಒಬ್ಬರ ತಪ್ಪು ನೂರು ಮಂದಿಯನ್ನು ಕೆಡಿಸುತ್ತದೆ.

ನವಾಬ: ಒಂದು ರಾಜ್ಯದ ಸೇವೆಯಲ್ಲಿ ಇಂಥ ಸಂಕಟ ತಪ್ಪಿದ್ದಲ್ಲ. ದಯಮಾಡಿ. ಮತ್ತೆ ಕಾಣೋಣ.

ಉಜನಿ ನಾಯಕನನ್ನೂ ಲಿಂಗಣ್ಣಯ್ಯನನ್ನೂ ಅವರವರ ಬಿಡಾರ ಗಳಿಗೆ ಕರೆದುಕೊಂಡು ಹೋಗಿ ನವಾಬನ ಅಪ್ಪಣೆಯಂತೆ ಅವರ ವಿಷಯ ದಲ್ಲಿ ತಕ್ಕ ಎಲ್ಲ ಏರ್ಪಾಡನ್ನೂ ಮಾಡಿದನು.

## ೧೧೦

ಮದುವೆಯ ಸಂತೋಷವೆಲ್ಲ ಆದಮೇಲೆ ಸಗುನ ಮಲ್ಲಿಗೆ ವಸ್ತಾರೆ ಯಲ್ಲಿ ನೆಂಟರ ಮಧ್ಯೆ ಹತ್ತು ದಿನ ಇದ್ದರು. ಆವರೇ, "ಇನ್ನು ಹೊರಡು ತ್ತೇವೆ," ಎನ್ನಬೇಕು; ಆ ಸಮಯಕ್ಕೆ ಹೆಗ್ಗಡಿತಿ, "ಏನೊ ಸಗುನ, ಏನೇ ಮಲ್ಲಿಗೆ,.ವಾರ ಇರತೀವಿ ಅಂತ ಕೇಳಿಕೊಂಡು ಬಂದು, ಇಷ್ಟು ದಿನ ಮಾಡಿದೀರಲ್ಲ. ನಾಯಕರು ಅಲ್ಲಿ ಏನಾದರೂ ಕೇಳಿದರೆ ಹೆಗ್ಗಡಿತಿ ನಿಲ್ಲಿಸಿಕೊಂಡರು ಅಂತಲ್ಲವೆ ಹೇಳುತಾರೆ? ಹೊರಡಿ ನಗರಕ್ಕೆ; ಹೋಗಿ ಒಡೆಯರನ ಕಂಡು ಹಿಂತಿರುಗಿ ಬಂದಿದೀವಿ ಅನ್ನಿ," ಎಂದಳು.

ಮಲ್ಲಿಗೆ, "ನಿಮ್ಮನ ಕೇಳಬೇಕು ಅಂತ ಬಾಯಿಗೆ ಬಂದಿತ್ತವ್ವಾ; ನೀವೇ ಹೇಳಿಬಿಟ್ಟಿರಿ," ಎಂದಳು. ಇವರಿಬ್ಬರೂ ಹೊರಟು ಮತ್ತೆ ನಗರಕ್ಕೆ ಬಂದು ಸೇರಿದರು.

ಆ ವೇಳೆಗೆ ನಗರದ ಜೀವನ ಅಲ್ಲೋಲ ಕಲ್ಲೋಲವಾಗಿತ್ತು. ನಾಯಕ ಏನೋ ಆಗಿ ಕಣ್ಮರೆಯಾಗಿದಾನೆ; ಹಗೆಯ ಸೈನ್ಯ ಶಿವಮೊಗ್ಗೆಗೆ ಬಂದುಬಿಟ್ಟಿದೆ ಎಂತ ಸುದ್ದಿ; ನಗರದ ಊರಾಚೆ ಮೂರು ಸುತ್ತು ಕಾವ ಲಿರಿಸೋಕೆ ಮಲ್ಲಯ್ಯ ಜನರನ್ನ ಹವಣಿಸುತ್ತಾ ಇದ್ದಾನೆ. ಸಗುನ

ಮಲ್ಲಿಗೆ ಹೋಗಿ ಅವನನ್ನು ಕಂಡು ತಾವೂ ಏನಾದರೂ ಕೆಲಸ ಮಾಡು ತೇವೆ ಎಂದರು. ಮಲ್ಲಯ್ಯ ಅವರ ಹೆಸರನ್ನು ಗುರುತು ಹಾಕಿಸಿ ಅವರು ಕೋಟೆ ಕಾವಲಿನಲ್ಲಿರುವಂತೆ ಏರ್ಪಾಡು ಮಾಡಿ ನಿಲ್ಲಿಸಿಕೊಂಡನು.

ಹದಿನೈದು ದಿನ ಕಳೆಯಿತು. ಹೈದರನ ಸೈನ್ಯ ಅನಂತಪುರಕ್ಕೆ ಬಂದು ಸೇರಿದೆಯೆಂದು ಸುದ್ದಿ ಬಂದಿತು. ಇವರು ಹೀಗೆಯೇ ಸುಮ್ಮನಿದ್ದರೆ ಅದು ನಗರಕ್ಕೆ ಬರುವುದಕ್ಕೂ ಯಾವ ಅಡ್ಡಿಯೂ ಕಾಣಲಿಲ್ಲ. ಮಧ್ಯೆ ಇವರು ಯಾರೂ ನಿರೀಕ್ಷಿಸದೆ, ನಾಯಕರು ಅನಂತಪುರದಲ್ಲಿ ಹೈದರನ ಜೊತೆಯಲ್ಲಿದಾರೆ ಎಂದು ಸುದ್ದಿ ಬಂದಿತು.

ನಾಯಕ ಹೈದರನ ಹತ್ತಿರಕ್ಕೆ ಏಕೆ ಹೋಗಿರಬಹುದು? ಇದು ಎಲ್ಲರೂ ಕೇಳಿಕೊಳ್ಳುತ್ತಿದ್ದ ಪ್ರಶ್ನೆ. ರಾಣಿ ಈ ಯೋಚನೆಯನ್ನು ಮೊದಲೇ ಮಾಡಿದ್ದಳಷ್ಟೆ. ಅವನು ಅಲ್ಲಿ ಹೋಗಿರಲಾರನು, ಏನಾದರೂ ಈರೀತಿ ಇಲ್ಲಿ ಅಧಿಕಾರ ವಹಿಸಿಕೊಂಡ ಮೇಲೆ ಹೋಗ ಕಾರಣವಿಲ್ಲ, ಎಂದ್ಯ ನಿಶ್ಚಯಿಸಿದ್ದಳು. ಈಗ ನಾಯಕ ಅಲ್ಲಿ ಹೋಗಿದಾನೆ ಎಂದರೆ, ಇದು ಹೈದರನ ಏತರದೊ ಸಂಚು, ಮಗ ಅಲ್ಲಿ ಹೋಗಿರುವುದು ಸುಳ್ಳು, ಎಂದು ಕೊಂಡಳು.

ನಂಬಯ್ಯ ರಾಣಿಯನ್ನು ಕಂಡು, "ನಾನು ಇಲ್ಲಿ ಅಲ್ಲಿ ವಿಚಾರಿಸಿದೆ. ಆ ರಾತ್ರಿ ಆ ಚಂಡಾಲರು ಇಬ್ಬರು ಸಿಕ್ಕಿದರೇ ಅವರು ಯಾರ ಮೇಲೋ ಕೈಮಾಡೋಕೆ ಬಂದಿದ್ದವರು ನಾಯಕರನ ಅವರು ಅಂತ ತಿಳಿದು ಕೊಂದು ಬಿಟ್ಟರಂತೆ. ಕೊಂದು ಅಟ್ಟೇನ ಮಣ್ಣುಮಾಡಿ ಓಡಿ ಬರುತಾ ಇದ್ದರು. ಆಗ ಕಾವಲ ಜನ ಹಿಡಿದರಂತೆ. ನಾಯಕರು ಜೀವದೊಂದಿಗೆ ಇಲ್ಲ. ಅನಂತಪುರಕ್ಕೆ ಹೋಗಿದ್ದಾರು ಅನ್ನೋದು ಬರೀ ಪೊಳ್ಳುಮಾತು," ಎಂದನು.

ನೇಮಯ್ಯ, ಶಾಸ್ತ್ರಿ, "ಯಾರಾದರೂ ಅನಂತಪುರಕ್ಕೆ ಹೋಗಿ ಅಲ್ಲಿ ನಾಯಕರು ಎಂತ ಒಬ್ಬರು ಉಂಟೇ, ಅವರು ಯಾರು, ನೋಡಿಕೊಂಡು ಬರಬೇಕು," ಎಂದರು.

ಯಾರು ಹೋಗಬೇಕು? ಅವನನ್ನು ನೋಡುವುದಕ್ಕೆ ಅವಕಾಶ ದೊರೆತೀತೆ?

ಮಲ್ಲಯ್ಯ ಈ ಸುದ್ದಿಯನ್ನು ಕೇಳಿ ಒಡನೆ ಶಾಂತವ್ವನಿಗೆ ಹೇಳಿದನು. ಶಾಂತವ್ವ ತೀರಾ ಸಮಾಧಾನವಾಗಿ, "ನಾಯಕರು ಅಲ್ಲಿ ಹೋಗಿರಬೇಕು. ಆದಷ್ಟು ಬೇಗನೆ ಬಂದಾರು," ಎಂದಳು. ಇಷ್ಟುದಿನ ಮರೆಯಾಗಿದ್ದದ್ದೂ, ಆಮೇಲೆ ಅನಂತಪುರಕ್ಕೆ ಹೋದದ್ದೂ, ಈಗ ಅಲ್ಲಿರುವುದೂ, ಇದೆಲ್ಲ ನಾಯಕನ ದೂರದೃಷ್ಟಿಯ ಯಾವುದೊ ಒಂದು ಏರ್ಪಾಡು ಎಂದು ಅವಳ ಭಾವನೆ. ಗಂಡ ಶಕ್ತನೆಂದು ನಂಬಿರುವ ಹೆಂಡತಿಗೆ ಇಂಥ ಭ್ರಮೆ ಬಹು ಸುಲಭ, ಬಹು ಸಹಜ.

ಮಲ್ಲಯ್ಯ ನೇಮಯ್ಯನನ್ನು ಕಂಡು, "ನಾಯಕರನ್ನು ಕಂಡು ಬರುವುದಕ್ಕೆ ಯಾರನ್ನಾದರೂ ವೇಷದಲ್ಲಿ ಕಳುಹಿಸುತೇನೆ," ಎಂದನು.

ನೇಮಯ್ಯ, "ಆಗಬಹುದು. ಆದರೆ ಅವರು ಏನಾದರೂ ಉದ್ದೇಶ ದಿಂದ ಹೋಗಿದ್ದರೆ ಅದಕ್ಕೆ ತೊಡಕಾಗಬಾರದು. ಸೆರೆಸಿಕ್ಕಿದ್ದರೆ ನಾನು ಕಾಣೆ; ಇಲ್ಲದೆ ಇದ್ದರೆ ಏನೋ ಯೋಚನೆಯಿಂದಲೇ ಅಲ್ಲಿ ಹೋಗಿರು ತಾರೆ," ಎಂದನು.

ಮಲ್ಲಯ್ಯ ಇನ್ನೇನನ್ನೂ ಹೇಳಲಿಲ್ಲ; ತಾನೇ ಹೋಗುವುದೇ ಯಾರ ನ್ನಾದರೂ ಕಳುಹಿಸುವುದೇ ಎಂದು ಚಿಂತಿಸುತ್ತ ಹೊರಟು ಬಂದನು. ದಾರಿಯಲ್ಲಿ ಮಲ್ಲಿಗೆ ಸಿಕ್ಕಿದಳು. "ಅಯ್ಯಾ ಅವರೇ, ನಾಯಕರು ಅನಂತಪುರದಾಗೆ ಅವರಂತೆ, ಅವರನ್ನು ಬಿಡಿಸಿಕೊಂಡು ಬರಬೇಡವಾ?" ಎಂದಳು.

"ಬಿಡಿಸೋ ಮಾತು ಹಂಗಿರಲಿ. ಅದು ನಾಯಕರು ಹೌದಂತಲೇ ನಮಗೆ ತಿಳೀಬೇಕಾಗದೆ."

"ನಾನು ಸಗುನ ಹೋಗಿ ನೋಡಿಕೊಂಡು ಬರೋನೆ ?"

"ಹೋದೀರಾ ?"

"ಓಹೊ, ಗಾಳೀ ಹಂಗೆ ಹೋಗಿ ಬರುತೀವಿ. ನಿಮಗೆ ಯೋಚನೆ ಬ್ಯಾಡ."

"ಒಳ್ಳೇದು ಹೋಗಿಬರುವಿರಂತೆ. ಸಗುನನ್ನ ಇತ್ತಲಾಗಿ ಬರ ಹೇಳು."

ಮತ್ತೆ ಯೋಚಿಸಿದ್ದರಲ್ಲಿ ಮಲ್ಲಯ್ಯನಿಗೆ, ಅದು ನಾಯಕ ಹೌದೇ ಎಂದು ನೋಡುವುದು ಒಂದು ಸಲ, ಹೌದಾಗಿದ್ದರೆ ಅವನನ್ನು ಬಿಡಿಸಿ ಕೊಳ್ಳುವುದಕ್ಕೆ ಹೋಗುವುದು ಒಂದು ಸಲ, ಹೀಗೆ ಸಾವಕಾಶವಾಡ ಬಾರದೆಂದು ತೋರಿತು. ಸರಿಯಾದ ಒಂದು ನೂರು ಜನ ಹೋಗಿ ನವಾಬನ ಪಾಳೆಯದ ಹತ್ತಿರ ಸರಿಯಾದ ಮರೆಯಲ್ಲಿ ನಿಂತು ನಾಯಕ ಸೆರೆಸಿಕ್ಕಿದ್ದನಾದರೆ ಅವನನ್ನು ಬಿಡಿಸಿಕೊಂಡೇ ಬರುವುದು, ಇಲ್ಲ ಅವನು ಸಮಾಧಾನವಾಗಿ ಅಲ್ಲಿ ಇರುವುದಾಗಿದ್ದರೆ ಅವನ ಮನಸ್ಸನ್ನು ತಿಳಿದು ಅದರಂತೆ ನಡೆಯುವುದು, ಎಂದು ಇವನು ಯೋಚಿಸಿದನು. ಬೇಕಾದ ಏರ್ಪಾಡನ್ನು ಮಾಡಿಕೊಂಡು ಆಮೇಲೆ ಹಿರಿಯರಿಗೆ ಹೇಳಿ ಹೊರಡುವುದು ಎಂದು ಸರಿಯಾದ ಜನರನ್ನು ಕೂಡಿಸಲು ತೊಡಗಿದನು.

ಮರುದಿನ ಅನಂತಪುರದ ಕಡೆಯಿಂದ ಬಂದ ಸುದ್ದಿಯಲ್ಲಿ ನವಾಬ ತನ್ನ ಜನವನ್ನು ನಾಲ್ಕುಪಡೆ ಮಾಡಿ ನಾಲ್ಕು ಕಡೆಗೆ ಕಳುಹಿಸುವ ಏರ್ಪಾಡು ಮಾಡಿದಾನೆಂದು ಕಂಡಿತು. ಅಂತೂ ಅವನು ವಾರ ಎರಡು ವಾರದಲ್ಲಿ ನಗರವನ್ನು ಮುಟ್ಟುವಂತೆ ತೋರಿತು. ರಾಣಿ, ನೇಮಯ್ಯ ಶಾಸ್ತ್ರಿ ಇವರನ್ನು ಬರಮಾಡಿ, "ಹಗೆ ಇಲ್ಲಿಗೆ ಬಂದೇ ಬಿಡುವಂತೆ ಕಾಣು ತದೆ. ಬೊಕ್ಕಸವೆಲ್ಲ ಅವನ ಬಾಯಿಗೆ ಬೀಳೋಕೆ ಇಲ್ಲಿ ಯಾಕಿರಬೇಕು? ರತ್ನಪಡಿಯನ್ನ ದುರ್ಗಕ್ಕೆ ಹೇರಿಸಿ ಉಳಿಸೋದು ಒಳಿತು," ಎಂದಳು.

ದುರ್ಗ ಎಂದರೆ ಬಲ್ಲಾಳರಾಯನ ದುರ್ಗ. ಅದರ ಮೇಲೆ ಅರಮನೆ ಉಂಟು. ಇವರಿಗೆ ಇದು ಸರಿ ಎಂದು ತೋರಿತು. ಹಾಗೆ ಮಾಡಿದಮೇಲೆ ರಾಣಿಯೂ ದುರ್ಗಕ್ಕೆ ಹೋಗುವುದು ಸರಿ. ವ್ಯವಹಾರ ಕ್ಕಾಗಿ ಹತ್ತಿರ ಒಬ್ಬ ಮನುಷ್ಯ ಇರಬೇಕು. ನಂಬಯ್ಯ ಇರಲಿ ಎಂದಾ ಯಿತು. ಕಿರಿಯ ರಾಣಿಯೂ ಜೊತೆಗೆ ಹೊರಡಬಹುದು. ಅವಳು ಒಬ್ಬಳೇ ಅರಮನೆಯಲ್ಲಿರುವುದು ಸರಿಯಲ್ಲ.

ನೇಮಯ್ಯ ಶಾಂತವ್ವನ ಬಳಿ ಹೋಗಿ ಈ ನಿಶ್ಚಯವನ್ನು ತಿಳಿಸಿದನು.

ಶಾಂತವ್ವ ಆಗ ನಾಲ್ಕು ತಿಂಗಳ ಬಸಿರಿ. ಗಂಡ ಜೀವಂತನಾಗಿ ದಾನೆ ಎಂಬ ಧೈರ್ಯ ಹೊರತಾಗಿ ಉಳಿದಂತೆ ಅವಳು ಅನುಕ್ಷಣ ಅವನ

ವಿಷಯದಲ್ಲಿ ಚಿಂತೆಯಿಂದ ಬೇಯುತ್ತಿದ್ದಳು. ಇಂಥ ಹೊತ್ತಿನಲ್ಲಿ ಅವನು ಅದೆಲ್ಲೊ ಎಂಥ ಸ್ಥಿತಿಯಲ್ಲೊ ಸಿಕ್ಕಿಕೊಂಡಿರುವ ವೇಳೆ ತಾನು ತನ್ನ ಕ್ಷೇಮಕ್ಕಾಗಿ ಒಂದು ಭದ್ರವಾದ ಸ್ಥಳಕ್ಕೆ ಹೋಗುವುದು ಅವಳಿಗೆ ರುಚಿಸಲಿಲ್ಲ. ಅವಳು, "ಅಣ್ಣಯ್ಯ, ನಾ ಇಲ್ಲೆ ಇದ್ದರೆ ಹೇಗೆ?" ಎಂದು ಕೇಳಿದಳು.

"ನೀನು ನನ್ನ ಕಣ್ಣಿಂದ ಮರೆಯಾಗುವುದು ನನ್ನ ಜೀವಕೇ ಬೇಡ ಅನಸತದೆ, ಶಾಂತವ್ವ. ಆದರೆ ನೋಡು, ಹೊಟ್ಟೇಲಿ ಮಗು ಇರುವ ವೇಳೆ ಈ ತೆರದು ಹಾಕಿದ ಊರಾಗಿದ್ದು ಸುಖ ಇಲ್ಲ. ಹತ್ತು ದಿನಕಲ್ಲ ತಿಂಗಳು ದಿನಕ್ಕೆ ಹಗೆ ಊರ ಹಿಡಿಯುತಾನೆ. ಸಾರಿದ್ದು ಹೋರಿದ್ದು, ನಗರದ ಪಾಡು ಘೋರ ಆಗತದೆ. ಕಾದಾಟ ಕಡಿದಾಟ ಈಗ ನೀನು ನೋಡೋದು ಬೇಡ, ತಾಯಿ."

ಶಾಂತವ್ವ ನಾಯಕನ ಯೋಚನೆ ಏನೆಂದಿರಬಹುದು ಎಂದು ಯೋಚಿಸಿದಳು; ಅವಳಿಗೆ ತೋರಲಿಲ್ಲ. ಅದರ ಮೇಲೆ, ತಾನೂ ರಾಣಿಯೂ ಅವನ ಕುಟುಂಬ, ಅದರಲ್ಲಿ ಒಬ್ಬರು ಇಲ್ಲಿ ಒಬ್ಬರು ಅಲ್ಲಿ ಎನ್ನುವುದು ಬೇಡ, ಎಂದು ಆಲೋಚಿಸಿ ಕೊನೆಗೆ, "ಆಗಲಿ ಅಣ್ಣಯ್ಯ, ನಾನೂ ದುರ್ಗಕ್ಕೆ ಹೋಗುತೀನೆ," ಎಂದಳು.

ರಾಣಿ ದುರ್ಗಕ್ಕೆ ಹೊರಡುತ್ತಾಳೆ ಎನ್ನುವುದು ತಿಳಿದು ಊರಿನ ಇನ್ನು ಕೆಲವು ಜನ ತಾವೂ ದುರ್ಗಕ್ಕೆ ಹೊರಡುವೆವೆಂದರು. ದುರ್ಗದ ಮೇಲೆ ಹತ್ತಿರ ಹತ್ತಿರ ನೂರು ಮನೆ ಉಂಟು. ಅವು ಹಲವು ಈ ಪುಣ್ಯವಂತರವು, ಕೆಲವು ಅರಮನೆಯ ಆಶ್ರಿತ ಜನರವು. ಅರಮನೆಗೂ ಇಂಥ ಜನ ಜೊತೆಗೆ ಬರುವುದು ಇಷ್ಟವೆ. ಬೆಟ್ಟದ ಮೇಲೆ ಒಂದಷ್ಟು ಜನ ಇದ್ದಂತಾಯಿತು. ಬೇಸರದ ಭಯವಿಲ್ಲ. ಈ ಎಲ್ಲ ಜನರ ಪ್ರಯಾಣಕ್ಕೂ ತಕ್ಕ ಏರ್ಪಾಡಾಯಿತು.

೧೧೧

ಅರಮನೆಯ ಎಲ್ಲ ಪರಿವಾರವೂ ದುರ್ಗಕ್ಕೆ ಹೋಗುವುದಕ್ಕೆ ಅವಕಾಶವಿಲ್ಲ. ಕೆಲವರು ಮಾತ್ರ ಹೋಗಿ ಬಹು ಜನ ನಗರದಲ್ಲಿ ನಿಲ್ಲ

ಬೇಕು. ಕಿರಿಯ ರಾಣಿಯ ಪರಿವಾರದಲ್ಲಿ ಕೆಂಚವ್ವೆ ಇನ್ನಿಬ್ಬರು ಸೇವಕಿಯರು ಮಾತ್ರ ಹೊರಟರು.

ಕಷ್ಟದಲ್ಲಿ ತನ್ನನ್ನು ಒಬ್ಬಳಾಗಿಬಿಟ್ಟಳೆಂದು ಅತ್ತೆ ತಿಳಿಯದಿರಲಿ ಎಂದು ಶಾಂತವ್ವ ದುರ್ಗಕ್ಕೆ ಹೊರಟಳಾದರೂ ಆ ಅತ್ತೆ ಇವಳ ವಿಷಯವನ್ನು ಬಹಳ ಮನಸ್ಸಿಗೆ ಹಚ್ಚಿಕೊಳ್ಳುವಳಾಗಿರಲಿಲ್ಲ. ಸೊಸೆ ಬಸಿರಾಗಿದ್ದಾಳೆ ಎಂದು ತಿಳಿದೂ ರಾಣಿ ಅವಳನ್ನು ಎಂದಿನಂತೆ ಅವಳ ಪಾಡಿಗೆ ಬಿಟ್ಟಿದ್ದಳು. ಶಾಂತವ್ವನ ವಿಷಯ ಸ್ವಲ್ಪ ಯೋಚನೆ ಮಾಡುವವಳೆಂದರೆ ಈ ಪರಿವಾರದಲ್ಲಿ ಕೆಂಚವ್ವೆ ಒಬ್ಬಳೆ. ಉಳಿದ ಇಬ್ಬರು ಸೇವಕಿಯರು ಇವಳು ಹೇಳಿದಂತೆ ನಡೆಯುವವರು. ದುರ್ಗದಲ್ಲಿ ಸಹಾಯ ಸಾಲದು ಎಂದು ಕಂಡರೂ ಕೆಂಚವ್ವೆ ನಗರಕ್ಕಿಂತ ಈ ಸ್ಥಳ ಮೇಲು ಎಂದು ಯೋಚಿಸಿದಳು. ನಗರದಲ್ಲಿ ದಿನಕ್ಕೆ ಒಂದು ಸುದ್ದಿ; ಗರ್ಭಿಣಿಯಾದ ಹೆಣ್ಣುಮಗುವಿಗೆ ಆ ಕ್ಷೋಭೆಯ ಬಾಳು ಬಹುಕಷ್ಟ. ಇಲ್ಲಿ ಅಂಥ ಮಾತಿಲ್ಲ; ಜೀವ ಸ್ವಲ್ಪ ಸಮಾಧಾನವಾಗಿರಬಹುದು.

ತನ್ನ ಒಡತಿಗೆ ಈ ಮಾತು ಅನ್ವಯಿಸುವುದಿಲ್ಲ ಎನ್ನುವುದು ಕೆಂಚವ್ವೆಗೆ ತೋರಲಿಲ್ಲ. ಶಾಂತವ್ವನಿಗೆ ದುರ್ಗದಲ್ಲಿ ನಗರದಲ್ಲಿದ್ದಷ್ಟೇ ಯೋಚನೆ. ಅಲ್ಲಿದ್ದರೆ ಸ್ವಲ್ಪವೇನಾದರೂ ಸುದ್ದಿ ಬರುತ್ತಿತ್ತು; ಇಲ್ಲಿ ಸುದ್ದಿಯೇ ಇಲ್ಲ. ನಾಯಕ ಅನಂತಪುರದಲ್ಲಿ ಏನಾದನೋ ಎಂಬ ಕಳವಳದಲ್ಲಿ ಶಾಂತವ್ವ ಬಸವಳಿದಳು.

ಬೆಟ್ಟದ ತಗ್ಗಿನ ಆಚೆ ದುರ್ಗದಹಳ್ಳಿ. ಅದರ ಅಂಚಿನಲ್ಲಿ ಒಂದು ದೇವಾಲಯ ಇದ್ದಿತು. ಅದು ಭೈರವ ದೇವರದು. ಪೂರ್ವದಿಂದ ಇದ್ದ ದೇವಾಲಯ. ರಾಜಮನೆತನ ದುರ್ಗಕ್ಕೆ ಬಂದದ್ದು ತಿಳಿದು ದೇವಾಲಯದ ಅರ್ಚಕ ಮರುದಿನ ಇವರಿಗೆ ಪ್ರಸಾದ ತಂದುಕೊಟ್ಟನು.

"ದೇವಾಲಯಕ್ಕೆ ಹೊಸ ಮುನಿಒಬ್ಬರು ಬಂದಿದಾರೆ; ಬಹುನಿಷ್ಠರು, ಕಠಿನ ವ್ರತಿಗಳು, ಕಾಪಾಲಿ ಪಂಥದವರು; ಬೇಕಾದವರು ಬಂದು ದರ್ಶನ ಮಾಡಬಹುದು; ವಿಶೇಷ ಪೂಜೆಗಳನ್ನು ಮಾಡಿಸುವುದಾದರೆ ಮಾಡಿಸಬಹುದು," ಎಂದನು.

ಶಾಂತವ್ವನಿಗೆ ಸದ್ಯದ ಸ್ಥಿತಿಯಲ್ಲಿ ಇದು ದೇವರ ಅನುಗ್ರಹ ವೆನಿಸಿತು. ತಾವು ಇಲ್ಲಿಗೆ ಬರುವ ವೇಳೆಗೆ ಸರಿಯಾಗಿ ಈ ಮುನಿಗಳು ಬಂದಿರಬೇಕೆ? ಈ ಸೇವೆಗಳನ್ನು ನಡಸಲೆಂದೇ ದೇವರು ತನ್ನನ್ನು ಇಲ್ಲಿಗೆ ಕರತಂದನೊ? ಹೇಗೊ, ನಾಯಕನಿಗೆ ಶುಭವನ್ನು ನೀಡು ಎಂದು ಬೇಡಿ ದೇವರಿಗೆ ಪೂಜೆಗಳನ್ನು ನಡಸಬೇಕು. ದೇಶಕ್ಕೆ ಒದಗಿರುವ ಗಂಡ ನೀಗಲಿ, ನಾಯಕ ಕ್ಷೇಮದಿಂದ ರಾಜ್ಯವನ್ನಾಳುವಂತಾಗಲಿ. ಹೀಗೆಂದು ಯೋಚಿಸಿ ಶಾಂತವ್ವ, ಅರ್ಚಕನಿಗೆ ಸ್ವಲ್ಪ ಹಣ ಕೊಟ್ಟು, "ವಿಶೇಷ ಪೂಜೆಯನ್ನು ನಡಸಿ, ಮತ್ತೆ ಹಣ ಬೇಕಾದರೆ ಹೇಳಿ, ನಾಯಕ ರಿಗೆ ಒಳ್ಳೆಯದಾಗುವಂತೆ ಮುನಿಗಳು ಅನುಗ್ರಹಿಸಬೇಕೆಂದು ಬೇಡಿದೆ ವೆನ್ನಿ, ನಾವು ಇಷ್ಟರಲ್ಲೇ ಬಂದು ಅವರಿಗೆ ನಮಸ್ಕಾರ ಮಾಡಿ ಬರುತ್ತೇವೆ," ಎಂದಳು.

೧೧೨

ಇವರು ದುರ್ಗಕ್ಕೆ ಬಂದ ಎರಡು ದಿನದಲ್ಲಿ ನವಾಬ ರಾಣಿಗೆ ಬರೆದಿದ್ದ ಒಂದು ಓಲೆ ನಗರಕ್ಕೆ ಹೋಗಿ ಅಲ್ಲಿಂದ ಅವಳ ಹಿಂದೆ ಇಲ್ಲಿಗೆ ಬಂದಿತು. ಅದರಲ್ಲಿ ಹೀಗೆ ಬರೆದಿದ್ದಿತು.

"ನಾವು ನಗರಕ್ಕೆ ಬರುವುದು ಬೇಡ, ತಾವು ಕೊಡುವ ಧನವನ್ನು ತೆಗೆದುಕೊಂಡು ಹಿಂದಿರುಗಬೇಕು, ಎಂದು ತಾವು ಬರೆಸಿರುವ ಓಲೆ ಮುಟ್ಟಿತು.

"ನಾವು ಇಲ್ಲಿಗೆ ಧನದಾಶೆಯಿಂದ ಬಂದಿದೇವೆ ಎಂದು ತಾವು ತಿಳಿದಿರುವಂತಿದೆ. ನಮಗೆ ಅಂಥ ಆಶೆಯಿಲ್ಲ. ನಾವು ಇಲ್ಲಿಯ ಅವ್ಯವ ಸ್ಥೆಯ ವಿಷಯ ತಿಳಿದು ಅದನ್ನು ಸರಿಪಡಿಸಲು ಬರುತ್ತಿದೇವೆ.

"ನಾವು ನಿಮಗೆ ಯಾವ ಕೆಡಕನ್ನೂ ಮಾಡುವುದಿಲ್ಲ. ನೀವು ಯಾವ ಭಯವನ್ನೂ ಇಟ್ಟುಕೊಳ್ಳಬೇಡಿರಿ.

"ಸ್ಥಿತಿ ಏನು ಎಂದು ನಮಗೆ ಸತ್ಯವಾಗಿ ತಿಳಿಸಿರಿ. ನಮಗೆ ಸಮಾಧಾನವಾಗುತ್ತದೆ. ಆಮೇಲೆ ನಾವು ಹೇಗೆ ನಡೆಯುತ್ತೇವೆ ಎನ್ನು ವುದನ್ನು ನಿಶ್ಚಯಿಸಿ ತಿಳಿಸುತ್ತೇವೆ.

"ಮೊದಲಾಗಿ ಇಪ್ಪತ್ತು ದಿನದ ಹಿಂದೆ ನಿಮ್ಮ ಮಕ್ಕಳು ನಾಯಕರು ನಮಗೆ ಒಂದು ಓಲೆ ಬರೆದು ಕಳುಹಿಸಿದರು. ಆಮೇಲೆ ನಿಮ್ಮಿಂದ ಓಲೆ ಬಂದಿದೆ. ಇದಕ್ಕೆ .ಏನು ಕಾರಣ. ನಾಯಕರು ಏನಾದರು ನಮಗೆ ತಿಳಿಯಬೇಕು.

"ನಾಯಕರನ್ನು ನೀವೋ ನಿಮ್ಮ ಕಡೆಯವರೋ ಕೊಂದರೆಂದು ಸುದ್ದಿ ಹರಡಿತು, ಇದರ ವಿಷಯವೇನು ತಿಳಿಯಬೇಕು.

"ಇದಾದ ತರುಣದಲ್ಲಿ ನಮ್ಮಲ್ಲಿಗೆ ಒಬ್ಬ ಯುವಕ ಬಂದು ತಾವು ನಾಯಕರೆಂದು ಹೇಳಿದರು. ನಾಯಕರನ್ನು ಹಗೆಗಳು ಕೊಂದರೆಂದ ಮೇಲೆ ಈ ಬಂದವರು ಯಾರು ಎಂದು ನಮಗೆ ಸಂದೇಹ. ಅವರನ್ನು ನಾವು ನಮ್ಮಲ್ಲಿ ನಿಲ್ಲಿಸಿಕೊಂಡೆವು. ಈ ವಿಷಯ ವಿಚಾರಿಸಬೇಕೆಂದಿದ್ದೆವು. ಮೂರು ದಿನದಲ್ಲಿ ಅವರನ್ನು ನೋಡಿದ ಈ ಪ್ರಾಂತದ ಹಳ್ಳಿಗನೊಬ್ಬ ಅವರನ್ನು ಬೂದಿಬಸವಸ್ವಾಮಿ ಎಂದು ಗುರುತಿಸಿದನು. ಯುವಕರನ್ನು ಕೇಳಿದೆವು. ಇವರು, ನಾಯಕರೆ ಬೂದಿಬಸವಸ್ವಾಮಿ ಎಂದು ವೇಷ ಮರೆಸಿಕೊಂಡು ಗ್ರಾಮಗಳಲ್ಲಿ ಓಡಾಡಿದೆವು, ಎಂದು ಹೇಳಿದರು. ಇದನ್ನು ನಂಬುವುದು ಕಷ್ಟವಾಗಿದೆ.

"ತಮಗೆ ತಿಳಿದಮಟ್ಟಿಗೆ ತಮ್ಮ ಮಕ್ಕಳು ಜೀವಂತರಾಗಿದಾರೆಯೆ, ಅವರು ನಮ್ಮಲ್ಲಿ ಬಂದಿರುವ ಈ ತರುಣರೇ ಇರಬಹುದೆ, ಬೂದಿಬಸವ ಸ್ವಾಮಿ ಅವರೇ ಹೌದೆ, ಎಂಬ ವಿಷಯ ನಮಗೆ ಸತ್ಯಾಂಶವನ್ನು ತಿಳಿಸ ಬೇಕೆಂದು ಬೇಡುತ್ತೇವೆ."

ನಂಬಯ್ಯ ಈ ಕಾಗದವನ್ನು ಓದಿದವನು, "ನವಾಬರ ಹತ್ತಿರ ಯಾರೂ ಹೋಗಿಲ್ಲ ಅಂತ ನನಗೆ ಕಾಣಿಸತದೆ. ಇವರು ಏನೋ ಬೂಟ ಮಾಡುತಾ ಇದಾರೆ. ಯುವಕಗಿವಕ ಬೂದಿಬಸವ ಎಲ್ಲಾ ಸುಳ್ಳು," ಎಂದನು.

ರಾಣಿ, "ನಿನಗೆ ಇದು ಅಷ್ಟು ನಿಶ್ಚಯ ಹೇಗೆ?" ಎಂದು ಕೇಳಿದಳು.

"ಹೇಳುತೇನಿ. ನನ್ನ ಮನ್ನಿಸತೇವಿ ಅಂತ ಮಾತು ಕೊಡಬೇಕು."

"ನಿನ್ನ ಮನ್ನಿಸೋದು ಇದರಾಗೆ ಏನದೆ?"

"ಅದೆ, ನಾನು ಹೇಳುತೇನಿ ; ಮಾತುಕೊಡರಿ."

"ಕೊಟ್ಟಿದೇನಿ, ಹೇಳು."

"ನನ್ನಾಣೆ ಮನ್ನಿಸಬೇಕು. ಕೇಳಿದಮೇಲೆ ಕೋಪ ಮಾಡಬಾರದು."

"ಏನಾದರೂ ಮಾತೊ ಅದು ? ಹೇಳು ಕೋಪ ಮಾಡೋದಿಲ್ಲ."

ಇಷ್ಟು ಧೈರ್ಯ ಹೇಳಿದಮೇಲೆ ನಂಬಯ್ಯ ತಾನು ಮಾಡಿದ ಏರ್ಪಾಡು, ಚಂಡಾಲರು ನಾಯಕನನ್ನು ಕೊಂದದ್ದು, ಹೂತದ್ದು, ಹೂತ ಹದಿನೈದು ದಿನದಮೇಲೆ ನಾಯಕ ಅನಂತಪುರದಲ್ಲಿದಾನೆಂಬ ಕತೆ ಹೊರಟದ್ದು, ಎಲ್ಲವನ್ನೂ ಹೇಳಿದನು. ಕೊನೆಗೆ ರಾಣಿಯ ಎದುರಿಗೆ ನೆಲದಮೇಲೆ ಬಿದ್ದು ಅವಳ ಕಾಲನ್ನು ಹಿಡಿದುಕೊಂಡು, "ಮೂರು ಕೊಲೆ ಪಾಪ ಹೊತ್ತುಕೊಂಡಿದೇನಿ; ನಿಮ್ಮ ಕೋಪಾನ ಬೇರೆ ನನ್ನಮೇಲೆ ಹೇರಬೇಡಿ; ಈಗಲೆ ನನಗೆ ಜೀವ ತಕ್ಕೊಳ್ಳೋನ ಅನ್ನೋಹಂಗದೆ. ಮನ್ನಿಸಿದರೆ ಒಂದು ಕುನ್ನಿ ಹೇಗೋ ದಿನ ಹಾಕುತೇನಿ," ಎಂದನು.

ಮನ್ನಿಸುತ್ತಾಳೆ, ಮನ್ನಿಸದೆ ಏನು ಮಾಡುತ್ತಾಳೆ, ಎಂದು ನಂಬಯ್ಯನ ಮನಸ್ಸಿನ ಒಂದು ಭಾಗದ ತಿಳಿವಳಿಕೆ. ಜೊತೆಗೆ, ಹೇಗೇ ಆಗಲಿ ಬೇಡಿಕೊಳ್ಳುವುದು ಸರಿ, ಕಾಲು ಹಿಡಿದು ಬಂದವನ ಕೈಬಿಡಬಾರದು ಎನ್ನತಾರೆ, ಎಂದು ಇನ್ನೊಂದು ಭಾಗದ ಪ್ರಚೋದನ. ರಾಣಿ, "ಆಯಿತು ಏಳು," ಎನ್ನುವವರೆಗೆ ನಂಬಯ್ಯ ಅವಳ ಪಾದವನ್ನು ಬಿಡಲಿಲ್ಲ, ಏಳಲಿಲ್ಲ.

ರಾಣಿಗೆ ಇವನ ವಿಷಯ ಈ ಶಂಕೆ ಈ ಹಿಂದೆ ಮೂಡಿದ್ದದ್ದನ್ನು ಸೂಚಿಸಿದೆ. ಆದ್ದರಿಂದ ಇವನ ಆತ್ಮದೂಷಣದಿಂದ ಅವಳಿಗೆ ಆಶ್ಚರ್ಯ ಉಂಟಾಗಲಿಲ್ಲ. "ಅಯ್ಯೋ ಪಾಪಿ, ಕೊನೆಗೂ ಕೊಂದೇ ಬಿಟ್ಟನೇ, ಇವನನ್ನು ಹತ್ತಿರ ಸೇರಿಸಿದ್ದರಿಂದ ಈ ಅನರ್ಥ ಆಯಿತೆ," ಎಂದು ಅವಳು ಕ್ಷಣ ಬೇಸತ್ತಳು; ಒಡನೆ, "ಅಯ್ಯೋ ! ನಾನು ಏತರ ತಾಯಿ ? ಅವ ಏತರ ಮಗ ? ಮಗುವಾಗಿದ್ದಾಗ ಆಯಿತು; ಬುದ್ಧಿಬಂದ ಮೇಲೆ ಅಮ್ಮಾ ಅಂತ ಅವ ಅನ್ನಲಿಲ್ಲ, ಕಂದಾ ಅಂತ ನಾ ಕರೆಯಲಿಲ್ಲ; ಋಣ ಇಷ್ಟೇ ಇತ್ತು," ಎಂದುಕೊಂಡಳು. ತಡೆಯಲಾರದೆ ಕಣ್ಣಿಗೆ ಬಂದ

ಎರಡು ಹನಿ ನೀರನ್ನು ಕೊಡಹಿಕೊಂಡು ನಂಬಯ್ಯನಿಗೆ, "ಆಯಿತು ಏಳು," ಎಂದಳು; ಮಗನನ್ನು ಕುರಿತ ದುಃಖವನ್ನು ಒತ್ತಟ್ಟಿಗಿಟ್ಟಳು; ಹೈದರನ ಓಲೆಗೆ ನಂಬಯ್ಯನಿಂದ ಹೀಗೆ ಉತ್ತರ ಬರೆಸಿದಳು.

"ನಿಮಗೆ ಮೊದಲು ಕಾಗದ ಬರೆದು ಕಳುಹಿಸುವಾಗ ನಮ್ಮ ಮಕ್ಕಳು ಚೆನ್ನಬಸವ ನಾಯಕರು ಸುಖವಾಗಿದ್ದರು. ಅವರು ಆಡಳಿತ ವನ್ನು ವಹಿಸಿಕೊಳ್ಳುವುದೆಂದು ನಾವೆಲ್ಲ ಆಗ ನಿಶ್ಚಯಿಸಿದ್ದೆವು. ಅವರು ಅದನ್ನು ವಹಿಸಿಕೊಂಡಿದ್ದರು. ಅಷ್ಟರಲ್ಲೆ ಅವರನ್ನು ಆಗದವರು ಕೊಲೆ ಮಾಡಿದರು. ಹೀಗೆ ಆಗುತ್ತದೆಂದು ನಮಗೆ ತಿಳಿಯದು. ಈಗ ತಾನೆ ಈ ಸಂಗತಿ ನಮಗೆ ನಿಶ್ಚಯವಾಗಿ ತಿಳಿದಿದೆ. ನಿಮ್ಮಲ್ಲಿಗೆ ಯಾರೋ ನಾಯಕರು ಎಂದುಕೊಂಡು ಬಂದಿರುವರೆಂದು ನಮಗೆ ಸುದ್ದಿಬಂದಿತು. ಹಾಗೆ ಬಂದವರು ನಾಯಕರಿದ್ದರೂ ಇರಬಹುದು ಎಂದು ಆಗ ಯೋಚಿ ಸಿಕೊಂಡೆವು. ಈಗ ಆ ನಿಮ್ಮಲ್ಲಿಗೆ ಬಂದಿರುವಾತ ನಮ್ಮ ಮಗ ಚೆನ್ನ ಬಸವನಾಯಕರು ಅಲ್ಲ ಎಂದು ನಾವು ಧೈರ್ಯವಾಗಿ ಹೇಳಬಲ್ಲೆವು. ಆತ ತಾನೇ ಬೂದಿಬಸವಸ್ವಾಮಿ ಎಂದು ಹೇಳಿದನೆನ್ನುತ್ತೀರಿ. ಅವನು ಬೂದಿಬಸವ ಇರಬಹುದು. ಒಬ್ಬ ಜಂಗಮ ಈ ಹೆಸರನ್ನಿಟ್ಟುಕೊಂಡು ಸ್ವಾಮಿ ಎಂದು ಸಂಸ್ಥಾನದಲ್ಲಿ ಸುತ್ತುತ್ತಿದ್ದದ್ದು ಉಂಟು. ನಾಯಕರು ತೀರಿಕೊಂಡಿರುವುದು ತಿಳಿದು ಅವನು ತಾನು ನಾಯಕ ಎಂದು ಹೇಳಿ ಕೊಳ್ಳುತ್ತಿದಾನೆಂದು ನಮಗೆ ಕಾಣುತ್ತದೆ. ಅವನನ್ನು ನೀವು ನಿಮ್ಮ ಅಂಕೆಯಲ್ಲಿರಿಸಿಕೊಂಡು ಬೇಕಾದಂತೆ ಕಾಣಬಹುದು. ಅವನು ಹೊರಕ್ಕೆ ಬಂದರೆ ನಾಡಿನಲ್ಲಿ ಗಲಭೆ ಎಬ್ಬಿಸಿಯಾನು. ನಮ್ಮ ಮಕ್ಕಳು ತೀರಿ ಕೊಂಡಿರುವುದರಿಂದ ಈಗ ನಮಗೆ ಅವರನ್ನು ಪ್ರತಿಯೆಂದು ಎಣಿಸುವ ಕಾರಣವಿಲ್ಲ. ನೀವು ಇಷ್ಟು ದೂರ ಬಂದ ಶ್ರಮಕ್ಕೆ ಪ್ರತಿಯಾಗಿ ನಾವು ಸಂತೋಷದಿಂದ ಕೊಡುವ ಧನವನ್ನು ತೆಗೆದುಕೊಂಡು ನೀವಿರುವ ಸ್ಥಳ ದಿಂದ ಮೈಸೂರಿಗೆ ಹಿಂದಿರುಗುವುದು ಸರಿ. ತಾವು ಹೀಗೆ ಮಾಡಿದರೆ ನಾವು ಎಂದಿಗೂ ನಿಮ್ಮ ಮಿತ್ರರಾಗಿ ನಡೆದುಕೊಳ್ಳತಕ್ಕವರು."

ನಂಬಯ್ಯ ಈ ಓಲೆಯನ್ನು ಬರೆದು ಒಡತಿಯಿಂದ ರಾಜಮುದ್ರೆ ಯನ್ನು ಒತ್ತಿಸಿ ಅದೇ ದಿನವೇ ಅದನ್ನು ನವಾಬನ ಕಡೆಗೆ ಕಳುಹಿಸಿದನು.

ಹೀಗೆ ಓಲೆ ಬಂದಿತು, ಹೀಗೆ ಉತ್ತರ ಬರೆದಿದೆ, ಎಂಬ ಸಂಗತಿಯನ್ನು ಒಂದು ಕಾಗದದಿಂದ ನೇಮಯ್ಯನಿಗೆ ತಿಳಿಸಿದನು.

೧೧೩

ನಾಯಕ ನವಾಬನಿಗೆ ವಸ್ತುತಃ ಸೆರೆಯಾಗಿ ಸಿಕ್ಕಿ ಮುಂದೆ ಏನು ಮಾಡುವುದು ಎಂದು ಯೋಚಿಸಿದನು. ತನ್ನ ಜನ ಯಾರಾದರೂ ಯಾವುದೋ ರೀತಿಯಲ್ಲಿ ಮರಸಿಕೊಂಡು ಹತ್ತಿರ ಬಂದ ಹೊರತು ತಾನು ಸದ್ಯ ಏನೂ ಮಾಡುವಂತಿಲ್ಲ ಎಂದು ಇವನಿಗೆ ಕಂಡಿತು. ತಾನು ನಾಯಕ ಹೌದೆ ಎಂಬ ವಿಷಯದಲ್ಲಿ ನವಾಬನಿಗೆ ನಿಜವಾದ ಸಂದೇಹ ಇದೆಯೆಂದು ನಂಬಲು ನಾಯಕನಿಗೆ ಸಾಧ್ಯವಾಗಲಿಲ್ಲ. ಆ ಸಂದೇಹ ನಿಜವಾದರೆ ಅದನ್ನು ನಿವಾಸಿರಿಕೊಳ್ಳುವುದಕ್ಕೆ ಒಂದು ದಾರಿಯಲ್ಲ, ಹತ್ತು ದಾರಿ ಯುಂಟು. ನವಾಬನಿಗೆ ಇದು ಯಾವುದೂ ಬೇಕಾಗಿರಲಿಲ್ಲ. ಇವನು ರಾಜರ ಅಪ್ಪಣೆ ಇಲ್ಲದೆ ಈ ಕೆಲಸ ಮಾಡುತ್ತಿದಾನೆಂದು, ರಾಜರು ನಾಯಕನನ್ನು ಕರೆಸಿ ಸ್ನೇಹ ಮಾಡಿಕೊಂಡರಲ್ಲ, ಇವನನ್ನು ಹಿಂಸಿಸಿ ರಾಜರ ಮೇಲೆ ಕೋಪ ತೀರಿಸಿಕೊಳ್ಳೋಣ ಎಂದು ನೋಡುತ್ತಿದಾನೆಂದು, ನಾಯಕನಿಗೆ ಕಂಡಿತು. ಇವನ ಉದ್ದೇಶ ಒಳ್ಳೆಯದಲ್ಲ; ಇವನು ನಗರವನ್ನು ಕೈಗೆ ತೆಗೆದುಕೊಳ್ಳುವ ಯೋಚನೆ ಮಾಡಿರಬೇಕು. ಅರಸರ ಇಷ್ಟಕ್ಕೆ ವಿರೋಧವಾಗಿ ಇದನ್ನು ಮಾಡುತ್ತಿದ್ದನಾದ್ದರಿಂದ ಇವನು ನಗರವನ್ನು ತನ್ನದನ್ನಾಗಿ ಮಾಡಿಕೊಳ್ಳಲು ಯೋಚಿಸಿದಾನೆ. ಈ ಪ್ರಯತ್ನವನ್ನು ತಾನು ಎಲ್ಲ ರೀತಿಯಲ್ಲೂ ತಡೆಯಬೇಕು. ತನ್ನ ರಾಜ್ಯವನ್ನು ಉಳಿಸಿಕೊಳ್ಳುವುದಕ್ಕಾಗಿ ಹೇಗೋ ಹಾಗೆ ಮೈಸೂರ ಅರಸರ ಕ್ಷೇಮಕ್ಕಾಗಿ ಕೂಡ ಇದು ತನ್ನ ಕರ್ತವ್ಯ; ಈ ವಿಧರ್ಮಿ ಈಗಾಗಲೇ ಅರಸರನ್ನು ಕಡೆಗಣಿಸಿ ನಡೆಯುತ್ತಿದ್ದನು; ನಗರವನ್ನು ತೆಗೆದುಕೊಂಡು ತಾನೆ ದೊರೆಯೆಂದು ಅರಸರಿಗೆ ಶತ್ರುವಾಗಿಯೇ ವರ್ತಿಸಿಯಾನು.

ಹೊರಗಿನಿಂದ ನೋಡುತ್ತಿದ್ದ ನಾಯಕನಿಗೆ ಇಷ್ಟು ಸ್ಪಷ್ಟವಾಗು ವಂತೆ ನವಾಬನ ನಡತೆ ದಾರಿ ತಪ್ಪಿತ್ತು. ಆದರೆ ಹೈದರನಿಗೆ ಈ ವಿಷಯ ದಲ್ಲಿ ಸಂಕೋಚ ಇರಲಿಲ್ಲ. ಯಾವುದೇ ವಿಷಯದಲ್ಲಿ ಬಹು ಆಶೆ

ಹುಟ್ಟಿದರೆ ಅದರ ದಾರಿಯ ವಿಷಯದಲ್ಲಿ ಮನಸ್ಸು ಬಹು ತೊಡಕುಗಳನ್ನು ಇಟ್ಟುಕೊಳ್ಳುವುದಿಲ್ಲ. ಇದನ್ನೇ ಸಂಸ್ಕೃತ ವಚನ, ಇದು ಅದರ ಆತುರ ಉಳ್ಳವರಿಗೆ ಇಂಥ ಅಂಥ ಸಂಕೋಚಗಳಿರುವುದಿಲ್ಲ, ಎಂದು ಹೇಳಿರುವುದು. ತನ್ನ ದಾರಿಯನ್ನು ಹಿಡಿದು ನೇರವಾಗಿ ನಡೆದು ಹೈದರ್ ಮೈಸೂರಿನಲ್ಲಿ ರಾಜಕಲ್ಪನಾಗಿದ್ದನು. ಆಸೆ ಮುಂದರಿದು ಈಗ ಅವನು ರಾಜನೇ ಆಗಲು ಯತ್ನಿಸಿದನು. ಯಾರಿಗೂ ಕೆಡಕು ಮಾಡದೆ ತಾನು ರಾಜನಾಗುವುದು ಸಾಧ್ಯವಲ್ಲ. ಅವ್ಯವಸ್ಥೆಯಲ್ಲಿ ಸಿಕ್ಕಿರುವ ನಗರದಂಥ ರಾಜ್ಯವನ್ನು ತೆಗೆದುಕೊಂಡು ಸರಿಯಾಗಿ ಆಳಿದರೆ, ನಾಯಕ ಮನೆತನಕ್ಕೆ ಅನ್ಯಾಯ ಆದರೂ ಜನಕ್ಕೆ ಉಪಕಾರ ಮಾಡಿದಂತೆಯೆ. ಆದ್ದರಿಂದ ತಾನು ನಗರವನ್ನು ತೆಗೆದುಕೊಳ್ಳುವುದರಲ್ಲಿ ಅನ್ಯಾಯಕ್ಕಿಂತ ಉಪಕಾರ ಹೆಚ್ಚು.

ಬಯಲು ಸೀಮೆಯಾಗಿದ್ದರೆ ಹೈದರ್ ಈ ವೇಳೆಗೆ ನಗರವನ್ನು ಗೆದ್ದು ತೆಗೆದುಕೊಳ್ಳುವ ಯೋಚನೆ ಮಾಡುತ್ತಿದ್ದನು. ಈಗ ಅವನು ಸೇರಿದ ಸೀಮೆ ಕಾಡುಸೀಮೆ. ಧೈರ್ಯವಾಗಿ ಮುಂದೆ ನಡೆಯ ಬಹುದಾದ ನೆಲವಲ್ಲ. ಎಲ್ಲಿ ಯಾರು ಮರೆಯಿಂದ ಕೊಂದಾರೊ ಎಂದು ಉದ್ದಕ್ಕೂ ಶಂಕೆಯಿಂದ ಮುಂದರಿಯಬೇಕಾಗಿತ್ತು. ಒಳ್ಳೆಯ ನಡತೆಯಿಂದ ಜನರನ್ನು ಒಲಿಸಿಕೊಂಡು ಅಲ್ಲಲ್ಲಿಯ ಜನರ ಸಹಾಯದಿಂದ ಸ್ವಲ್ಪ ಸ್ವಲ್ಪವೇ ಮುಂದೆ ಹೋಗಬೇಕು. ಇದು ಇವನಿಗೆ ಹೊಸ ಅನುಭವ. ಆದರೆ ಹೈದರ್ ಹುಟ್ಟಿನಿಂದ ಚತುರ ಸೇನಾನಿ. ಸಂದರ್ಭ ಕಂಡೊಡನೆ ತನ್ನ ವರ್ತನೆಯನ್ನು ಅದಕ್ಕೆ ಅನುಗುಣವಾಗಿ ಮಾರ್ಪಡಿಸಬಲ್ಲನು. ಈ ಸ್ಥಳದ ಸ್ಥಿತಿಯನ್ನು ನೋಡಿ ಅವನು ನಗರ ತನ್ನ ಕೈಗೆ ಬರುವುದಕ್ಕೆ ಆರು ತಿಂಗಳಾದರೆ ಆಶ್ಚರ್ಯವಿಲ್ಲ ಎಂದುಕೊಂಡನು. ಅನಂತಪುರದಿಂದ ನಗರಕ್ಕೆ ಆರು ಹರಿದಾರಿಯ ದೂರ ಅಷ್ಟೆ. ಆದರೆ ಇದನ್ನು ದಾಟುವುದರ ಕಷ್ಟ ನೂರು ಯೋಜನದ ಸಮುದ್ರವನ್ನು ದಾಟುವುದಕ್ಕೆ ಸಮನಾಗಿತ್ತು.

ಹೈದರನಿಗೆ ನಾಯಕನ ವಿಷಯದಲ್ಲಿ ನಿಜವಾದ ಸಂದೇಹವೇನೂ ಇರಲಿಲ್ಲ. ನಾಯಕನ ಮಗನಲ್ಲದೆ ಇದ್ದರೆ ಇವನಿಗೆ ಈ ನಡೆನುಡಿ ಹೇಗೆ

ಬರಬೇಕು ? ಉನ್ನತ ಸ್ಥಾನದಲ್ಲಿ ನಿಂತು ವಾಡಿಕೆಯಿಲ್ಲದವನು ಇಂಥ ಮಾತನ್ನು ಆಡುವಾಗ ಇದು ನಾಟಕದ ಮಾತು ಎಂಬಂತೆ ನಾಚಿಕೊಳ್ಳು ತ್ತಾನೆ. ಇವನಿಗೆ ಈರೀತಿ ಸಹಜವಾಗಿತ್ತು. ಸ್ವಾರ್ಥವೊಂದು ಇಲ್ಲದಿದ್ದರೆ ಹೈದರ್ ಇವನನ್ನು ಹೀಗೆ ನಡಸಿಕೊಳ್ಳಲು ಹಿಂಜರಿಯುತ್ತಿದ್ದನು. ಸ್ವಾರ್ಥವಿದ್ದೂ ಈಗ ಅವನಿಗೆ ಈ ವಿಷಯದಲ್ಲಿ ಸ್ವಲ್ಪ ಸಂಕೋಚವುಂಟು. ಸಂಕೋಚದೊಂದಿಗೆ ಸ್ವಲ್ಪ ಕನಿಕರವೂ ಉಂಟು. ಆನೆಯನ್ನು ಹಳ್ಳಕ್ಕೆ ಕೆಡಹುವವನು ಅದರ ವಿಷಯವಾಗಿ ಅಯ್ಯೋ ಪಾಪ ಎನ್ನುವಂತೆ ಹೈದರ್ ಇವನನ್ನು ಕುರಿತು ಮರುಕಗೊಂಡನು. ಅದಕ್ಕೆ ಸಮಾಧಾನವಾಗಿ ನಗರ ವನ್ನು ತೆಗೆದುಕೊಂಡಮೇಲೆ ಇವನನ್ನು ರಾಜಮರ್ಯಾದೆಯಿಂದ ಬಾಳು ವಂತೆ ಒಂದು ಸ್ಥಿತಿಯನ್ನು ಮಾಡಿಕೊಡಬೇಕೆಂದು ಅವನು ನಿಶ್ಚಯಿಸಿ ದ್ದನು. ಈಗ ಮೈಸೂರ ಅರಸರು ಇರಲಿಲ್ಲವೆ? ಇವನು ನಗರದ ನಾಯಕ. ಅಲ್ಲಿಗೆ ಇಲ್ಲಿಗೆ ಇಷ್ಟೇ ವ್ಯತ್ಯಾಸ: ಅಲ್ಲಿ ಅರಸನನ್ನು ಹಿಂದಿನ ಅರಸರು ಎಂದು ಕರೆದಿರಲಿಲ್ಲ. ಇಲ್ಲಿ ನಾಯಕನನ್ನು ಪೂರ್ವದ ನಾಯಕರು ಎಂದು ಹೇಳುವುದಾಗುತ್ತದೆ.

ನಾಯಕನಿಗೆ ಇವನ ಈ ಯೋಚನೆ ಎಲ್ಲ ತಿಳಿಯುವುದು ಸಾಧ್ಯ ವಲ್ಲ. ಆದರೂ ಅವನು ಇವನ ಕೈಯಿಂದ ಆದಷ್ಟು ಬೇಗನೆ ತಪ್ಪಿಸಿ ಕೊಂಡು ಹೋಗಬೇಕು ಎಂದು ನಿರ್ಣಯಿಸಿಕೊಂಡನು.

## ೧೧೪

ಹೀಗಿರುತ್ತ ಒಂದು ದಿನ ಸಂಜೆ ನಾಯಕ ತನ್ನ ಕುಟಿಯ ಹತ್ತಿರ ಶತಪಥ ಹಾಕುತ್ತಿದ್ದಾಗ ಉಜನಿ ಯಾರನ್ನೊ ಇವನ ಹತ್ತಿರ ಕರೆತಂದನು. ಆ ಮನುಷ್ಯ, "ಶರಣು, ಅಯ್ಯನವರೆ," ಎಂದನು.

ನಾಯಕ, "ಶರಣು, ಅಣ್ಣ; ನೀವು ನಮ್ಮನ್ನ ಎಲ್ಲಿ ನೋಡಿದೀರಿ?" ಎಂದನು.

"ಯಾಕೆ? ಅಯ್ಯನವರೇ ನೀವು ನಮ್ಮ ಬೂದಿಬಸವಸ್ವಾಮಿ ಅಲ್ಲವೆ? "

ನಾಯಕನಿಗೆ ಧ್ವನಿ ಪರಿಚಿತವಾಗಿ ಕಂಡಿತು. ಇದು ಯಾರು ಎಂದು ಅವನು ದಿಟ್ಟಿಸಿ ನೋಡಿದನು. ಇವನು ವಸ್ತಾರೆಯ ಆ ಹುಡುಗಿ ಮಲ್ಲಿಗೆಯ ಜೊತೆಗಾರ; ಸಗುನ; ಇವನು ಮಲ್ಲಯ್ಯನ ಕಡೆಯಿಂದ ಬಂದಿರಬೇಕು.

"ಓಹೊ, ಆಗ ನೋಡಿದಿರ? ಎಲ್ಲಿ ನೋಡಿದಿರಿ?"

"ನಾವು ಹೊಂಬುಚ ಕಾಣಿರಿ. ಒಮ್ಮೆ ಜಾಗರಕ್ಕೆ ಹೋಗಿದ್ದಾಗ ನಿಮ್ಮನ್ನ ಅಲ್ಲಿ ಕಂಡಿವಿ."

"ಸಂತೋಷ: ಸುಖವಾಗಿದ್ದೀರಾ?"

"ಸುಖವಾಗೇ ಇದ್ದೀವರಿ. ನೀವ್ಯಾಕೆ ಇಲ್ಲಿದೀರಿ ಸ್ವಾಮಿಗಳೆ? ನಾಯಕರು ಎಂತ ಹಿಡಿದುಹಾಕಿದಾರಂತಲ್ಲ."

"ಹೌದು."

"ನಾವು ನಾಯಕ ಅಲ್ಲ ಸ್ವಾಮಿ ಅಂತ ಹೊರಗೆ ಬರಬಾರದೆ?"

"ನೀವು ನಾಯಕರನ್ನ ನೋಡಿದ್ದೀರಾ."

"ಇಲ್ಲರಿ."

"ಮತ್ತೆ ಇವರು ನಾಯಕರಲ್ಲ ಅಂತ ನೀವಂದರೆ ಈ ಮಂದಿ ಒಪ್ಪೋದಿಲ್ಲ."

"ಹಂಗೇನ್ರಿ? ಒಳ್ಳೇದು ಶರಣು ಅಯ್ಯನವರೆ. ನಮ್ಮ ಆ ಹೆಂಗಸು ನಿಮ್ಮನ್ನ ನೋಡಬೇಕು ಅಂದರೆ ಶರಣು ಮಾಡಲಾಕೆ ಬರಬಹುದೆ ಅಯ್ಯನವರೆ?"

"ಏನೂ ಅಡ್ಡಿಯಿಲ್ಲ; ಕರೆತನ್ನಿರಿ."

ಸ್ವಲ್ಪ ಹೊತ್ತಾದಮೇಲೆ ಹೈದರ್ ಇವನ ಕುಟಿಗೆ ಬಂದನು. ನಾಯಕ ಅವನನ್ನು ಮಾತನಾಡಿಸಲಿಲ್ಲ. ಅವನಿಗಾಗಿ ಏಳಲೂ ಇಲ್ಲ; ಅವನನ್ನು ಕುಳ್ಳಿರ ಹೇಳಲೂ ಇಲ್ಲ. ನವಾಬ ತಾನೇ ನಮಸ್ಕಾರ ಹೇಳಿ ಹತ್ತಿರ ಬಂದು ಕುಳಿತು, "ನೀವು ನಾಯಕರಲ್ಲ ಎಂದು ನಾವು ಹೇಳಿದ್ದು ಈ ಹೊತ್ತು ಪ್ರಮಾಣ ಆಯಿತಲ್ಲ," ಎಂದನು.

"ಹೇಗೆ?"

"ನೀವು ಬೂದಿಬಸವಸ್ವಾಮಿ ಎಂದು ಒಪ್ಪಿದಿರಂತೆ."

"ಹೌದು."

"ಮತ್ತೆ ನಾಯಕರು ಎಂದಿರಿ?"

"ಬೂದಿಬಸವಸ್ವಾಮಿ ಎಂದವನು ಇವನೊಬ್ಬ. ನಾಯಕರು ಅನ್ನುವರು ನೂರು ಜನ ಸಿಕ್ಕುತಾರೆ ನಿಮಗವರು ಬೇಕಾಗಿಲ್ಲ."

"ಅಂತೂ ನಿಮ್ಮ ಮೋಸ . . . "

"ಎಲವೋ, ನವಾಬ, ಮೋಸಗೀಸ ಎನ್ನಬೇಡ; ಬಾಯಿ ಹಿಡಿದು ಮಾತನಾಡು; ಇಲ್ಲ ಎದ್ದು ನಡಿ ಆಚೆಗೆ."

ಹೈದರನ ಕಣ್ಣು ಕೋಪದಿಂದ ಕಿಡಿಕಾರಿತು. ಅವನು, "ಅಯ್ಯಾ ನಾಯಕರೆ . . . . " ಎಂದು ಮಾತನಾಡ ಹೊರಟನು.

ನಾಯಕ ಒಡನೆ ನಕ್ಕು, "ಹ್ಹ, ಹ್ಹ, ಹಾಗಾದರೆ ನಿಮಗೆ ನಾವು ನಾಯಕರು ಎಂತ ತಿಳಿದಿದೆ?" ಎಂದು ಕೇಳಿದನು.

"ನೀವು ಹೇಳಿಕೊಳ್ಳುತೀರಲ್ಲ."

"ನೀವು ತಿಳುಕೊಂಡಿರೋದೇನು? ಬೂದಿಬಸವ ಅಂತಿದ್ದರೆ ಅಯ್ಯಾಸ್ವಾಮಿ ಎನ್ನಬೇಕಾಗಿತ್ತು."

"ನೀವೇ ಎರಡೂ ಅಂತ ನೀವು ಹೇಳತಿದ್ದೀರಲ್ಲ."

"ಅದು ಹೌದು ಎಂತಾದರೆ ಇದನ್ನ ಮೋಸ ಎಂತ ಏಕೆ ಹೇಳುತೀರಿ?"

"ನಮಗದು ತಿಳಿಯಬೇಕಲ್ಲ."

"ತಿಳಿಯಬೇಕು ಎಂದರೆ ಹೇಗೆ ಎಂತ ಕೇಳಿ, ಹೌದೇ ಎಂತ ಕೇಳಿ. ಮರ್ಯಾದೆ ಮರೆತು ತಪ್ಪು ನುಡಿಯಬೇಡಿ."

ಇವನೊಂದಿಗೆ ಮಾತು ಬೆಳಸಿ ಫಲವಿಲ್ಲ ಎಂದು ಹೈದರ್ ಹೊರಟು ಹೋದನು. ಒಡನೆ ವೀರಮ್ಮಾಜಿಗೆ ಈ ವಿಷಯದಲ್ಲಿ ಈ ಮೊದಲೆ ಹೇಳಿದಂತೆ ಕಾಗದ ಬರೆಸಿದನು ಉತ್ತರ ಬರುವುದನ್ನು ನಿರೀಕ್ಷಿಸುತ್ತಿದ್ದನು.

ಸಗುನ ಬಂದು ಹೋಗಿದಾನೆ, ಮುಂದಿನ ಹೆಜ್ಜೆ ಏನು, ಎಂದು ನಾಯಕನೂ ನಿರೀಕ್ಷೆಯಲ್ಲಿದ್ದನು. ಮರುದಿನ ಸಂಜೆ ಅವನು ಮಲ್ಲಿಗೆಯನ್ನು ಕರೆದುಕೊಂಡು ಉಜನಿಯೊಂದಿಗೆ ಇವನನ್ನು ನೋಡಲು ಬಂದನು.

ಮಲ್ಲಿಗೆ, "ಶರಣು ಅಯ್ಯನವರೆ, ಮಲ್ಲಯ್ಯನ ಗುಡಿಗೆ ಸೇವೆಗೆ ಬಂದಿವಿ. ಯಾರೊ ನಿಮ್ಮನ್ನ ಇಲ್ಲಿ ಕಂಡವರು ನೀವು ಇಲ್ಲಿದೀರ ಅಂದರು. ನಾಯಕರು ಅಂತ ತಿಳೀದೆ ಶರಣು ಮಾಡೋಣ ಅಂತ ಬಂದೇ ಬಿಟ್ಟೆವಿ," ಎಂದನು.

ನಾಯಕ: "ಶರಣು. ನಿಮಗೆ ದೇವರು ಒಳ್ಳೇದು ಮಾಡಲಿ. ಸೇವೆ ಮಾಡಿ ಆಯಿತೊ," ಎಂದನು.

"ಇನ್ನೂ ವಾರ ನಡೀಬೇಕು ಅಯ್ಯನವರೆ."

"ಒಳ್ಳೆಯದು ನಡೆಯಲಿ."

"ತಿರುಗಿ ನಿಮ್ಮನ್ನ ಕಾಣಬಹುದೆ ಅಯ್ಯನವರೆ?"

"ನಾವು ಇಲ್ಲಿ ಎಷ್ಟು ದಿನ ಇರತೀವಿ ತಿಳಿಯದು. ಇಲ್ಲೇ ಇದ್ದರೆ ತಿರಗಿ ಬನ್ನಿರಲ್ಲ. ಅಡ್ಡಿಯಿಲ್ಲ."

ಇನ್ನೆರಡು ನಿಮಿಷ ಇದ್ದು ಯಾವುದೋ ಮಾತನಾಡಿ ಅವರು ಹೊರಟು ಹೋದರು.

ನಾಯಕ ಇವರ ಮಾತಿನಿಂದ ಮಲ್ಲಯ್ಯ ಏನೋ ಏರ್ಪಾಡು ಮಾಡುತ್ತಿದಾನೆ, ಅದರ ವಿಷಯ ಪುನಃ ಬಂದು ತಿಳಿಸುತ್ತಾರೆ, ಎಂದು ಅರ್ಥ ಮಾಡಿಕೊಂಡನು.

೧೧೫

ಇಷ್ಟರಲ್ಲಿ ಹೈದರ್ ತನ್ನ ಸೈನ್ಯದಲ್ಲಿ ಒಂದು ಭಾಗವನ್ನು ಅದೆಲ್ಲಿಗೊ ಹೋಗುವುದಕ್ಕಾಗಿ ಕುಂಸಿಗೆ ಕಳುಹಿಸಿದನು. ಇಲ್ಲಿ ತನ್ನ ಸೈನ್ಯಕ್ಕೆ ಸ್ಥಳದ ಕೆಲವು ಜನರನ್ನು ಸೇರಿಸಿಕೊಂಡನು. ಹಾಗೆ ಸೇರಿದವರಲ್ಲಿ ಹಲವರು ಸೋಮನ ಕಾಡಿನ ಹುಲಿಯಪಡೆಯ ಜನ. ಅವರಲ್ಲಿ ಮುಖ್ಯವಾಗಿ ಕೆಳಗೂರ ಬಸವಯ್ಯ ತೆರವಿಯ ಸುಬ್ಬ ಇದ್ದರು. ಇವರು ಸಮಯ ನೋಡಿ ನಾಯಕನ ಕಣ್ಣಿಗೆ ಬಿದ್ದು ತಾವು ಇಲ್ಲಿ ಇರುವ ಸಂಗತಿ ಅವನಿಗೆ ತಿಳಿಯುವಂತೆ ಮಾಡಿದರು. ಅದಕ್ಕಿಂತ ಹತ್ತಿರ ಬರುವುದು ಆಗಲಿಲ್ಲ. ಆದರೂ ಇದರಿಂದ ಮಲ್ಲಯ್ಯ ಏನೋ ಸನ್ನಾಹ ಮಾಡುತ್ತಿದಾನೆ ಎನ್ನುವುದು ಕಂಡು ನಾಯಕನಿಗೆ ಮತ್ತಷ್ಟು ಸಮಾಧಾನವಾಯಿತು.

ಹದಿನೈದು ದಿನ ಕಳೆಯಿತು. ಆಮೇಲೆ ಒಂದು ಸಂಜೆ ಹೈದರ್ ಇವನ ಹತ್ತಿರ ಬಂದು, "ನಿಮ್ಮ ತಾಯಿ ಅಂತೀರಲ್ಲ ಅವರು ಕಳುಹಿಸಿದಾರೆ. ಇದನ್ನು ಓದಿನೋಡಿರಿ," ಎಂದು ತಾನು ತಂದಿದ್ದ ಒಂದು ಕಾಗದವನ್ನು ಇವನ ಕೈಗೆ ಕೊಟ್ಟನು.

ಅದು ರಾಣಿ ಬಲ್ಲಾಳರಾಯನ ದುರ್ಗದಿಂದ ಬರೆದು ಕಳುಹಿಸಿದ್ದ ಕಾಗದ. ನಾಯಕ ಅದನ್ನು ಓದಿದನು; "ನೋಡಿದೆವು," ಎಂದು ಹಿಂದಕ್ಕೆ ಕೊಟ್ಟನು.

"ಈ ಕಾಗದವನ್ನು ನಮ್ಮ ತಾಯಿ ಬರೆದಿದಾರೆ ನಿಜ. ಅವರು ಯಾವುದೊ ಕಾರಣದಿಂದ ನಾವು ಅಪಘಾತದಿಂದ ತೀರಿಕೊಂಡೆವೆಂದು ತಿಳಿದಿದಾರೆ. ಅದು ತಪ್ಪು ತಿಳಿವಳಿಕೆ. ನಮ್ಮನ್ನು ಕಂಡಾಗ ಅವರಿಗೆ ಅದು ತಿಳಿಯುತ್ತದೆ. ನಿಮಗೆ ಅವರೇ ತಮ್ಮ ತಿಳಿವಳಿಕೆ ತಪ್ಪಾಯಿತು ಎಂದು ಹೇಳುತ್ತಾರೆ. ನೋಡಿರಿ."

ಹೈದರ್ "ಹಾಗೆನ್ನುತ್ತೀರಾ?" ಎಂದು ಹೇಳಿ ಹೊರಟು ಹೋದನು. ಇದಾದ ಎರಡು ದಿನದ ಮೇಲೆ ಅವನು ಸೈನ್ಯ ಮುಂದಿನ ಪಾಳೆಯಕ್ಕೆ ನಡೆಯಬೇಕೆಂದು ಆಜ್ಞೆಮಾಡಿದನು. ಮರು ದಿನ ಅಲ್ಲ ಮೂರನೆಯ ದಿನ ಇಲ್ಲಿ ಬೀಡಾರವನ್ನು ಕೀಳಬೇಕು. ಒಂದು ದಳ ಹೊಂಬುಚದ ಕಟ್ಟೆಯ ಮಾರ್ಗವಾಗಿ ಹೋಗಬೇಕು; ಇನ್ನೊಂದು ಮಾವಿನಹೊಳೆ ಮಾರ್ಗವಾಗಿ ಮೂರಂಗಡಿಗೆ ಹೋಗಬೇಕು. ನವಾಬ ಮಾವಿನಹೊಳೆಯ ಮಾರ್ಗವಾಗಿ ಹೋಗುವ ದಳ ಜೊತೆಯಲ್ಲಿ ಹೋಗತಕ್ಕವನು; ನಾಯಕ ಅವನ ಜೊತೆಯಲ್ಲಿರುವನು.

ಇವರು ತಾವಾಗಿ ಯಾವ ಪ್ರಯತ್ನವನ್ನೂ ಮಾಡದೆ ಕೆಳಗೂರ ಬಸವಯ್ಯ ತಿರವಿಸುಬ್ಬ ನವಾಬನ ಜೊತೆಯಲ್ಲಿ ಹೋಗುವ ದಳದ ಭಾಗದಲ್ಲಿ ಸೇರಿದರು.

ಇದು ನಿರ್ಧರವಾದ ಮಾರನೆಯ ದಿನ ಸಗುನ ಮಲ್ಲಿಗೆ ಮತ್ತೆ ಬಿಡಾರಕ್ಕೆ ಬಂದು ಬೂದಿಬಸವಸ್ವಾಮಿಗೆ ಶರಣು ಹೇಳಿ ಹೋಗುತ್ತೇವೆ ಎಂದರು. ಇದಕ್ಕೆ ಯಾವಾಗಲೂ ಅಡ್ಡಿ ಇಲ್ಲ. ಹಾಗೆಯೇ ನವಾಬರ ಎದುರಿಗೆ ನಾಲ್ಕು ಹೆಜ್ಜೆ ಕೋಲಾಟ ಹಾಕುತ್ತೇವೆ ಎಂದರು. ಇಲ್ಲಿಯ

ಜನಕ್ಕೆ ವಿಶ್ವಾಸ ತೋರಿಸುವ ದೃಷ್ಟಿಯಿಂದ ಇಂಥ ಮಾತಿಗೆ ಅವನು ಒಪ್ಪುತ್ತಿದ್ದನು; ಈ ದಿನವೂ ಒಪ್ಪಿದನು.

ಸಗುನ ಮಲ್ಲಿಗೆ ಮೊದಲು ನಾಯಕನನ್ನು ನೋಡಿದರು; "ನಮ್ಮ ಸೇವೆ ಮುಗಿಯಿತು, ನಾವು ಹೊರಡುತೇವಿ, ನವಾಬರ ಎದುರು ಕೋಲು ಹಾಕುತೇವಿ, ಅಯ್ಯನೋರು ಅದನ್ನ ನೋಡಬೇಕು," ಎಂದರು. ನಾಯಕ, "ಒಳ್ಳೆಯದು, ನಾವಿಲ್ಲಿಂದ ನೋಡುತಿರತೇವಿ," ಎಂದನು.

ಮಲ್ಲಿಗೆ, "ಹಾಡು ಚಂದಾಗೈತೆ ಕೇಳಬೇಕು," ಎಂದಳು.

ನಾಯಕ, "ಕೇಳುತೇವಿ, ಹಾಡಿ," ಎಂದನು.

ಅವರಿಬ್ಬರೂ ಪಕ್ಕದಲ್ಲಿ ನವಾಬನ ಎದುರಲ್ಲಿ ಕೋಲು ಹಾಕಿದರು. ಹಾಡು ಒಬ್ಬ ಹೆಗ್ಗಡೆಯ ಮಗಳು ಯಾರನ್ನೊ ಮದುವೆಯಾಗುತೇನೆ ಎಂದಾಗ ಅವಳ ಮಲತಾಯಿ ಬೇರೆ ಯಾರಿಗೊ ಕೊಡುತ್ತೇನೆಂದು ಹಠ ಮಾಡಿ ಅವಳನ್ನು ಕಳುಹಿಸಿದ್ದನ್ನು ಕುರಿತದ್ದು. ಇವಳು ಬಯಸಿದ ತರುಣ ದಾರಿಯಲ್ಲಿ ಕಾದಿದ್ದು ಅವಳನ್ನು ಕದ್ದು ಕರೆದುಕೊಂಡು ಹೋಗುವನು. ಆಮೇಲೆ ಅವನಿಗೆ ಆ ಮಲತಾಯಿಗೆ ಜಗಳ ಆಗುವುದು; ಮಲತಾಯಿ ಸಾಯುವಳು. ಎರಡು ಐಶ್ವರ್ಯ ಅಳಿಯ ಮಗಳದು ಆಗುವುದು.

ಹುಡುಗಿಯನ್ನು ಕಳುಹಿಸುವ ದಾರಿಯ ವರ್ಣನೆಯಲ್ಲಿ ಮಾವಿನ ಹೊಳೆಯ ಮಾರ್ಗದ ದಾರಿಯ ಹಳ್ಳಿಗಳ ಹೆಸರುಗಳು. ಈ ಭಾಗ ಸ್ಥಳದವರಿಗೆ ತಿಳಿಯಬೇಕು ಹೊರತು ಹೊರಗಿನವರಿಗೆ ತಿಳಿಯುವಂತಿಲ್ಲ. ಇಂಥಾ ಊರಿನ ಹತ್ತಿರ ಮದುವಣಿಗ ಕಾದಿದ್ದು ಹೀಗೆ ಮಾಡಿ ಹುಡುಗಿಯನ್ನು ದಿಬ್ಬಣದಿಂದ ಬಿಡಿಸಿ ಬೇರೆ ಮಾಡಿದ, ಹುಡುಗಿ ಇತ್ತ ಓಡಿದಳು, ಅವನನ್ನು ಸೇರಿದಳು, ಎಂದು ಹೇಳಿದ ವರ್ಣನೆಯೆಲ್ಲ, ಮಲ್ಲಯ್ಯ ಏನು ಮಾಡಲು ಉದ್ದೇಶಿಸಿದ್ದನೆಂದು ತಿಳಿಸುವುದಾಗಿದ್ದಿತು.

ನಾಯಕ ಇದನ್ನು ತಿಳಿದುಕೊಂಡನು. ಇದು ಆರಂಭದಲ್ಲೆ ಬಂದು ಕತೆ ಮುಂದಕ್ಕೆ ಬೆಳೆದದ್ದರಿಂದ ಇದರ ವಿಷಯವಾಗಿ ಇತರರಿಗೆ ಯಾವುದೂ ಶಂಕೆ ಹುಟ್ಟಲಿಲ್ಲ.

## ೧೧೬

ದೇವಾಲಯದ ಅರ್ಚಕ ಶಾಂತವ್ವನ ಅಪೇಕ್ಷೆಯನ್ನು ಕಾಪಾಲಿಗೆ ತಿಳಿಸಿದ್ದರ ಮೇಲೆ ಭೈರವನಿಗೆ ದಿನವೂ ವಿಶೇಷ ಪೂಜೆ ಅಭಿಷೇಕಗಳು ನಡೆದವು. ಕಾಪಾಲಿಯ ಬಳಿ ಕೆಲವು ಓಲೆಯಗರಿಯ ಗ್ರಂಥಗಳಿದ್ದವು. ಅವನು ಅವುಗಳನ್ನು ತೆರೆದು ನೋಡಿ ದಿನವೆಲ್ಲ ಹುಡುಕಿ ಹದಿನೆಂಟು ದಿನ ನಡೆಯಬೇಕಾದ ಒಂದು ಸೇವೆಯನ್ನು ನಡೆಸಿದರೆ ದಂಪತಿಗಳಿಗೆ ಶ್ರೇಯಸ್ಸು, ಪೂಜೆಯ ಆರಂಭದಲ್ಲಿ ರಾಣಿ ತನಗೆ ತುಂಬ ಪ್ರಿಯವಾದ ಏನಾದರೊಂದು ಅನರ್ಘ ವಸ್ತುವನ್ನು ದೇವರಿಗೆ ಸಮರ್ಪಿಸಬೇಕು, ಹೀಗೆ ದಿನವೂ ಒಂದೊಂದು ವಿಶೇಷ ಪದಾರ್ಥವನ್ನು ಸಮರ್ಪಿಸುತ್ತ ಕೊನೆಯ ದಿನ ನಾಯಕನಿಗೆ ಬಹು ಪ್ರಿಯವಾದ ಯಾವುದಾದರೊಂದು ಪದಾರ್ಥವನ್ನು ಒಪ್ಪಿಸಬೇಕು, ಇದು ನಿಮಗೆ ಸಮ್ಮತವೆ, ಎಂದು ಅವಳಿಗೆ ಹೇಳಿಕಳುಹಿಸಿದನು. ಶಾಂತವ್ವ ಈ ಸೇವೆ ನಡೆಯಲಿ ಎಂದು ಒಪ್ಪಿದಳು. ಆರಂಭದಲ್ಲಿ ಅರ್ಪಣೆಗೆ ನಾಯಕ ತನಗೆ ಮೊದಲ ರಾತ್ರಿ ತನ್ನ ಕೈಯಿಂದಲೆ ಹೆರಳಲ್ಲಿಟ್ಟ ಸುತ್ತಿದ ಕಲ್ಲು ಕೆತ್ತಿದ ಜಡೆಬಿಲ್ಲೆಯನ್ನು ಕೊಟ್ಟು ಕಳುಹಿಸಿದಳು.

ಸೀತೆಯ ಚೂಡಾಮಣಿಗೆ ಇದ್ದಂತೆ ಈ ಬಿಲ್ಲೆಗೂ ಒಂದು ಕಥೆ ಇದ್ದಿತು. ಗರ್ಭಾಧಾನದ ರಾತ್ರಿ ನಲ್ಲೆಗೆ ನಲ್ಲ ತನ್ನ ಕೈಯಿಂದ ಒಂದು ತೊಡವನ್ನು ತೊಡಿಸಿ ಅವಳ ಚೆಲುವನ್ನು ತುಂಬಿಕೊಳ್ಳಲಿ ಎಂಬ ಉದ್ದೇಶದಿಂದ ಹಿರಿಯ ಸುಮಂಗಲಿಯರು ಶಯ್ಯಾಗೃಹದಲ್ಲಿ ಒಂದು ಸಂಪುಟದಲ್ಲಿ ನಾಲ್ಕು ಆಭರಣಗಳನ್ನು ಇರಿಸುವರು. ಹೆರಳಿಗೆ ಜಡೆಬಿಲ್ಲೆ; ಕೊರಳಿಗೆ ಹಾರ; ತೋಳಿಗೊಂದು ಬಂದಿ; ಮಣಿಕಟ್ಟಿಗೆ ಕಡಗ: ಯಾವುದೊ ಒಂದು ಇಂಥ ಒಡವೆಯನ್ನು ಹಾಕುವುದಕ್ಕೆ ಅವರು ಅಲಂಕಾರದಲ್ಲಿ ಎಡೆ ಬಿಟ್ಟಿರುವರು. ಯಾವುದನ್ನು ಬಿಟ್ಟಿದೆ ಎಂದು ತಿಳಿದು ಅವನು ಅದನ್ನು ತೊಡಿಸಬೇಕು. ಯಾವುದನ್ನು ಬಿಟ್ಟಿದೆ ಎನ್ನುವುದು ತಿಳಿಯುವ ಮುನ್ನ ಏನೆಲ್ಲವನ್ನು ಇಟ್ಟಿದೆ ಎಂದು ಅವನು ನೋಡಬೇಕಷ್ಟೆ. ನಲ್ಲೆಯ ಅಲಂಕಾರವನ್ನು ಅವನು ಚೆನ್ನಾಗಿ ನೋಡಲಿ ಎನ್ನುವುದು ಇದರಲ್ಲಿ ಒಂದು ಉದ್ದೇಶ. ಜೊತೆಗೆ ಹೆಣ್ಣಿನ ಒಡವು ತೊಡವುಗಳ ವಿಷಯದಲ್ಲಿ

ಅವನ ಅಭಿಜ್ಞತೆ ಎಷ್ಟು ಎಂದು ಪರೀಕ್ಷಿಸುವ ಸರಸದ ಹಾಸ್ಯ. ಇವರನ್ನು ಶಯ್ಯಾಗೃಹದಲ್ಲಿ ಬಿಟ್ಟು ಹೋಗುವಾಗ ಒಬ್ಬ ವೃದ್ಧ ಸುಮಂಗಲಿ ನಾಯಕ ನಿಗೆ, "ನಾವೇನೋ ನಿಮ್ಮ ರಾಣಿಗೆ ನಮಗೆ ತಿಳಿದಂತೆ ಒಡವೆ ತೊಡಿಸಿ ದೀವರಿ. ನಿಮಗೆ ಅದೆಷ್ಟು ಚಂದನಸತದೋ ನಮಗೆ ತಿಳೀದು. ಇಲ್ಲಿ ಅಷ್ಟು ಒಡವೆ ಇಕ್ಕೀವಿ. ಯಾವುದು ಸಾಲದೋ ನೋಡಿ ನೀವು ತುಂಬಿ ಕೊಳ್ಳಿರಿ," ಎಂದಳು.

ಉಂಟೊ ಇಲ್ಲವೊ ಎಂಬಂಥ ಮುಸಿನಗೆಯಿಂದ ನಾಯಕ ಒಡವೆ ಗಳ ಕಡೆ ನೋಡಿದನು; ಹೆಂಡತಿಯು ಕಡೆ ನೋಡಿದನು. ವೃದ್ಧೆಯರ ಜೊತೆಗಿದ್ದ ಹರೆಯದ ಹೆಣ್ಣೊಬ್ಬಳು ಶಾಂತವ್ವನಿಗೆ, "ಅರಸರಿಗೆ ಕಷ್ಟ ಆಗೋದು ಬೇಡ ಅಂತ ಯಾವುದಿಲ್ಲ ಅನ್ನೋದನ್ನ ನೀವು ಅವರಿಗೆ ಹೇಳಿ ತಿಳಿಸಬಾರದವ್ವ, ಸನ್ನೇನೂ ಮಾಡಬಾರದು," ಎಂದಳು. ಶಾಂತವ್ವ ನಾಯಕನ ಕಡೆ ನೋಡಿ ನಕ್ಕು ಮುಖ ತಗ್ಗಿಸಿ ನಿಂತಳು. ಇವರಿಬ್ಬರೆ ಆದ ಮೇಲೆ ನಾಯಕ, ತೊಡವು ಯಾವುದೊ ತಿಳೀಲಿಲ್ಲವೆ, ಎಂದು ಹೆಂಡತಿ ಯನ್ನು ಕಾಲಿಂದ ತಲೆಯವರೆಗೆ ನೋಡಿದನು. ದೇವರು ಯಾವುದು ತೋರುತಾರೋ ನೋಡುವ, ಎಂದು ಕಣ್ಣು ಮುಚ್ಚಿಕೊಂಡಂತೆ ನಟಿಸಿ ಒಡವೆಗಳ ಸಂಪುಟದಲ್ಲಿ ಕೈಯಿಕ್ಕಿದನು ಅವನಿಗೆ ಜಡೆಬಿಲ್ಲೆ ಸಿಕ್ಕಿತು. ಇವನಿಗೆ ಬಹಳ ತೊಂದರೆಯಾಗಬಾರದೆಂದೇ ಸುಮಂಗಲಿಯರು ಅದೇ ಕೈಗೆ ಸುಲಭವಾಗಿ ಸಿಕ್ಕುವಂತೆ ಅದನ್ನು ಮೇಲೆ ಇಟ್ಟಿದ್ದರು. ಗಂಡ ಅದನ್ನು ಎತ್ತಿದೊಡನೆ ಶಾಂತವ್ವ ಅದೇ ಎಂದು ಹೇಳಿದಳು. ನಾಯಕ ಅದನ್ನು ನೋಡುವುದಕ್ಕೆ ಒಂದು ಕಡೆಗೆ ಹಿಡಿದು, "ಇದು ಬಹು ಚಂದಾಗಿದೆ ಅಲ್ಲ," ಎಂದನು. ಶಾಂತವ್ವ ಚಿಕ್ಕಂದಿನಿಂದ ದಾದಿಯ ಬಾಯಲ್ಲಿ ಭರತೇಶ ಸಾಂಗತ್ಯವನ್ನು ಕೇಳಿದ್ದ ಹೆಣ್ಣುಮಗು. ಅವಳ ಮನಸ್ಸಿಗೆ ಚೆಲುವ ಎಣಿಕೆ ಸಹಜವಾಗಿ ಬರುವುವು. ಅವಳು, "ಅದರ ಚೆಂದವನ್ನೋದು ಅದೊಂದು ಕಲ್ಲಿನ ಚೆಂದ," ಎಂದಳು.

ನಾಯಕ, "ಬೇರೆ ಚೆಂದ ಯಾವುದು?" ಎಂದನು. "ಒಲಿದು ನೋಡೋ ಕಣ್ಣ ಚೆಂದ, ನೋಡಿ ನಗೊ ಅಂತ ತುಟಿ ಚೆಂದ, ಕೂರಿದ್ದು ಮುಟ್ಟಿದ ಅಂಗುಲಿ ಚಂದ; ಇದರ ಚೆಂದ ಏನಿದ್ದರೂ ಅದರ

ಚೆಂದ ಈ ಕಲ್ಲಹಂಗೆ ಭದ್ರ ಆಗಿರಲಿ ಎನ್ನುವ ಚೆಂದ," ಎಂದಳು. ನಾಯಕ ಏನೂ ಹೇಳಲಿಲ್ಲ. ಅವಳ ಹಿಂಗಡೆಗೆ ಹೋಗಿ ಅದನ್ನು ಹೆರಳ ಮಧ್ಯೆ ಇಟ್ಟು ಸುತ್ತಿದನು. ಆ ಕೆಲಸದಲ್ಲಿ ಅವನು ವಿದಗ್ಧನಲ್ಲ; ಕೂದಲು ಸೆಳೆದು ಶಾಂತವ್ವನಿಗೆ ಚುಳ್ ಎಂದಿತು; ಅವಳು ಅಹ್ ಎಂದಳು. ನಾಯಕ ನಕ್ಕನು; ಅದನ್ನು ಅಷ್ಟಕ್ಕೆ ಬಿಟ್ಟನು. ಶಾಂತವ್ವ ಅದನ್ನು ಸ್ವಲ್ಪ ಬಿಡಿಸಿ ಸರಿಯಾಗಿ ಸುತ್ತಿ ಇಟ್ಟುಕೊಂಡಳು.

ಬಹು ದಿನದ ಮಾತೇನಲ್ಲ; ಆದರೆ ಇದು ಶಾಂತವ್ವನಿಗೆ ಅದೆಷ್ಟೋ ಹಳೆಯ ಸಂಗತಿಯಂತೆ ಕಂಡಿತು. ಕಾಲವನ್ನು ದಿನಗಳಿಂದ ಅಳೆಯುವುದು ಸ್ಥೂಲಮಾನ; ಅದನ್ನು ನಿಜವಾಗಿ ಅಳೆಯುವುದು ಅನುಭವದ ಗಾತ್ರ, ಅನುಭವದ ವೇಗ.

## ೧೧೭

ಪೂಜೆ ಆರಂಭವಾದ ಎರಡು ದಿನದಮೇಲೆ ಅರಮನೆಯಲ್ಲಿ, ನಾಯಕರು ಕಣ್ಮರೆಯಾದವರು ಆಗಲೇ ತೀರಿಕೊಂಡರು ಎಂಬ ಮಾತು ಎದ್ದಿತು. ಅದು ನವಾಬನಿಂದ ಕಾಗದ ಬಂದು ಮಾರೋಲೆ ಹೋದ ದಿನ. ರಾಣಿ ಸ್ನಾನಮಾಡಿದಳು; ಕೆಂಚವ್ವೆಯನ್ನು ಕರೆದು, ನಿಮ್ಮ ಒಡತೀಗೆ ಮೆಲ್ಲನೆ ಹೇಳು, ನಾಯಕರು ಆ ಹೊತ್ತೆ ತೀರಿಕೊಂಡರು ಅಂತ, ಎಂದಳು.

ಕೆಂಚವ್ವೆ ಒಡತಿಯ ಹತ್ತಿರ ಬಂದಳು; ಕಣ್ಣಲ್ಲಿ ನೀರು ಹಾಕುತ್ತ ಸುಮ್ಮನೆ ನಿಂತಳು; ಶಾಂತವ್ವ, ಏನಾಯಿತು, ಎಂದು ಮತ್ತೆ ಮತ್ತೆ ಕೇಳಿದ ಮೇಲೆ ರಾಣಿ ಹೇಳಿದ ಮಾತನ್ನು ಅವಳಿಗೆ ಮುಟ್ಟಿಸಿದಳು.

ನಾಯಕ ಆ ಹೊತ್ತೆ ತೀರಿಕೊಂಡ ಎಂಬ ಮಾತು ಶಾಂತವ್ವನಿಗೆ ಕಳವಳ ಉಂಟುಮಾಡಬೇಕಾಗಿರಲಿಲ್ಲ. ಆ ಹೊತ್ತು ನಾಯಕನಿಂದ ಸುದ್ದಿ ಬಂದಿರಲಿಲ್ಲವೆ, ಸುಖವಾಗಿದೇನೆ, ಚಿಂತೆ ಬೇಡ, ಎಂದು? ಆದರೂ ಇವಳ ಜೀವ ತಳಮಳಗೊಂಡಿತು. ರಾಣಿಗೆ ಹೊಸ ಸುದ್ದಿ ಬಂದಿರಬೇಕು. ಹೊಸ ಸುದ್ದಿ ಎನ್ನುವುದಾದರೆ ಆಹೊತ್ತೆ ಎನ್ನುವುದು ಹೇಗೆ? ಏನುತಾನೆ ಸಂಗತಿಯೊ? ನಾಯಕ ತೀರಿಕೊಂಡದ್ದೇ ನಿಜ

ವಾದರೆ ತಾನು ಇನ್ನು ಇರಬಾರದು. ಜೀವಂತನಾಗಿದ್ದರೆ, ಅವನಿಗೆ ಸುಖವಾಗಲಿ ಎಂದು ತಾನು ಜೀವ ಕೊಟ್ಟರೂ ಒಳಿತೆ. ಅವನಿಗೆ ಕೆಡ ಕಾಯಿತೆನ್ನುವುದು ಸುಳ್ಳಾಗಲಿ. ದೇವರು ಅವನನ್ನು ಕಾಪಾಡಲಿ.

ಕೆಂಚವ್ವೆ ಒಡತಿಯ ಸ್ಥಿತಿಯನ್ನು ನೋಡಿದಳು; ಬಸಿರಿ ಹುಡುಗಿಗೆ ಇದು ಒಂದು ಗತಿಯೇ ಎಂದು ದುಃಖಪಟ್ಟಳು; ವಿಧಿ ತನ್ನ ಒಡತಿಯ ಹಣೆಯಲ್ಲಿ ಇದಕ್ಕಿಂತ ಸ್ವಲ್ಪ ಹೆಚ್ಚಿನ ಸುಖವನ್ನು ಬರೆಯಬಹುದಾಗಿತ್ತು ಎಂದುಕೊಂಡಳು. ತನ್ನ ಸುಖವೇನೂ ಬಹಳವಲ್ಲ; ಆದರೆ ಈ ಒಡತಿ ಗಿಂತ ತಾನೇ ಪುಣ್ಯವಂತೆ ಎನ್ನುವಂತಿತ್ತು!

ಶಾಂತವ್ವ ಅತ್ತೆಯ ಬಳಿ ಹೋಗಿ ತನ್ನ ಮನಸ್ಸಿನ ಸಂದೇಹವನ್ನು ನಿವಾರಿಸಿಕೊಳ್ಳಬಹುದಾಗಿತ್ತು. ಆದರೆ ನಾಯಕ ಜೀವಂತನಾಗಿರ ಬಹುದು ಎಂಬ ತನ್ನ ನಂಬಿಕೆಯ ಲೇಶವನ್ನು ಅಳಿಸಿಕೊಳ್ಳುವುದಕ್ಕೆ ಅವಳ ಮನಸ್ಸು ಒಡಂಬಡಲಿಲ್ಲ. "ನಾನು ಸುಖವಾಗಿದ್ದೇನೆ, ಚಿಂತೆ ಬೇಡ," ಎಂದು ಅವನು ಭರವಸೆ ಹೇಳಿದ್ದನು. ಆ ಭರವಸೆ ಸುಳ್ಳಾಗು ವುದಾದರೆ ತಾನು ಏನೂ ಮಾಡುವಂತಿಲ್ಲ. ಆದರೆ ಅದು ಸುಳ್ಳು ಎಂದು ಸ್ಥಾಪಿಸುವುದಕ್ಕೆ ತಾನು ಪ್ರಯತ್ನಮಾಡಲಾರಳು.

ರಾಣಿ ಸ್ನಾನ ಮಾಡಿದಂತೆ ಶಾಂತವ್ವ ಸ್ನಾನಮಾಡಲಿಲ್ಲ. ಗಂಡ ಚೆನ್ನಾಗಿದಾನೆ, ಅವನಿಗೆ ಕೆಡಕಾಗುವುದಿಲ್ಲ, ಎಂಬ ನಂಬಿಕೆಯಿಂದ ಭೈರವನ ಆರಾಧನೆಗೆ ಮನತೆತ್ತಳು.

## ೧೧೮

ದುರ್ಗದ ಮೇಲಣ ಇವರ ಅರಮನೆಯನ್ನು ಇತ್ತ ಒಂದು ಕಮರಿ, ಅತ್ತ ಒಂದು ಕಮರಿ ಇದ್ದು ಮಧ್ಯೆ ಚಾಚಿಕೊಂಡಿದ್ದ ಒಂದು ಭೂಶಿರದ ಮೇಲೆ ಕಟ್ಟಿತ್ತು. ಅರಮನೆಯ ಹಿಂದೆ ಬೆಟ್ಟದ ಇಳಿಜಾರು. ಮಧ್ಯೆ ಒಂದೂಅರೆಹರಿದಾರಿ ಅಗಲದ ತೊಟ್ಟಿಲು, ಆಚೆ ಮತ್ತೆ ಮಲೆಯ ಏರು. ಎರಡು ಪಕ್ಕದ ಎರಡು ಕಮರಿಗಳ ಆಚೆಯೂ ಮಲೆ ಮುಂದಕ್ಕೆ ಚಾಚಿ ಕಮರಿ ಎರಡೂ ಎರಡು ತೊಟ್ಟಿಲಂತೆ ಕಾಣುವುವು. ಅರಮನೆಯ ಮುಂಭಾಗದಲ್ಲಿ ಬೆಟ್ಟದ ತಲೆಯ ಮೈದಾನ. ಊರನ್ನು ಅದರ ಮೇಲೆ

ಕಟ್ಟಿದ್ದಿತು. ಅರಮನೆಯಲ್ಲಿ ಮೂರು ತೊಟ್ಟಿ; ಎರಡು ಕೈಸಾಲೆ ಇದ್ದವು. ಎಡ ತೊಟ್ಟಿಯಲ್ಲಿ ರಾಣಿ ಇದ್ದಳು. ಬಲ ತೊಟ್ಟಿಯಲ್ಲಿ ಶಾಂತವ್ವ ಮಧ್ಯದ ತೊಟ್ಟಿಯಲ್ಲಿ, ಬೇರೆಯಾರೂ ಇಲ್ಲದ್ದರಿಂದ ಪರಿವಾರ ಇರುತ್ತಿತ್ತು. ಎರಡು ಕೈಸಾಲೆಯಲ್ಲಿ ಆಯಾ ಒಡತಿಯರ ಊಳಿಗದ ಮೂರು ಜನ ಆರು ಜನ ಇರುತ್ತಿದ್ದರು. ಪಕ್ಕದ ಎರಡು ತೊಟ್ಟಿಯಲ್ಲಿಯೂ ಮಧ್ಯದ ಒಂದು ಬಾಗಿಲು ಆದರ ಪಕ್ಕದ ಕಮರಿಯ ಕಡೆಗೆ ತೆರೆಯುವುದು. ಶಾಂತವ್ವ ತನ್ನ ತೊಟ್ಟಿಯಲ್ಲಿ ಕುಳಿತು ಕಮರಿಯ ಬಾಗಿಲನ್ನು ತೆಗೆದು ನೋಡಿದರೆ ದೂರದ ಮಲೆಯ ಸಾಲು, ಅದರ ಇಳಿಜಾರು, ಆ ಇಳಿಜಾರಿನಲ್ಲಿ ಅಲ್ಲಲ್ಲಿರುವ ಮೂರು ನಾಲ್ಕು ಮನೆಗಳ ಹಟ್ಟಿಗಳು, ಇವು ಕಾಣುವುವು ತಗ್ಗಿನಲ್ಲಿ ಒಂದು ಸ್ವಲ್ಪ ದೊಡ್ಡಹಳ್ಳಿ: ಅದನ್ನು ದುರ್ಗದ ಹಳ್ಳಿ ಎನ್ನುವರು. ಭೈರವ ದೇವಸ್ಥಾನ ಈ ಹಳ್ಳಿಯ ಎಲ್ಲೆಯಲ್ಲಿತ್ತು. ಹಗಲಲ್ಲಿ ಇವಳಿಗೆ ಅದರ ಗೋಡೆ ಗೋಪುರ ಕಾಣುವುವು. ರಾತ್ರಿ ದೀಪ ದೊಡ್ಡದಾಗಿದ್ದವೇಳೆ ಅದರ ಮಿನುಗು ಕಾಣುವುದು. ಕಮರಿಯ ಪಕ್ಕದ ಈ ಬಾಗಿಲನ್ನು ಸಾಮಾನ್ಯವಾಗಿ ಮುಚ್ಚಿರುವರು. ಯಾರಾದರೂ ಮರೆತು ಅತ್ತ ನಡೆದರೆ ತಪ್ಪು. ಅನುತಪ್ಪಿದರೆ ಇನ್ನೂರಡಿ ಕೆಳಕ್ಕೆ ಬೀಳಬೇಕು: ಜೀವದ ಆಶೆ ಇಲ್ಲ.

ಪೂರ್ವದ ಇಲ್ಲಿಯ ರಾಜಮನೆತನದ ಹೆಣ್ಣೊಬ್ಬಳು, ಶತ್ರು ಸೈನ್ಯವೊಂದು ದುರ್ಗವನ್ನೇರಿ ಅರಸನನ್ನು ಸೆರೆಹಿಡಿದು ಅವಳ ಮಾನಕೆಡಿಸಲು ಬಂದಾಗ, ಈ ಬಾಗಿಲಿನಿಂದ ಅಥವಾ ಇಂಥ ಒಂದು ಬಾಗಿಲಿಂದ ಹಾರಿ ಕಮರಿಯಲ್ಲಿ ಬಿದ್ದು ಪ್ರಾಣಬಿಟ್ಟಳೆಂದು ಒಂದು ಕಥೆ. ಶಾಂತವ್ವ ಇದನ್ನು ಕೇಳಿದಳು. ಆ ತಾಯ ಕೆಚ್ಚಿಗೆ ತುಂಬ ಮೆಚ್ಚಿಕೊಂಡಳು.

ಸಾಧ್ಯವಾದಷ್ಟು ಹೊತ್ತು ಕಣ್ಣು ದೇವಾಲಯದ ಕಡೆ ಹರಿಯುತ್ತಿರಲೆಂದು ಶಾಂತವ್ವ ಈ ಬಾಗಿಲನ್ನು ತೆರೆಯಿಸಿದಳು. ಕುಳಿತಿರಲಿ, ನಿಂತಿರಲಿ, ಆ ಕಡೆ ಒಮ್ಮೆ ನೋಡುತ್ತ ಭೈರವಾ ನೀನೇ ಗತಿ ಎಂದು, ಭೈರವಾ ನೀ ಕಾಪಾಡು ಎಂದು, ಪ್ರಾರ್ಥನೆಯನ್ನುಸಿರುವಳು.

ಸುದ್ದಿ ಮತ್ತೊಂದು ಹೊರಟಿತು. ಬೂದಿಬಸವಸ್ವಾಮಿ ಎಂದು ಜಾಗರದ ಕಡೆ ಸುತ್ತುತ್ತಿದ್ದ ಮನುಷ್ಯ ತಾನೇ ನಾಯಕನೆಂದು ಹೇಳ

ಕೊಂಡು ಹೈದರನ ಹತ್ತಿರ ಹೋಗಿದ್ದಾನಂತೆ! ಊರೆಲ್ಲ ಈ ಮಾತನ್ನು ನಂಬಿತು. ಶಾಂತವ್ವನಿಗೆ ಏನೆಂದುಕೊಳ್ಳಲೂ ತೋರಲಿಲ್ಲ. ಏನು, ನಾಯಕನೆ ಬೂದಿಬಸವ ಎಂದು ವೇಷ ಮರಸಿಕೊಂಡು ಸುತ್ತಾಡಿದ್ದನೊ? ಹಾಗಾದರೆ ಆಗ ಅವನನ್ನು ನೋಡಿದವರು ಅವನನ್ನು ನಾಯಕನಲ್ಲ ಎಂದೇ ಸಾಧಿಸಬಹುದು. ಇನ್ನು ನಾಯಕ ತಾನು ನಾಯಕ ಎನ್ನುವುದಕ್ಕೆ ಸಾಕ್ಷ್ಯಕೊಡಬೇಕು. ಶಾಂತವ್ವನಿಗೆ ತನ್ನ ಗಂಡ ಆಡುತ್ತಿದ್ದ ಈ ಕಣ್ಣಾಮುಚ್ಚೆ ಆಟ ಸ್ವಲ್ಪ ಅತಿಯಾಯಿತು ಎನ್ನಿಸಿತು.

ಅತಿಯೇ ಇರಬಹುದು; ತಾನು ಏನು ಮಾಡುವಂತಿದ್ದಿತು? ತಾನೇ ಅಲ್ಲ; ನಾಯಕನೇ ಆಗಲಿ; ಏನು ಮಾಡುವಂತಿದ್ದನು? ಯಾರೂ ತಮ್ಮ ಸ್ವಭಾವ ಸೆಳೆದತ್ತ ಹೋಗಬೇಕು; ಅವರಿಗೆ ಕಟ್ಟುಬಿದ್ದವರು ಅವರು ಹೋದತ್ತ ಹೋಗಬೇಕು. ಅವರ ಸ್ವಭಾವ; ಇವರ ಅದೃಷ್ಟ; ಬೇರೆ ದಾರಿಯೇನಿದೆ?

ಶಾಂತವ್ವ ಗಂಡನನ್ನು ದೂರಿದಳೆಂದಲ್ಲ: ಅವಳ ಸ್ವಭಾವದಲ್ಲಿ ಇದಕ್ಕೆ ಅವಕಾಶವಿರಲಿಲ್ಲ. ಬಹಳವೆಂದರೆ ಅವಳು ಗಂಡನ ವಿಷಯದಲ್ಲಿ ಮರುಕಗೊಂಡಳು; ಈ ಸ್ವಭಾವದ ಫಲವಾಗಿ ಅವನು ಮತ್ತಷ್ಟು ಕಷ್ಟಕ್ಕೆ ಸಿಕ್ಕುವುದು ಬೇಡ ಎಂದು ದೇವರನ್ನು ಪ್ರಾರ್ಥಿಸಿದಳು.

## ೧೧೯

ನಾಯಕ ತೀರಿಕೊಂಡನೆಂದು ಶಾಂತವ್ವ ಗೋಳಾಡದೆ ಇದ್ದದ್ದು ಅವಳ ಅತ್ತೆಗೆ ಒಂದು ಸೋಜಿಗವಾಗಿ ಕಂಡಿತು. ಇದು ಏಕೆ ಎಂದು ಅವಳು ಬಹಳ ಯೋಚಿಸಲಿಲ್ಲ. ಯೋಚನೆ ಮಾಡದೆಯೇ ಕಾರಣ ತಿಳಿಯುವ ಸಂದರ್ಭದಲ್ಲಿ ಯೋಚನೆ ಏಕೆ ಬೇಕು? ಸೊಸೆ ಇನ್ನೂ ಹುಡುಗಿ, ಗಂಡನೆಂದರೆ ಅಷ್ಟೇನೂ ಪ್ರೇಮ ಬೆಳೆದಿರಲಿಲ್ಲ, ಎಂದು ಅವಳ ಕಲ್ಪನೆ. ಮೇಲಾಗಿ ಅವಳು ಸೊಸೆಯ ವಿಷಯದಲ್ಲಿ ತನ್ನ ಬೇಸರವನ್ನು ಇತರರಲ್ಲಿ ಹೇಳಿಕೊಳ್ಳುವುದಕ್ಕೆ ಮೊದಲು ಮಾಡಿದಳು. ಈ ತರುಣದಲ್ಲಿ ಒಂದು ದಿನ ಅವಳು ಸಣ್ಣವ್ವನೊಂದಿಗೆ, "ಸೊಸೆ ಬಂದ ಹೊತ್ತು ಅಥವಾ

ತಂದ ದುರ್ಭಾಗ್ಯ ನಾಯಕರ ಮನೆಯನ್ನು ಕೆಡಿಸಿತು. ಇವಳು ಬಂದ ವರ್ಷವೂ ಆರಿಯಲ್ಲಿ ಹಿರಿಯ ನಾಯಕ ತೀರಿಕೊಂಡರು; ಆದಾದ ಎರಡು ವರ್ಷದಲ್ಲಿ ಅವರ ಮಗ ತೀರಿಕೊಂಡಿದ್ದನು; ಹೇಗೋ ಮನೆಯಾದರೂ ಇರುತ್ತದೆಯೇ ಎಂದರೆ ಶತ್ರು ಬಂದು ರಾಜಪದವಿಗೇ ಊನತಂದಿದ್ದನು. ಬಂದವರ ಜಾತಕ ಇಂಥಹದಾದರೆ ನಮಗೆ ಈ ಪಾಡು ಹೇಗೆ ತಪ್ಪೀತು?" ಎಂದಳು.

ಕೆಂಚವ್ವೆ ಈ ಮಾತನ್ನು ಕೇಳಿದಳು: ಅವಳ ಕಿವಿಗೆ ಬೀಳಲಿ ಎಂದೇ ರಾಣಿ ಈ ಮಾತನ್ನು ಆಡಿರಬಹುದು. ಒಡತಿಯನ್ನು ಕುರಿತು ಇಂಥ ಮಾತನ್ನು ಹೇಳಿದಳೇ ಎಂದು ಕೆಂಚವ್ವೆಗೆ ರಾಣಿಯ ಮೇಲೆ ಕೋಪ; ಅವಳು ಸಿಡಿಮಿಡಿಗೊಂಡು ತಮ್ಮ ತೊಟ್ಟಿಯೊಳಕ್ಕೆ ಬಂದಳು. ಶಾಂತವ್ವ ಅವಳನ್ನು ನೋಡಿ, "ಏನೇ ಕೆಂಚು ತುಂಬ ಮುನಿಸಾಗಿದೀಯಲ್ಲ," ಎಂದಳು.

ಕೆಂಚವ್ವೆ, "ಏನೋ ಬಿಡೀ ಅವ್ವ, ಬುದ್ಧಿಗೇಡಿ ಮಾತು," ಎಂದಳು.

"ಬುದ್ಧಿಗೇಡಿ ಎಂದಮೇಲೆ ಮುನಿಸಿಕೊಳ್ಳೋದು ಬಾರದು."

"ಊಂ ಇಂಥಾ ಮಾತು ಕೇಳಿದರೆ ಮುನಿಯದೆ ಹೆಂಗೆ ಇರತದೆ? ಬಂದ ಕಷ್ಟ ಎಲ್ಲ ನೀವು ತಂದು ತುಂಬಿದ್ದಂತೆ." ಹೀಗೆಂದು ಕೆಂಚವ್ವೆ ರಾಣಿ ಹೇಳಿದ ಮಾತನ್ನು ಒಡತಿಗೆ ತಿಳಿಸಿದಳು.

ಶಾಂತವ್ವನಿಗೆ ಹೇಳಲಾಗದ ದುಃಖವಾಯಿತು. ತನ್ನನ್ನು ಅತ್ತೆ ಹೀಗೆಂದಳೆಂದು ಅವಳಿಗೆ ಕೋಪ ಬರಲಿಲ್ಲ. ತನ್ನಿಂದ ಅರಮನೆ ಕೇಡಿಗೆ ಈಡಾಯಿತೆನ್ನುವುದು ನಿಜವಿರಬೇಕು ಎಂದು ಅವಳಿಗೆ ತೋರಿತು. "ಅಯ್ಯೋ ನಾನು ಏಕೆ ಈ ಮನೆಯನ್ನು ಹೊಕ್ಕೆನೊ? ಹೊಗದಿದ್ದರೆ ಈ ಅನರ್ಥಗಳು ಆಗುತ್ತಿರಲಿಲ್ಲವೇನೊ? ಪಾಯಸದಲ್ಲಿ ಬಿದ್ದ ಉಪ್ಪಿನಂತೆ ನಾನು ಹೊಕ್ಕ ಮನೆಗೆ ಅವಲಕ್ಷಣವಾದೆ," ಎಂದು ಅವಳು ಪರಿತಪಿಸಿದಳು.

ಆ ರಾತ್ರಿ ಶಾಂತವ್ವನಿಗೆ ನಿದ್ದೆ ಬರಲೇ ಇಲ್ಲ. ಏನೋ ಮಂಪರ. ಆದರಲ್ಲಿ ಕೆಟ್ಟಕನಸುಗಳು. ಬೆಳಗಾಗುವ ಹೊತ್ತಿಗೆ ಅವಳಿಗೆ, ಗಂಡ ತೀರಿಕೊಂಡಿರುವುದೇ ನಿಜ, ಇನ್ನು ತಾನಿದ್ದು ಸುಖವಿಲ್ಲ, ಫಲವಿಲ್ಲ, ಎನ್ನಿಸಿತು.

ಶಾಂತವ್ವ ಸ್ವಭಾವದಲ್ಲಿ ಗಂಡ ತೀರಿಕೊಂಡನೆಂದರೆ ಸಹಗಮನ ಮಾಡುವ ಹೆಣ್ಣು. ಕಾಠಿಣ್ಯದಿಂದಲ್ಲ; ನಿಶ್ಚಯದಿಂದ. ತನ್ನ ಗಂಡನ ಮೃತದೇಹ ಈಗ ಹತ್ತಿರ ಇದ್ದಿದ್ದರೆ ಅವಳು ಸರಳವಾಗಿ ಸಹಗಮನ ಮಾಡುತ್ತಿದ್ದಳು. ಈಗ ಆ ಪುಣ್ಯ ಇಲ್ಲ. ಏನು ಮಾಡುವುದು?

ಸ್ವಲ್ಪ ಹೊತ್ತಿನಲ್ಲಿ ದೇವಾಲಯದ ಅರ್ಚಕ ಬಂದನು. ಶಾಂತವ್ವ ನನ್ನು ಒಂದು ಪಕ್ಕಕ್ಕೆ ಕರೆದು, "ಕಾಪಾಲಿಕರು ಈ ಪೂಜೆಯ ವಿಧಿಯ ನ್ನೆಲ್ಲ ನೋಡಿದ್ದರಲ್ಲಿ ಹದಿನೆಂಟನೆಯ ದಿನ ಒಬ್ಬ ಗರ್ಭಿಣಿ ಸ್ತ್ರೀಯನ್ನು ಭೈರವನಿಗೆ ಬಲಿಕೊಡಬೇಕೆಂದಿದೆಯೆಂದು ತಿಳಿಸಿದರು. ಇದನ್ನು ಮೊದಲೇ ನೋಡಿದ್ದರೆ ಹತ್ತು ಕಡೆ ನೋಡಿ ಏರ್ಪಾಡು ಮಾಡಬಹು ದಾಗಿದ್ದಿತು. ಗರ್ಭಿಣಿಸ್ತ್ರೀ ದೊರೆಯದಿದ್ದರೆ ಗಬ್ಬವಾದ ಒಂದು ಆಡನ್ನು ಪ್ರನಿಧಿ ಬಲಿಯಾಗಿ ಕೊಡಬಹುದು. ಇನ್ನೂ ನಾಲ್ಕುದಿನ ಇದೆ. ಅಷ್ಟರಲ್ಲಿ ಏನು ಸಾಧ್ಯವಾಗುತ್ತದೆ ನೋಡುತ್ತೇನೆ. ಇದಕ್ಕೆ ಸ್ವಲ್ಪ ಹೆಚ್ಚು ಹಣ ಬೇಕಾದೀತು," ಎಂದನು.

ಅರ್ಚಕ ಗರ್ಭಿಣಿಸ್ತ್ರೀಯ ಮಾತನ್ನು ಎತ್ತಿದ ಒಡನೆ ಶಾಂತವ್ವನಿಗೆ ತಟ್ಟನೆ ಇವನು ತನ್ನನ್ನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುತ್ತಿದಾನೊ ಎನ್ನಿಸಿತು. ಮಾತು ಮುಂದರಿದಂತೆ, ಈ ಮನುಷ್ಯನಿಗೆ ಇವಳು ಗರ್ಭಿಣಿ ಯೆನ್ನುವ ಅರಿವೇ ಇಲ್ಲ ಎನ್ನುವುದು ಸ್ಪಷ್ಟವಾಯಿತು. ಅವನು ಇಷ್ಟನ್ನೂ ಹೇಳಿದ್ದು ಸೇವಾಕರ್ತಳಿಗೆ ಸೇವೆಯ ವಿವರವನ್ನು ತಿಳಿಸಿ ಖರ್ಚಿಗೆ ಹಣ ಕೇಳುವ ಉದ್ದೇಶದಿಂದ ಅಷ್ಟೆ. ಶಾಂತವ್ವ ಇವನ ಮಾತನ್ನೆಲ್ಲ ಕೇಳಿ, "ನಮಗೆ ಇದು ಮೊದಲು ತಿಳಿಯಬೇಕಾಗಿತ್ತು, ಅರ್ಚಕರೆ. ನಮ್ಮಲ್ಲಿ ಬಲಿ ಕೊಡುವ ಪದ್ಧತಿ ಇಲ್ಲ," ಎಂದಳು.

ಅರ್ಚಕ: ನೀವು ಬಲಿ ಕೊಡಬೇಕಾಗಿಲ್ಲ. ನೀವು ಸೇವೆ ಎಂತ ಮಾಡಿಸುತೀರಿ. ಆದರ ಮಾತ ನಾವು ನೋಡಿಕೊಳ್ಳುತ್ತೇವೆ.

"ಒಳ್ಳೆಯದು; ಈ ಮಾತನ್ನು ಯಾರಿಗೂ ಹೇಳಬೇಡಿ. ನಾಳೆ ನೀವು ಬಂದಾಗ ಇದರ ವಿಷಯ ಹೇಗೆ ಮಾಡುವುದು ತಿಳಿಸುತೇವೆ."

"ಅಪ್ಪಣೆ ಅವ್ವಾಜಿ."

ನಾಳೆ ಬನ್ನಿ ಎನ್ನುವ ವೇಳೆಗೇ ಶಾಂತವ್ವ ಒಂದು ನಿರ್ಧಾರದ ಹತ್ತಿರ ಬಂದಿದ್ದಳು; ಅರ್ಚಕ ಹೋದಮೇಲೆ ಒಂದು ಗಳಿಗೆಯಲ್ಲಿ ಆ ನಿರ್ಧಾರವನ್ನು ನಿಶ್ಶಂಕೆಯಿಂದ ಮುಟ್ಟಿದಳು; ನಡೆಸುವುದಾಗಿ ನಿಶ್ಚಯಿಸಿದಳು.

ಎಲ್ಲ ವಿವರವೂ ತನ್ನನ್ನು ಆ ನಿರ್ಧಾರದ ಕಡೆಗೆ ದೂಡುವಂತೆ ಇವಳಿಗೆ ಕಂಡಿತು. ಗಂಡ ತೀರಿಕೊಂಡಿದ್ದನು; ಇವಳಿಗೆ ಸಹಗಮನ ಮಾಡಬೇಕೆಂದು ಆಸೆ ಆಗುತ್ತಿದ್ದಿತು; ಪೂಜೆಯ ಕೊನೆಯ ದಿನ ತಾನು ದೇವರಿಗೆ ತನ್ನ ಯಜಮಾನನಿಗೆ ಅತ್ಯಂತ ಪ್ರಿಯವಾದ ಒಂದು ವಸ್ತುವನ್ನು ಅರ್ಪಣ ಮಾಡಬೇಕಾದದಿದ್ದಿತು; ಕಲ್ಪದಲ್ಲಿ ಆ ದಿನ ಒಂದು ಗರ್ಭಿಣಿ ಜೀವ ಬಲಿಯಾಗಬೇಕೆಂದಿದ್ದಿತು. ತಂದೆಯ ಸಂಪ್ರದಾಯ ಜೈನ; ಗಂಡನ ಸಂಪ್ರದಾಯ ಶೈವ; ತಾನು ದೇವಂಗೆ ಬಲಿಯನ್ನು ಕೊಡುವುದು ಸಾಧ್ಯವಲ್ಲ; ಬಲಿ ಕೊಡುವುದು ಸಾಧ್ಯವಲ್ಲದಿದ್ದರೂ ಬಲಿ ಆಗುವುದಕ್ಕೆ ಅಡ್ಡಿ ಇಲ್ಲ; ದೊರೆಗೆ ಒಳಿತಾಗಲೆಂದು ದಿನವೂ ಜನ ಬಲಿಯಾಗುತ್ತಿದ್ದರು; ಇದರ ಮೇಲೆ ಈ ಎಲ್ಲ ಅನಿಷ್ಟಕ್ಕೂ ತಾನೇ ಕಾರಣ. ಇದರಿಂದೆಲ್ಲ ಸಿದ್ಧಿಸಿದ ನಿರ್ಧಾರ ಪೂಜೆಯ ಕೊನೆಯ ದಿನ ತಾನು ದೇವರಿಗೆ ಬಲಿಯಾಗಬೇಕೆನ್ನುವುದು.

ಈ ನಿಶ್ಚಯವನ್ನು ಮುಟ್ಟಿ ಶಾಂತವ್ವ ಅನೂಹ್ಯವಾದ ಒಂದು ಆನಂದವನ್ನು ಅನುಭವಿಸಿದಳು; ಸಾಲಗಾರನಾಗಿ ತೊಳಲಿದವನು ಅದನ್ನು ತೀರಿಸುವ ಶಕ್ತಿಬಂದಾಗ ಪಡೆಯುವ ಸಮಾಧಾನವನ್ನು ಪಡೆದಳು. ಅವಳಿಗೆ ನಾಯಕ ಸ್ವರ್ಗಂಗೆಯ ಆಚೆಯ ತೀರದಲ್ಲಿ ನಿಂತು ಈ ತೀರದಲ್ಲಿ ನಿಂತಿರುವ ತನ್ನನ್ನು ಕರೆದು ಕೈಚಾಚಿರುವಂತೆ ಕಂಡಿತು. ಅವಳು ಆ ಕರೆಯುವ ಮೂರ್ತಿಗೆ, "ಬಂದೆ," ಎಂದಳು; ಹೋಗಿ ಅವನನ್ನು ಸೇರಿಯೇನೇ ಎಂದು ತವಕಗೊಂಡಳು.

ಅರ್ಚಕ ಮರು ದಿನ ಬಂದಾಗ ಅವಳು, "ಹದಿನೆಂಟನೆಯ ದಿನದ ಬಲಿಗೆ ನಾವೇ ಏರ್ಪಾಡು ಮಾಡುತ್ತೇವೆ. ಸರಿಯಾದ ಹೊತ್ತಿಗೆ ದೇವಾಲಯದ ಬಳಿಗೆ ಆ ಹೆಂಗಸು ಬರುತ್ತಾಳೆ. ನೀವು ಉಳಿದ ಎಲ್ಲ ಏರ್ಪಾಡನ್ನೂ ಮಾಡಿಕೊಳ್ಳಿ," ಎಂದಳು. ಅರ್ಚಕ ಹೊರಟು ಹೋದನು.

ಶಾಂತವ್ವ ಈ ನಿಶ್ಚಯದ ವಿಷಯವನ್ನು ಯಾರಿಗೂ ತಿಳಿಸಲಿಲ್ಲ ವೆನ್ನುವುದನ್ನು ಹೇಳ ಕೆಲಸವಿಲ್ಲ. ಹೇಳಿದರೆ ಕೆಂಚವ್ವೆಗೆ ಹೇಳಬೇಕು : ಹೇಳುವುದು ತೊಡಕು; ಅವಳು ಅಡ್ಡಿ ಮಾಡುತ್ತಾಳೆ; ಬೇರೆಯವರಿಗೆ ಹೇಳಿ ಕೆಲಸವನ್ನು ಕೆಡಿಸಿದರೂ ಕೆಡಿಸಬಹುದು. ಇಷ್ಟೆಲ್ಲಯೇತಕ್ಕೆ? ಸರಿಯೆಂದು ತನಗೆ ಇದು ಕಂಡಿದೆ; ಮಾಡುವ ಮನಸ್ಸು ಇದೆ. ಇಂಥ ಮಾತಿನಲ್ಲಿ ಚರ್ಚೆಗೆ ಅವಕಾಶ ಕೊಡಬಾರದು.

ಇದಕ್ಕೆ ತಕ್ಕಂತೆ ಕೆಂಚವ್ವೆಗೆ ಆ ದಿನ ಜ್ವರ ಬಂದಿತು. ಅವಳು ಯಾವ ಮಾತನ್ನೂ ಕೇಳುವಂತಿರಲಿಲ್ಲ.

ಬಲಿಯ ದಿನ ಬಂದಿತು. ಕೆಂಚವ್ವೆ ಆ ದಿನವೂ ಜ್ವರದಲ್ಲಿ ಮಲ ಗಿದ್ದಳು. ಶಾಂತವ್ವ ತಾನು ದೇವಸ್ಥಾನಕ್ಕೆ ಪೂಜೆಗೆ ಹೋಗುತ್ತೇನೆಂದು ಹೇಳಿ ತನ್ನ ಊಳಿಗದ ಇನ್ನೊಬ್ಬ ಹೆಂಗಸನ್ನು ಒಬ್ಬ ಗಂಡಾಳನ್ನು ಕರೆದು ಕೊಂಡು ದೇವಾಲಯವನ್ನು ಕುರಿತು ಹೊರಟಳು.

## ೧೨೦

ದೇವಾಲಯ ಇವಳು ಎಣಿಸಿದ್ದಷ್ಟು ಹತ್ತಿರ ಇರಲಿಲ್ಲ. ಅದನ್ನು ಸೇರ ಬೇಕಾದರೆ ನಾಲ್ಕು ಗಳಿಗೆಗೆ ಮೇಲೆ ನಡೆಯಬೇಕಾಯಿತು. ಶಾಂತವ್ವ ಮೆಲ್ಲನೆ ನಡೆದಳು; ದಾರಿಯಲ್ಲಿ ಮೂರುಕಡೆ ಕುಳಿತು ವಿಶ್ರಮಿಸಿಕೊಂಡಳು. ಆಲಯ ಇನ್ನು ನೂರು ಗಜ ಇದೆ ಎನ್ನುವಾಗ ಗಂಡಾಳನ್ನು ಅಲ್ಲೆ ನಿಲ್ಲಿಸಿದಳು. ಹತ್ತು ಹೆಜ್ಜೆ ನಡೆದು ಹೆಣ್ಣಾಳನ್ನು ನಿಲ್ಲಿಸಿದಳು. ಅರಮನೆ ಯಿಂದ ಬರೆದು ತಂದಿದ್ದ ಒಂದು ಕಾಗದವನ್ನು ಅವಳ ಕೈಗೆ ಕೊಟ್ಟು ಇದನ್ನಿರಿಸಿಕೊಂಡಿರು ಎಂದಳು. ತಾನೊಬ್ಬಳೆ ಮುಖಕ್ಕೆ ಪರದೆಯನ್ನು ಹಾಕಿಕೊಂಡು ಮುಂದೆ ಹೋಗಿ ಆಲಯವನ್ನು ಸೇರಿದಳು.

ಅರ್ಚಕ ಬಾಗಿಲಲ್ಲಿ ನಿಂತಿದ್ದನು. ರಾಣಿ ಎಂಥ ದಕ್ಷಮಹಿಳೆ, ಹೇಳಿದ ಹೊತ್ತಿಗೆ ಸರಿಯಾಗಿ ಆ ಹೆಂಗಸನ್ನು ಕಳುಹಿಸಿದಾಳೆ, ಎಂದು ಕೊಂಡನು.

ಶಾಂತವ್ವ ಬಾಯಿ ತೆರೆಯಲಿಲ್ಲ. ಅರ್ಚಕನೊಂದಿಗೆ ಒಳಕ್ಕೆ ಹೋದಳು. ಅರ್ಚಕ ಬಾಗಿಲಿಗೆ ತೆರೆಯನ್ನು ಅಡ್ಡಹಾಕಿದನು.

ಕಾಪಾಲಿಕ ದೇವರ ಮುಂದೆ ಕುಳಿತು ಎದುರಲ್ಲಿ ಕುಂಕುಮದ ರಾಶಿಯನ್ನು ಹಾಕಿಕೊಂಡು ನಾಮಾವಳಿಯನ್ನು ಹೇಳಿ ಮೂರ್ತಿಗೆ ಅರ್ಚನೆ ಮಾಡುತ್ತಿದ್ದನು. ಈ ಕೆಲಸದ ಮಧ್ಯೆ ಹೊರಗೆ ತೆರೆಬಿದ್ದಾಗ ಬಲಿ ಬಂದಳೆಂದು ತಿಳಿದುಕೊಂಡನು.

ಅರ್ಚನೆ ಮುಗಿಯಿತು. ಮತ್ತಷ್ಟು ಮಂತ್ರ ಹೇಳಿ ಆಯಿತು. ಕಾಪಾಲಿ ಬಲಿಯ ಹತ್ತಿರ ಬಂದು ಮಂತ್ರಗಳನ್ನು ಹೇಳಿ ಅವಳಿಗೆ ಪೂಜೆ ಮಾಡಿದನು; ಆಮೇಲೆ ದೇವರ ಮುಂದಿದ್ದ ಒಂದು ಹಳದಿಯ ಸೀರೆಯನ್ನು ಇವಳ ಎದುರಿಗಿಟ್ಟು, ಇದನ್ನು ಉಟ್ಟುಕೊಳ್ಳಬೇಕು, ನಾವು ಹೊರಗಿರುತ್ತೇವೆ, ಎಂದನು; ಅವನು ಅರ್ಚಕ ಇಬ್ಬರೂ ಹೊರಗೆ ಹೋಗಿ ನಿಂತರು.

ಶಾಂತವ್ವ ಆ ಸೀರೆಯನ್ನುಟ್ಟುಕೊಂಡಳು; ಸೆರಗಿನ ಕೊನೆಯನ್ನು ಮುಖಕ್ಕೆ ಮರೆಯಾಗಿ ಸೆಳೆದುಕೊಂಡಳು. ನೆಲವನ್ನು ತಟ್ಟಿ ಶಬ್ದ ಮಾಡಿ ತಾನು ಸಿದ್ಧಳಾಗಿರುವುದನ್ನು ತಿಳಿಸಿದಳು.

ಕಾಪಾಲಿ ಅರ್ಚಕ ಇಬ್ಬರೂ ಒಳಕ್ಕೆ ಬಂದರು. ಕಾಪಾಲಿ, "ನಿಮಗೆ ಆಯಾಸ ಆಗಬಾರದೆಂದು ಎಲ್ಲ ಕರ್ಮವನ್ನೂ ಮೊದಲೇ ಮುಗಿಸಿದೇವೆ. ಉಳಿದಿರುವುದೆಲ್ಲ ಇನ್ನು ಐದು ನಿಮಿಷದ ಕೆಲಸ. ನೀವು ನಿಮ್ಮ ಇಷ್ಟದಿಂದ ಜನ್ಮ ಸಾರ್ಥಕವಾಗುವ ಸಲುವಾಗಿ ಜೀವವನ್ನು ಭಗವಂತನಿಗೆ ಅರ್ಪಣೆ ಮಾಡಲು ಬಂದಿದೇನೆ ಎಂದು ಹೇಳಬೇಕು. ಇದರಲ್ಲಿ ವಂಚನೆ ಕೂಡದು. ಹಾಗೆ ವಂಚನೆ ಇದ್ದಲ್ಲಿ ನಿಮಗೆ ದುರ್ಗತಿ; ನಿಮ್ಮನ್ನು ಅರ್ಪಿಸುತ್ತಿರುವರಿಗೆ ಹಾನಿ, ತಿಳಿಯಿತೊ," ಎಂದನು.

ಬಲಿ, "ತಿಳಿಯಿತು," ಎಂದು ತಲೆ ಆಡಿಸಿದಳು.

"ಆದ್ದರಿಂದ ನೀವು ನಿಮ್ಮ ಇಷ್ಟದಿಂದ ನಿಮ್ಮ ಯಜಮಾನರ ಮಂಗಳಕ್ಕಾಗಿ ಜೀವವನ್ನು ಭಗವಂತನಿಗೆ ಅರ್ಪಿಸುತ್ತಿದ್ದೀರಿ?"

ಬಲಿ ಮತ್ತೆ, "ಹೌದು," ಎಂದು ತಲೆ ಆಡಿಸಿದಳು.

ಕಾಪಾಲಿ ಇವಳನ್ನು, ಇಲ್ಲಿ ಬನ್ನಿ, ಎಂದು ಕರೆದು ಮುಂದೆ ನಡೆದನು. ದೇವರ ಪಕ್ಕದಲ್ಲಿ ಮೂರ್ತಿಯ ಸೊಂಟದ ಎತ್ತರಕ್ಕೆ ಇದ್ದ ಒಂದು ನೆಟ್ಟಕಲ್ಲ ಮೇಲೆ ಕೊರಳನ್ನಿಟ್ಟು ಬಾಗಿನಿಲ್ಲ ಹೇಳಿ, "ಭೈರವಾ, ಭೈರವಾ, ಎಂದು ಭಗನ್ನಾಮ ಪಠನ ಮಾಡುತ್ತಿರಿ," ಎಂದನು.

ಶಾಂತವ್ವ ಹಾಗೆ ಬಾಗಿ ನಾಮವನ್ನು ಬಾಯಲ್ಲಿ ನುಡಿಯುತ್ತ ನಿಂತಳು.

ಹತ್ತು ಹದಿನೈದು ಸಲ ಇವಳು ನಾಮವನ್ನು ನುಡಿದಿರಬೇಕು. ಕಾಪಾಲಿ ಏನೋ ಮಂತ್ರವನ್ನು ಹೇಳುತ್ತ ಪಕ್ಕದಲ್ಲಿ ನಿಂತಿದ್ದವನು ಇವಳ ಜಡೆಯನ್ನು ಒಂದು ಪಕ್ಕಕ್ಕೆ ಸರಿಸಿದನು.

ಶಾಂತವ್ವನ ಮೈ ಅವಳ ಒಪ್ಪಿಗೆಯನ್ನು ಕೇಳದೆ ಜುಮ್ಮೆಂದಿತು. ಅವಳಿಗೇ ಕಾಣದ ಏನೇನೊ ಯೋಚನೆ ಮನಸ್ಸಿನಲ್ಲಿ ಹಾಯ್ದು ಅದೆಲ್ಲೊ ಇದೇನೆ ಎಂಬಂತೆ ಭಾಸವಾಯಿತು. ಕೊರಳಮೇಲೆ ಕತ್ತಿಬೀಳುವುದೆಂದು ಆಕ್ಷಣದ ಶತಾಂಶ ಶತಾಂಶವೂ ಅವಳು ನಿರೀಕ್ಷಿಸಿ ನಿರೀಕ್ಷಿಸಿ ನಿರೀಕ್ಷಿಸಿದಳು.

ಸುಖದ ಅನುಭವದಲ್ಲಿ ಮನಸ್ಸು ಒಂದು ದಿನವನ್ನು ಒಂದು ಕ್ಷಣವಾಗಿ ಕಾಣುವಂತೆ ಇಂಥ ಅನುಭವದಲ್ಲಿ ಒಂದು ಕ್ಷಣವನ್ನು ನೂರು ಭಾಗ ಮಾಡಿ ಒಂದೊಂದು ಭಾಗವನ್ನೂ ಬೇರೆಯಾಗಿ ಅರಿಯಬಲ್ಲುದು.

ಶಾಂತವ್ವನ ಕೊರಳ ಮೇಲೆ ಅವಳು ನಿರೀಕ್ಷಿಸಿದ ಪೆಟ್ಟು ಬೀಳಲಿಲ್ಲ. ಕಾಪಾಲಿಯ ಮಂತ್ರ ನಿಂತಿತು. ಅವನು ದೂರ ಹೋದಂತೆ ತೋರಿತು. ಬಾಗಿಲ ಹತ್ತಿರ ಅವನು ಅರ್ಚಕನಿಗೆ ಅದೇನೊ ಹೇಳುತ್ತಿರುವುದು ಕೇಳಿಸಿತು.

ಶಾಂತವ್ವನಿಗೆ ಇದೇನಾಯಿತು ಎಂದು ಮನಸ್ಸಿನಲ್ಲಿ ಪ್ರಶ್ನೆ; ಆದರೂ ಅವಳು ಬಾಯಲ್ಲಿ ಭೈರವ ನಾಮವನ್ನು ಜಪಿಸುತ್ತ ಬಾಗಿಯೇ ಇದ್ದಳು.

ಒಂದು ಕ್ಷಣದಲ್ಲಿ ಅರ್ಚಕ ಇವಳ ಹತ್ತಿರ ಬಂದನು; "ತಾಯಿ ನೀವು ಸೇವೆ ನಡಸುತ್ತಿರುವ ರಾಣಿಯವರೆ," ಎಂದನು.

ಶಾಂತವ್ವ ತಲೆಯನ್ನೆತ್ತಿ ಅವನ ಎದುರಿಗೆ ನಿಂತಳು.

ಅರ್ಚಕ, "ಅಮ್ಮಾಜಿಯವರೇ, ಈ ಸೇವೆಯೆಲ್ಲ ಯಜಮಾನ ಬೇರೆ ಬಲಿ ಬೇರೆ ಎಂಬ ಅರ್ಥದಲ್ಲಿ ನಡೆದಿದೆ. ಯಜಮಾನನನ್ನು ಬಲಿ ಕೊಟ್ಟರೆ ಕರ್ಮ ಕೆಟ್ಟುಹೋಗುತ್ತದೆ. ತಾವು ಮೊದಲೆ ತಿಳಿಸಿದ್ದರೆ ನಾವು ಹೀಗೆ ಮಾಡಬೇಡಿ ಎನ್ನುತ್ತಿದ್ದೆವು," ಎಂದನು.

"ಈಗ ಏನು ಮಾಡುತೀರಿ?"

"ಮುನಿಗಳು ಮತ್ತೆ ಅದನ್ನು ತಿಳಿಸುತಾರೆ, ನಾನು ಒಂದು ಅರಿಕೆ ಮಾಡುತ್ತೇನೆ. ಈಗ ತಾವು ಪ್ರಸಾದ ತೆಗೆದುಕೊಂಡು ಮನೆಗೆ ಹೋಗ ಬಹುದು. ಮೊದಲು ತಮ್ಮ ವಸ್ತ್ರವನ್ನು ಧರಿಸಿಕೊಳ್ಳಿರಿ."

ಹೀಗೆಂದು ಅವನು ಹೊರಕ್ಕೆ ಹೋದನು. ಆ ಮೊದಲೇ ಕಾಪಾಲಿ ಹೊರಗೆ ಹೋಗಿದ್ದನು.

ಶಾಂತವ್ವ ಬಲಿಯ ವಸ್ತ್ರವನ್ನು ಕಳೆದು ತನ್ನ ವಸ್ತ್ರವನ್ನು ಉಟ್ಟು ಕೊಂಡಳು; ಬಾಗಿಲ ಹತ್ತಿರ ನಿಂತು ಅರ್ಚಕನನ್ನು ಕರೆದಳು. ಅವನು ಒಳಕ್ಕೆ ಬಂದು ಅವಳಿಗೆ ದೇವರ ಪ್ರಸಾದವನ್ನು ಕೊಟ್ಟನು; "ಅರಮನೆಗೆ ದಯಮಾಡಬೇಕು; ಸರಿಯಾದ ಬಲಿ ಕೊಡುವುದಲ್ಲದೆ ಅದು ಈ ದಿನ ತಪ್ಪಿದ್ದಕ್ಕೆ ಪ್ರಾಯಶ್ಚಿತ್ತ ಒಂದು ನಡೆಯಬೇಕಾಗುತ್ತದೆ; ನಾಳೆ ಬಂದು ಎಲ್ಲವನ್ನೂ ಅರಿಕೆ ಮಾಡುತ್ತೇನೆ," ಎಂದನು.

ಶಾಂತವ್ವ ಹೊರಕ್ಕೆ ಬಂದಳು. ಹೆಣ್ಣಾಳನ್ನು ಕರೆದು ಅವಳ ಕೈಯಲ್ಲಿ ಕೊಟ್ಟಿದ್ದ ಕಾಗದವನ್ನು ಹಿಂದಕ್ಕೆ ತೆಗೆದುಕೊಂಡಳು. ಮುಂದೆ ನಡೆದು ಗಂಡಾಳನ್ನು ಹಿಂದೆ ಬರಹೇಳಿ ಬಹು ಕಷ್ಟದಿಂದ ಬೆಟ್ಟವನ್ನು ಹತ್ತಿ ಸಾವಕಾಶವಾಗಿ ಬಂದು ಮತ್ತೆ ಅರಮನೆಯನ್ನು ಸೇರಿದಳು.

## ೧೨೧

ಗೊತ್ತಾದ ದಿವಸ ನವಾಬನ ಸೈನ್ಯ ಅನಂತಪುರದಿಂದ ಮುಂದಕ್ಕೆ ನಡೆಯಿತು. ಮಾವಿನ ಹೊಳೆಗಾಗಿ ಹೊರಟ ದಳಗಳ ಮಧ್ಯದಲ್ಲಿ ನವಾಬ ನಾಯಕ ಕುದುರೆಗಳ ಮೇಲೆ ಇದ್ದರು.

ಹೈದರ್ ತಾನೊಬ್ಬನೆ ಹೊರಟಾಗ ಅವಶ್ಯವೆಂದರೆ ದಿನಕ್ಕೆ ಮೂವತ್ತು ಹರಿದಾರಿ ಪ್ರಯಾಣ ಮಾಡಿದ್ದುಂಟು. ಆದರೆ ಸೈನ್ಯವನ್ನು ಅವನು ಹೀಗೆ ತೊಳಲಿಸುತ್ತಿರಲಿಲ್ಲ. ಅದು ಸುಲಭವಾಗಿ ದಾರಿ ನಡೆದು ಪಾಳೆಯದಿಂದ ಪಾಳೆಯಕ್ಕೆ ಹೋಗುವುದು. ದಿನ ನಡೆದು ಮಾವಿನ ಹೊಳೆಯನ್ನು ಸೇರಿತು. ಅಲ್ಲಿ ಒಂದು ದಿನ ನಿಂತಿದ್ದು ಮರುದಿನ ಮೂರಂಗಡಿಯನ್ನು ಕುರಿತು ಹೊರಟಿತು.

ಆ ದಿನ ಸಂಜೆ ಆಗುತ್ತಿದೆ. ಇನ್ನೊಂದು ಹರಿದಾರಿ ನಡೆದರೆ ಮೂರಂಗಡಿಯ ಶಿಬಿರ ಸಿಕ್ಕುತ್ತದೆ. ಆಗ ದಳ ಒಂದು ಗುಡ್ಡದ ಭುಜದಲ್ಲಿ ನಡೆಯುತ್ತಿತ್ತು. ಅದರ ಚೂಣಿ ಬಲಕ್ಕೆ ಮುರಿದು ನವಾಬನ ಕಣ್ಣಿಂದ ಮರೆಯಾಗುತ್ತಿದೆ; ಹಿಂದಳ ಗುಡ್ಡದ ಮತ್ತೊಂದು ಮುಖದಿಂದ ಸುತ್ತಿಬರುತ್ತಿದೆ; ಮಧ್ಯೆ ನವಾಬ ನಾಯಕ ಇವರ ಕುದುರೆಗಳು, ಜೊತೆಯಲ್ಲಿ ಹತ್ತು ಜನ ಹತ್ತಿರದ ಪರಿವಾರ. ಎಡಗಡೆ ಬಲಗಡೆ ಬೆಟ್ಟದ ಮೇಲೆ ಕೆಳಗೆ ದಾರಿಯ ಪಕ್ಕದಲ್ಲಿ ಒತ್ತಾಗಿ ಗಿಡವಿದೆ.

ಇದ್ದದಿದ್ದಂತೆ ಎಡಗಡೆ ಗಿಡದಲ್ಲಿ ಸರಸರ ಸದ್ದು ಕೇಳಿಸಿತು. ನವಾಬ ಕುದುರೆಯನ್ನು ನಿಲ್ಲಿಸಿದನು; ಆ ಕಡೆ ತಿರುಗಿ ನೋಡಿದನು. ಜೊತೆಗಿದ್ದ ಜನವೂ ನಿಂತಿತು; ತಾನೂ ಅತ್ತಕಡೆ ಮುಖಮಾಡಿತು. ಹಿಂದಿನಿಂದ ಜನ ಓಡಾಡುವ ಶಬ್ದ ಕೇಳಿಸಿತು; ಎರಡು ಅಂಬು ಪರಿವಾರದ ಇಬ್ಬರನ್ನು ಇರಿದವು. ಒಂದು ನವಾಬನ ಮುಖದ ಹತ್ತಿರ ಶೊಯ್ಯೆಂದು ಹೋಯಿತು.

ಹತ್ತಿರ ಹತ್ತಿರ ನಲವತ್ತು ಜನ ಇದ್ದಿರಬೇಕು, ಇವರ ಕಡೆಗೆ ನುಗ್ಗಿ ಬಂದರು. ಇವರು ಏನನ್ನೇ ಮಾಡಬಹುದಾಗುವ ಮೊದಲೆ ನಾಯಕನ ಕುದುರೆಯು, ಎರಡೂ ಕಡೆಗೆ ಹತ್ತು ಹತ್ತು ಜನ ನಿಂತರು. ಒಬ್ಬ ನಾಯಕನ ಕುದುರೆಯನ್ನು ಇಳಿಜಾರಿಗೆ ತಿರುಗಿಸಿಕೊಂಡು ಹೊರಟನು; ಬೇಟೆಗೆ ಹೋಗುವ ದಣಿಯನ್ನು ಕರೆದೊಯ್ಯುವಂತೆ ಅವನನ್ನು ಸರಾಗವಾಗಿ ಕರೆದುಕೊಂಡು ಹೊರಟು ಹೋದನು.

ನವಾಬನ ಪರಿವಾರದ ಮೋಯಿನುದ್ದೀನ್ ಎಂಬ ಸವಾರ ನಾಯಕನ ಹಿಂದೆ ಕುದುರೆಯನ್ನಿಳಿಸಿದನು. ಹೈದರ್, ಬೇಡ ಹಿಂದಿರುಗು, ಎಂದು ಕೂಗಿದನು. ಆ ಹೊತ್ತಿಗೆ ಸರಿಯಾಗಿ ತಗ್ಗಿನಲ್ಲಿ ಒಂದು ಕೋವಿ ಸುಟ್ಟ ಶಬ್ದವಾಯಿತು. ಉತ್ತರ ಕ್ಷಣದಲ್ಲಿ ಮೋಯಿನುದ್ದೀನ್ ಒಂದು ಗುಂಡು ತಾಗಿ ಕೆಳಗೆ ಬಿದ್ದಿದ್ದನು.

ಹೈದರನ ಪರಿವಾರದ ಮುಖಂಡ ಮಧ್ಯೆ ನಿಂತ ಶತ್ರುಗಳ ಮೇಲೆ ಗುಂಡು ಹಾರಿಸುವ ಯೋಚನೆ ಮಾಡಿದನು. ಇವರನ್ನು ದಂಡಿಸುವುದಕ್ಕೆ ಹೋಗಿ ನವಾಬನನ್ನು ಕೊಂದಂತಾದೀತು ಎಂದು ಅಂಜಿ ಸುಮ್ಮನಾಗಿ

ಕತ್ತಿ ಸೆಳೆದು ಅವರ ಮೇಲೆ ಬಿದ್ದನು. ಪರಿವಾರ ಅವನನ್ನು ಅನುಸರಿಸಿ ಹಗೆಯಮೇಲೆ ಬಂದಿತು.

ಮಲ್ಲಯ್ಯ ಇವರೊಂದಿಗೆ ಎರಡು ನಿಮಿಷ ನಿಂತು ಕಾದಿದನು. ಮುಂದುವರಿದಿದ್ದ ಸೈನ್ಯ, ಕೋವಿಯ ಶಬ್ದವನ್ನು ಕೇಳಿ ಈ ವೇಳೆಗೆ ಏನು ಗಲಭೆ ಎಂದು ಹಿಂದಿರುಗಿ ಬಂದಿತು. ಅಷ್ಟು ಹೊತ್ತಿಗೆ ನಾಯಕ ಕುದುರೆಯನ್ನು ಹಾವಿನಂತೆ ದಾರಿ ಮುರಿದು ನಡೆಯಿಸುತ್ತ ನಾಲ್ಕು ನೂರು ಗಜದ ದೂರ ಹೊರಟು ಹೋಗಿದ್ದನು.

ಆಗ ಮಲ್ಲಯ್ಯ, "ಹೂಂ," ಎಂದು ಕೂಗಿ ಗುಡ್ಡ ವಿಳಿದನು; ಜೊತೆಯ ಜನ ಅವನ ಹಿಂದೆ ಸಾರಿದರು. ನವಾಬನ ಪರಿವಾರ ಆಗ ಅವರ ಕಡೆಗೆ ಕೋವಿಯಿಂದ ಸುಟ್ಟಿತು; ಆದರೆ ಯಾರನ್ನೂ ಕೊಲ್ಲಲಿಲ್ಲ.

ನವಾಬ ನಾಲ್ಕು ಕಡೆಯೂ ನೋಡಿದನು. ಸ್ಥಳವನ್ನು ಬಲ್ಲ ಶತ್ರು ಪಕ್ಷದ ಹತ್ತು ಜನಕ್ಕೆ ಸ್ಥಳವನ್ನು ಕಾಣದ ತನ್ನ ನೂರು ಜನ ಇಲ್ಲಿ ಸಮನಾಗಲಾರದು ಎಂದುಕೊಂಡನು. ಮೋಯಿನುದ್ದೀನನ ಕಳೇಬರ ವನ್ನು ಎತ್ತಿಕೊಳ್ಳಿ ಎಂದು ಪರಿವಾರಕ್ಕೆ ಆಜ್ಞೆಮಾಡಿ ತನ್ನ ಕುದುರೆಯನ್ನು ಮುಂದರಿಸಿದನು.

ಹರಿದಾರಿ ದೂರ ನಡೆದು ನವಾಬ ಸುರಕ್ಷಿತವಾಗಿ ಮೂರಂಗಡಿ ಯನ್ನು ಸೇರಿದನು. ದಾರಿಯಲ್ಲಿ ಅವನು ತನ್ನ ಸೆರೆಯಾಗಿದ್ದ ನಾಯಕ, ಮೈಗಾವಲ ಮೋಯಿನುದ್ದೀನ್, ಇವರನ್ನು ಕಳೆದುಕೊಂಡಿದ್ದನು.

## ೧೨೨

ನವಾಬನನ್ನು ದಾರಿಯಲ್ಲಿ ಬಿಟ್ಟು ತನ್ನ ನಲವತ್ತು ಜನದೊಂದಿಗೆ ಬೆಟ್ಟವಿಳಿದ ಮಲ್ಲಯ್ಯ ಕ್ಷಿಪ್ರದಲ್ಲೇ ತನ್ನ ಒಡೆಯನನ್ನು ಸೇರಿದನು. ನಾಯಕ ಅವನಿಂದ ಮುಂದಿನ ಏರ್ಪಾಡಿನ ವಿವರವನ್ನು ತಿಳಿದು ಹತ್ತಿರದ ಸೀಳುದಾರಿಯಿಂದ ಪ್ರಯಾಣಮಾಡಿ ಅದೇ ದಿನದ ಸಂಜೆ ನಗರಕ್ಕೆ ಬಂದನು. ಮೊದಲು ಮಠಕ್ಕೆ ಬಂದು ಅಯ್ಯನಿಗೆ ಪ್ರಣಾಮಮಾಡಿದನು.

ಅಯ್ಯ ಅವನನ್ನು ಎತ್ತಿ ಸೆಳೆದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು, "ರಾಹು ಬಿಟ್ಟಿತೆ, ನನ್ನ ರಾಜ? ಇದೇ ಬಂದಿರೋ?" ಎಂದನು.

"ಇದೀಗ ಬಂದೆವು. ಇಲ್ಲಿಗೇ ಬಂದೆವು. ಈ ರಾತ್ರಿ ಇಲ್ಲೇ ಇರೋಣ, ಎಂತ ಮಾಡಿದೇವಿ."

"ಏನೂ ಅಡ್ಡಿಯಿಲ್ಲ, ಆಗತ್ಯ ಇರಬಹುದು. ಆದರೂ ಒಮ್ಮೆ ಕೇರೀಲಿ ಹಾಂಗೆ ಸುಳಿದಾಡಿ ಬಂದರೆ ಬಹು ಒಳಿತು. ಕತ್ತಲಾಗಿದ್ದ ಊರಿಗೆ ತಿರಿಗಿ ಕಾರ್ತೀಕ ಆಗತದೆ. ಇಂದು ಹೋಗೋದಾಗತದೊ, ನಾಳೆ ಆಗಲೊ?"

"ಇಂದೇ ಹೋಗತೇವಿ."

"ದಣಿದಿದ್ದರೆ ನಾಳೆ ಆಗಲಿ."

"ದಣಿವಿನ ಮಾತು ಅಂಥಾದೇನೂ ಇಲ್ಲ. ನೇಮಯ್ಯನವರನ್ನ ಶಾಸ್ತ್ರಿಗಳನ್ನ ಕರದು ಮುಂದಿನ ದಾರಿ ಏನು ಅಂತ ನಿಮ್ಮೆದುರಿಗೆ ಮಾತಾಡಿ ಆಮೇಲೆ ಊರೊಳಗೆ ಹೋಗಿ ಬರುತೇವಿ. ಮುಂದಾಗಿ ಮಲ್ಲಯ್ಯ ನಾವು ಬಂದಿದೇವಿ ಅನ್ನೋ ಮಾತನ್ನ ಊರಿಗೆಲ್ಲ ಸಾರಿಸಿ ತಿಳಿಸುತಾನೆ."

ನೇಮಯ್ಯ ಶಾಸ್ತ್ರಿ ಒಂದು ಗಳಿಗೆಯಲ್ಲಿ ಮಠಕ್ಕೆ ಬಂದರು; ನಾಯಕನನ್ನು ಕಂಡು ತುಂಬ ಸಂತೋಷಪಟ್ಟರು. ನಾಯಕ ಆವೇಳೆಗೆ ಅಯ್ಯನಿಂದ ಅವರ ಕುಶಲವನ್ನು ಕೇಳಿ ತಿಳಿದಿದ್ದನು. ಬಂದಾಗ ಅವರಿಗೆ ಎರಡು ವಿಶ್ವಾಸದ ಮಾತನ್ನಾಡಿ ಅವರನ್ನು ಮಠದ ಕೈಸಾಲೆಯಲ್ಲಿ ಕುಳ್ಳಿರಿಸಿಕೊಂಡು ಮುಂದೆ ಏನು ಮಾಡುವುದು ಎಂದು ಪ್ರಸ್ತಾಪಿಸಿದನು.

ಶಾಸ್ತ್ರಿ, "ಮೊದಲಾಗಿ, ಹೇಳುವುದು ತೊಂದರೆ ಎನ್ನಿಸದೆ ಇದ್ದರೆ, ನಾಯಕರು ನಮ್ಮನ್ನ ಬಿಟ್ಟು ಹೊರಟು ಹೋದ ಸಂದರ್ಭ ಏನು ಎನ್ನುವುದನ್ನು ಅಪ್ಪಣೆ ಕೊಡಿಸಬೇಕು," ಎಂದನು.

ನಾಯಕ: ಅದು ತಿಳಿಯೋದು ಬೇಕು, ಅಂತೀರಾ? ಏನಂತೀರಿ ಅಣ್ಣಯ್ಯನವರೆ ?

ನೇಮಯ್ಯ: ತಿಳಿದರೆ ಒಳ್ಳೆಯದು ಅನ್ನಿಸತಿರಬೇಕು ಶಾಸ್ತ್ರಿಗಳಿಗೆ.

ಶಾಸ್ತ್ರಿ: ಹೌದು, ಪ್ರಭುಗಳೆ. ನಿಮ್ಮ ಮನಸ್ಸು ತಿಳಿಯದೆ ನಾವು ಆಗ ಮಂಕು ಬಡಿದು ಕುಳಿತೆವು. ಇರೋ ಮಾತು ಎರಡು ನಮ ನಾಲ್ಕು ಜನಕ್ಕೂ ತಿಳಿದಿದ್ದರೆ ಕೆಲಸ ಸರಾಗವಾಗುತ್ತೆ.

ನಾಯಕ, " ನಾವು ಯಾವುದೋ ಮನಸ್ಸಿನ ಯೋಚನೆ ನಡೆಸು ವುದಕ್ಕಾಗಿ ನಿಮಗೆ ಹೇಳದೆ ನಿಮ್ಮ ಕಣ್ಣಿಂದ ಮರೆಯಾಗಲಿಲ್ಲ," ಎಂದು ಹೇಳಿ ನಡೆದಿದ್ದ ಸಂಗತಿಯನ್ನು ಅವರಿಗೆ ವಿವರಿಸಿ ತಿಳಿಸಿದನು. ಅಯ್ಯ ತನ್ನನ್ನು ಕಾಪಾಡಿದ ಮಾತನ್ನು ಅವನು ಹೇಳುತ್ತಿರುವಾಗ ನಾಲ್ವರ ಕಣ್ಣಲ್ಲಿಯೂ ನೀರು ತುಳುಕಿತು. ನವಾಬನ ಕುಟಿಲ, ಔದ್ಧತ್ಯ, ಲಿಂಗಣ್ಣ ಯ್ಯನ ಒರಟುತನ, ಸತ್ಯ, ಸಗುನ ಮಲ್ಲಿಗೆ ಇವರ ಜಾಣು, ಮಲ್ಲಯ್ಯನ ದಕ್ಷತೆ, ಎಲ್ಲ ಅವನ ಮಾತಿನಲ್ಲಿ ಚಿತ್ರವಾದವು.

ಇವನ ಮಾತು ಮುಗಿದ ಕ್ಷಣದನಂತರ ಶಾಸ್ತ್ರಿ, "ಶತ್ರು ಸೈನ್ಯ ಬಂದು ದೇಶದಲ್ಲಿ ನಡೆಯುತ್ತಾ ಇದೆ, ಮಗ ನಿಂತು ಅದನ್ನು ತಡೆಯ ಬೇಕಾಗಿದೆ, ಇಂಥ ಹೊತ್ತಿನಲ್ಲಿ ಹೆತ್ತ ತಾಯಿ ಇಂಥ ಕೆಲಸ ಮಾಡಿ ಸಿದ್ದೀಗ ದೊಡ್ಡ ಆಶ್ಚರ್ಯ," ಎಂದನು.

ಅಯ್ಯ: ಹೆತ್ತ ತಾಯಿ ಇಂಥ ಕೆಲಸಾನ ಮಿಕ್ಕ ಹೊತ್ತಿನಲ್ಲಿ ಮಾಡಿಸತಾಳೆಯೇನು ?

ಶಾಸ್ತ್ರಿ: ಆಶೆ ಕೋಪ ಮೀರಿದಾಗ ಇಲ್ಲಿ ಅಲ್ಲಿ ಇಂಥಾದ್ದಾಗೋ ದುಂಟು.

ನೇಮಯ್ಯ: ಇದರ ಮಾತು ನಾವು ಆಡಬೇಕಾಗಿಲ್ಲ. ಸಂಗತಿ ತಿಳಿದಾಯಿತಲ್ಲ. ಮುಂದಿನ ಮಾತು ಏನು ?

ಶಾಸ್ತ್ರಿ: ನಾಯಕರು ಏನೋ ಪ್ರಯತ್ನ ಮಾಡಿದರು ಎಂತ ತಿಳಿದು ಅದು ಏನು ಎಂತ ಕೇಳಿದ್ದಾಯಿತು. ಅಂಥದೇನೂ ಇಲ್ಲ ಅಂದಮೇಲೆ ಮೊದಲೇ ಗೊತ್ತಾಗಿದ್ದ ಮಾತು ಇದ್ದೇ ಇದೆ.

ನೇಮಯ್ಯ: ಅಲ್ಲಿಂದ ಈಚೆಗೆ ತಿಂಗಳೂವರೆ ಆಗಿಯದೆ. ಹಗೆ ತೀರಾ ಹತ್ತಿರ ಬಂದಿದಾನೆ. ಗೊತ್ತಾದ ಮಾತನೇ ಈಗ ನಡಸುವ ದಾರಿ ನೋಡಬೇಕು.

ಶಾಸ್ತ್ರಿ: ನಾಯಕರು ಅದನ್ನ ನಿಶ್ಚಯ ಮಾಡಿಕೊಂಡಿರಬೇಕು. ಅವರು ಅಪ್ಪಣೆ ಮಾಡಿದ ಹಾಗೆ ನಡಸಿದರೆ ಆಯಿತು.

ನಾಯಕ: ಅಗ್ಯೆ ಈಗ್ಯೆ ನಮ್ಮ ಯೋಚನೆ ಸ್ವಲ್ಪ ಬೇರೆಯಾಗಿದೆ.

ಶಾಸ್ತ್ರಿ: ಅಪ್ಪಣೆ ಆಗಬೇಕು.

ನಾಯಕ: ಆಗ ನಾವು ನಾಡಿನ ಮಂದಿಯನ್ನ ಕರೆಸಿ ದಾರಿಯಲ್ಲಿ ಪಡೆನಿಲಿಸಿ ಇವನ್ನ ತಡೆಯೋದು ಅಂತ ಇದ್ದೆವಿ. ಈಗ ಆ ಯೋಚನೆ ಪ್ರಯೋಜನವಿಲ್ಲ. ಮನೆ ಮುಂದೆ ಬಂದುಬಿಟ್ಟಿದಾನೆ.

ಶಾಸ್ತ್ರಿ: ಹೌದು.

ನಾಯಕ: ಆಗ ನಾವು ಮೈಸೂರರಸರಿಂದ ಒಂದು ಕಾಗದ ಬರತದೆ ಅಂತ ಇದ್ದೆವಿ. ಅರಸರಿಂದ ಯಾತರದೂ ಕಾಗದ ಬಂದಿಲ್ಲ. ಇಲ್ಲ, ಅವರದೂ ಮೋಸ ಇರಬೇಕು, ಇಲ್ಲ ಅವರದು ಸತ್ಯ ಆದರೂ ಅವರು ನಮ್ಮನ್ನ ಕಾಯಬಲ್ಲ ನೆಲೆಯಲ್ಲಿಲ್ಲ.

ಶಾಸ್ತ್ರಿ: ಹೌದು.

ನಾಯಕ: ನವಾಬ ಅರಸರ ಆಳಾಗಿಲ್ಲ. ಅರಸರಿಗೆ ಮೇಲರಸಾಗಿ ದಾನೆ. ನಗರವನ್ನ ಅವನು ಅರಸರಿಗಾಗಿ ಹಿಡಿಯೋಕೆ ಬರತಾ ಇಲ್ಲ. ತಾನೇ ಹಿಡಿದು ಮೇಲರಸಾಗ ಹೊರಟಿದ್ದಾನೆ.

ಶಾಸ್ತ್ರಿ: ಇದು ತೀರಾಸಾಧ್ಯ.

ನಾಯಕ: ಆದರೂ ಇದನ್ನವನು ಬಾಯಲ್ಲಿ ಹೇಳಲಾರದೆ ಇದಾನೆ. ಅರಸರ ಕೈಯಿಂದ ಅನ್ನ ತಿಂದದ್ದ ನೆನೆಯುತಾನೆ; ಅವನ ಗುಕ್ಕು ಹಿಡಿಯುತದೆ.

ನೇಮಯ್ಯ: ಒಳ್ಳೆಯ ಮನುಷ್ಯ ಅಂತಾಯಿತಲ್ಲ.

ನಾಯಕ: ಅಷ್ಟು ಒಳ್ಳೆಯತನ ಇದೆ. ಈಗ ನಮಗೆ ಜನ ಸಾಲದು; ಅವನ ಪಡೆ ದೊಡ್ಡದು, ಪಳಗಿದ್ದು. ನಮ್ಮದೇನಿದ್ದರೂ ಈಟಿ, ಭಲ್ಲೆ; ಅವನು ಮದ್ದು ಹೊತ್ತು ತಂದಿದಾನೆ. ಈಗ ನಾವು ಅವನನ್ನ ತಾಗಿ ಗೆಲ್ಲೊ ಅಂತಿಲ್ಲ.

ಶಾಸ್ತ್ರಿ: ತಾಗದೆ ಇದ್ದರೆ ಬೇಡ; ತಡೆಯಲಾದರೂ ಬೇಕಲ್ಲ.

ನಾಯಕ: ತಡೆಯೋದೂ ಈಗ ಆಗೋದಿಲ್ಲ.

ಅಯ್ಯ: ಹಂಗಾದರೆ ನಿಮ್ಮ ಯೋಚನೆ ಏನು ನನ್ನ ರಾಜ?

ನಾಯಕ: ಹೇಳುತೇವಿ. ಹಿರಿಯರು ಮನಕ್ಕೆ ತರಬೇಕು. ಅದನ್ನ ಹೇಳೋದಕ್ಕೆ ಇಷ್ಟೆಲ್ಲ ತಳಪಾಯ. ನಾವು ಹತ್ತಿರ ಹೋಗಿ ನಿಮ್ಮರಸರ ಗೆಳೆಯರು ಎಂದಾಗ ಇವ ನೀವು ನಾಯಕರಲ್ಲ ಅಂದ. ಅಣ್ಣಯ್ಯನವರೇ

ಅವನ ಹತ್ತಿರ ಹೋಗೋದು; ನಿಮ್ಮಲ್ಲಿ ಸೆರೆಯಲ್ಲಿದ್ದವರು ನಮ್ಮ ನಾಯಕರು ಅಲ್ಲ ಅಂತ, ನೀವು ತಿಳಿದಿರಂತೆ, ಅದು ತಪ್ಪು, ಅವರು ನಾಯಕರು ಹೌದು, ಈಗ ಆದರೂ ನೀವು ಹಿಂದಕ್ಕೆ ಹೋಗಬೇಕು, ಅನ್ನೋದು. ಅವನು ಹೋಗಲಿಲ್ಲ. ನಿಮ್ಮ ಅರಸರು ನಮ್ಮ ನಾಯಕರ ಗೆಳೆಯರು, ನೀವು ಹಠಮಾಡಿ ನಮ್ಮ ಊರಿಗೆ ಬರುವುದಾದರೆ ನಮ್ಮ ಗೆಳೆಯರ ಪರವಾಗಿ ಬರುತಾ ಇದೀರಿ ಅಂತ ತಿಳಿಯುತೇವಿ, ನೀವು ನಮ್ಮ ಅತಿಥಿಗಳಾಗಿ ಇರಿ, ನಾವು ನಿಮ್ಮ ಅರಸರಿಗೆ ಹೇಳಿಕಳುಹಿಸಿ ಮುಂದಿನ ಯೋಚನೆ ಮಾಡುತೇವಿ, ಎನ್ನುವುದು. ಕಾದದೆಯೇ ಅವನನ್ನ ನಗರದ ಹತ್ತಿರ ಬೀಡುಮಾಡಬಿಡುವುದು. ಆಮೇಲೆ ಇಬ್ಬರಲ್ಲಿ ಒಬ್ಬರು ಪಟ್ಟಣಕ್ಕೆ ಹೋಗಿ ರಾಜರ ಮನಸ್ಸು ಏನು ತಿಳಿದುಬರುವುದು. ಅಷ್ಟರಲ್ಲಿ ನಾವು ನಾಡಮಂದಿಯನ್ನ ಪಡೆ ಕಟ್ಟಿರುತೇವಿ. ಅರಸರು ನಮ್ಮಂತೆ ಇದ್ದರು, ಇವನನ್ನು ಆಚೆ ನಡಿ ಅನ್ನೋದು; ನಡೀಲಿಲ್ಲ, ಅರಸರ ಸಹಾಯ ತಕೊಂಡು ಇವನ ಮೇಲೆ ಬೀಳೋದು. ಅರಸರು ವಿರೋಧ ಇದ್ದರು, ಮಾರಟ್ಟವಾಡಿಯವರನ್ನ ಅತ್ತಲಿಂದ ಬರಹೇಳಿ ನಾವು ಇತ್ತಲಿಂದ ಪಟ್ಟಣದ ಮೇಲೆ ಹೋಗೋದು. ಇದಾದರೂ ಅದಾದರೂ ಇವನು ನಗರ ನುಂಗೋದು ಆಗೋದಿಲ್ಲ.

ನಾಯಕನ ವಿವರಣೆ ಮುಗಿಯಿತು. ಅವನು ಕ್ಷಣ ಬಿಟ್ಟು, "ನೀವು ಏನು ಅನ್ನುತೀರಿ ಅಣ್ಣಯ್ಯನವರೆ ? " ಎಂದನು.

ನೇಮಯ್ಯ, "ನಗರಾನ ಬಿಡೋದು ಆಯಿತು. ಮುಂದಿನ ಮಾತು ನೆಚ್ಚಿಕೆ ಇಲ್ಲ," ಎಂದನು.

ನಾಯಕ: ಹಾಗನ್ನುತೀರಾ ? ನೀವು ಶಾಸ್ತ್ರಿಗಳೆ?

ಶಾಸ್ತ್ರಿ: ಸೂತ್ರ ಒಪ್ಪುವ ಹಾಗಿದೆ. ಆದರೆ ಇವನು ಘಾತಕ. ನಗರದಲ್ಲಿ ಸಿಕ್ಕುವ ಹಣಕಾಸನ್ನೆಲ್ಲಾ ಸ್ವಾಹಾ ಮಾಡುತ್ತಾನೆ.

ನಾಯಕ: ಬೇರೆ ದಾರಿಯಾವುದು ? ಇವನೊಂದಿಗೆ ಕಾದುವುದು. ಸಾವಿರ ಜನಾನ ಕೊಲ್ಲುತಾನೆ, ಆಮೇಲೆ ಸ್ವಾಹಮಾಡುತಾನೆ. ಮೂರು ದಿನದ ಮೇಲೆ ಅದೇ ಆಯಿತು. ಅದಕ್ಕೆ ಸಾವಿರ ಜನ ಸತ್ತಿರುತಾರೆ.

ಶಾಸ್ತ್ರಿ : ಅದೇನೋ ಉಂಟಲ್ಲ. ಕೊರಳಿಗೆ ಸುತ್ತಿದ ಹಾವು; ಕಚ್ಚದೆ ಬಿಡುತ್ತೆಯೆ?

ನಾಯಕ: ಒಂದೇನೋ ಮಾಡಬೇಕು. ಇವನನ್ನ ಊರ ಹೊರಗೆ ನಿಲ್ಲಿಸಬೇಕು. ಊರೊಳಗೆ ಕಾವಲು ಭದ್ರಮಾಡಿ ಇವನ ಕಡೆ ಜನದ ಪುಂಡಾಟಾನ ತಡೆಯುತ್ತಿರಬೇಕು. ಜೊತೆಗೆ ಇವನೊಂದಿಗೆ ಮಾತು ಮುಗಿದು ಇವನು ನಗರಕ್ಕೆ ಬರುವುದರ ಒಳಗಾಗಿ ಆದಷ್ಟು, ಹಣಕಾಸು ಒಡವೆ ವಸ್ತೂನ ನಗರದಿಂದ ಹೊತ್ತು ನಾಡೊಳಕ್ಕೆ ಸಾಗಿಸಿರಬೇಕು.

ಶಾಸ್ತ್ರಿ: ಇದನ್ನ ಈಗಾಗಲೇ ಜನ ಆರಂಭಿಸಿದಾರೆ. ಆದರೂ ಹತ್ತರಲ್ಲಿ ಒಂದು ಪಾಲು ಸಾಗೀತಲ್ಲದೆ ಒಂಬತ್ತು ನಿಲ್ಲೋದೆ.

ನಾಯಕ: ಒಳ್ಳೇದು. ನಮಗೆ ತೋಚಿದ್ದನ್ನ ಹೇಳಿಯಾಯಿತು. ಇದರ ಮೇಲೆ ಹಿರಿಯರು ನಿರ್ಣಯ ಮಾಡಿರಿ. ಅದರಂತೆ ನಡಸೋಣ.

ಇದರ ಮೇಲೆ ಎಲ್ಲರೂ ಮತ್ತೆ ಅಳೆದು ಸುರಿದು ಮಾತು ಈ ಘಟ್ಟದಲ್ಲಿ ನಿಂತಿತು. ನಾಯಕ ಹೇಳಿದಂತೆ ಒಬ್ಬ ಹಿರಿಯರು ಹೋಗಿ ಹೈದರನ ಸಂಗಡ ಮಾತನಾಡುವುದು; ಅವನು ನಗರಕ್ಕೆ ಬರುವುದಾಗಿ ಹಠಮಾಡಿದರೆ ಮಿತ್ರರಾಗಿ ಬರುತ್ತೀರಿ ಎಂದು ಸ್ಪಷ್ಟಪಡಿಸಿ ಮೆಲ್ಲನೆ ಬರಮಾಡಿಕೊಳ್ಳುವುದು; ನಾಯಕ ಒಂದು ತಿಂಗಳಲ್ಲಿ ನಾಡಿಗರ ದಳಗಳನ್ನು ಸೇರಿಸುವುದು; ಇತ್ತ ಸವಣೂರು ಮಾರಟ್ಟನಾಡಿಗಳಿಗೆ ಸಹಾಯಕ್ಕಾಗಿ ಮತ್ತೆ ಹೇಳಿಕಳುಹಿಸುವುದು; ತಿಂಗಳ ನಂತರ ಬಲಾಬಲಗಳದ್ನು ನೋಡಿಕೊಂಡು ಮುಂದಿನ ಕ್ರಮವೇನೆಂದು ಮತ್ತೆ ಆಲೋಚಿಸುವುದು. ಇಷ್ಟೆಲ್ಲದರ ಮುಖ್ಯ ಉದ್ದೇಶ ಹೈದರ್ ಹಗೆಯಂತೆ ಬಂದು ನಗರವನ್ನು ಗೆದ್ದೆನೆಂದು ಹೇಳಿ ತನ್ನ ಸೈನ್ಯಕ್ಕೆ ಊರನ್ನು ದೋಚಲು ಅಪ್ಪಣೆ ಕೊಡುವುದು ಬೇಡ ಎನ್ನುವುದು.

ಜೊತೆಗೆ ನಾಯಕ ಈ ವೇಳೆಯಲ್ಲಿ ನಗರದಲ್ಲಿರಬಾರದು ಎಂದು ಶಾಸ್ತ್ರಿ ನೇಮಯ್ಯ ಸೂಚಿಸಿದರು. ನಾಯಕನಿಗೆ ಇದು ಒಪ್ಪಿಗೆ ಇಲ್ಲ. ನಗರವನ್ನು ಅಪಾಯದಲ್ಲಿ ಬಿಟ್ಟು ತಾನು ಎಲ್ಲೊ ಕ್ಷೇಮವಾಗಿ ತಲೆ ಮರೆಸಿಕೊಂಡಿರುವುದೇ ಎಂದು ಅವನ ಶಂಕೆ. "ನಿಮ್ಮ ವಿಷಯ ಇಂಥ ಯೋಚನೆ ಯಾರು ಮಾಡಿಯಾರು? ಒಳ್ಳೆಯ ಮಾತಿನಿಂದಲೆ ಬಂದು

ಇವನು ನಿಮ್ಮನ್ನು ಮತ್ತೆ ಸೆರೆಮಾಡಿಕೊಂಡರೆ ನಮ್ಮ ತಲೆ ಕುಣಿಕೆಯಲ್ಲಿ ಸಿಕ್ಕಿದಂತಾಗುತ್ತದೆ. ನೀವು ದೂರ ಹೋಗಲೇಬೇಕು," ಎಂದು ಇವರು ಹೇಳಿ ಅಯ್ಯನೂ ಆ ಮಾತು ಸರಿ ಎಂದಮೇಲೆ ನಾಯಕ ಸದ್ಯ ಒಂದು ತಿಂಗಳು ಪಡೆಯನ್ನು ಕೂಡಿಸುವುದಕ್ಕಾಗಿ ನಾಡಿನಲ್ಲಿ ಸುತ್ತುವುದಕ್ಕೆ ಒಪ್ಪಿದನು.

ಕೊನೆಗೆ ಅಯ್ಯ, "ಚಿಕ್ಕರಾಣಿ ಬಸಿರಾಂತ ತಾಯಿ, ನಿಮ್ಮನ್ನ ಕಾಣದೆ ಕಂಗೆಡುತಿದಾರೆ. ಮೊದಲು ನೀವು ದುರ್ಗಕ್ಕೆ ಹೋಗಿ ಅವರನ್ನ ಅಷ್ಟು ಸಂತಯಿಸಬೇಕು," ಎಂದನು.

ನಾಯಕ ಸುಮ್ಮನಿದ್ದನು. ಅವನ ಯೋಚನೆ ಇವರಿಗೆಲ್ಲ ಗೊತ್ತು. ಅಲ್ಲಿ ರಾಣಿ ಇದಾಳೆ. ಇವನ ಸಾವಿಗೆ ಏರ್ಪಾಡುಮಾಡಿ, ಸಾಯಲಿಲ್ಲವೆಂದು ತಿಳಿದಿದ್ದರೂ, ಸತ್ತನೆಂದೂ ಇವನು ನನ್ನ ಮಗ ಅಲ್ಲವೆಂದೂ ಹೇಳಿದ ಈ ತಾಯ ವಿಷಯದಲ್ಲಿ ತಾನು ಹೇಗೆ ನಡೆಯಬೇಕು?

ಸ್ವಲ್ಪ ಹೊತ್ತು ಯೋಚಿಸಿ ನೇಮಯ್ಯ, "ಅಮ್ಮಾಜಿಯವರು ಅಲ್ಲಿರೋದು ಒಂದು ಇಕ್ಕಟ್ಟು. ನಾವು ಬರುತೇವೆ ಅಂತ ಅವರಿಗೆ ಎರಡು ದಿನ ಮುಂದಾಗಿ ಸುದ್ದಿ ಮುಟ್ಟಿಸುವುದು. ಕಾಣುವುದೇ ಎಂತ ಅಲ್ಲಿ ಹೋದಮೇಲೆ ನೋಡುವುದು," ಎಂದನು.

ಶಾಸ್ತ್ರಿ, "ಹೌದು, ಈ ಹೊತ್ತೇ ಸುದ್ದಿ ಅಟ್ಟೋಣ. ನಾಯಕರು ನಾಳಿದ್ದು ಹೊರಡಬಹುದು," ಎಂದನು.

ಈ ಏರ್ಪಾಡೂ ಒಪ್ಪಿಗೆ ಆಯಿತು.

## ೧೨೩

ಈ ಮೊದಲೇ ಮಲ್ಲಯ್ಯ ಊರಿಂದ ಹಿಂದಿರುಗಿ ಬಂದು ಬಾಗಿಲಲ್ಲಿ ನಿಂತಿದ್ದನು. ನಾಯಕರು ಬಂದದ್ದು ತಿಳಿದು ಊರ ಜನದ ಸಂತೋಷ ಉಕ್ಕಿ ಹರಿಯಿತೆಂದೂ, ನಾಯಕರು ಆರೋಗಣೆ ಮುಗಿಸಿಕೊಂಡು ಕುದುರೆಯೇರಿ ದೊಡ್ಡ ಬೀದಿ ನಾಲ್ಕರಲ್ಲಿ ಹಾಯ್ದರೆ ಸಾಕು ಊರ ಜನ ಅಲ್ಲಲ್ಲೆ ಬಂದು ಸೇರುತ್ತಾರೆ ಎಂದೂ, ತಿಳಿಸಿದನು.

ಶಾಸ್ತ್ರಿ ನೇಮಯ್ಯ ಊರಿಗೆ ಹೊರಟರು. ನಾಯಕ ಬಸವಯ್ಯ ಸಿದ್ಧಪಡಿಸಿದ್ದ ಊಟವನ್ನು ಮುಗಿಸಿಕೊಂಡು ಸ್ವಲ್ಪಹೊತ್ತು ಕುಳಿತಿದ್ದು ಕುದುರೆಯೇರಿ ಊರೊಳಕ್ಕೆ ಹೋದನು.

ಊರ ಜನರ ಸಂಭ್ರಮ ಹೇಳತೀರದು. ದಾರಿಯುದ್ದಕ್ಕೆ ಊರು ಊರೇ ನೆರೆದು ನಿಂತಿತ್ತು. ಕೇರಿಗಳ ಸುಮಂಗಲಿಯರು ನಾಲ್ಕು ಚೌಕ ದಲ್ಲಿ ನಾಯಕನಿಗೆ ಆರತಿ ಮಾಡಿ ದೃಷ್ಟಿತೆಗೆದರು. ಮನೆ ಮುಂದೆಲ್ಲ ದೀಪ. ಮೂರು ತಿಂಗಳಲ್ಲಿ ಮತ್ತೆ ದೀಪಾವಳಿ ಬಂದಿತೆಂಬಂತಿತ್ತು. ನಾಯಕ ನಗರೇಶ್ವರನ ದೇವಾಲಯದ ಮುಂದೆ ಇಳಿದು ದೇವರಿಗೆ ಆರತಿ ಮಾಡಿಸಿ ದರ್ಶನ ತೆಗೆದುಕೊಂಡು ಪ್ರಸಾದದೊಡನೆ ಮಠಕ್ಕೆ ಹಿಂತಿರುಗಿದನು.

ಅಯ್ಯ ಅವನನ್ನು ಹಿಂದಿನಂತೆ ಮಠದ ಮೆತ್ತನೆಯ ಹಾಸಿಗೆಯಲ್ಲಿ ಮಲಗಿಸಿ ತಾನು ಎಂದಿನಂತೆ ಕೆಳಗೆ ಕುಳಿತನು.

ನಾಯಕ ಸಂಕೋಚಪಟ್ಟುಕೊಂಡನು. "ಆಗ ಮೈಯಲ್ಲಿ ಚೆನ್ನಿ ರಲಿಲ್ಲ. ಸುಪ್ಪತ್ತಿಗೆಯಲ್ಲಿ ಮೇಲೆ ಮಲಗಿದ್ದಾಯಿತು. ಈಗ ಹಾಗೆ ಮಾಡೋದು ಹೊಲ್ಲ," ಎಂದನು.

ಅಯ್ಯ, "ಏನಿಲ್ಲ, ನನ್ನ ರಾಜ. ಶಿವನ ಮನೆ ಭಕ್ತರಿಗೆ ತಮ್ಮ ಮನೆಯ ಒಳಮನೆ. ತಾಯಿ ಮಡಲಲ್ಲಿ ಮಲಗಿದ ಆರುವೊಗ ಅಂತ ಇದ್ದುಬಿಡಿರಿ. ಅಂದವಾಗಿ ನಿದ್ದೆಮಾಡಿ ಚೆಂದವಾಗಿ ಏದ್ದೇಳಿರಿ," ಎಂದು ಸಮಾಧಾನ ಹೇಳಿದನು.

"ಆಯಿತು, ಅಯ್ಯನವರೆ."

"ನಿಮ್ಮನ್ನೊಂದು ಮಾತು ಕೇಳಬೇಕು."

"ಕೇಳಿರಲ್ಲ."

"ನೀವು ಇಲ್ಲಿಂದ ಹೋದಿರಲ್ಲ. ಈಚೆಗೆ ಮೈ ಎಂದಿನಂತೆ ಇದೆಯಾ?"

ನಾಯಕ ಸ್ವಲ್ಪ ಯೋಚಿಸಿ, "ಇಲ್ಲ ಅನ್ನಬೇಕು. ದಿನಕ್ಕೆ ಎರಡು ದಿನಕ್ಕೆ ಉಸರು ಉಡುಗಿದಂತಾಗುತದೆ. ಇಲ್ಲಿ ಮಲಗಿದ ದಿನದ ಆ ನಿತ್ರಾಣ ತೀರಾ ಹೋಗಿಲ್ಲ. ಯಾಕೆ ಕೇಳುತೀರಿ?"

"ಇದು ಹಿಂಗಿರಬೇಕು ಅಂತ ತೋಚಿತು, ಕೇಳಿದಿವಿ. ಆ ಹೊತ್ತು ನಿಮ್ಮ ಮುಖಕ್ಕೆ ಹಾಕಿದ ಗೌಸು ಇಲ್ಲಿ ಬಿದ್ದಿತ್ತಲ್ಲ ಬಸವಯ್ಯ ಅದನ್ನ ಎತ್ತಿಟ್ಟಿದ್ದ ನೀವು ಅತ್ತ ಸಾರಿದ ಮೇಲೆ ಮರಳಿ ಯಾಕೋ ಮುಟ್ಟಿದ. ಹಗೂರ ಕಂಪು ಏನೋ ಕಂಡು ಇದೇನು ಅಂತ ತಂದು ನಮಗೆ ತೋರಿದ. ತೆಗೆದು ನೋಡಿದರೆ ಅದು ಜೋಗೀಹುಡಿಕಂಪು. ಸಿದ್ಧಿ ಹುಡುಕೋ ಮಂದಿ ಇದನ್ನ ಯೋಗ ಚೂರ್ಣ ಅಂತಾರೆ. ಕುಡಿಯೋಕೆ ರಾಮ ರಸ; ಮೂಸೋಕೆ ಯೋಗಚೂರ್ಣ. ನಾಲ್ಕರಲ್ಲಿ ಐದರಲ್ಲಿ ಒಮ್ಮೆ ಮೂಸಿದರೆ ಮನಸು ಒತ್ತಟ್ಟು ನಿಂತ ಹಂಗಾಗುತದೆ, ದೇವರ ನೆನೆ ಯೋದು ಸುಲಭ ಅನ್ನಸತದೆ. ಅದನ್ನ ಗೌಸಿನಾಗೆ ಲೇಪಮಾಡಿ ಮುಖದ ಮೇಲೆ ಕವುಚಿದ್ದಾರೆ. ಹೆಚ್ಚು ಮೂಸಿದರೆ ಬುದ್ಧಿ ಕೆಡಬೇಕು. ಇನ್ನು ಹೆಚ್ಚಾದರೆ ಗುಂಡಿಗೆ ನಿಲಬೇಕು. ಅದರಿಂದಲೇ ಆ ಹೊತ್ತು ನಿಮಗೆ ದನಿ ಹಂಗೆ ಕುಗ್ಗಿದ್ದು; ಕಾಲು ಜೊಂಪು ಬಂದದ್ದು. ಬೇರೆಯೋರಾಗಿದ್ದರೆ ಬದುಕೋ ಮಾತಿರಲಿಲ್ಲ. ನಿಮ್ಮ ಮೈ ಭದ್ರ, ಉಳುಕೊಂಡಿರಿ ಅಹುದು."

"ಈಗ ತೋರುತದೆ, ಈ ತಿಂಗಳೆಲ್ಲ ಮೈ ಏನೋ ಒಂದು ತೀರಾ ಗಿಯೇ ಇದ್ದದೆ."

"ಏನೂ ಅಚ್ಚರಿಲ್ಲ, ಇನ್ನೂ ತಿಂಗಳು ಎರಡು ತಿಂಗಳು ನೀವು ಮೈ ತೀರಾ ದಣಿಸಬಾರದು."

"ಈ ಕೆಲಸದ ದಿವಸದಲ್ಲಿ ಮೈ ದಣಿಯ ಬಾರದು ಅಂದರೆ ?"

"ಮೈ ಮರೆತು ಕೆಲಸ ಕೂಡದು. ಮೈ ಒಂದಿದ್ದರೆ ಎಲ್ಲಾ ಉಂಟು. ಅದ ವುಳಿದರೆ ಲೋಕ ಇಲ್ಲ."

"ಆಯಿತು, ಅಯ್ಯನವರೆ."

ಮರುದಿನ ಶಾಸ್ತ್ರಿ ನೇಮಯ್ಯ ಹೈದರನಿಗೆ ತಮ್ಮಲ್ಲಿ ಒಬ್ಬರು ಅವನನ್ನು ಕಾಣಬರುತ್ತೇವೆ ಎಂದು ಹೇಳಿಕಳುಹಿಸಿದರು. ಆ ದಿನವೆಲ್ಲ ನಾಯಕ ನಗರದ ಕಾವಲಿನ ವಿಷಯ ಮಲ್ಲಯ್ಯನಿಗೆ ತಿಳಿವಳಿಕೆ ಕೊಟ್ಟು ಮಾರನೆಯ ದಿನ ದುರ್ಗವನ್ನು ಕುರಿತು ತೆರಳಿದನು.

## ೧೨೪

ಶಾಂತವ್ವ ಆ ದಿನ ದೇವಾಲಯದಿಂದ ಅರಮನೆಗೆ ಹೊತ್ತಾಗಿ ಹಿಂದಿರುಗಿದಾಗ ಅಲ್ಲಿ ಯಾರಿಗೂ ಅವಳು ಸತ್ತಿದ್ದು ಮತ್ತೆ ಬದುಕಿದಳೆನ್ನುವುದು ತಿಳಿಯದು. ಜ್ವರದಲ್ಲಿ ಮಲಗಿದ್ದ ಕೆಂಚವ್ವೆ ತನ್ನ ಒಡತಿ ಬರುವುದು ಹೊತ್ತಾಯಿತು ಏಕೊ ಎಂದು ಚಿಂತಿಸುತ್ತಿದ್ದಳು; ಅವಳು ಬಂದಳೆಂದು ತಿಳಿದು ಸಮಾಧಾನಗೊಂಡಳು. ಅತ್ತೆ ಇವಳ ವಿಷಯ ಯೋಚನೆ ಹಚ್ಚಿಕೊಳ್ಳುತ್ತಿರಲಿಲ್ಲ. ಮೊದಲು ಅವಳು ದೇವಾಲಯಕ್ಕೆ ಹೋದದ್ದು ಅವಳಿಗೆ ತಿಳಿಯದು. ಹೊತ್ತಾಯಿತು ಹಿಂದಿರುಗಲಿಲ್ಲ ಎಂದು ಆಳು ಮಕ್ಕಳು ಓಡಿಯಾಡಿದಾಗ ಇದು ತಿಳಿದು ಅವಳು ಯಾರಾದರೂ ಬೇಕಾದರೆ ಹೋಗಿ ನೋಡಿಕೊಂಡು ಬನ್ನಿ ಎಂದಳು. ಈ ನಿಶ್ಚಯ ಆಗಿ ಯಾರಾದರೂ ಅತ್ತ ಹೊರಡಬಹುದೆನ್ನುವವೇಳೆಗೆ ಶಾಂತವ್ವ ದಾರಿಯಲ್ಲಿ ಬರುತ್ತಿರುವುದು ಕಂಡಿತು. ಗರ್ಭಿಣಿ ಬೆಟ್ಟ ಹತ್ತುವುದು ಬೇಡ ಎಂದು ತೊಟ್ಟಿಲನ್ನು ಕಳುಹಿಸಬಹುದಾಗಿತ್ತು. ಗುಡಿಯಿಂದ ಬರುವಾಗ ತೊಟ್ಟಿಲು ಬೇಡವೇನೊ, ಇಲ್ಲದೆ ಇದ್ದರೆ ಅವರು ಹೇಳುತ್ತಿರಲಿಲ್ಲವೆ, ಎಂದು ಆಳು ಮಕ್ಕಳು ಸುಮ್ಮನಾದರು.

ಜೀವ ಕೊಡಲು ಅನುವಾಗಿದ್ದು, ಅದು ಕೂಡದೆಂದು ಬಿಡುಗಡೆ ಹೊಂದಿ, ಗುಡಿಯ ಬಾಗಿಲಿಂದ ಹೊರಬಿದ್ದಾಗ ಶಾಂತವ್ವ ಹಾವ ಬಾಯಿಂದ ಜಾರಿದ ಕಪ್ಪೆಯಂತೆ ಅರೆ ಜೀವವಾಗಿದ್ದಳು. ಐದು ನಿಮಿಷದ ಹಿಂದಿನ ಭಾವದ ಉದ್ವೇಗ ಇನ್ನೂ ತೀರಾ ಇಳಿಯದೆ ಇದ್ದದರಿಂದ ಅವಳಿಗೆ ತನ್ನ ಈ ನಿತ್ರಾಣ ಆಗ ಅರಿವಾಗಲಿಲ್ಲ. ಸ್ವಲ್ಪ ದಾರಿ ನಡೆದು ಬೆಟ್ಟವನ್ನು ಹತ್ತಲು ತೊಡಗಿದಾಗ ಸೋತ ಮೈ ಅವಳ ಮನಸ್ಸನ್ನು ತನ್ನತ್ತ ಸೆಳೆಯಿತು; ಅವಳು ತಾನು ತೀರ ಮೈ ಸೋತಿರುವುದನ್ನು ಕಂಡುಕೊಂಡಳು. ಅವಳು ಆ ದಿನ ಅರಮನೆಗೆ ಹಿಂದಿರುಗುವ ಯೋಚನೆ ಇಟ್ಟುಕೊಂಡಿರಲಿಲ್ಲ. ಇಲ್ಲದಿದ್ದರೆ ತೊಟ್ಟಿಲು ಬರಲೆಂದು ಹೇಳಿರುತ್ತಿದ್ದಳು. ಈಗ ಹೇಳಿಕಳುಹಿಸಿ ಅದನ್ನು ತರಿಸುವುದೆಂದರೆ ಮತ್ತಷ್ಟು ಹೊತ್ತಾಗುತ್ತದೆ. ಹೀಗೆಂದು ಅವಳು ಆ ಸೋತ ಮೈಯನ್ನು ಮತ್ತಷ್ಟು

ಸೋಲಿಸಿದಳು; ಅರೆ ಜೀವವನ್ನು ಕೊರೆಮಾಡಿಕೊಂಡು ಮನೆಯನ್ನು ಸೇರಿದಳು. ಏದುತ್ತ ನಿಟ್ಟುಸಿರು ಬಿಡುತ್ತ ಹಾಸಿಗೆಯಲ್ಲಿ ಮಲಗಿದಳು.

ಕೆಂಚವ್ವೆ ಜ್ವರದಲ್ಲೆ ಒಡತಿಯ ಹತ್ತಿರ ಬಂದು ಕುಳಿತಳು; ಅವಳಿಗೆ ಹಾಲು ಹಣ್ಣಿನ ರಸವನ್ನು ತರಿಸಿ ಕುಡಿಸಿದಳು. ಮೈ ಮುಖದ ಬೆವರನ್ನು ಒರಸಿ, ತಾಯಿ ಇಲ್ಲದ ತಬ್ಬಲಿ ಮಕ್ಕಳು ಬಸಿರಾಗಬಾರದು, ಎಂದು ನೊಂದಳು.

ಶಾಂತವ್ವನಿಗೆ ಆ ರಾತ್ರಿ ಜ್ವರ ಬಂದಿತು.

ಅದೇ ರಾತ್ರಿ ನಗರದಿಂದ ದಿನ ಎರಡು ದಿನಕ್ಕೆ ಒಮ್ಮೆ ಬರುವ ವಾಡಿಕೆಯ ಬೇಹು ಬಂದಿತು. ಅದು ಬರುವುದು ಯಾವಾಗಲೂ ರಾಣಿಯ ಹೆಸರಿಗೆ. ಬಂದ ಓಲೆಯನ್ನು ಅವಳಿಗೆ ನಂಬಯ್ಯ ಓದಿ ಹೇಳುವನು; ಅವಳಿಗೆ ಇಷ್ಟ ತೋರಿದಷ್ಟನ್ನು ರಾಣಿ ಮನೆಯಲ್ಲಿ ಮಂದಿಯಲ್ಲಿ ತಿಳಿಸುವಳು. ಆ ದಿನದ ಸುದ್ದಿ ಏನೋ ಹೊರಕ್ಕೆ ಬರಲಿಲ್ಲ. ಹೊರಕ್ಕೆ ಬಂದಿದ್ದರೂ ಶಾಂತವ್ವ ಕೇಳಿ ತಿಳಿಯುವಂತಿರಲಿಲ್ಲ.

ಮರುದಿನ ಬೆಳಗಾಗುವ ಮುನ್ನ ರತ್ನಪಡಿ ಪೆಟ್ಟಿಗೆ ಹತ್ತಾರು ಆಳುಗಳ ಭುಜವನ್ನೇರಿ ಎತ್ತಲೊ ಹೊರಟವು. ಈ ಸಂಗತಿ ಮೊದಲು ಉಳಿದ ಊರಿಗೆ ತಿಳಿಯಲಿಲ್ಲ; ತಿಳಿದಾಗ ಜನ ಬಹು ಅಂಜಿದರು; ತಾವೂ ಊರು ಬಿಟ್ಟು ಹೊರಡುವುದೇ ಎಂದು ಕೇಳಿದರು. ನಂಬಯ್ಯ "ಅದಕ್ಕೇನೂ ಕಾರಣವಿಲ್ಲ. ಎಲ್ಲವೂ ಒಂದು ಕಡೆ ಇರುವುದು ಬೇಡ ಎಂದು ಅಮ್ಮಾಜಿಯವರು ಇವನ್ನ ಕಾವಲೇ ದುರ್ಗಕ್ಕೆ ಕಳುಹಿಸುತಿದ್ದಾರೆ," ಎಂದನು.

ಆ ದಿನ ಮಧ್ಯಾಹ್ನಕ್ಕೆ ಮುಂದಾಗಿ ದುರ್ಗದ ಹಳ್ಳಿಯ ಗಡಿಯಲ್ಲಿ ಯಾವುದೋ ಪಡೆ ಬಂದು ಪಾಳೆಯ ಹಾಕಿದ್ದು ತಿಳಿಯಿತು. ಇದು ಯಾವ ಪಡೆ ಎಂದು ಇವರಿಗೆ ತಿಳಿಯದು. ತಮ್ಮ ಪಡೆಯಾವುದಾದರೂ ಬರುವ ಸಂಭವ ಉಂಟೆಂದು ಇವರಿಗೆ ಮೊದಲಾಗಿ ಸುದ್ದಿ ಬಂದಿರಲಿಲ್ಲ.

ಇಳಿ ಹೊತ್ತಿನಲ್ಲಿ ದುರ್ಗದ ಹಳ್ಳಿ ಗೌಡ ಅದು ಮೈಸೂರ ನವಾಬರ ಪಡೆಯಂತೆ, ರಾಣಿಯವರು ದುರ್ಗದಲ್ಲಿರುವುದು ತಿಳಿದು ನವಾಬರು ಅವರನ್ನು ಕಾಣಬರಬೇಕಂತಿದಾರಂತೆ, ಎಂದು ರಾಣಿಗೆ ವರದಿ ಕಳು

ಹಿಸಿದನು. ಈ ವಿಷಯುವನ್ನು ಪಡೆಯ ನಾಯಕ ಸ್ವತಃ ಗೌಡನಿಗೆ ತಿಳಿಸಿದ್ದನು.

ಇಳಿ ಹೊತ್ತಿನಲ್ಲಿ ಅರಮನೆಯಿಂದ ಮತ್ತೆ ಕೆಲವು ಪೆಟ್ಟಿಗೆಗಳು ಸಾಗಿಹೋದವು. ಜನ ಅವು ಇನ್ನಷ್ಟು ರತ್ನಪಡಿ ಪೆಟ್ಟಿಗೆಗಳು ಇರ ಬೇಕು ಎಂದುಕೊಂಡರು. ಅರಮನೆಯ ಎಡಗಡೆಯ ತೊಟ್ಟಿಯಲ್ಲಿ ಹೆಣ್ಣು ಗಂಡಾಳಿನ ಓಡಾಟ ಬಹಳವಾಗಿತ್ತು.

ದೀಪ ಹಚ್ಚಿದಮೇಲೆ ರಾಣಿಯ ತೊಟ್ಟಿಯಿಂದ ಯಾರೊ ನಾಲ್ಕು ಜನ ಪ್ರಯಾಣಕ್ಕೆ ಎಂಬಂತೆ ಹೊರಟರು. ಅದು ಯಾರು ಎಂದು ಹೊರಗಿರುವವರಿಗೆ ತಿಳಿಯಲಿಲ್ಲ. ಹೊರಟವರು ವಾಡಿಕೆಯಾಗಿ ಇಳಿ ಯುವ ದಾರಿಯಿಂದ ಇಳಿದು ಹೋಗಲಿಲ್ಲ; ಬೇರೊಂದು ದಾರಿಯಿಂದ ಇಳಿದುಹೋದರು. ಇದು ಯಾರು ಎಲ್ಲಿಗೆ ಹೋಗುತ್ತಿದಾರೆ ಎಂದು ಇವ ರನ್ನು ನೋಡಿದವರು ತಮ್ಮಲ್ಲೇ ಯೋಚಿಸಿಕೊಂಡರು.

ಆ ದಿನವೆಲ್ಲ ಶಾಂತವ್ವನಿಗೆ ಜ್ವರ. ಮಧ್ಯೆ ಮಧ್ಯೆ ಅವಳು ಕನವ ರಿಸುತ್ತಿದ್ದಳು. ಒಮ್ಮೆ ತನ್ನ ಇನಿಯ ಬಂದಂತೆ; ಒಮ್ಮೆ ಆ ಕೋಣೆಯಲ್ಲಿ ಹಿಂದೆ ಇದ್ದು ಅದರ ಬಾಗಿಲಿಂದ ಕಮರಿಗೆ ಹಾರಿದ ಆ ರಾಜಪತ್ನಿಯನ್ನು ಕಂಡಂತೆ; ಒಮ್ಮೆ ಯಾವನೊ ಧೂರ್ತ ತನ್ನನ್ನು ಸೋಕಲು ಬಂದ ನೆಂಬಂತೆ. ಮಧ್ಯೆ ಸ್ವಲ್ಪ ಸ್ವಲ್ಪ ಹೊತ್ತು ಅವಳು ಎಚ್ಚರವಾಗಿರುವಳು. ಆ ವೇಳೆಯಲ್ಲಿ ಬುದ್ಧಿ ತಿಳಿಯಾಗಿಯೆ ಇರುವುದು. "ಈ ಹಾಳು ಜ್ವರ ಎಂಥೆಂಥದೊ ಕನಸು, ಕೆಂಚು," ಎಂದು ಒಂದು ಸಲ ಅವಳು ಕೆಂಚವ್ವೆಗೆ ಹೇಳಿದಳು. ಕೋಣೆಯೊಳಕ್ಕೆ ಗಾಳಿ ಬರುತ್ತಿರುವುದು ಸಾಲದು ಎಂದು ಅವಳಿಗೆ ತೋರಿತು. ಅವಳು ಸೇವಕಿಗೆ, "ಆ ಕಮರಿಯ ಬಾಗಿಲು ತೆರೆ, ಗಾಳಿ ಬರಲಿ," ಎಂದು ಹೇಳಿದಳು. ಸೇವಕಿ ಅದನ್ನು ತೆರೆದಳು. ಕೆಂಚವ್ವೆ ಅವಳನ್ನು ಒಡತಿಯ ಹತ್ತಿರ ಕುಳ್ಳಿರಹೇಳಿ, ಹೊರಗಡೆಯ ತನ್ನ ಕೋಣೆಗೆ ಹೋಗಿ ಮಲಗಿಕೊಂಡಳು. ಅವಳಿಗೂ ಜ್ವರ.

ಅರಮನೆಯಿಂದ ನಾಲ್ಕು ಜನ ಹೊರಟು ಬೇರೆಯ ದಾರಿಯಲ್ಲಿ ಇಳಿದುಹೋದಮೇಲೆ, ಸ್ವಲ್ಪ ಹೊತ್ತಿನಲ್ಲಿ ವಾಡಿಕೆಯ ದಾರಿಯಿಂದ ಅದು ಯಾರೊ ಹತ್ತು ಜನ ದುರ್ಗಕ್ಕೆ ಹತ್ತಿ ಬರುತ್ತಿರುವುದು ಅಲ್ಲಿಯ

ಜನರಿಗೆ ಕಂಡಿತು. ಇದು ಯಾರಿರಬಹುದು? ಮಧ್ಯಾಹ್ನ ವೈಸೂರ ಪಡೆ ಒಂದು ಹಳ್ಳಿಗೆ ಬಂತಲ್ಲ, ಅದೇ ಏನಾದರೂ ಏರಿ ಬರುತ್ತಿದೆಯೊ? ಬಂದರೆ ಇವರ ಗತಿ? ಹತ್ತು ಜನ ಅರಮನೆಯ ಹತ್ತಿರ ಬಂದರು. ರಾಣಿಗೆ ಇದನ್ನು ತಿಳಿಸಬೇಕು ಎಂದರು.

ಆಳು ಮಕ್ಕಳು ಹೊರಕ್ಕೆ ಬಂದರು. ಅವರಿಗೆ ತುಂಬ ಬೇಸರ ಆಗಿದ್ದಂತೆ ಕಂಡಿತು. "ಅಮ್ಮಾಜಿ ಆಗಲೆ ಬೆಟ್ಟ ಇಳಿದರು. ಅವರಿಗೆ ಏನಾದರೂ ಹೇಳೋರು ಇಳಿದುಹೋಗಿ ಹೇಳಿರಿ," ಎಂದು ರಾಣಿ ಇಳಿದ ದಾರಿಯ ಕಡೆಗೆ ಕೈಮಾಡಿ ತೋರಿಸಿದರು.

ಜನ ಪಟ್ಟ ಭಯಕ್ಕೆ ಇತಿ ಇಲ್ಲ, ಮಿತಿ ಇಲ್ಲ. ಹಗೆ ಬೆಟ್ಟದ ಮೇಲಕ್ಕೆ ಬರುತ್ತಾನೆ ಎಂದು ತಿಳಿದೇ ರಾಣಿ ಓಡಿಹೋಗಿರಬೇಕು, ಎಂದು ಅವರಿಗೆ ತೋರಿತು. ಬರುತ್ತಿರುವವನು ಹಗೆ ಎಂದು ನಿಶ್ಚಯವಾಯಿತು. ಇವರು ನಡುಗಿದರು. ರಾಣಿ ತಮ್ಮನ್ನು ಬಿಟ್ಟು ತಾನು ಮಾತ್ರ ತಪ್ಪಿಸಿಕೊಂಡಳು; ಅವರು ಅವಳನ್ನು ಹೀಯಾಳಿಸಿ ಬೈದರು. "ಇವರಿಲ್ಲಿರುತ್ತಾರೆ ಅಂತ ನಾವು ಬಂದರೆ ನಮ್ಮನ್ನ ವೈರೀಗೆ ಬಲಿಕೊಟ್ಟು ಇವರು ಹೊರಟುಬಿಟ್ಟರೆ?" ಎಂದು ಮೊರೆದಾಡಿದರು.

## ೧೨೫

ಕಿರಿಯ ರಾಣಿ ಇನ್ನೂ ಅರಮನೆಯಲ್ಲಿದ್ದಾಳೆ, ಜ್ವರದಲ್ಲಿ ಮಲಗಿದ್ದಾಳೆ, ಅವಳ ಗತಿಯೇನು, ಎಂದು ಯಾರೂ ಯೋಚಿಸಲಿಲ್ಲ. ಇವರನ್ನು ಬಿಟ್ಟಂತೆ ರಾಣಿ ಈ ಸೊಸೆಯನ್ನೂ ಹಗೆಯ ಕೈಗೆ ಬಿಟ್ಟುಹೋಗಿರಬಹುದೆ? ಈ ಪ್ರಶ್ನೆ ಯಾರ ಮನಸ್ಸಿಗೂ ಬರಲಿಲ್ಲ. ಹಾಗೂ ಬಂದಿದ್ದರೆ ಉತ್ತರ ಸಿದ್ಧವಾಗಿತ್ತು. ರಾಣಿ ಸೊಸೆಯ ಕಷ್ಟಸುಖವನ್ನು ಮನಸ್ಸಿಗೆ ಹಚ್ಚಿಕೊಂಡದ್ದೆಂದು? ಸೊಸೆ ಅಂದೆ ಸತ್ತಿದ್ದರೂ ಅವಳಿಗೆ ಸಮ್ಮತವೆ.

ಹಗೆಯ ಪಡೆ ಬಂದರೆ ಏನುಮಾಡುವುದು? ಇದ್ದ ಹತ್ತು ಜನ, ಅರಮನೆಯ ಆಳು, ಊರ ಗಂಡಾಳು, ದಾರಿಯ ತಲೆಯಲ್ಲಿ ನಿಲ್ಲಬಹುದು; ಬರುವವರ ಮೇಲೆ ಕಲ್ಲು ಉರುಳಿಸಬಹುದು. ತೀರ ಹತ್ತಿರ ಬಂದವರನ್ನು ದೊಣ್ಣೆಗಳಿಂದ ಹೊಡೆಯಬಹುದು. ಈಟಿಯಿಂದ ತಿವಿಯಬಹುದು.

ಆದರೆ ಇದು ಎಷ್ಟು ಹೊತ್ತು ನಡೆಯಬಹುದಾದ ಕೆಲಸ? ಬಂದವರು ಹತ್ತು ಜನವಾದರೆ ಈ ಹತ್ತು ಜನ ಅವರನ್ನು ತಡೆಯಬಹುದು. ನೂರು ಜನ ಬಂದರೆ? ಹೇಗಾದರೂ ಆಗಲಿ ಎಂದು ಯೋಚಿಸಿಕೊಂಡು ಈ ಜನರು ಹೋಗಿ ಊರ ಬಾಗಿಲಿಂದ ಹತ್ತು ಗಜ ಕೆಳಕ್ಕೆ ಇಳಿದು ಕಲ್ಲು, ಮಣ್ಣು ಹೆಂಟೆ, ಕೋಲಿನ ತುಂಡುಗಳು ಇವನ್ನು ಪಕ್ಕದಲ್ಲಿ ಒಟ್ಟಿಕೊಂಡು ನಿಂತುಕೊಂಡರು. ಕೈಗಳಲ್ಲಿ ದೊಣ್ಣೆ, ಈಟಿ, ಮಚ್ಚುಕತ್ತಿಯನ್ನು ಹಿಡಿದು ನಿಂತರು.

ಒಬ್ಬ ಸ್ವಲ್ಪ ಮುಂದರಿದುಹೋದನು. ಬೆಟ್ಟ ಏರಿ ಬರುತ್ತಿದ್ದ ಜನ ದಾರಿ ಮುರಿದು, ಅವನು ಕೆಳಗಡೆ ಕಂಡಾಗ, "ಯಾರೊ ಅದು ಬರುತಿರೋದು? ಹೇಳಿ ಬರಬೇಕು. ಇಲ್ಲ ಅಂದರೆ ಕೋವೀಲಿ ಸುಡ್ತೇವಿ," ಎಂದನು. ಕೆಳಗಿಂದ ಒಬ್ಬನು "ಯಾಕೊ ಹಂಗೆ ಕೇಳ್ತಿ? ಯಾರು ಬರ್‍ತಾರೆ ತಿಳೀದೆ? ಯಾರು ಬರ್‍ತಾರೇಂತ ಹೇಳಿಕಳುಹಿಸಿತು, ಆವರೇ ಬರ್‍ತಾರೆ," ಎಂದನು.

ಊರ ಬಾಗಿಲ ಒಳಗಿಂದ ಒಬ್ಬನು ಇವನನ್ನು, "ಯಾರಂತೊ ಬರೋದು?" ಎಂದು ಕೇಳಿದನು.

"ಯಾರು ಬರ್‍ತಾರೆ ಅಂದಿದ್ದರು ಆವರೇ ಬರ್‍ತಾರೆ ಅಂತಾನೆ. ನೋಡವನ ಕೊಬ್ಬು!" ಎಂದು ಇವನು ಉತ್ತರ ಹೇಳಿದನು.

ಯಾರು ಬರುತ್ತಾರೆ ಎಂತ ಆ ದಿನ ತಿಳಿದಿದ್ದಿತು? ನವಾಬರು ಬರುತ್ತಾರೆ ಅಂತ. ಈ ಮಾತಿನ ಅರ್ಥ ಏನು? ನವಾಬ ಬೆಟ್ಟವೇರಿ ಬರುತ್ತಿದಾನೊ? ರಾಣಿಯಂತೂ ತಪ್ಪಿಸಿಕೊಂಡಳು.

"ಯಾರು ಬಂದರಂತೆ?" ಎಂದು ಪ್ರಶ್ನೆ. "ಬರ್‍ತಾರೆ ಅಂದರಲ್ಲಾ ಅವರೇ ಅಂತೆ" ಎಂದು ಉತ್ತರ.

ಯಾರೊ ಬಂದರು ಎಂಬ ಮಾತು ಬಾಯಿಂದ ಬಾಯಿಗೆ ಹಾಯ್ದಿತು. ಶಾಂತವ್ವನ ತೊಟ್ಟಿಯಲ್ಲಿ ಹೊರಗಡೆ ಕೋಣೆಯಲ್ಲಿ ಮಲಗಿದ್ದ ಕೆಂಚವ್ವೆ ಹಾಸಿಗೆಯನ್ನು ಬಿಟ್ಟು ಹೊರಕ್ಕೆ ಬಂದು ನಿಂತಳು. "ಯಾರು ಬಂದರಂತೆ" ಎಂದು ಬಾಗಿಲ ಬಳಿ ಇದ್ದ ಆಳನ್ನು ಕೇಳಿದಳು.

ಆ ಹೊತ್ತಿನಲ್ಲಿ ಒಳಗಡೆ ಶಾಂತವ್ವ ಜ್ವರದ ಕಳವಳದಲ್ಲಿದ್ದಳು.

ಕೆಂಚವ್ವೆಯ ಪ್ರಶ್ನೆ ಆ ಮಂಪರದಲ್ಲಿ ಬೆರೆತು ಅವಳೂ "ಯಾರು ಬಂದರು?" ಎಂದು ಕೇಳಿದಳು.

ಹೊರಬಾಗಿಲ ಆಳು ಕೆಂಚವ್ವೆಗೆ, "ಯಾರೊ ಬಂದರು ಅಂತಾರೆ. ಯಾರೊ ತಿಳಿಯವೊಲ್ಲದು," ಎಂದನು.

ಕೆಂಚವ್ವೆ, "ಯಾರೋ ಬಂದರು? ಏನ್ಹಂಗಂದರೆ?" ಎಂದಳು.

ಒಳಗಡೆ ಶಾಂತವ್ವ ಕಳವಳದಲ್ಲಿ ಏನು ಕಂಡಳೊ, "ಯಾರೋ ಬಂದರು," ಎಂದು ಚೀರಿ ಎದ್ದು ಕುಳಿತಳು; ಭಯದಿಂದ ತೆರೆದ ದೃಷ್ಟಿಯಿಂದ ವಿಹ್ವಲವಾಗಿ ಇತ್ತ ಅತ್ತ ನೋಡಿದಳು; ಕ್ಷಣದಲ್ಲಿ ಎದ್ದು ಅಗಲವಾಗಿ ತೆರೆದಿದ್ದ ಕಮರಿಯ ಕಡೆಯ ಬಾಗಿಲ ಕಡೆಗೆ ಧಾವಿಸಿದಳು.

ಪಕ್ಕದಲ್ಲಿದ್ದ ಚೇಟಿ, "ಅಯ್ಯೊ ಅವ್ವಾ!" ಎಂದು ಅವಳನ್ನು ಹಿಡಿದು ಕೊಳ್ಳಲು ಹಿಂದೆ ಓಡಿದಳು.

ಇವರ ಈ ಕೂಗುಗಳನ್ನು ಕೇಳಿ ಕೆಂಚವ್ವೆ ಒಳಕ್ಕೆ ಓಡಿಬಂದಳು. ಶಾಂತವ್ವ ಆ ವೇಳೆಗೆ ಕಮರಿಯ ಬಾಗಿಲನ್ನು ಮುಟ್ಟಿದ್ದಳು. ಒಂದು ಕ್ಷಣದ ಹತ್ತರ ಒಂದು ಪಾಲಿನಲ್ಲಿ ಅವಳು ಕಮರಿಯೊಳಕ್ಕೆ ಬೀಳಬೇಕು; ಅವಳಿಗೆ ಕನವರಿಕೆ ತಿಳಿದಂತೆ ಕಂಡಿತು; ಅವಳು ತಟ್ಟನೆ ನಿಂತಳು. ಅದೇನೊ ಆಗಿ ಅವಳ ಕಾಲು ಜಾರಿತು; ಮೈ ದಂಡಾಕಾರವಾಗಿ ಹಿಂದಕ್ಕೆ ಬಿದ್ದಿತು; ಮಂಡೆ ಕಠೋರ ಶಬ್ದದಿಂದ ನೆಲವನ್ನು ತಾಗಿತು.

ಚೇಟಿ ಅವಳನ್ನು ತಡೆಯುವುದಕ್ಕೆ ನೋಡಿದಳು. ಆ ಕ್ಷಣಾಂಶ ಅವಳ ಯತ್ನ ಹಿಂದಾಯಿತು. ಅವಳು ಶಾಂತವ್ವನನ್ನು ಬಿದ್ದಮೇಲೆಯೆ ಎತ್ತಿಕೊಂಡಾಯಿತು.

ಕೆಂಚವ್ವೆಯೂ ಹತ್ತಿರ ಬಂದಳು. ಒಡತಿಯ ಮುಖವನ್ನು ನೋಡಿದಳು; ಬಹಳ ಭಯಪಟ್ಟಳು ಶಾಂತವ್ವನ ತುಟಿ ಕಪ್ಪಗಾಗಿದ್ದಿತು. ಕಣ್ಣು ಅರೆಮುಚ್ಚಿಕೊಂಡು ಪರೆಕಟ್ಟಿದಂತೆ ಮಂಕಾಗಿದ್ದಿತು.

ಅವಳು ಒಳಗೆ ಓಡಿಬಂದು ತಣ್ಣೀರು ತೆಗೆದುಕೊಂಡು ಹೋಗಿ ಶಾಂತವ್ವನ ಮುಖದಮೇಲೆ ಚಿಮುಕಿಸಿದಳು; "ಒಳಗೆ ಎತ್ತಿತಾ, ಗಾಳಿ ಹಾಕು," ಎಂದು ಜೊತೆಗಾತಿ ಚೇಟಿಗೆ ಹೇಳಿದಳು.

ಈ ವೇಳೆಗೆ ಪಕ್ಕದ ತೊಟ್ಟಿಯ ಚೇಟಿಯರೂ ಬಂದು ಸೇರಿದರು. ಎಲ್ಲರೂ ಶಾಂತವ್ವನನ್ನು ಸುತ್ತಿಕೊಂಡು ಗಾಳಿ ಹಾಕುತ್ತ ಕೆಲವರು, ಕಾಲು ತಣ್ಣಗಾಯಿತೆಂದು ಅದನ್ನು ತಿಕ್ಕುತ್ತ ಕೆಲವರು, ಒಬ್ಬರೊಡನೊಬ್ಬರು ಪಿಸುಮಾತಾಡುತ್ತ ಕೆಲವರು, ಉಳಿದೆಲ್ಲ ಸಂಗತಿಯನ್ನೂ ಮರೆತರು.

ಅಷ್ಟು ಹೊತ್ತಿಗೆ ಊರ ಬಾಗಿಲಲ್ಲಿ, "ನಾಯಕರು ಬಂದರು," ಎಂದು ಕೂಗು ಕೇಳಿಸಿತು. ಜನದ ಸಂತೋಷ ಹಿಡಿಯಲು ತೀರದು. ಹಗೆ ಬಂದನೆಂದು ಅಂಜಿ ನಡುಗುತ್ತಿದ್ದರೆ ನಾಯಕರು ಬಂದು ಕಾಪಾಡಬೇಕೆ? ಏನು ನಮ್ಮ ಪುಣ್ಯ ಎಂದು ಜನ ಹೇಳಿಕೊಂಡಿತು.

"ನಾಯಕರು ಬರುವುದು ತಿಳಿದಿರಲಿಲ್ಲವೆ?" ಎಂದು ಅವನ ಜೊತೆಯ ಜನ ಊರ ಮಂದಿಯನ್ನು ಕೇಳಿತು.

"ಇಲ್ಲ."

"ನಿನ್ನೆ ರಾತ್ರಿ ಸುದ್ದಿ ಬಂದಿರಬೇಕಲ್ಲ?"

"ಅದು ನಮಗೆ ತಿಳಿಯದು."

"ಅರಮನೇಲಿ?"

"ನಮಗೇನು ಗೊತ್ತಪ್ಪ?"

"ಅಮ್ಮಾಜಿಯವರಿದ್ದಾರಾ?"

"ಸಂಜೆ ಬೆಟ್ಟ ಇಳಿದುಹೋದರು."

"ಚಿಕ್ಕ ರಾಣಿಯವರು?"

"ಜ್ವರದಾಗೆ ಮಲಗಿದಾರೆ."

ಶಾಂತವ್ವ ಜ್ವರದಲ್ಲಿ ಮಲಗಿರಲಿಲ್ಲ; ಜ್ವರ ಅವಳನ್ನು ಬಿಟ್ಟಿತ್ತು. ಬಿದ್ದ ಪೆಟ್ಟಿನಿಂದ ಜೀವಹೋಗಿ, ಮೈ ಕೈ ಕಾಲು ತಣ್ಣಗಾಗಿ, ಅವಳು ಮಗುವಿನ ನಿದ್ರೆಯಂಥ ಅಕ್ಷುಬ್ಧ ನಿದ್ರೆಯಲ್ಲಿ ಸಾವಿನ ಮಡಿಲಲ್ಲಿ ಮಲಗಿದ್ದಳು.

ಕೆಲವು ನಿಮಿಷದಮೇಲೆ ನಾಯಕ ಅರಮನೆಯನ್ನು ಮುಟ್ಟಿದಾಗ ಅವನು ಹೆಂಡತಿಯನ್ನು ಈ ಸ್ಥಿತಿಯಲ್ಲಿ ನೋಡಿದನು.

ಭೈರವ ಕೊನೆಗೂ ತನ್ನ ಬಲಿಯನ್ನು ಕೊಂಡೇ ಇದ್ದನು.

## ೧೨೬

ಅರಮನೆಯೊಳಕ್ಕೆ ಹೆಜ್ಜೆ ಇಟ್ಟಾಗ ನಾಯಕನಿಗೆ ಹೆಣ್ಣುಮಕ್ಕಳು ಒಳಗೆ ಅಳುವ ಧ್ವನಿ ಕೇಳಿಸಿತು. ಹತ್ತಿರ ಕಂಡ ಸೇವಕನನ್ನು, "ಯಾಕೊ, ಏನಾಯಿತು ?" ಎಂದು ಕೇಳಿ ಅವನು ಉತ್ತರಕ್ಕೆ ಕಾಯದೆ ಒಳಗಡೆ ಹೋದನು.

ತನ್ನರಸಿ ಬಿದ್ದಿರುವ ಸ್ಥಿತಿಯನ್ನು ನೋಡಿ ಅವನಿಗೆ ಭಯವಾಯಿತು; ಆದರೆ ಅವಳು ಸತ್ತಿದ್ದಾಳೆ ಎಂದು ಅವನು ಗ್ರಹಿಸಲಿಲ್ಲ.

ಹೆಣ್ಣುಮಕ್ಕಳು ಅವನಿಗೆ ದಾರಿ ಕೊಟ್ಟರು. ಅವನು ಶಾಂತವ್ವನ ಪಕ್ಕದಲ್ಲಿ ಕುಳಿತು ಮುಖವನ್ನು ಕೈಯನ್ನು ಮುಟ್ಟಿ ನೋಡಿದನು.

ಆಗ ಅವನಿಗೆ ಅವಳ ಜೀವ ಹೋಗಿದೆಯೆಂದು ಕಂಡಿತು. ಆದರೂ ಹಿಂದುಮುಂದು ತಿಳಿಯದೆ ಇದ್ದದ್ದರಿಂದ ಮನಸ್ಸು ಅದನ್ನು ಒಡನೆ ನಂಬಲಿಲ್ಲ. ಅವನು ಅವಳ ಬಲಗೈಯ ನಾಡಿಯನ್ನು ಹಿಡಿದು ನೋಡಿದನು; ಅದು ಮಿಡಿಯುತ್ತಿರಲಿಲ್ಲ.

ನಾಯಕ ನೀಳವಾಗಿ ಉಸಿರೆಳೆದು ತಲೆಯನ್ನು ಮೇಲಕ್ಕೆ ಎತ್ತಿದನು. ಎದುರಿಗೆ ಕೆಂಚವ್ವೆ ನಿಂತಿದ್ದಳು. ಇವನ ನಿರಾಶೆಯ ನೋಟ ಅವಳ ಎದೆಯನ್ನಿರಿಯಿತು. ಅವಳು ಬಾಯಿ ತೆರೆದು ಓ ಎಂದು ಅತ್ತಳು. ನಾಯಕ ತಾನು ಧೈರ್ಯ ಬಿಡಬಾರದು ಎಂದುಕೊಂಡನು; ಏನಾಯಿತು, ಎಂದು ಕೇಳಿದನು.

ಕೆಂಚವ್ವೆ ಚೇಟಿಯಿಂದ ತಿಳಿದಿದ್ದ ಎರಡು ಮಾತನ್ನು, ತನಗೇ ತಿಳಿದಿದ್ದ ಎರಡು ಮಾತನ್ನು, ಅವನಿಗೆ ತಿಳಿಸಿದಳು. ಇಷ್ಟು ಸುಲಭದಲ್ಲಿ ಜೀವ ಹೋಗುತ್ತದೆಯೆ ಎಂದು ನಾಯಕನಿಗೆ ಆಶ್ಚರ್ಯವಾಯಿತು.

ಮಾಡತಕ್ಕದ್ದೇನೂ ಇರಲಿಲ್ಲ. ನಾಯಕ ಕಳೇಬರದ ಹತ್ತಿರ ಎರಡು ನಿಮಿಷ ಕುಳಿತಿದ್ದು ಎದ್ದು ಈಚೆಗೆ ಬಂದು ಬೆಳಗಾಗ ಉತ್ತರ ಕ್ರಿಯೆ ನಡೆಯಲು ಅವಶ್ಯಕವಾದ ಏರ್ಪಾಡನ್ನು ಮಾಡಿದನು. ಆಮೇಲೆ ಮಧ್ಯದ ತೊಟ್ಟಿಗೆ ಹೋಗಿ ಒಂದು ಕೋಣೆಯಲ್ಲಿ ಮಲಗಿ ರಾತ್ರಿಯನ್ನು ಕಳೆದನು.

ಶಾಂತವ್ವ ತನ್ನ ತೊಟ್ಟಿಯ ಪಕ್ಕದ ಕಮರಿಯನ್ನು ಒಮ್ಮೆ ನೋಡಿ ಬಹು ಮೆಚ್ಚಿಕೊಂಡಿದ್ದಳು. ಅದು, ಬೆಟ್ಟದ ತಾಯಿ ಹಸುರುಡೆಯುಟ್ಟು ಕುಳಿತು ಮಗುವನ್ನು ಕರೆದುಕೊಳ್ಳಲು ಮಡಿಲನ್ನು ಸರಿಮಾಡಿಕೊಂಡಿರುವಂತೆ ಕಾಣುತ್ತದೆ ಎಂದಿದ್ದಳು. ಕೆಂಚವ್ವೆ ಈ ಮಾತನ್ನು ಹೇಳಿದ್ದರ ಮೇಲೆ ಶಾಂತವ್ವನ ಒಡಲನ್ನು ಅಲ್ಲಿ ಭೂಮಿಗೆ ಕೊಡುವುದೆಂದು ನಿಶ್ಚಯವಾಯಿತು. ಬಹಳವೇನೂ ಕಲಾಪವಿಲ್ಲದೆ ನಾಲ್ಕು ಜನ ಮಂಟಪವನ್ನು ಅಲ್ಲಿಗೆ ಸಾಗಿಸಿದರು. ನಾಯಕ ಪಕ್ಕದಲ್ಲಿ ನಡೆದನು. ಕೆಲಸವೆಲ್ಲ ಮುಗಿದಮೇಲೆ ಅಲ್ಲೆ ಹತ್ತಿರದಲ್ಲಿದ್ದ ಹಸುರ ಮೇಲೆ ಕುಳಿತನು.

ನಾಯಕ ಅಲ್ಲೆ ಸ್ವಲ್ಪ ಹೊತ್ತು ನಿಲ್ಲುತ್ತಾನೆ ಎನ್ನುವುದು ತಿಳಿದು ಉಳಿದವರು ಹೊರಟು ಬಂದುಬಿಟ್ಟರು. ಒಬ್ಬ ಆಳು ಮಾತ್ರ ದೂರದಲ್ಲಿ ನಿಂತನು.

ಇವರು ಕಮರಿಗೆ ಇಳಿದುಹೋಗುತ್ತಿರುವಾಗ ಆಲಯದ ಅರ್ಚಕ ಇತ್ತ ಬರುತ್ತಿದ್ದನು. ಬಲಿಯ ವಿಷಯ, ಪ್ರಾಯಶ್ಚಿತ್ತದ ವಿಷಯ, ಮಾತನಾಡಬೇಕಾಗಿದ್ದಿತು. ಅವನು ಹಿಂದಿನ ದಿನ ಬಂದಿದ್ದನು. ಶಾಂತವ್ವ ಜ್ವರದಲ್ಲಿದ್ದುದನ್ನು ಕಂಡು, ನಾಳೆ ಬರುವುದು, ಎಂದು ಹೊರಟು ಹೋಗಿದ್ದನು. ಈಗ ಈ ಗುಂಪನ್ನು ಕಂಡು ಒಬ್ಬ ಆಳನ್ನು ಇದೇನೆಂದು ಕೇಳಿದನು.

ಸಂಗತಿ ತಿಳಿದಾಗ ಅವನಿಗಾದ ಆಶ್ಚರ್ಯಕ್ಕೆ ಪಾರವಿಲ್ಲ. ಕಾಪಾಲಿ ಮುನಿಗೆ ಇದನ್ನು ತಿಳಿಸುವುದಕ್ಕೆ ಅವನು ಅಲ್ಲಿಂದಲೇ ಹಿಂದಿರುಗಿದನು. ಕಾಪಾಲಿ ಆಲಯದಲ್ಲಿರಲಿಲ್ಲ. ಅವನು ಬರುವುದು ಎರಡು ಗಳಿಗೆಯಾಯಿತು. ಬಂದಾಗ ಈ ಮಾತು ಕಿವಿಗೆ ಬಿದ್ದು ಅವನು ದೇವರ ಎದುರಲ್ಲಿ ನಿಂತು, "ಅಯ್ಯೋ ಪಾಪಿ ನನ್ನ ಪರೀಕ್ಷೆ ಮಾಡುತಿದ್ದೀಯಾ? ಇದಕ್ಕೇನೇ ನಿನಗೆ ಪೂಜೆ ಮಾಡುವುದು?" ಎಂದು ಮೊರೆದನು. ಅಲ್ಲಿಂದ ಬೇಗನೆ ಹೊರಟು ರಭಸದಿಂದ ಕಮರಿಯತ್ತ ಸಾರಿದನು.

ಇವನು ದೇವರಿಗೆ ಹೇಳಿದ ಮಾತನ್ನು ಕೇಳಿ ಭಯದಿಂದ ನಡುಗಿದ್ದ ಅರ್ಚಕ ಸ್ವಲ್ಪ ಹಿಂದೆ ಇವನನ್ನು ಅನುಸರಿಸಿ ನಡೆದನು.

ಕಾಪಾಲಿ ಕಮರಿಗೆ ಬಂದಾಗ ಅಲ್ಲಿ ನಾಯಕ ಒಬ್ಬನೇ ಕುಳಿ

ತಿದ್ದನು. ಹೆಂಡತಿಯ ಮಾತು ರೀತಿಯನ್ನು ನೆನೆಯುತ್ತ ಅವನ ಮುಖ ಅವನದೆ ಆದ ಒಂದು ರೀತಿಯಲ್ಲಿ ಒತ್ತಟ್ಟಿಗೆ ಬಾಗಿದ್ದಿತು. ಹೆಜ್ಜೆಯ ಸಪ್ಪುಳನ್ನು ಕೇಳಿ ಅವನು ತಲೆಯೆತ್ತಿದನು; ತನ್ನ ಕಡೆಗೆ ಬರುತ್ತಿದ್ದ ಕಾಪಾಲಿಯನ್ನು ನೋಡಿದನು.

## ೧೨೭

ಕಾಪಾಲಿ ನಾಯಕನನ್ನು ನೋಡಿ ಆಶ್ಚರ್ಯವತ್ತಾಗಿ, "ಬೂದಿಬಸವಯ್ಯ! ಇಲ್ಲೇನು ಬಂದಿರಿ?" ಎಂದನು.

ನಾಯಕ ಮಾತನಾಡದೆ ಹೊಸತಾಗಿ ಮಾಡಿದ್ದ ಸಮಾಧಿಯ ಕಡೆ ಕೈಮಾಡಿ ತೋರಿದನು.

"ಚಿಕ್ಕರಾಣಿ ಶಾಂತವ್ವನವರು?"

ನಾಯಕ, ಹೌದು, ಎಂದು ತಲೆ ಆಡಿಸಿದನು.

"ನಿಮಗೆ ಇದು ತಿಳಿದದ್ದು ಹೇಗೆ? ಇಲ್ಲೇ ಇದ್ದಿರಾ? ಇವರು ನಿಮ್ಮ ಶಿಷ್ಯರೇ"

"ಆಕೆ ನನ್ನ ರಾಣಿ."

"ಏನು ನೀವು ಹೇಳುವುದು? ನೀವು ಬೂದಿಬಸವಯ್ಯ ಅಲ್ಲವೆ?"

"ನಾನು ಚೆನ್ನಬಸವನಾಯಕ. ಆ ಹೆಸರಿಟ್ಟುಕೊಂಡು ಓಡಿಯಾಡಿದೆ."

"ಅಯ್ಯೊ ನನ್ನ ಗ್ರಹಚಾರವೇ? ನನ್ನ ಭಾಗ್ಯಕ್ಕೆ ನಾನೆ ಬೆಂಕಿ ಇಟ್ಟೆನೇ?"

"ತಾವು ಪೀಠದ ಸಿದ್ಧರಲ್ಲವೆ?"

"ನಾನು ಪೀಠದ ಸಿದ್ಧ, ನಗರದ ಹಂಪಯ್ಯ, ಈ ಹುಡುಗಿಯ ತಂದೆ."

"ಮಾವನವರು!"

"ಆ ಜೀವ ಹೋದಮೇಲೆ ಇದು ಏತರ ಮಾವ? ಅದು ಇದ್ದಾಗಲೂ ನಾನು ನಿಮಗೆ ಒಳಿತನ್ನು ಮಾಡಲಿಲ್ಲ."

"ಕೆಡಕನ್ನೂ ಮಾಡಲಿಲ್ಲ."

"ಬೇಕಾದಷ್ಟನ್ನು ಮಾಡಿದೆ. ನಿಮ್ಮ ಪ್ರಾಬಲ್ಯದಿಂದ ನಮ್ಮ ಅಳಿಯನಿಗೆ ಹಾನಿಯಾಗುತ್ತದೆಂದು ಎಷ್ಟು ಸಲ ನಿಮ್ಮನ್ನು ಜನರಲ್ಲಿ ತೆಗಳಿದೆನೊ!"

"ಅದು ನನ್ನ ಕಿವಿಗೆ ಬಿದ್ದಿತು. ಅದರ ಕಾರಣ ತಿಳಿಯಲಿಲ್ಲ: ತಾವು ಇಲ್ಲಿ ಏಕೆ ಬಂದಿರಿ?"

"ನನ್ನ ಮಗಳನ್ನು ಕೊಲ್ಲುವುದಕ್ಕೆ; ನನ್ನ ಭಾಗ್ಯವನ್ನು ಅಳಿಸುವುದಕ್ಕೆ."

"ಶಿವಾ ಶಿವಾ ದುಃಖವನ್ನ ಸಹಿಸಿಕೊಳ್ಳಿರಿ. ಮಗಳನ್ನು ಶಿವ ಕೊಂಡ. ಕೊಲ್ಲುವುದಕ್ಕೆ ನಾವು ಯಾರು?"

"ಅಪ್ಪಾಜಿ, ನೀವು ನನ್ನ ಕಥೆಯನ್ನು ಕಾಣಿರಿ; ಕಂಡರೆ ನೀವೇ ನನ್ನ ತಲೆಯನ್ನು ತೆಗೆಯುವಿರಿ."

"ಹೆಂಡತಿ ಹೋದದ್ದು ಸಾಲದೆಂದು ಮಾವನನ್ನು ಕೊಂದೇನು."

"ಅವಳು ಒಳ್ಳೆಯ ಹೆಂಡತಿ. ನಾನು ಅಂಥ ಮಾವನಲ್ಲ. ನಾವು ಬಲ್ಲಾಳ ರಾಜಮನೆತನ, ನಗರದ ರಾಜರು ಎಂದು, ಇಕ್ಕೇರಿಯ ನಿಮಗೆ ನಗರ ಸೇರಕೂಡದೆಂದು, ನಾನು ಚಿಕ್ಕಂದು ನಿಮ್ಮ ತಂದೆಯವರ ವಿರೋಧ ದಂಗೆ ಹೂಡಿದೆ; ನೇಮಯ್ಯನ ತಮ್ಮ ಎಂದು ಅವರು ನನ್ನನ್ನು ಮನ್ನಿಸಿದರು. ಅತಿಯಾಶೆಯ ಸುಳಿಗೆ ಸಿಕ್ಕಿ ಸಿದ್ಧಿಗಳಿಗೆಂದು ಬೈರಾಗಿಗಳನ್ನು ಆಶ್ರಯಿಸಿ ವರ್ಷಗಟ್ಟಲೆ ಪೀಠದಲ್ಲಿ ನಿಂತೆ ಚಿನ್ನದಂತ ಹೆಂಡತಿಯನ್ನು ಇದ್ದಷ್ಟು ದಿನ ಕಡೆಗಣಿಸಿ ಕಳೆದುಕೊಂಡು ನೀರು ಕುಡಿದೆ. ಅವಳು ಹೆತ್ತ ಮಗು ಹುಟ್ಟಿದ ಗಳಿಗೆ ಕೆಟ್ಟದು, ಅದರ ಮುಖವನ್ನು ನೋಡಿದರೆ ನನಗೆ ಸಾವು, ಎಂದು ಅದನ್ನು ತೊರೆದೆ. ಅಣ್ಣನವರು ಅವಳನ್ನು ನಿಮಗೆ ಕೊಟ್ಟು ಮದುವೆ ಮಾಡಿದಾಗ, ನಮ್ಮ ಅಧಿಕಾರದ ರಾಜ್ಯವನ್ನು ನಾವು ಗಳಿಸದಂತೆ ನಂಟುಮಾಡಿದಿರಾ ಎಂದು ಅವರಮೇಲೆ ಕೂಗಾಡಿದೆ. ಆಗಿಹೋಯಿತಲ್ಲ ಎಂದದಕ್ಕಾಗಿ ನಿಮಗೆ ರಾಜ್ಯವಾಗಕೂಡದು ನಮ್ಮ ಮಗಳ ಹೊಟ್ಟೆಯಲ್ಲಿ ಹುಟ್ಟುವ ನಿಮ್ಮ ಮಗನಿಗೆ ರಾಜ್ಯಮಾಡಿಸಬೇಕೆಂದು ಸಂಚು ನಡೆಸಿದೆ; ನನ್ನ ಒಪ್ಪಿಗೆ ಇಲ್ಲದ ಅಳಿಯ ಎಂದು ನಿಮ್ಮನ್ನು ನೋಡದೆ ದೂರ ನಿಂತೆ. ಜನರಿಗೆ ಒಳ್ಳೆಯದು ಮಾಡುವುದಕ್ಕೆ ನೀವು ಬೂದಿ ಬಸವನಾಗಿ ನಡೆದಾಡಿದಾಗ ಸ್ವಾರ್ಥಕ್ಕಾಗಿ ನಿಮ್ಮನ್ನು

ಮನಬಂದಂತೆ ತೆಗಳಿದೆ. ಕಾಪಾಲಿಕರ ಸಾಧನದಿಂದ ನಿಮ್ಮಂತೆ ನನ್ನ ದಾರಿಗೆ ಅಡ್ಡವಾದವರನ್ನು ನಿಗ್ರಹಿಸುವ ಶಕ್ತಿ ಬರುತ್ತದೆ ಎಂದು ವಾಮಾಚಾರವನ್ನು ಕೈಕೊಂಡೆ. ಈ ಭೈರವ ದೇವಾಲಯಕ್ಕೆ ಬಂದು ಇಲ್ಲಿ ನಿಮ್ಮ ರಾಣಿಯನ್ನು ಈ ಆಭಾಸ ದೈವಕ್ಕೆ ಬಲಿ ಹಾಕುವುದರಲ್ಲಿದ್ದೆ. ಅದು ಹೇಗೋ ತಪ್ಪಿ ನಿಮ್ಮ ಪೂರ್ವ ಪುಣ್ಯ ನಿಮ್ಮ ಮನೆಯನ್ನು ಉಳಿಸಿತೆಂದು ಕೊಂಡರೆ ನನ್ನ ಪೂರ್ವ ಪುಣ್ಯ ಅವಳ ಹಿಂದೆಯೇ ಬಂದು ಅವಳನ್ನು ಕೊಂದುಹಾಕಿದೆ . . . ."

"ಈ ಮಾತು ನನಗೆ ತಿಳಿಯುತ್ತಿಲ್ಲ. ಬಲಿಯ ಸಂಗತಿ ಏನು ?"

"ನೀವು ಕಷ್ಟದಲ್ಲಿ ಸಿಕ್ಕಿದೀರೆಂದು ರಾಣಿ ನಿಮ್ಮ ಕ್ಷೇಮಕ್ಕಾಗಿ ಒಂದು ಸೇವೆಯನ್ನು ನಡಸಿದರು. ಕೊನೆಯ ದಿನ ಒಬ್ಬ ಗರ್ಭಿಣಿ ಸ್ತ್ರೀಯನ್ನು ಬಲಿಮಾಡಬೇಕಾಗಿದೆಯೆಂದರೆ ತಾವೇ ಬಲಿಯಾಗಲು ಬಂದುಬಿಟ್ಟರು."

"ಶಿವನೆ, ಚೆನ್ನಾಯ್ತು."

"ಬಲಿ ಹಾಕಬೇಕು, ಜಡೆಯನ್ನು ಒಂದು ಕಡೆಗೆ ಸರಿಸಿದೆ; ಇವಳು ನನ್ನ ಮಗಳು ಎನ್ನುವುದನ್ನು ಕಂಡೆ . . . ."

"ಇದು ಹೇಗೆ ? ತಿಳಿಯಲಿಲ್ಲ."

"ಹೇಳುವುದನ್ನು ಮರೆತೆ. ನಾನು ಮಗುವಿನ ಮುಖವನ್ನೇ ನೋಡುವುದಿಲ್ಲ ಎಂದು ಇದ್ದ ಆ ಕಾಲದಲ್ಲಿ ನೇಮಣ್ಣ, 'ಜೋತಿಷ್ಯದ ನಂಬಿಕೆ ಇಂಥ ಅತಿಗೆ ಹೋಗಬಾರದು. ಮಗುವನ್ನು ನೋಡು, ಶಾಂತಿ ಮಾಡಿಸಿಕೊ,' ಎಂದರು. ನಾನು ಕೇಳಲಿಲ್ಲ. ಅವರು, 'ಮಗು ತಾಯ ಪ್ರತಿಮೆಯಾಗಿದೆ, ತಾಯನ್ನು ತೊರೆದವನು ಅದನ್ನು ತೊರೆಯುತ್ತಿದೀಯೆ,' ಎಂದು ದೂರಿ, 'ಇದು ನನ್ನ ಮಗಳು ಎಂದು ತಿಳಿಯುವುದೂ ಬೇಡವೆ?' ಎಂದರು. ನಾನು 'ರಾತ್ರಿ ಬರುತ್ತೇನೆ. ಮಗುವನ್ನು ಅಂಗತಳಕಾಗಿ ಮಲಗಿಸಿರಿ. ನೋಡಿ ಏನಾದರೊಂದು ಗುರುತು ಇಟ್ಟುಕೊಳ್ಳುತೇನೆ,' ಎಂದೆ. ಆ ರಾತ್ರಿ ನೋಡಿದೆ. ಮಗುವಿನ ಹೆಕ್ಕೊರಳಲ್ಲಿ ಅವಳ ತಾಯ ಹೆಕ್ಕೊರಳಲ್ಲಿದ್ದ ಒಂದು ಕಲೆ ಇತ್ತು."

"ಹೌದೆಂತೆ ಹೇಳಿದ್ದರು."

"ಹೌದು. ತಾಯ ಮೈಯ ಒಂದು ಕಲೆ ಮಗುವಿನ ಮೈಯಲ್ಲಿ ಹೀಗೆ ಪ್ರತಿಯಾದದ್ದು ಜನಕ್ಕೆ ಒಂದು ಸೋಜಿಗ. ಸಪ್ತಮಿಯ ಚಂದ್ರನಂತೆ, ಅವರೆಯ ಕಾಳಿನ ಅಗಲದ ಕೆಂಪನೆಯ ಮಚ್ಚೆ. ಜಡೆಯನ್ನು ಸರಿಸಿದಾಗ ಇದು ಕಣ್ಣಿಗೆ ಬಿದ್ದಿತು. ಇವಳು ಮಗಳು ಎಂತ ಅರಿತೆ."

"ಇದನ್ನು ತಿಳಿದೇ ಅಣ್ಣನವರು ಒಂದು ಗುರುತಿಟ್ಟುಕೊ ಎಂದು ಅಷ್ಟು ಹಿಂದೆ ಹೇಳಿದ್ದರೊ!"

"ಹಾಗಿದ್ದರೆ ಆಶ್ಚರ್ಯವಿಲ್ಲ. ಒಳ್ಳೆಯವರ ಬುದ್ಧಿಗೆ ಕಾಲ ತಿಳಿಯಾಗುತ್ತದೆ. ನನ್ನಂಥವನಿಗೆ ಅದು ಬಗ್ಗಡ. ಅಲ್ಲಿಂದ ಉಳಿಸಿ ಅವಳನ್ನು ಕಳುಹಿಸಿಕೊಟ್ಟರೆ ಬಾಯಹತ್ತಿರ ಬಂದ ತುತ್ತನ್ನು ತಪ್ಪಿಸುತ್ತೀಯಾ ಎಂದು ಈ ದೇವರು ಅವಳನ್ನು ಹಿಂದಟ್ಟಿ ಬಂದು ತಿಂದೇಬಿಟ್ಟನು."

"ಈ ದೇವರು ಆ ದೇವರು ಏನು? ಇರೋದು ಒಂದೇ ಮಾದೇವರು, ಅಂದಿಲ್ಲವೆ?"

"ಅದನ್ನೇ ಮಾಡುತ್ತೇನೆ ಈಗ ಗುಡಿಗೆ ಹೋಗಿ; ಈ ಅನ್ಯಾಯ ದೇವರ ಮುಖ ಕೆತ್ತಿ ಇವನ್ನ ಪೂಜೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ."

"ಪ್ರಾಯಶ್ಚಿತ್ತ?"

"ಈ ಕಮರಿಯ ತಲೆಯಿಂದ ಹಾರಿ ಇಲ್ಲಿಗೆ ಬಂದು ಮಗು ಮಗಳ ಪಕ್ಕದಲ್ಲಿ ಕಾವಲಿರೋದು."

"ನಿಮ್ಮ ಜೀವ ಕ್ಷೋಭೆಗೊಂಡಿದೆ. ಮೂರು ದಿನ ಮನಸ್ಸನ್ನು ಬಿಗಿ ಹಿಡಿದು ಸುಮ್ಮನಿರಿ. ನಾಲ್ಕನೆಯ ದಿನ ಏನು ಸರಿಯೆಂದು ತೋರಿದರೆ ಅದನ್ನು ಮಾಡಿ."

"ಮೇಲಿಂದ ಇಲ್ಲಿಗೆ ಹಾರಬಹುದೊ?"

"ಅದಕ್ಕೆ ಈ ಸ್ಥಳವೇ ಏಕೆ? ಕಾವಲಿರುವ ತಂದೆ ಹೀಗೆ ಜೀವ ಬಿಡುವುದು ಮಗಳಿಗೆ ಸಂತೋಷವೆ? ಈಗಲೇ ಆಕೆ ಜೀವ ಈ ಮಾತುಗಳನ್ನು ಕೇಳಿ ನೋಯುತ್ತಿರಬಹುದು."

"ಆಯಿತು ಇಲ್ಲಿ ಹಾರುವುದಿಲ್ಲ. ಬೇರೆ ಕಡೆ ನೋಡುತ್ತೇನೆ. ಮೊದಲು ಈಗ ಹೋಗಿ ಈ ದೇವರನ್ನ ನೋಡಿಕೊಳ್ಳುತ್ತೇನೆ."

## ೧೨೮

ಹೀಗೆಂದು ಹಂಪಯ್ಯ ಆಲಯದ ಕಡೆಗೆ ಹೊರಟನು. ನಾಯಕನಿಗೆ ಇವರು ಹುಚ್ಚನಂತಾಗಿದ್ದಾರೆ ಎಂದು ತೋರಿತು. ಇಂಥಾ ಸಂದರ್ಭದಲ್ಲಿ ಅಂತೆ ಎನ್ನುವುದು ಸ್ವಲ್ಪಮಟ್ಟಿಗೆ ಮರ್ಯಾದೆಗಾಗಿ. ಜೊತೆಗೆ, ಈ ಮಾತಿನಲ್ಲಿ ಹುಚ್ಚಾದರೂ ಉಳಿದಂತೆ ವಿವೇಕ ಉಂಟು ಎಂಬ ಅರ್ಥದಲ್ಲಿ. ನಿಜದಲ್ಲಿ, ಈ ಮಾತಿನಲ್ಲಿ ಹುಚ್ಚು ಎನ್ನುವುದು ಸತ್ಯ; ಇದೊಂದು ತೆರನ ಅಂಶೋನ್ಮಾದ. ಹಂಪಯ್ಯನ ಆಗಿನ ನಡೆನುಡಿ ಎಲ್ಲ ಅಪ್ಪಟ ಹುಚ್ಚಿನ ನಡೆ ನುಡಿಯಾಗಿತ್ತು.

ನಾಯಕನಿಗೆ ಹಂಪಯ್ಯನಿಗೆ ಈ ಮಾತುಗಳು ನಡೆಯುತ್ತಿರುವಾಗ ಆಲಯದ ಅರ್ಚಕ ಸ್ವಲ್ಪ ದೂರದಲ್ಲಿ ಒಂದು ಗಿಡದ ಪಕ್ಕದಲ್ಲಿ ನಿಂತು ಇದನ್ನು ಕೇಳುತ್ತಿದ್ದನು. ರಾಣಿ ತೀರಿಕೊಂಡಳೆಂದು ತಿಳಿಸಿದಾಗ ಹಂಪಯ್ಯ ಮುಖ ಕೆಟ್ಟ ರೀತಿಯನ್ನು ನೋಡಿ ಅರ್ಚಕ, ಇವನಿಗೆ ಬುದ್ಧಿ ಕೆಡುತ್ತದೆ, ಎಂದುಕೊಂಡನು. ಇಲ್ಲಿ ಇವನು ಆಡಿದ ಮಾತುಗಳಿಂದ ಶಾಂತವ್ವ ಅಂದು ಬಲಿಯಾಗದ್ದಕ್ಕೆ ಏನು ಕಾರಣ ಎಂದು ಅರ್ಚಕನಿಗೆ ತಿಳಿಯಿತು. ಆಗ ಅವನಿಗೆ ಈ ಕಾಪಾಲಿಗೆ ದೇವರು ಮೊದಲೇ ಹುಚ್ಚು ಹಿಡಿಸಿದ್ದನೆನ್ನಿಸಿತು. ದೇವರ ಹತ್ತಿರ ಬಂದ ಬಲಿಯನ್ನು ಮಗಳು ಎಂದು ಬಿಟ್ಟು ಕಳುಹಿಸಬಹುದೆ? ಅದಕ್ಕೆ ಒಂದು ನೆಪ ಹೇಳುವುದೇ? ಮನುಷ್ಯರ ಕಣ್ಣಿಗೆ ಮಣ್ಣೆರಚಬಹುದೆ, ದೇವರ ಕಣ್ಣಿಗೆ ಎರಚುವುದಕ್ಕಾಗುತ್ತದೆಯೆ? ಭೈರವ ತನ್ನ ಬಲಿಯನ್ನು ಕೊಂಡೇ ಕೊಂಡನು. ಇವನ ಮಾತನ್ನು ಕೇಳಿದರೆ ಪ್ರಾಯಶ್ಚಿತ್ತಕ್ಕೆ ಇವನನ್ನೇ ತೆಗೆದುಕೊಳ್ಳುತ್ತಾನೆಂದು ಕಂಡಿತು. ಆಗಲಿ, ದೇವರ ಇಚ್ಛೆಗೆ ಯಾರು ಅಡ್ಡಿ?

ಮಧ್ಯೆ ದೇವರ ಮುಖ ಕೆತ್ತುವ ಮಾತು ಬಂದು ಅರ್ಚಕನಿಗೆ ಭಯವಾಯಿತು. ಎಲ ಮಹರಾಯ, ಈ ತಿಕ್ಕಲ ಇಲ್ಲಿಂದ ಹೊರಟು ಭೈರವನ ವಿಗ್ರಹವನ್ನು ಏನಾದರೂ ಮಾಡಿಯಾನು! ಈ ದೇವರನ್ನು ಕಳೆದುಕೊಂಡು ಅರ್ಚಕ ಏನಾಗಬೇಕು? ಹೊಟ್ಟೆಗಿಲ್ಲದೆ ಸಾಯಬೇಕು. ಸಾಯುವುದಿಲ್ಲ ಎಂದರೆ ಬೇರೆ ಮೂರ್ತಿ ಪ್ರತಿಷ್ಠೆ ಮಾಡಿಸಬೇಕು. ಈ ಕಷ್ಟ

ಯಾರಿಂದಾದೀತು? ಈ ಹುಚ್ಚ ಬಂದು ದೇವರನ್ನು ಏನೂ ಮಾಡದಂತೆ ದೇವಸ್ಥಾನವನ್ನು ನೋಡಿಕೊಳ್ಳಬೇಕು.

ಈ ನಿಶ್ಚಯಕ್ಕೆ ಬಂದು ಅರ್ಚಕ ಒಡನೆ ಆ ಸ್ಥಳವನ್ನು ಬಿಟ್ಟು ದೇವಾಲಯದ ಕಡೆಗೆ ಹೊರಟನು. ಅವನು ಅಷ್ಟುದೂರ ಹೋದ ಮೇಲೆ ಹಿಂದೆ ಕಾಪಾಲಿ ಬರುತ್ತಿರುವನೆಂದು ಭಾಸವಾಯಿತು. ಅವನು ತಿರುಗಿನೋಡಿದನು; ಅದು ನಿಜ ಎಂದು ತಿಳಿದನು. ಅಲ್ಲಿಂದ ಓಡಿ ಓಡಿ ಹೋಗಿ ಅವನು ದೇವಾಲಯದ ಬಾಗಿಲನ್ನು ಹಾಕಲು ನೋಡಿದನು.

ದೇವಾಲಯದ ಬಾಗಿಲಿಗೆ ಬೀಗವಿರಲಿಲ್ಲ. ಭೈರವನ ಮನೆ ಭದ್ರವಾಗಿರುವುದಕ್ಕೆ ಬೀಗವೇಕೆ ಎಂದೋ, ಭಜಿಸಿಬರುವ ಜೀವಕ್ಕೆ ಸಾವ ಬಾಯಿ ಸದಾ ತೆರೆದಿದೆ ಎಂದು ತೋರಿಸುವುದಕ್ಕಾಗಿಯೋ, ಯಾರೇ ಆಗಲಿ ಯಾವಾಗಲೇ ಆಗಲಿ ಈ ಗುಡಿಯೊಳಕ್ಕೆ ಬರಬಹುದಾಗಿತ್ತು. ದೇವರಿಗೇ ಸಾವಾಗಿ ಯಾವನಾದರೂ ಹುಚ್ಚ ಬಂದಾನೆಂದು ಇದನ್ನು ನಡಸುವವರಿಗೆ ತೋರಿರಲಿಲ್ಲ.

ವಿಧಿ ಇಲ್ಲ, ಮೂರ್ತಿಯನ್ನು ಬೇರೆ ಹೇಗಾದರೂ ಉಳಿಸಿಕೊಳ್ಳಬೇಕು, ಎಂದು ಅರ್ಚಕ ಬಾಗಿಲಲ್ಲಿ ನಿಂತನು.

ಹಂಪಯ್ಯ ಹುಚ್ಚು ವೇಗದಿಂದ ನಡೆದು ಅಲ್ಲಿ ಬಂದು ಸೇರಿದನು. ಬಾಗಿಲಲ್ಲಿ ಅರ್ಚಕ ಅಡ್ಡವಾಗಿ ನಿಂತಿದಾನೆಂದು ತೋರಿ, "ದಾರಿ ಬಿಡು, ಅಡ್ಡ ಬರಬೇಡ," ಎಂದನು.

ಅರ್ಚಕ ಇವನ ಧ್ವನಿಯನ್ನು ಕೇಳಿ ನಡುಗಿದನು. ಆದರೂ ತನ್ನ ದೇವರನ್ನು ಕಾಪಾಡಿಕೊಳ್ಳಬೇಕು. ಬೇರೆದಾರಿತೋರದೆ ಅವನು ಮುಂದಕೆ ನುಗ್ಗಿ ಹುಚ್ಚನ ಎರಡು ಕಾಲನ್ನೂ ಅಪ್ಪಿಕೊಂಡು ಭದ್ರವಾಗಿ ಕುಳಿತನು.

"ಬಿಡು ಕಾಲು. ತಡೆಯ ಬೇಡ. ಬೇಡ. . . ."

"ನನ್ನಾಣೆ ನಾ ಬಿಡೋದಿಲ್ಲ. ನನ್ನ ದೇವರಿಗೆ ಏನೂ ಮಾಡೋದಿಲ್ಲ ಅಂತ ಮಾತು ಕೊಡಿ, ಆಮೇಲೆ ಬಿಡುತೇನೆ."

"ಎಲವೊ ಅರ್ಚಕ, ಏನು ನಿನ್ನ ಈ ಹುಚ್ಚು. ದೇವರು ನಿನ್ನ ಕಾಪಾಡಬೇಕು; ಅಂಥಾದರಲ್ಲಿ ದೇವರನ್ನ ನೀನು ಕಾಪಾಡುತೇನೆ ಎಂತ ಹೊರಟಿದೀಯೆ?"

"ಹೌದು ನನಗೀ ಹುಚ್ಚು. ನಮ್ಮ ದೇವರ ತಂಟೆಗೆ ಬರುವುದಿಲ್ಲ ಅಂತ ನೀವು ನನಗೆ ಮಾತು ಕೊಡಬೇಕು."

"ಲೋ ಭೈರವಾ, ಅಂಜುಬುರುಕ ಮುಂಡೇದೆ, ಅರ್ಚಕನ್ನ ಮುಂದೇ ಬಿಟ್ಟುಕೊಂಡು ಹಿಂದೆ ಅವಿತುಕೊಂಡಿದ್ದೀಯಾ? ಆಗಲೋ ಹೇಡಿ; ಆಗಲಿ ಬದುಕಿಕೊ. ಎಷ್ಟುಕಾಲ ಈ ನಾಯಿಬಾಳು ಬಾಳ ಬೇಕಂತಿದೀಯೋ ಬಾಳು. ಮೂಗು ಕೊಯ್ಯುತೇನೆ ಅಂದರೆ ನೋವು ಅಂತೀಯಲ್ಲ. ಆ ಮಗುವಿನ ಕೊರಳ ಹಿಸುಕೋದು ನಿನಗೆ ರುಚಿಯಾ ಗಿತ್ತೆ? ಬೆಳೆದ ಜೀವ ಔತಣದೂಟ, ಒಳಗಿನ ಕೂಸು ಉಪ್ಪಿನಕಾಯಿ, ಅಲ್ಲ? ತಿನ್ನು ಹೊಟ್ಟೆ ಬಾಕ ಮುಂಡೇದೆ; ತಿನ್ನು; ತೇಗು. ಹೊಟ್ಟೆ ನೀವಿ ಸರಿ ಮಾಡಿಕೊ; ನನ್ನನೂ ನುಂಗುವಿಯಂತೆ. ದೇವರು, ನೀನು ಸಾಯೋಕೆ ಅಂಜತಿ. ನಾವು ಹುಟ್ಟಿರೋದೇ ಸಾಯೋಕೆ ಅಂತ. ಸಾಯುತೇವೆ; ಹೊಟ್ಟೆ ತುಂಬಿಕೊ. ಅಮ್ಮನ ಸೆರಗಿನ ಮರೇಲಿ ಅವಿತು ಕೊಂಡು ಮೂಗು ಉಳಿಸಿಕೊಂಡ ಮೂಳಮುಂಡೇದೆ!"

ಹುಚ್ಚು ಹುಚ್ಚು ಹೀಗೆ ಕೂಗಾಡಿ ಹಂಪಯ್ಯ ತಟ್ಟನೆ ಬಾಗಿ ಅರ್ಚಕನನ್ನು ಕಾಲೆಡೆಯಿಂದ ಬಿಡಿಸಿಕೊಂಡನು; ಹುಚ್ಚು ಬಲದಿಂದ ಅವನನ್ನು ಎತ್ತಿ ಒಂದು ಕಸ್ಸಿನ್ನುಂಡೆಯಂತೆ ದೇವರತ್ತ ಎಸೆದನು; ಥು ಎಂದು ದೇವರ ಕಡೆಗೆ ಉಗಿದು ಹಿಂದಿರುಗಿ ಹುಚ್ಚು ನಗೆಯನ್ನು ನಗುತ್ತ ವೇಗವಾಗಿ ನಡೆದುಹೋದನು.

೧೨೪

ನಾಯಕನ ಸಮ್ಮುಖದಲ್ಲಿ ನಿಶ್ಚಯವಾಗಿದ್ದಂತೆ ನೇಮಯ್ಯ ನವಾಬ ನನ್ನು ಮೂರಂಗಡಿಯಲ್ಲಿ ಕಾಣಿಸಿಕೊಂಡನು. ನೇಮಯ್ಯ ಹೋಗು ವುದೇ ಶಾಸ್ತ್ರ ಹೋಗುವುದೇ ಎಂದು ಇವರಿವರೇ ಯೋಚಿಸಿ ನೇಮಯ್ಯ ಹೋಗುವುದು ಒಳ್ಳಿತು ಎಂದು ಗೊತ್ತುಮಾಡಿಕೊಂಡರು. ಬೀಗನೆಂಬ ಕಾರಣದಿಂದ ಈಗ ನೇಮಯ್ಯ ಸಂಕೋಚ ಪಡಬೇಕಾದದ್ದಿರಲಿಲ್ಲ. ಹಗೆ ಯಾಗಿ ಬಂದಿರುವವನ ಸಂಗಡ ಮಾತನಾಡುವ ಸಂದರ್ಭ; ಅದು ಮಿತ, ನಯ, ಆದಷ್ಟೂ ಒಳಿತು. ಇವರು ತಮ್ಮ ನಿಶ್ಚಯವನ್ನು ತಿಳಿ ಸಿದಾಗ ಅಯ್ಯ ಅದಕ್ಕೆ ಒಪ್ಪಿದನು.

ನವಾಬ ನೇಮಯ್ಯನನ್ನು ಮರ್ಯಾದೆಯಿಂದ ಬರಮಾಡಿಕೊಂಡನು; ಅವನನ್ನು ಕುಳ್ಳಿರಹೇಳಿ ಆಮೇಲೆ ತಾನು ಕುಳಿತು, "ತಾವು ಬಂದದ್ದು ಸಂತೋಷ, ನಮಗೆ ನರಹತ್ಯ ಇಷ್ಟವಿಲ್ಲ," ಎಂದನು.

ನೇಮಯ್ಯ, "ತಾವು ಧರ್ಮಿಷ್ಠರಾದ ಮೈಸೂರರಸರ ಪ್ರಧಾನರು, ತಮಗೆ ಈ ಮನೋಧರ್ಮ ಸಹಜವಾದ ಭೂಷಣ," ಎಂದನು.

"ಸಂತೋಷ. ತಾವು ಬಂದಿರುವುದರ ಉದ್ದೇಶವನ್ನು ತಿಳಿಸಿ ಕೊಡಬೇಕು."

"ಅರಿಕೆ ಮಾಡುತ್ತೇನೆ. ನಾನು ನಾಯಕರ ಸನ್ನಿಧಿಯ ಸೇವಕ. ತಮ್ಮಲ್ಲಿ ಮಂತ್ರಿ ಎಂದು ಕರೆಯುವ ಸ್ಥಾನದಲ್ಲಿದೇನೆ. ನನ್ನ ಹೆಸರು ನೇಮಯ್ಯ."

"ಎಲ್ಲ ನಮಗೆ ತಿಳಿದಿದೆ. ತಾವು ನಾಯಕರ ಮಾವಂದಿರು"

"ಹೌದು, ನನ್ನ ತಮ್ಮನ ಮಗಳನ್ನು ನಾಯಕರಿಗೆ ಕೊಟ್ಟು ವಿವಾಹವಾಗಿದೆ."

"ನಿಮ್ಮ ಮಲತಮ್ಮನ ಮಗಳು."

"ಹೌದು. ನನ್ನ ಜೊತೆಗಿರುವ ಈ ಹಿರಿಯರು ನಗರದ ಪ್ರಮುಖ ನಿವಾಸಿಗಳು, ವರ್ತಕರು."

"ಇವರು ಬಂದಿರುವುದೂ ನಮಗೆ ಸಂತೋಷ. ನಾವು ನಗರಕ್ಕೆ ಯಾವುದೊ ದುರುದ್ದೇಶದಿಂದ ಬಂದಿದ್ದೇವೆ ಎಂದು ಕೆಲವರು ತಿಳಿದಿರುವಂತೆ ಕಾಣುತ್ತದೆ. ಅದು ನಿಜವಲ್ಲ ಎನ್ನುವುದನ್ನು ನಗರದ ಪ್ರಮುಖರಿಗೆ ತಿಳಿಸಬೇಕಾದದ್ದಿತ್ತು."

"ನಾವು ಬಂದ ಉದ್ದೇಶವನ್ನು ಕೇಳಲಾಯಿತು. ಆ ಮುಖ್ಯ ಉದ್ದೇಶ ಇಷ್ಟೆ. ಇಲ್ಲಿಗೆ ಬರುವುದರಲ್ಲಿ ತಮ್ಮ ಅಭಿಪ್ರಾಯ ಏನು, ಏಕೆ ಇಷ್ಟು ತೊಂದರೆ ತೆಗೆದುಕೊಂಡಿದೀರಿ, ಎನ್ನುವುದನ್ನು ಮುಖತಃ ತಮ್ಮಿಂದ ಕೇಳಬೇಕು ಎನ್ನುವುದು."

"ನೇಮಯ್ಯನವರೆ, ನಾವು ವ್ಯರ್ಥ ಮಾತನಾಡುವುದು ಬೇಡ. ನಿಮ್ಮಲ್ಲಿ ಕೆಲವು ಕಾಲ ಆಡಳಿತ ವ್ಯವಸ್ಥೆಗೆ ಬರಲಿಲ್ಲ ಎನ್ನುವುದು ನಿಜವೊ?"

"ಅವ್ಯವಸ್ಥೆ ಏನೂ ಇರಲಿಲ್ಲ."

"ಸಂತೋಷ; ಆದರೆ ನಮಗೆ ಹಾಗೆಂದು ಸುದ್ದಿ ಬಂದಿತು. ಮೈಸೂರಿನ ಯೋಗಕ್ಷೇಮಕ್ಕೆ ಅರಸರು ನಮ್ಮನ್ನು ಹೊಣೆಮಾಡಿದ್ದಾರೆ. ಇದು ಮೈಸೂರಿನ ಪಕ್ಕದ ರಾಜ್ಯ. ಒಂದು ಕಾಲದಲ್ಲಿ ಅಧೀನವಾಗಿದ್ದಿತು. ಇದನ್ನು ಅವ್ಯವಸ್ಥೆಯಲ್ಲಿ ಬಿಟ್ಟರೆ ಮೈಸೂರಿಗೆ ಹಾನಿ. ಒಂದು ಕಡೆ ಪೂನಾ ಒಂದು ಕಡೆ ಹೈದರಾಬಾದು ಇಂಥ ಸ್ಥಳ ಸಿಕ್ಕೀತೆ ಎಂದು ಕಾದಿವೆ. ಅಲ್ಲಿಯವರು ಬರುವ ಮುನ್ನ ನಾವು ಇದನ್ನು ಸರಿಯಾದ ಸ್ಥಿತಿಗೆ ತರಬೇಕು; ಮೈಸೂರಿಗೆ ಕೇಡಾಗದಂತೆ ನೋಡಿಕೊಳ್ಳಬೇಕು. ಅದಕ್ಕಾಗಿ ಇತ್ತ ಬಂದೆವು."

"ನಾವು ವಿಶ್ವಾಸಿಗಳು ಎಂದೂ ಇಲ್ಲಿ ಯಾವ ಅವ್ಯವಸ್ಥೆಯೂ ಇಲ್ಲ ಎಂದೂ ನಾವು ವಿಜ್ಞಾಪಿಸಿದಮೇಲೂ ತಾವು ವೃಥಾ ತೊಂದರೆ ಪಟ್ಟುಕೊಂಡು ಇಲ್ಲಿಯವರೆಗೆ ಬಂದಿರೋಣಾಗಿದೆ. ಇದರಿಂದ ತಮ್ಮ ಅಭಿಪ್ರಾಯ ಏನು ಎಂಬ ವಿಷಯದಲ್ಲಿ ನಮಗೆ ಸಮಾಧಾನ ಆಗಲಿಲ್ಲ."

"ಮತ್ತೆ ತಮಗೆ ತಿಳಿದ ವಿಷಯವನ್ನೇ ಹೇಳಬೇಕು. ಒಂದು ಸಲ ರಾಣಿಯವರ ಕಾಗದ; ಆಮೇಲೆ ನಾಯಕರ ಕಾಗದ; ಆಮೇಲೆ ಮತ್ತೆ ರಾಣಿಯವರದು; ಮಧ್ಯೆ ರಾಣಿ ನಾಯಕರನ್ನ ಕೊಲ್ಲಿಸಿದರು ಎಂತ ಸುದ್ದಿ; ನಾವು ನಾಯಕರು ಅಂತ ಒಬ್ಬರು ಒಬ್ಬ ಫಕೀರನಂತೆ ನಮ್ಮ ಹತ್ತಿರ ಬರೋಣ; ಕಂಡವರು ಅವರನ್ನು ಬೂದಿಬಸವಸ್ವಾಮಿ ಅನ್ನೋಣ. ಇದೆಲ್ಲ ನಮ್ಮ ಮನಸ್ಸಿಗೆ ಅವ್ಯವಸ್ಥೆಯೆಂದೇ ಕಾಣಿಸುತ್ತದೆ. ಅದೇ ಹೊತ್ತಿನಲ್ಲಿ ನಿಮ್ಮಿಂದ ಸವಣೂರಿಗೆ ಸಹಾಯಕ್ಕೆ ಸೈನ್ಯಬರಬೇಕು ಎಂದು ಪತ್ರ ಹೋಗಿದೆ. ಇದು ವಿಶ್ವಾಸಿಗಳಲಕ್ಷಣವೆ? ಆದಕಾರಣ ವಿಷಯ ನಮ್ಮ ಮನಸ್ಸಿಗೆ ತೃಪ್ತಿಕರವಾಗಿ ಸ್ಪಷ್ಟವಾಗುವವರೆಗೆ ಮುಂದಕ್ಕೆ ಹೋಗುವುದೇ ಸರಿ ಎಂದು ಬಂದೆವು."

"ನಾಯಕರಲ್ಲ ಎಂದು ನೀವು ಶಂಕೆ ಪಟ್ಟ ಆ ತರುಣರು ನಮ ನಾಯಕರೇ ಹೌದು. ಅವರು ಬೂದಿಬಸವಸ್ವಾಮಿ ಎಂದು ನಾಡಿನಲ್ಲಿ ವೇಷ ಮರಸಿಕೊಂಡು ನಡೆದದ್ದುಂಟು. ಇದನ್ನು ನಾವು ಯಾರಾದರೂ

ಬಂದು ತಮಗೆ ಸ್ಪಷ್ಟಪಡಿಸುತ್ತಿದ್ದೆವು. ಒಂದು ಮಾತು ಹೇಳಿಕಳುಹಿಸಿದ್ದರೆ ಸಾಕಾಗಿತ್ತು."

"ನಾಯಕರನ್ನು ನಾಯಕರಲ್ಲ ಎಂದದ್ದು ನಮ್ಮ ಮನಸ್ಸಿಗೆ ತುಂಬ ನೋವಾಗಿದೆ. ಆ ವಿಷಯದಲ್ಲಿ ನಾವು ಕ್ಷಮಾಪಣೆ ಬೇಡಿಕೊಳ್ಳುವೆವು. ಈಗ ನಮ್ಮ ಉದ್ದೇಶ ಇಷ್ಟೆ. ಬಿದನೂರ ನಗರ ಮೈಸೂರಿನ ಸೋದರ ರಾಜ್ಯವಾಗಿ ನಡೆದುಕೊಳ್ಳಬೇಕು. ನಾಯಕರು ಮೈಸೂರಿನ ಅರಸರ ಸಾಮಂತರಾಗಿ ಇರುವುದಾದರೆ ನಮಗೆ ಬೇರೆ ಏನೂ ಬೇಕಿಲ್ಲ. ನಮ್ಮನ್ನು ಮಿತ್ರರೆಂದು ಹೇಳುತ್ತಿದೀರಿ. ಮಿತ್ರರಾಗಿ ನಿಮ್ಮಲ್ಲಿ ಎರಡು ತಿಂಗಳು ಇರುತ್ತೇವೆ; ನಮ್ಮ ಅರಸರ ಪರವಾಗಿ ನಿಮ್ಮ ನಾಯಕರಿಗೆ ಪಟ್ಟ ಕಟ್ಟಿಸಿ ಸಂತೋಷವನ್ನು ನೋಡುತ್ತೇವೆ. ಸವಣೂರಿಂದ ಸೈನ್ಯ ಯಾವುದೂ ಬರದಂತೆ ನೋಡಿಕೊಳ್ಳುತ್ತೇವೆ; ಹಾಗೆ ಬಂದರೆ ಅದನ್ನು ಹೊಡೆದು ಅಟ್ಟುತ್ತೇವೆ. ಹೇಗೂ ನಿಮ್ಮ ನಾಯಕರು ನಮ್ಮ ಅರಸರನ್ನು ಕಂಡು ಬಂದಿದ್ದಾರೆ; ನಮ್ಮ ಈ ಏರ್ಪಾಡಿಗೆ ಒಪ್ಪಿಕೊಂಡಾರೆಂದು ನಮಗೆ ತೋರುತ್ತದೆ. ಇಷ್ಟಕ್ಕೆ ಒಪ್ಪಿಸಿಕೊಡಿ; ನಾವು ನಿಮ್ಮ ಮಿತ್ರರು."

"ನಾಯಕರು ತಮ್ಮ ಅರಸರನ್ನು ಕಂಡಾಗ ಬಿದನೂರು ಮೈಸೂರಿಗೆ ಜೊತೆಯ ರಾಜ್ಯವಾಗಿ ಇರುವ ಮಾತು ಆಯಿತು ಹೊರತಾಗಿ ಅಧೀನ ರಾಜ್ಯ ಆಗಬೇಕೆಂಬ ಮಾತು ಬರಲಿಲ್ಲ. ಆ ವಿಷಯ ಬೇಕಾದರೆ ತಾವು ರಾಜರಲ್ಲಿ ಕೇಳಿ ತಿಳಿದುಕೊಳ್ಳಬಹುದು."

"ಇದೊಂದು ಈ ಕಡೆಯಿಂದ ನಡೆದಿರುವ ತಪ್ಪು ಮಾತು. ನಮ್ಮ ಅರಸರು ನಾವು ಎರಡು ಬೇರೆ ಪಕ್ಷ ಎಂಬಂತೆ ತಾವೆಲ್ಲ ಮಾತನಾಡುತ್ತಿದೀರಿ. ನಿಮ್ಮ ನಾಯಕರು ಅರಸರನ್ನು ಕಂಡಾಗ, ಇಲ್ಲಿಯ ಸಂಗತಿ ಅವರಿಗೆ ತಿಳಿದಿದ್ದಿರಲಾರದು. ನಮ್ಮ ಅರಸರು ನಮಗೆ ಸರ್ವಾಧಿಕಾರವನ್ನು ವಹಿಸಿದಾರೆ. ರಾಜ್ಯದ ಕ್ಷೇಮಕ್ಕಾಗಿ ನಾವು ಯಾವುದನ್ನು ಮಾಡಿದರೂ ಒಪ್ಪಿಕೊಳ್ಳುತಾರೆ. ನಾವು ಅನ್ಯಾಯ ಮಾಡುವುದಿಲ್ಲ ಎಂದು ಅವರಿಗೆ ನಂಬಿಕೆ ಉಂಟು. ಇದುವರೆಗೆ ನಾವು ಮಾಡಿರುವ ಪ್ರತಿಯೊಂದು ಸಂಗತಿಗೂ ಅವರ ಒಪ್ಪಿಗೆಯನ್ನು ಪಡೆಯುವುದು ನಮ್ಮ ಹೊಣೆ. ನಮಗೆ ಅವರಿಗೆ ವಿರೋಧ ಕಲ್ಪಿಸುವ ಪ್ರಯತ್ನ ಯಾರಲ್ಲಿಯೂ

ಸರಿಯಲ್ಲ. ಈಗ ನಾವು ಹೇಳುತ್ತಿರುವ ಮಾತು ಮೈಸೂರ ಅರಸರ ಪರವಾಗಿ ಅವರ ಸರ್ವಾಧಿಕಾರಿ ಸಂಪೂರ್ಣ ಅಧಿಕಾರದಿಂದ ಹೇಳುತ್ತಿರುವ ಮಾತು. ಈ ವಿಷಯದಲ್ಲಿ ಸಂದೇಹಬೇಡ."

ನೇಮಯ್ಯನಿಗೆ ಇನ್ನು ಮಾತಾಡಿ ಫಲ ಇಲ್ಲ ಎಂದು ತೋರಿತು. ಈ ಮನುಷ್ಯ ಅರಸರನ್ನೂ ನಿರ್ಬಂಧದಲ್ಲಿಡಬಲ್ಲವನು. ಜೊತೆಗೆ ಸವಣೂರು ಮಾರಟ್ಟವಾಡಿಯ ಮಾತು ಸೇರಿದೆ. ಅವನು ಕ್ಷಣಬಿಟ್ಟು, "ನಾಯಕರು ನಗರ ಅಧೀನ ರಾಜ್ಯ ಆಗುವ ಮಾತಿಗೆ ಒಪ್ಪುವುದಿಲ್ಲ," ಎಂದನು.

"ಇದು ನಮಗೆ ವ್ಯಥೆಯ ಸಂಗತಿ. ಮೈಸೂರಿನ ಕ್ಷೇಮಕ್ಕಾಗಿ ನಾವು ನಗರದ ಮೇಲೆ ಅಧಿಕಾರವನ್ನು ಇರಿಸಿಕೊಳ್ಳಬೇಕಾಗಿದೆ. ನಾಯಕರು ಒಪ್ಪಿದರೆ ಇದು ಸಮಾಧಾನವಾಗಿ ರೂಪಕ್ಕೆ ಬರುತ್ತದೆ. ಒಪ್ಪದಿದ್ದರೆ ನಾವು ಒತ್ತಾಯ ಮಾಡಬೇಕಾಗುತ್ತದೆ."

ನೇಮಯ್ಯ ಮತ್ತೆ ಯೋಚಿಸಿದನು. ಒಡನೆಯೆ ವಿರೋಧ ಮಾಡಿಕೊಂಡು ನಗರವನ್ನು ಶತ್ರು ಸೈನ್ಯಕ್ಕೆ ಸೂರೆಗೆ ಕೊಡುವುದಕ್ಕಿಂತ ಈ ವಿಷಯದಲ್ಲಿ ನಾಯಕರ ಅಪ್ಪಣೆಯನ್ನು ಪಡೆಯುತ್ತೇವೆ ಎಂದು ಅವಕಾಶ ತೆಗೆದುಕೊಳ್ಳುವುದು ಸರಿ ಎಂದು ಅವನಿಗೆ ತೋರಿತು. ಅವನು, "ಈ ಸಂಗತಿಯನ್ನು ನಾಯಕರಿಗೆ ತಿಳಿಸಿ ಅವರ ಅಭಿಪ್ರಾಯವನ್ನು ಮತ್ತೆ ತಂದು ಮುಟ್ಟಿಸುತ್ತೇನೆ. ಇದಕ್ಕೆ ಅವಕಾಶ ಕೊಡಬೇಕು," ಎಂದನು.

"ಏನೂ ಅಡ್ಡಿಯಿಲ್ಲ. ತಾವು ನಗರಕ್ಕೆ ಹೋಗಿ ಬರುವಷ್ಟರಲ್ಲಿ ನಮಗೆ ಆತುರವಿಲ್ಲ."

"ನಾಯಕರು ನಗರದಲ್ಲಿಲ್ಲ. ಅವರ ಸಂಸಾರ ಬೇರೆ ಕಡೆ ಇರುವುದರಿಂದ ಅಲ್ಲಿಗೆ ದಯಮಾಡಿಸಿದ್ದಾರೆ. ಅವರ ಬಳಿಗೆ ಸುದ್ದಿಹೋಗಿ ಅಪ್ಪಣೆ ಬರುವುದು ಹತ್ತುದಿನ ಆಗುತ್ತದೆ."

"ಅದಕ್ಕೂ ಅಡ್ಡಿ ಇಲ್ಲ. ಅವರ ಸಂಸಾರ ದುರ್ಗಕ್ಕೆ ಹೋಗಿದೆ ಎಂದು ಕೇಳಿದ್ದೆವು. ನಾವು ಇಷ್ಟರಲ್ಲೆ ಅಲ್ಲಿಗೆ ಹೋಗಬೇಕಾಗಬಹುದೆಂದು ಅಲ್ಲಿಗೆ ಒಂದು ಪಡೆಯನ್ನೂ ಕಳುಹಿಸಿದೆವು. ಹೊರಗಿನ ಸೇನೆ ಬರುತ್ತದೆಂದರೆ ರಾಣಿಯದಿರು ಊರು ಬಿಡುವುದು ಸಹಜ ಇರಬಹುದು; ನಾಯಕರು ಹೀಗೆ ಮಾಡಿಯಾರು ಎಂದು ನಮಗೆ ತೋರಲಿಲ್ಲ."

"ನಾಯಕರ ಧೈರ್ಯವನ್ನು ಕುರಿತು ನಾವು ಮಾತನಾಡುವ ಕೆಲಸ ವಿಲ್ಲ. ಅವರು ದುರ್ಗಕ್ಕೆ ಹೋಗಿರುವುದು ಶತ್ರುಬರುವನೆಂಬ ಭಯ ದಿಂದ ಅಲ್ಲ."

"ಸಂತೋಷ ನೇಮಯ್ಯನವರೆ. ಈ ಮಧ್ಯೆ ನಾವು ಇಲ್ಲಿಯೆ ಇರುವುದು ಸಾಧ್ಯವಲ್ಲ. ಸೇನೆಯ ಒಂದು ಭಾಗದೊಡನೆ ಮುಂದುವರಿ ಯುತ್ತೇವೆ. ನಾಯಕರ ಅಪ್ಪಣೆ ಬಂದ ಕಾಲಕ್ಕೆ, ಯುದ್ಧಬೇಡವೆಂದೇ ಅವರ ಅಪ್ಪಣೆ ಆಗಿರುತ್ತದೆ ಎಂದು ನಮ್ಮ ನಂಬಿಕೆ. ಅಧೀನ ರಾಜ್ಯ ಆದರೂ ಆಗದಿದ್ದರೂ ಯುದ್ಧವಾಗುವುದು ಬೇಡ ಎನ್ನುವುದು ನಮ್ಮದೂ ಅಭಿಪ್ರಾಯ. ಇಷ್ಟನ್ನು ತಾವು ನೋಡಿಕೊಳ್ಳಿ."

"ಅಪ್ಪಣೆ. ಮತ್ತೆ ತಮ್ಮನ್ನು ಕಾಣುತ್ತೇವೆ." ಹೀಗೆಂದು ನೇಮಯ್ಯ ಎದ್ದನು. ಹೈದರ್ ಅವನನ್ನೂ ಅವನ ಜೊತೆಯವರನ್ನೂ ಮರ್ಯಾದೆ ಯಿಂದ ಬೀಳ್ಕೊಟ್ಟನು.

ನೇಮಯ್ಯ ಹೋದಮೇಲೆ ಉಜನಿ ನವಾಬನ ಹತ್ತಿರ ಬಂದು, "ಬೆಂಗಳೂರಿಂದ ಮಾಡಿಕೊಂಡು ಬಂದ ಉದ್ದೇಶವನ್ನು ಇಲ್ಲಿ ಬಿಟ್ಟು ಕೊಟ್ಟಿರಲ್ಲ, ಜನಾಬ್ !" ಎಂದನು.

"ಯಾವ ಉದ್ದೇಶ ಎನ್ನುತ್ತೀಯೆ ?"

"ನಗರಾನ ಸ್ವಂತಕ್ಕೆ ಮಾಡಿಕೊಳ್ಳಬೇಕೆನ್ನುವುದು."

"ನಗರ ಈಗಾಗಲೆ ಸ್ವಂತ ಆಯಿತು ರಾಜ. ನಿನಗೆ ತಿಳಿಯಲಿಲ್ಲವೆ? ಇಲ್ಲ ತಿಳಿಯದಂತೆ ನಟಿಸುತ್ತಿದೀಯೊ ?"

"ನಾಯಕರು ಸಾಮಂತರಾದರೆ ನಿಮಗೆಲ್ಲಿ ನಗರ ?"

"ನಿಮ್ಮ ಜನ ಒಂದು ಗಾದೆ ಹೇಳುತಾರೆ ಕೇಳಿಲ್ಲವೆ ? ಸೂರ್ಯ ಪಶ್ಚಿಮದಲ್ಲಿ ಹುಟ್ಟಿದಾಗ ಎಂತ ?"

"ಹೌದು, ಆಗ ?"

"ನಾಯಕ ಸಾಮಂತನಾಗಿರೋದಕ್ಕೆ ಒಪ್ಪುತಾನೆ."

೧೩೦

ನಾಯಕ ದುರ್ಗದಲ್ಲಿ ಆ ದಿನ ಮಾತ್ರ ಇದ್ದು ಮರುದಿನ ತನ್ನ ಕೆಲಸದಲ್ಲಿ ತೊಡಗಬೇಕೆಂದು ಯೋಚಿಸಿದನು. ಹೆಂಡತಿಯ ದೇಹವನ್ನು

ಮಣ್ಣಿಗೆ ಕೊಡುವವರೆಗೆ ಅವನ ಮನಸ್ಸು ಏನೊ ಒಂದು ರೀತಿಯಲ್ಲಿ ಸ್ತಂಭಿಸಿದ್ದಿತು. ಹಂಪಯ್ಯ ಬಂದು ಶಾಂತವ್ವ ತನಗಾಗಿ ಎಂಥ ಅಪಾಯಕ್ಕೆ ತಲೆ ಕೊಟ್ಟಿದ್ದಳೆಂದು ತಿಳಿಸಿದಾಗ ಘನಿಸಿದ್ದ ಮನಸ್ಸು ಸ್ವಲ್ಪ ಕರಗಿದಂತಾಯಿತು. ಹಂಪಯ್ಯ ಹೊರಟು ಹೋದಮೇಲೆ ಅವನು ಅಲ್ಲಿಯೆ ಕುಳಿತು, ಎದುರಿನ ಹೊಸ ಮಣ್ಣನ್ನು ನೋಡುತ್ತ, "ಎಂಥ ಪ್ರೇಮದ ರಾಶಿಯನ್ನು ಅದು ಮುಚ್ಚಿ ಮುಗಿಸಿತು," ಎಂದು ತನ್ನ ಅಂತರ್ಯದಲ್ಲಿ ಸುಮ್ಮನೆ ಅಳಲಿದನು. ಹಂಪಯ್ಯನ ಒಂದು ವಾಕ್ಯ ಇವನ ಮನಸ್ಸಿನಲ್ಲಿ ಮನೆಮಾಡಿ ನಿಂತಿತು. ಇದ್ದಷ್ಟು ದಿನ ತನ್ನ ಹೆಂಡತಿಯನ್ನು ಕಡೆಗಣಿಸಿ ಈಗ ಅವಳನ್ನು ಕುರಿತು ಕೊರಗುತ್ತಿದೇನೆಂದು ಹಂಪಯ್ಯ ಹೇಳಿದನು. ಇದು ತನಗೂ ಅನ್ವಯಿಸುತ್ತದೆಯೆಂದು ನಾಯಕನಿಗೆ ತೋರಿತು. ಈಗ ಈ ಸಮಾಧಿಯ ಪಕ್ಕದಲ್ಲಿ ಕುಳಿತಿರುವಂತೆ ಹೆಂಡತಿಯೊಂದಿಗೆ ಒಂದು ದಿನ ಬಿಡುವಾಗಿ ಕುಳಿತಿರಲಿಲ್ಲ. ಇದ್ದಾಗ ಉಣಲಿಲ್ಲ; ಹೋದಮೇಲೆ ಪರಿತಾಪ. ಏನಿದು ? ಮನುಷ್ಯನ ಹಣೆಯ ಬರಹ ?

ಸ್ವಲ್ಪ ಹೊತ್ತು ಕಳೆದು ಅರಮನೆಗೆ ಹಿಂತಿರುಗಿದಾಗ ನಾಯಕನಿಗೆ ಜೀವನದಲ್ಲಿ ವಿಚಿತ್ರವಾದ ಅನಾಸ್ಥೆ ಮೂಡಿತು. ಅವನು ಶಾಂತವ್ವನ ತೊಟ್ಟಿಯಲ್ಲಿ ಕುಳಿತನು; ಅವಳ ಒಡವೆ ವಸ್ತು ವಸನ ಭೂಷಣಗಳನ್ನು ನೋಡಿದನು; ಅವಳು ಅಲ್ಲಿಯೆ ಇರುವಂತೆ ನೆನೆದು ಆ ಕನಸಿನಿಂದ ಮನಸ್ಸಿನ ಶೂನ್ಯವನ್ನು ತುಂಬಿಕೊಳ್ಳಲು ನೋಡಿದನು; ಈ ಯತ್ನದಲ್ಲಿ ಅದನ್ನು ಮತ್ತಷ್ಟು ಶೂನ್ಯಮಾಡಿಕೊಂಡು ಎದುರಿಗಿದ್ದ ಒಂದು ಪೆಟ್ಟಿಗೆಯ ಮೇಲೆ ತಲೆಯಿಟ್ಟು ಒಂದು ಮಗು ಅಳಬಹುದಾದಂತೆ ಅತ್ತುಬಿಟ್ಟನು.

ಯಾರೊ ಬಂದು ಪಕ್ಕದಲ್ಲಿ ನಿಂತರು. ತನ್ನ ದುಃಖವನ್ನು ಸಹಿಸಲಾರದೆ ಆ ಹೆಂಡತಿ ಬಂದಳೊ? ನಾಯಕ ಮುಖ ತಿರುಗಿಸಿ ನೋಡಿದನು. ಇವನ ಗೋಳನ್ನು ನೋಡುತ್ತ ಧಾರೆಯಾಗಿ ಕಣ್ಣೀರು ಸುರಿಸುತ್ತ ಕೆಂಚವ್ವೆ ನಿಂತಿದ್ದಳು.

ಯಾರು ಕಡೆಗಣಿಸಿದರೂ ಬೇರೆ ಏನು ಮಾಡಿದರೂ ಈ ಹುಡುಗಿ ಒಡತಿಯನ್ನು ಬಿಟ್ಟುಕೊಟ್ಟಿರಲಿಲ್ಲ. ಎಲ್ಲ ಹೊತ್ತಿನಲ್ಲೂ ಆ ಜೀವ ಈ

ಜೀವದಲ್ಲಿ ತನ್ನ ಜೊತೆಯನ್ನು ಕಂಡಿತ್ತು. ನಾಯಕನಿಗೆ ಕೆಂಚವ್ವೆಯ ಜೀವ ಧನ್ಯ ಜೀವ ಎಂದು ತೋರಿತು. ಗಂಡನಾದ ತಾನು ಇವಳ ಶ್ರದ್ಧೆಯಲ್ಲಿ ಹತ್ತರಲ್ಲಿ ಒಂದು ಪಾಲನ್ನು ತೋರಿರಲಿಲ್ಲ.

ಅವನು ಕೆಂಚವ್ವೆಗೆ, "ನಿಮ್ಮ ಒಡತಿ ದೇವರಿಗೆ ಬಲಿಯಾಗಿ ಹೋದದ್ದು ನಿನಗೆ ತಿಳಿದಿತ್ತೆ, ಕೆಂಚವ್ವ?" ಎಂದನು.

"ಇಲ್ಲ ಒಡೆಯರಿ."

"ನಾನು ಹಾಗೇ ಎಣಿಸಿದೆ. ಈಗ ಯಾರು ಹೇಳಿದರು?"

"ಆಳು ಸುಬ್ಬಯ್ಯ. ಚಿಕ್ಕಣ್ಣಯ್ಯ ಒಡೆಯರಿಗೆ ಹೇಳುತಾ ಇದ್ದ ಮಾತು ಅವನು ಕೇಳಿದ. ಬಂದದ್ದೆ ಇಲ್ಲಿ ಹೇಳಿದ."

"ನಿನಗೆ ತಿಳಿದಿದ್ದರೆ ನೀನು ಅವರನ್ನು ತಡೆಯುತ್ತಿದ್ದೆ."

"ಖಂಡಿತ ತಡೆಯುತ್ತಿದ್ದೆ. ನಿಮ್ಮ ದೇವರ ಮನೆ ಹಾಳಾಯಿತು, ಜೀವ ಕೊಡು ಅನ್ನೋ ದೇವರು ಯಾರನ್ನ ಕಾಪಾಡಿಯಾನು, ಅಂತಾ ಇದ್ದೆ. ತಡೀತೇನೆ ಅಂತಲೆ ಅವರು ನನಗೆ ಹೇಳಲಿಲ್ಲ. ನನಗೆ ಜ್ವರ ಬೇರೆ."

"ಆದರೂ ಇಂಥಾ ಕೆಲಸಕ್ಕೆ ಹೊರಡಬಾರದಿತ್ತು ಒಡತಿ."

"ನಾಯಕರು ಹೋಗಿ ಹಗೇಕೈಲಿ ಸಿಕ್ಕಿಕೊಂಡಿರಿ. ಅದು ನಾಯಕರಲ್ಲ, ಬೂದಿಬಸವಾ ಅಂದರು. ನಾಯಕರು ಏನಾಗಿ ಬಿಟ್ಟರೋ ಅಂತ ಅವ್ವಾಜಿ ಜೀವ ಅಂಜಿ ನಡುಗಿತು. ತಮ್ಮ ಜೀವ ಕೊಟ್ಟು ನಿಮ್ಮ ಜೀವ ಉಳಿಸೊ ಜೀವ ರಾಣಿ. ನೀವು ಹೆಜ್ಜೆ ಇಟ್ಟ ಕಡೆ ಹೂವು ಹಾಕೋರು. ನಡೀತಿದ್ದರೆ ನೋಡಿ ಕಣ್ಣು ತುಂಬಿಕೊಳ್ಳೋರು. ಊರಾಗಿಲ್ಲದೆ ಇದ್ದಾಗ ಅವರ ಮೈ ಊರಲ್ಲಿ, ಮನ ನೀವಿದ್ದಲ್ಲಿ. ತಮಗಾಗಿ ಅವರು ಒಂದು ಸಿರೂ ಬಾಳಲಿಲ್ಲ. ತಾನು ಅನ್ನೋದೆಲ್ಲ ತನ್ನ ನಾಯಕರಿಗೆ ಮೀಸಲು. ಅಯ್ಯೊ ನನ್ನ ಒಡತಿ, ನನ್ನ ರಾಣಿ, ನೀ ತೀರಿಕೊಂಡೆಯೇ! ಎಷ್ಟು ನಾವು ಉಳಕೊಂಡಿರೊ ಪೊರಕೆ ಕಟ್ಟು? ನವಿಲುಗರಿ ಕಟ್ಟು ಒಂದಿದ್ದದು ಸುಟ್ಟು ಹೋಯ್ತೇ?"

ದುಃಖವನ್ನು ಸಹಿಸಲಾರದೆ ಕೆಂಚವ್ವೆ ಅಳುವುದಕ್ಕೆ ಹೊರಗಿನ ಕೋಣೆಗೆ ಹೋದಳು. ನಾಯಕ ಕುಳಿತಲ್ಲಿಯೇ ಕುಳಿತು ಬಹುಹೊತ್ತು ಹೆಂಡತಿಯನ್ನು ನೆನೆಯುತ್ತಿದ್ದನು.

ಹಿಂದಿನ ಸಲ ಸುಮಾರು ಈ ಕಾಲದಲ್ಲಿ ಅವಳು ತನ್ನನ್ನು ದತ್ತಾತ್ರೇಯ ಪೀಠಕ್ಕೆ ಬಾ ಎಂದು ಕರೆದಳು. ತಾನು ಹೋಗಲಿಲ್ಲ; ಬೂದಿ ಬಸವನ ವೇಷದಲ್ಲಿ ಜಾಗರದ ಪ್ರಾಂತದಲ್ಲಿ ಸುತ್ತುತ್ತಿದ್ದನು. ಪೀಠದ ಮೇಲೆ ರಾಣಿಯನ್ನು ಕಂಡ ಜನ ಅವಳ ರೂಪನ್ನು, ಮಾತನ್ನು, ನಡೆಯನ್ನು, ರೀತಿಯನ್ನು, ಹೊಗಳಿದ್ದು ಇವನ ಕಿವಿಗೆ ಕೇಳಿ ಇದ್ದಿತು. ಆಗ ಇವನಿಗೆ ಮನಸ್ಸಿನಲ್ಲಿ ವಿಶೇಷ ಭಾವ ಏನೂ ಉದಿಸಲಿಲ್ಲ. ಈಗ ಅವಳೊಂದಿಗೆ ಅಲ್ಲೆಲ್ಲ ನಡೆದಾಡಿದ್ದರೆ ಚೆನ್ನಾಗಿದ್ದಿತು ಎಂದು ಅವನಿಗೆ ತೋರಿತು. ಜೊತೆಗಂತೂ ಇರಲಿಲ್ಲ; ಈಗ ಅಲ್ಲಿಗೆ ಹೋಗಿ ಅವಳು ಇಳಿದಿದ್ದ, ಕುಳಿತಿದ್ದ, ನಡೆದಾಡಿದ, ಪೂಜೆ ಮಾಡಿದ, ತಾವನ್ನೆಲ್ಲ ನೋಡಿದರೆ ತನ್ನ ಹೃದಯದ ಬೇಗೆ ಸ್ವಲ್ಪ ಶಮನವಾಗಬಹುದೆಂದು ಅವನಿಗೆನ್ನಿಸಿತು. ಹೇಗೂ ನಾಡನ್ನು ಸುತ್ತುವ ಯೋಚನೆ ಇದ್ದಿತು. ಮೊದಲು ಆ ದಿಕ್ಕಿನಲ್ಲಿ ಹೋಗುವುದು, ಪೀಠದ ಮೇಲೆ ಎರಡು ದಿನ ಇದ್ದು ವಸ್ತಾರೆಗೆ ಬಂದು ಎರಡು ದಿನ ನಿಲ್ಲುವುದು. ಆಮೇಲೆ ಮುಂದಿನ ಕೆಲಸಮಾಡುವುದು.

ಪೀಠದಲ್ಲಿ ಗವಿಯ ಸಿದ್ಧರು ದೊರೆಯಬಹುದು. ದೊರೆತರೆ ಅವರಿಂದ ಮನಸ್ಸಿಗೆ ಸಮಾಧಾನ ತರುವ ಎರಡು ಮಾತು ಬರಬಹುದು.

ಹಿರಿಯ ಮಠದ ಅಯ್ಯನವರು ಇಲ್ಲಿದ್ದಿದ್ದರೆ ಈಗ ತನ್ನನ್ನು ಕಾಪಾಡಿಕೊಳ್ಳುತ್ತಿದ್ದರು. ತಾನು ಅಲ್ಲಿಗೆ ಹೋಗುವಂತಿಲ್ಲ. ತನ್ನ ಕೆಲಸವೆಲ್ಲ ಇತ್ತ ಇದೆ.

ನಾಯಕ ಮರುದಿನ ಪೀಠದ ಕಡೆ ಹೊರಡುವುದಾಗಿ ಸೇವಕರಿಗೆ ತಿಳಿಸಿದನು. ಸಗುನ ಮಲ್ಲಿಗೆ ಅವನೊಡನೆ ದುರ್ಗಕ್ಕೆ ಬಂದಿದ್ದರು. ಈ ಗೋಳನ್ನೆಲ್ಲ ನೋಡಿದ್ದರು. ಇವನು ಪೀಠಕ್ಕೆ ಹೋಗುವ ಮಾತು ತಿಳಿದು ಅವನ ಜೊತೆಗೆ ನಡೆಯಲು ಅನುಮತಿ ಬೇಡಿದರು. ನಾಯಕ, "ಆಗಲಿ," ಎಂದನು.

## ೧೩೧

ಹತ್ತು ದಿವಸ ನಾಯಕ ಸ್ಥಳದಿಂದ ಸ್ಥಳಕ್ಕೆ ಹೋದನು: ಗೌಡರನ್ನು ಕರೆಸಿ ಪಡೆಗೂಡಬೇಕೆಂದು ಅಪ್ಪಣೆ ಮಾಡಿದನು. ನಾಯಕ ಬಂದಾನೆ,

ಇಂಥ ಅಪ್ಪಣೆ ಮಾಡಿಯಾನೆ, ಎಂದು ನಾಡು ನಾಡೇ ಕಾದಿದ್ದಿತು. ಗ್ರಾಮ ಗ್ರಾಮದ ತರುಣ ಗೌಡಮಕ್ಕಳು, ಜೀತ, ತಮ್ಮಲ್ಲಿದ್ದ ಎಂಥೆಂಥದೊ ಭಲ್ಲೆ, ಈಟಿ, ಕತ್ತಿ, ಕಠಾರಿಯನ್ನು ಮಸೆದು ಹೊಸದು ಮಾಡಿಕೊಂಡು ನಗರದ ಕಡೆಗೆ ಹೊರಡಲು ಅನುವಾದರು. ಅಂದಿನಿಂದ ಒಂದು ತಿಂಗಳ ಸುಮಾರಿನಲ್ಲಿ ಒಂದು ದಿನವನ್ನು ಎಲ್ಲರಿಗೂ ಗೊತ್ತಿನ ದಿನ ಎಂದು ಹೇಳಿ ನಾಯಕ ಮುಂದು ಮುಂದೆ ಹೋದನು. ತಿಂಗಳ ಮಧ್ಯದಲ್ಲಿ ಪೀಠವನ್ನು ಮುಟ್ಟಿದನು.

ಮಧ್ಯೆ ಮಲ್ಲಿಗೆ ಸಗುನನನ್ನು ನಾಯಕನ ಜೊತೆಯಲ್ಲಿ ಬಿಟ್ಟು ಮುಂದಾಗಿ ವಸ್ತಾರೆಗೆ ಹೋಗಿ ಹೆಗ್ಗಡಿತಿಗೆ ತಿಳಿಸಿ ಹಿಂದಿನ ವರ್ಷ ಪೀಠಕ್ಕೆ ಹೋಗಿದ್ದ ಇಬ್ಬರನ್ನು ಅಲ್ಲಿಗೆ ಕಳುಹಿಸಿದಳು. ಅವರು ಶಾಂತವ್ವ ಇಳಿದಿದ್ದ ಸ್ಥಳದಲ್ಲಿ ನಾಯಕನಿಗಾಗಿ ಎಡರು ಕುಟಿಗಳನ್ನು ಮಾಡಿದರು.

ನಾಯಕ ಬಂದು ಅಲ್ಲಿ ಇಳಿದುಕೊಂಡನು; ಶಾಂತವ್ವ ನಡೆದ ದಾರಿಯಿಂದ ಪೀಠಕ್ಕೆ ಹೋಗಿ ಭಾವದಲ್ಲಿ ಅವಳಿಗೆ ತನ್ನ ಸಹವಾಸವನ್ನು ಕೊಟ್ಟನು; ಅವಳು ಜೊತೆಯಲ್ಲಿರುವಂತೆ ಊಹಿಸಿ ದತ್ತಾತ್ರೇಯನ ಸನ್ನಿಧಿಯಲ್ಲಿ ಪ್ರಣಾಮ ಮಾಡಿದನು.

ಸಿದ್ಧ ಗವಿಯಲ್ಲಿದ್ದನು. ಆ ತಿಂಗಳ ಹುಣ್ಣಿಮೆ ಅವನು ವರ್ಷದಲ್ಲಿ ಒಮ್ಮೆ ಜನರೊಂದಿಗೆ ಮಾತನಾಡುವ ದಿನ. ನಾಯಕ ಆ ದಿನ ವಸ್ತಾರೆಯಲ್ಲಿರುತ್ತೇನೆಂದು ಹೇಳಿದನು; ಸಿದ್ಧ ಆ ಹೊತ್ತು ನಿಮ್ಮನ್ನು ಅಲ್ಲಿ ಕಾಣುತ್ತೇವೆಂದನು.

ಮರುದಿನ ನಾಯಕ ವಸ್ತಾರೆಗೆ ಬಂದು ಹೆಗ್ಗಡಿತಿಯ ಮನೆಯಲ್ಲಿ ಇಳಿದುಕೊಂಡನು. ನ್ಯಾಯವಾಗಿ ಈ ಸಂದರ್ಭ ಹೆಗ್ಗಡಿತಿಗೆ ಬಹು ಸಂಭ್ರಮದ ದಿನವಾಗಬೇಕು. ಹಿಂದಿನ ವರ್ಷ ಶಾಂತವ್ವ ಬಂದಾಗ ಹೆಗ್ಗಡಿತಿಯ ಸಂತೋಷಕ್ಕೆ ಮೇರೆ ಇರಲಿಲ್ಲ. ಈ ದಿನ ಅವಳ ಗಂಡ ಬಂದನು; ಅವಳೆ ಇಲ್ಲವಾಗಿದ್ದಳು. ಆದರೂ ನಾಯಕ ಹಿರಿಯ ವಸ್ತು. ಹೆಗ್ಗಡಿತಿ ಅವನನ್ನು ಪ್ರೀತಿಯಿಂದ ಗೌರವದಿಂದ ಬರಮಾಡಿಕೊಂಡಳು ; ಎಲ್ಲ ರೀತಿಯಿಂದಲೂ ಅವನಿಗೆ ಈ ಮನೆ ತನ್ನದೇ ಮನೆಯಂತೆ ಕಾಣಲೆಂದು ಯತ್ನಮಾಡಿದಳು.

ತಾಯಿ ಇದ್ದೂ ಇಲ್ಲದಂತೆ ಬೆಳೆದಿದ್ದ ನಾಯಕ ತನ್ನ ತಾಯಿ ಸರಿಯಾಗಿದ್ದಿದ್ದರೆ ತನ್ನನ್ನು ಹೇಗೆ ಕಾಣಬಹುದಾಗಿತ್ತೆಂದು ಹೆಗ್ಗಡಿತಿಯಲ್ಲಿ ಕಂಡನು.

ಊಟದ ಹೊತ್ತಿನಲ್ಲಿ ಹೆಗ್ಗಡಿತಿ ಅವನ ಹತ್ತಿರ ಕುಳಿತು ಶಾಂತವ್ವನ ವಿಷಯ ಮಾತನಾಡಿದಳು.

"ನಮ್ಮ ಪುಣ್ಯ ಇಳೆಮುಖವಾಗಿ ಒಡತೀರು ತೀರಿಕೊಂಡರು. ಹೋದ ವರ್ಷ ಬಂದು ಈ ಮನೇನ ಏನು ಬೆಳಗಿದರು! ನನ್ನವ್ವನ ಗುಣ ಏನು ಗುಣ! ರಾಣಿ ಅಂತ ಹೆಮ್ಮೆ ಉಂಟೆ? ಆ ಮಾತು ಏನು ನಯ! ಎರಡೇ ಮಾತು; ಮೂರೇ ಮಾತು; ಆಡಿದ್ದೆಲ್ಲ ಮುತ್ತು. ಇನ್ನು ಯಾರಿಗೆ ಬರಬೇಕು ಆ ಮಾತ ಆಡಾಣಿಕೆ? ನನ್ನ ತಾಯಿ ನಡೆ ಏನು ಮೆದು! ಹೂವಿಟ್ಟಂತೆ ಸಪ್ಪುಳು. ಇಲ್ಲೀ ಹೆಣ್ಣಲ್ಲ ಇದು, ದೇವಲೋಕದ್ದು, ಅನ್ನೋ ಹಂಗಿತ್ತು ಕಂದ. ದೇವಲೋಕಕ್ಕೇ ಹೋಯಿತು. ಪೀಠಕ್ಕೆ ಹೋದ ಹೆಣ್ಮಗು ಏನು ಬೇಡಿದರು ಕೇಳಿದಿರಾ?"

"ಇಲ್ಲ."

"ಸುಮಂಗಲಿ ಸಾವು ಕೊಡು ಅಂತ. ನಾನು ಆಗಲೇ ಅಂದೆ, ಹಿಂಗೆ ಕೇಳಬಾರದಿತ್ತು ಅಂತ. ದೊಡ್ಡವರ ತಾವು ಹೋಗಿ ಇಂತದೇನಾದರೂ ಕೇಳೋದೆ ತಪ್ಪು. ಮುಪ್ಪಿನ ದಿನಕ್ಕೂ ಗಂಡ ಇರಲಿ ಅಂತ ಇವರ ಮನಸ್ಸು. ಈಗ ಸತ್ತರೂ ಸುಮಂಗಲಿ ತಾನೆ ಅಂತ ಅವರನ್ನಬಹುದು. ಸುಮಂಗಲಿಯಾಗಿ ಸಾಯುತೀನಿ ಅಂದಾಗ ಹೀಗಂತ ನೆನೆದಳೇ ನನ್ನ ಕಂದ?"

ಹೆಗ್ಗಡಿತಿ ಶಾಂತವ್ವನನ್ನು ಕುರಿತು ಹೇಳಿದ ಒಳ್ಳೆಯ ಮಾತು, ತನ್ನ ನೋವನ್ನು ಕುರಿತು ತೋರಿದ ಸಹಾನುಭೂತಿ, ಈಗ ನಾಯಕನಿಗೆ ಬೇಕಾಗಿದ್ದವು.

ಬಲ್ಲಾಳರಾಯನ ದುರ್ಗವನ್ನು ಬಿಟ್ಟಮೇಲೆ ನಾಯಕನಿಗೆ ದಾರಿಯಲ್ಲಿ ಎರಡು ದಿನ ಜ್ವರಬಂದಿದ್ದಿತು. ಅವನು ಅದನ್ನು ಲಕ್ಷ್ಯಮಾಡಿರಲಿಲ್ಲ. ಪೀಠದಲ್ಲಿ ಒಂದು ಹೊತ್ತು ಚಳಿಚಳಿಯಾಗಿದ್ದಿತು. ವಸ್ತಾರೆಗೆ ಬಂದ ಮಾರನೆಯ ದಿನ ಜ್ವರ ಬಂದಿತು.

ಆ ದಿನ ಅವನಿಗೆ ನೇಮಯ್ಯ ಬರೆದ ಓಲೆ ಬಂದಿತು; ಅದರಲ್ಲಿ ನವಾಬ ಆಡಿದ್ದ ಮಾತು ವಿಸ್ತಾರವಾಗಿ ವರದಿಯಾಗಿದ್ದಿತು.

ಜ್ವರದ ಮಧ್ಯೆ ಈ ಓಲೆ ಬಂದು ನಾಯಕನಿಗೆ ತನ್ನ ದುರ್ದೈವಕ್ಕೆ ಮಿತಿ ಇಲ್ಲ ಎನ್ನಿಸಿತು. ಎಲ್ಲಕ್ಕೂ ಮೂಲ ಆ ತಾಯ ನಡತೆ. ತಾನು ಬೇರೆ ಹೇಗಾದರೂ ನಡೆಯಬಹುದಾಗಿತ್ತೆ ಎಂದು ಅವನು ತನ್ನನ್ನೇ ಕೇಳಿ ಕೊಂಡನು. ಇಲ್ಲ. ಒಳ್ಳೆತಾಯಿತು. ಇನ್ನು ಈ ವಿಷಯ ಯೋಚನೆ ಮಾಡಿ ಫಲವಿಲ್ಲ.

ಅವನು ನೇಮಯ್ಯನಿಗೆ, "ಅಧೀನ ರಾಜರಾಗಲು ನಾವು ಒಪ್ಪುವು ದಿಲ್ಲ; ನವಾಬರ ಸೂಚನೆ ನಮಗೆ ಸಮ್ಮತವಲ್ಲ. ಇವರು ಪಟ್ಟಣಕ್ಕೆ ಹಿಂತಿರುಗುವ ವೇಳೆಗೆ ನಾವೂ ಅಲ್ಲಿಗೆ ಹೋಗುತ್ತೇವೆ; ಅಲ್ಲಿ ಅರಸರ ಸಮ್ಮುಖದಲ್ಲಿ ಇವರೂ ಇರುವ ವೇಳೆಗೆ ಈ ವಿಷಯವನ್ನು ಪ್ರಸ್ತಾಪ ಮಾಡುತ್ತೇವೆ. ಈಗ ಸದ್ಯ ಇವರನ್ನು ನಾವು ಹಗೆ ಎಂದು ಕಂಡು ಯುದ್ಧಮಾಡಲು ಸಿದ್ಧವಾಗಿಲ್ಲ; ಇವರು ನಮ್ಮ ಜನಕ್ಕೆ ತೊಂದರೆ ಕೊಡ ಬಾರದು ; ಮಿತ್ರರಾಗಿ ತಿಂಗಳು ಎರಡು ತಿಂಗಳು ಇರುವ ವಿಷಯದಲ್ಲಿ ನಮ್ಮ ಅಡ್ಡಿ ಇಲ್ಲ. ಈ ಮೂರು ಮಾತನ್ನೂ ಇವರಿಗೆ ತಿಳಿಸಿ ನಗರವನ್ನು ಕಾಪಾಡಿ ಕೊಳ್ಳಿ. ನಾವು ಸದ್ಯ ಅನಾರೋಗ್ಯ ಸ್ಥಿತಿಯಲ್ಲಿದ್ದೇವೆ," ಎಂದು ಉತ್ತರ ಬರೆಸಿದನು.

## ೧೩೨

ಆ ದಿನ ನಾಯಕನಿಗೆ ಜ್ವರ ಬಹು ಹೆಚ್ಚಾಯಿತು. ಅದೊಂದು ರೀತಿಯ ಕೆಮ್ಮಲ ಜ್ವರ. ಜೊತೆಗೆ ಅವನ ಮನಸ್ಸಿಗೆ ಅಯ್ಯನವರು ತನಗೆ ವರ್ಣಿಸಿದ್ದ ರೀತಿಯ ನಿತ್ರಾಣ ಹೆಚ್ಚಿದೆ ಎನ್ನಿಸಿತು. ಅವನು ಹೆಗ್ಗಡಿತಿಗೆ, ನೇಮಯ್ಯನವರು ಹೇಗಾದರೂ ಇಲ್ಲಿ ಬರುವಂತೆ ಹೇಳಿಕಳುಹಿಸಿ, ಎಂದನು.

ಕುದುರೆಯ ಮೇಲೆ ಸುದ್ದಿಹೋಗಿ ನೇಮಯ್ಯ ಬಿದ್ದನೋ ಕೆಟ್ಟನೋ ಎಂದು ಓಡಿ ಬಂದು ಸೇರುವುದಕ್ಕೆ ಒಂದು ವಾರವಾಯಿತು. ಆ ದಿನ ನಾಯಕನಿಗೆ ಜ್ವರ ಇಳಿಮುಖವಾಗಿತ್ತು. ಆದರೆ ಅವನ ಉಸಿರು ಕುಗ್ಗಿ ಹೋಗಿತ್ತು.

ಮಗಳಿಗಾಗಿ ಕೊರಗಿ ನೇಮಯ್ಯನ ಉಸಿರೂ ಅರ್ಧವಾಗಿದ್ದಿತು. ಅವನು ನಾಯಕನ ಹತ್ತಿರ ಕುಳಿತನು; ಅವನ ಸ್ಥಿತಿಯನ್ನು ನೋಡಿ ಅವನ ವಿಷಯ ಆಸೆಯನ್ನು ಬಿಟ್ಟನು; ಆದರೂ ಅಯ್ಯನನ್ನು ಕೇಳಿ ತಂದಿದ್ದ ಒಂದು ಔಷಧಿಯ ಸ್ವಲ್ಪವನ್ನು ನಾಯಕನಿಗೆ ಕೊಟ್ಟನು.

ನಾಯಕ, "ನೀವು ಬಂದದ್ದು ಒಳ್ಳೆಯದಾಯಿತು. ವಾರದ ಹಿಂದೆ ನಮ್ಮ ಆಯುಸ್ಸು ಮುಗಿಯಿತೆಂದು ಕಂಡಿತು, ಒಡನೆ ಹೇಳಿಕಳುಹಿಸಿದೆವು. ನಿಮಗೆ ಎರಡು ಮಾತು ಹೇಳುವುದಿತ್ತು," ಎಂದನು.

ಆವೇಳೆಗೆ ಹೆಗ್ಗಡಿತಿ ಒಳಗೆ ಬಂದು, "ಗವಿಯ ಸಿದ್ಧರು ಬಂದಿದಾರೆ; ನಿಮ್ಮನ್ನು ಈ ಹೊತ್ತು ನೋಡುತ್ತೇವೆ ಎಂದಿದ್ದರಂತಲ್ಲ," ಎಂದಳು.

ನಾಯಕ, "ನಮ್ಮ ಈ ಸ್ಥಿತಿಯಲ್ಲಿ ನಾವು ಅವರಿಗೆ ಮರ್ಯಾದೆ ತೋರುವುದಕ್ಕೆ ಎದ್ದು ಕುಳ್ಳಿರುವುದು ಕೂಡ ಸಾಧ್ಯವಿಲ್ಲವಲ್ಲ," ಎಂದನು.

ಸಿದ್ಧ ಒಳಗೆ ಬಂದನು; "ನಿಮಗೆ ಸಂಕೋಚ ಬೇಡ," ಎಂದನು. ನೇಮಯ್ಯ ಎದ್ದು ನಿಂತು ತೋರಿಸಿದ ಪೀಠದ ಮೇಲೆ ಕುಳಿತು ನೇಮಯ್ಯನನ್ನು ಕುಳ್ಳಿರಹೇಳಿದವನು ನಾಯಕನಿಗೆ, "ನೀವು ಹೇಳುತ್ತಿದ್ದ ಮಾತನ್ನು ಮುಂದರಿಸಿ," ಎಂದನು. ನಾಯಕ ಮಾತನಾಡಿದನು.

"ನಮ್ಮ ಆಯುಸ್ಸು ಮುಗಿದು ಬಂದಿದೆ. ಆದ್ದರಿಂದ ಅಣ್ಣಯ್ಯನವರಿಗೆ ಹೇಳಬೇಕಾಗಿದ್ದ ಎರಡು ಮಾತನ್ನು ಹೇಳುತ್ತಿದ್ದೆವು. ಏನೇ ಆಗಲಿ ನಗರವನ್ನು ಆ ವಿಧರ್ಮಿ ನವಾಬನ ಆಸ್ತಿಯಾಗುವುದಕ್ಕೆ ಬಿಡಬಾರದು ಎನ್ನುವುದು ಮೊದಲ ಮಾತು."

ನೇಮಯ್ಯ: ಅಪ್ಪಣೆ.

ನಾಯಕ: ನಮ್ಮ ಹೆಗ್ಗಡಿತಿಯವರು ಒಪ್ಪುವುದಾದರೆ ಇವರ ಮೊಮ್ಮಗನನ್ನ ನಾವು ದತ್ತು ಮಾಡಿಕೊಂಡಿದೇವೆಂದು ಎಣಿಸಿ ಹುಡುಗನಿಗೆ ನಾಯಕ ಪಟ್ಟ ಮಾಡಬೇಕು. ಮೈಸೂರರಸರ ಬಳಿ ಹೋಗಿ ಮಾತನಾಡಿ ಅವನ ಆಸ್ತಿಯನ್ನು ಅವನಿಗೆ ಕೊಡಿಸಿ ಕೊಡಬೇಕು.

ನೇಮಯ್ಯ: ಅವಶ್ಯವಾಗಿ ನಮ್ಮ ಕೈಯಲಾದ್ದನೆಲ್ಲ ಮಾಡುತೇವೆ.

ನಾಯಕ: ಹಾಗೆ ಅವರಿಗೆ ಇಷ್ಟವಿಲ್ಲದಿದ್ದರೆ ಅವರ ಮಕ್ಕಳನ್ನು ಸಂಸ್ಥಾನಕ್ಕೆ ಅಧಿಕಾರಿಯಾಗಿ ಮಾಡಲಿ. ಹಾಗೂ ಇಲ್ಲ, ಇದನ್ನು

ಮೈಸೂರ ರಾಜ್ಯದಲ್ಲಿ ಬೆರಸಿ ತಾವು ರಾಜರೆಂದಾಗಲಿ. ಹೇಗೂ ಸರಿಯೆ. ನಮ್ಮ ಹಿರಿಯರು ಆಳಿದ ರಾಜ್ಯ ನಮ್ಮ ದಿನದಲ್ಲಿ ಪರಧರ್ಮೀಯರ ಪಾಲಾಯಿತೆನ್ನುವುದು ಬೇಡ.

ನೇಮಯ್ಯ : ಆಯಿತು.

ನಾಯಕ : ಇನ್ನೊಂದು ಮಾತು ಇದು. ನಾವು ನಿಮ್ಮ ಮಗಳನ್ನ ಸರಿಯಾಗಿ ನೋಡಿಕೊಳ್ಳಲಿಲ್ಲ. ತಾವು ಆ ತಪ್ಪನ್ನು ಮನ್ನಿಸಬೇಕು.

ನೇಮಯ್ಯ : ಈ ವಿಷಯದಲ್ಲಿ ನೀವು ಏನಾದರೂ ತಪ್ಪು ಮಾಡಿ ದೀರೆಂದು ನಮಗೆ ತೋರುತ್ತಿಲ್ಲ.

ಸಿದ್ಧ ಮಾತನಾಡಿದನು: "ಗರ್ಭಿಣಿಯಾಗಿದ್ದ ಆಕೆ ತೀರಿಕೊಂಡ ರೆಂದು ನಾಯಕರು ಬಹು ನೊಂದಿದಾರೆ. ಈ ನೋವು ಸಹಜವಾದದ್ದು. ಆದರೆ ಅದರ ವಾಸ್ತವಾಂಶವನ್ನು ತಿಳಿಸಿದರೆ ದುಃಖ ಸ್ವಲ್ಪ ಶಮನವಾಗ ಬಹುದೆಂದು ನಾವು ಈ ದಿನ ಇವರನ್ನು ಕಾಣುತ್ತೇವೆಂದು ಹೇಳಿದೆವು. ಈ ಸಂಗತಿ ಯಾವುವೂ ಈ ಹೊತ್ತಿನ ನಿನ್ನೆಯ ಮಾತುಕಥೆಯಲ್ಲ. ಎಲ್ಲದರ ಬೇರೂ ಭವಾಂತರದಲ್ಲಿದೆ. ಶಾಂತವ್ವ ಈ ಜನ್ಮದಲ್ಲಿ ನಮ್ಮ ಮಗಳು ಇವರ ಹೆಂಡತಿ; ಆದರೆ ಅವಳು ಸದಾ ನಮ್ಮ ಪದಾರ್ಥವಲ್ಲ."

ನೇಮಯ್ಯ : ಅಪ್ಪಣೆಯಾಗಬೇಕು.

ಸಿದ್ಧ: ಈಕೆ ವಸುಮತಿ ಎಂಬ ದೇವಸ್ತ್ರೀ. ಅರ್ಹತ್ ಪದವಿಯನ್ನು ಬಯಸಿರುವ ಒಬ್ಬ ಮಹಾತ್ಮ ಈ ಸಮಯದಲ್ಲಿ ಒಂದು ಜನ್ಮವನ್ನೆತ್ತ ಬೇಕಾಗಿ ಬಂದು ಆಕೆ ತನ್ನನ್ನು ಗರ್ಭದಲ್ಲಿ ಧರಿಸಿ ಗರ್ಭಿಣಿಯಾಗಿರುವಾಗ ದೇಹವನ್ನು ತ್ಯಾಗಮಾಡಿ ತನ್ನ ಒಂದು ಜನ್ಮವನ್ನು ಬೇಗನೆ ಮುಗಿಸಿ ಕೊಡಬೇಕೆಂದು ಆಕೆಯನ್ನು ಬೇಡಿಕೊಂಡನು. ಈಕೆ ಒಪ್ಪಿ ಈ ಜನ್ಮ ವೆತ್ತಿದಳು, ಗರ್ಭಿಣಿಯಾಗಿ ಅವನಿಗೆ ಜನ್ಮವನ್ನು ಕೊಟ್ಟು ತಾನು ದೇಹ ತ್ಯಾಗಮಾಡಿ ಅವನ ಆ ಜನ್ಮವನ್ನು ಮುಗಿಸಿಕೊಟ್ಟಳು. ದಿನದ ಜೀವನದ ದೃಷ್ಟಿಯಿಂದ ದುಃಖ ತಪ್ಪಿದ್ದಲ್ಲ. ಆದರೆ ಕಾರ್ಯ ಕಾರಣ ತಿಳಿದರೆ ಸಮಾಧಾನವಾಗುತ್ತದೆ.

ನಾಯಕ ಈ ಮಾತನ್ನೆಲ್ಲ ಸಾವಧಾನವಾಗಿ ಕೇಳಿದನು. ಒಂದು ನಿಮಿಷ ಸುಮ್ಮನಿದ್ದು, "ತಾವು ತಪಸ್ವಿಗಳು. ನಾವು ತಮ್ಮ ಬೆಸನಿಗೆ

ಪ್ರತಿ ನುಡಿಯಬಾರದು. ಅಂತೆ ಮನಸ್ಸನ್ನು ಕದ್ದಿಡಲೂ ಬಾರದು," ಎಂದನು.

ಸಿದ್ಧ: ಸಂಕೋಚಬೇಡ. ಅನುಭವಕ್ಕಿಂತ ಹಿರಿದಾದ ಸತ್ಯ ಇಲ್ಲ. ಮನಬಿಚ್ಚಿ ನುಡಿಯಿರಿ.

ನಾಯಕ: ಎಳೆತನದಿಂದಲೂ ಅಷ್ಟೆ, ನಮಗೆ ಇಂಥ ವಿವರಣೆಯಲ್ಲಿ ನಂಬಿಕೆಯಿಲ್ಲ. ಊರಿಗೆ ನೂರು ದೆವ್ವ; ಅದಕ್ಕೆ ಅಂಜದ ಜನ ಇಲ್ಲ. ನಾವು ಅದನ್ನು ಹುಡುಕಿ ಸುತ್ತಿದ್ದಾಯಿತು; ಒಂದು ದಿನ ಒಂದು ಎದುರಿಗೆ ಬರಲಿಲ್ಲ. ತೆರೆಯಾಚೆ ಏನೊ ಇರಬೇಕು, ಅದೇನು ಅನ್ನೋದು ತಿಳಿಯ ಲಿಲ್ಲ. ಮರದ ಮೋಟು ಮನುಷ್ಯನಾಗುತದೆ; ಸುಳಿದು ಮರೆದ ಮನುಷ್ಯ ದೆವ್ವ ಆಗುತಾನೆ. ಕಾರ್ಯಕ್ಕೆ ಕಾರಣ ಎಂದಾಗ ಇರಬಹುದೊ ಅನ್ನಿ ಸುತದೆ. ಒಂದೇಕ್ಷಣ ತಿರುಗಿ ಅದು ಕಟ್ಟುಕತೆ ಅನ್ನಿಸುತದೆ.

ಸಿದ್ಧ: ಇದನ್ನೇ ವೈದಿಕದ ಮಂದಿ ಮಾಯೆ ಎಂದು ಕರೆಯು ತ್ತಾರೆ. ನೀರಮೇಲಿನ ಪಾಚಿ ಇಂತೆ. ಅಲಸಿದರೆ ನೀರು ಕಂಡಿತು. ಕೈಯೆತ್ತಿ; ಮತ್ತೆ ಪಾಚಿ. ಒಳ್ಳೆಯದು. ನೀವು ಯಾವುದನ್ನೂ ಒಪ್ಪಲೇ ಬೇಕು ಎಂತ ನಾವು ಎನ್ನುವುದಿಲ್ಲ. ನಿಮ್ಮ ಸ್ವಭಾವದಂತೆ ನೀವು ನಂಬಿರಿ.

ನಾಯಕ: ಇನ್ನು ಏನು ಸ್ವಭಾವ? ಏನು ನಂಬಿಕೆ ? ಇರುಳನ್ನ ಬೆಳಗಿತು ಬೆಳಕಿನ ಬಳ್ಳಿ. ಬೆಳಗಿ ಮರೆಯಾಯಿತು, ಎತ್ತಲೊ ಸಾರಿತು. ಏನಾಯಿತೊ ಎಂತ ಇರುಳಿಗೆ ತೊಳಲಾಟ.

ಇವರು ಯಾರೂ ಮಾತನಾಡಲಿಲ್ಲ. ಒಂದು ಕ್ಷಣ ಬಿಟ್ಟು ನಾಯಕ ಶಾನಾಗಿ, "ಇರುಳು ಇಂತೇ ಇರುವುದಿಲ್ಲ; ಬೆಳಗಾಗತದೆ," ಎಂದನು.

ಸಿದ್ಧ, "ಆ ಧೈರ್ಯ ಮುಖ್ಯ. ನಾವಿನ್ನು ಬರುತ್ತೇವೆ," ಎಂದು ಎದ್ದನು. ನಾಯಕ ಅವನಿಗೆ ಕೈಜೋಡಿಸಿ ನಮಸ್ಕಾರ ಮಾಡಿದನು; ಕಣ್ಣುಮುಚ್ಚಿ ಮಲಗಿಯೇ ಇದ್ದನು.

ಅವನು ತಿರುಗಿ ಕಣ್ತೆರೆಯಲಿಲ್ಲ. ಏನೊ ಒಂದು ಮಂಕು ಕವಿದು ಅವನ ಅರಿವು ಮಸಕಾದದ್ದು ಕಂಡಿತು. ಹೆಗ್ಗಡಿತಿ ನೇಮಯ್ಯ ಅವನ ಪಕ್ಕದಲ್ಲೆ ಕುಳಿತು ನೋಡಿಕೊಂಡರು. ಇಡಿಯ ರಾತ್ರಿ ನಾಯಕ ಈ

ಮಂಪರದಲ್ಲಿ ಮುಳುಗಿದ್ದನು. ಮುಂಜಾನೆ ಬೆಳಕು ಹರಿದಾಗ ಅವನು ಒಮ್ಮೆ ಕೆಮ್ಮಿದಂತಾಯಿತು. ಕಣ್ಣನ್ನು ತೆರೆಯಲು ಯತ್ನಮಾಡಿದಂತೆ ಅವನ ಎವೆ ಅದುರಿದವು. ಕಣ್ಣು ತೆರೆಯಲಿಲ್ಲ. ನಾಯಕ ನೀಳವಾಗಿ ಉಸಿರೆಳೆದು ಬಿಟ್ಟನು. ಅದುವರೆಗೆ ಸ್ವಲ್ಪ ಸುಕ್ಕುಕಾಣುತ್ತಿದ್ದ ಅವನ ಮುಖ ಪ್ರಸನ್ನವಾಯಿತು; ಸ್ವಲ್ಪ ಹರಹಿದಂತೆ ಕಂಡಿತು.

ನಾಯಕ ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿದ್ದನು.

ಹೆಗ್ಗಡಿತಿ, "ಇವರಿಗೆ ಬೇರೆಯಲ್ಲಿ ಬೆಳಗು," ಎಂದಳು. ನೇಮಯ್ಯ, "ಹೌದು," ಎಂದು ತಲೆ ಆಡಿಸಿದನು, ಬಾಯಿ ತೆರೆಯಲಿಲ್ಲ. ಅವನ ಕಣ್ಣಲ್ಲಿ ಎರಡು ಹನಿ ಸೇರಿ ಮೆಲ್ಲನೆ ದೊಡ್ಡವಾಗಿ ಉದುರಿದುವು.

## ೧೩೩

ನೇಮಯ್ಯ ಹೆಗ್ಗಡಿತಿ ನಾಯಕನ ಉತ್ತರಕ್ರಿಯೆಗಳನ್ನು ಕ್ರಮವಾಗಿ ನಡೆಸಿ ಮುಗಿಸಿದರು. ಒಡೆಯನ ದೇಹವನ್ನು ನೆಲದ ಮಡಿಲಲ್ಲಿರಿಸುವ ಹೊತ್ತಿನಲ್ಲಿ ವಸ್ತಾರೆಯ ಹತ್ತೂರಿನ ಜನ ಸುತ್ತ ಗುಂಪು ಕಿಂತಿತು, ನಾಡ ದೊರೆಗೆ ಮರ್ಯಾದೆ ತೋರಿತು. ಒಡೆಯರ ಹೆಸರಲ್ಲಿ ಹಬ್ಬದೂಟ ಹಾಕುವ ಪುಣ್ಯವನ್ನು ಕೇಳಬರಲಿಲ್ಲ, ಇದನ್ನೇ ಹಾಕುವುದು, ಎಂದು ಹೆಗ್ಗಡಿತಿ ಬಂದ ಎಲ್ಲ ಮಂದಿಗೆ ಹೋದವನ ಪದವಿಗೆ ತಕ್ಕ ಒಂದು ಊಟವನ್ನು ಮಾಡಿಸಿದಳು.

ಸಂಜೆ ನೇಮಯ್ಯ ತಾನು ಮರುದಿನ ನಗರಕ್ಕೆ ಹೊರಡುವುದಾಗಿ ಹೇಳಿ, "ನಾಯಕರು ನಿಮ್ಮ ಮೊಮ್ಮಕ್ಕಳ ಮಾತು ಹೇಳಿದ್ದು ತಿಳಿಯಿತಲ್ಲ? ಅದಕ್ಕೆ ಏನು ಹೇಳುತ್ತೀರಿ?" ಎಂದನು.

"ಕೇಳಿದಿವಿ, ಅಲ್ಲಿದ್ದು ಕೇಳಿದ ಆಳು ಮಗ ಹೇಳಿದ. ಅಂದರೆ ನಮಗೆ ದತ್ತ ಅನ್ನೋದು ಬೇಡ ಅನ್ನಿಸತದೆ."

"ಹಂಗಂತೀರ?"

"ಹೌದು ಅಣ್ಣಯ್ಯನವರೆ. ಈ ಮರಕ್ಕಿರೋದು ಅದು ಒಂದು ಚಿಗುರು. ಅದನ್ನ ಬೇರೆ ಮರಕ್ಕೆ ಹಚ್ಚಿ ನಾವೇನಾಗಬೇಕು?"

"ಎರಡು ಹೆಸರೂ ಹೇಳಿ ಬೆಳೆಯುತಾರೆ."

"ಸೊಸೆ ಒಲ್ಲೆ ಅಂತ ಆಗಲೆ ಅಳತಾ ಕುಂತಿದಾಳೆ. ಅವಳ ಕಣ್ಣಾಗೆ ನೀರ ತರಿಸಿ ಯಾರನೇನು ಬದುಕಿಸೋದು? ಮಗನ್ನ ನುಂಗಿಕೊಂಡು ಅವಳ ಬಾಳು ಬರಿದು ಮಾಡಿಟ್ಟಿದಾಯ್ತು. ಇನ್ನ ಮೊಮ್ಮಗನ್ನ ನೆಂಟರಿಗೆ ಕೊಟ್ಟರೆ ಅವಳಿಗೆ ಉಳಿಸಿದ್ದೇನನ್ನ? "

"ಬೇಡ ಅಂದರೆ ಸಾಕು ಹೆಗ್ಗಡಿತಿಯೋರೆ. ಇಷ್ಟುನೊಂದು ನುಡಿಯೋದು ಬೇಡ."

"ನೀವು ಬೇಸರ ಮಾಡಿಕೊಳ್ಳಬಾರದು. ನಾಡು ನಗರ ಆಗಬಹುದು ಅಂದರೆ ಇರುವಂತೆಯೇ ಹುಡುಗನ್ನ ನಾಯಕ ಅನ್ನಿರಿ. ಹಿರೇರಬೆಸನು ಅಂತ ನಡಸತೀವಿ. ಇಷ್ಟಕ್ಕೆ ಇದು ಈಗ ಯಾವ ಸುಖಕ್ಕೆ? ನಾಯಕರು ತೀರಿಕೊಂಡಾರೆ; ಆ ಕಾಡು ಬೆಕ್ಕು ಬಂದು ಊರಮೇಲೆ ಬಿದ್ದವನೆ. ತಾಗಬೇಕು; ತಡೆಯಬೇಕು; ಯಾರು ಇದನ್ನ ಮಾಡುವರು? ಹಿರಿಯರು ಮೊದಲು ಸಂಸ್ಥಾನ ಉಳಿಸಿರಿ. ಆ ಮುಂದೆ ಇದ ನೋಡುವಿರಂತೆ."

ನೇಮಯ್ಯ ಇದಕ್ಕೆ ಒಪ್ಪಿದನು. ಮರುದಿನ ಹೊರಟು ನಗರಕ್ಕೆ ಬಂದನು. ಬರುತ್ತ ದಾರಿಯಲ್ಲಿ ನಾಯಕನ ಸುದ್ದಿಯನ್ನು ರಾಣಿಗೆ ತಿಳಿಸುವುದಕ್ಕೆ ಕಾವಲೆ ದುರ್ಗಕ್ಕೆ ಒಬ್ಬ ಆಳನ್ನು ಅಟ್ಟಿದನು.

ಸಾಮಂತನಾಗಿರಲು ತನಗೆ ಒಪ್ಪಿಗೆ ಇಲ್ಲ ಎಂದು ನಾಯಕ ಬರೆದ ಓಲೆ, ತನ್ನ ದೇಹಸ್ಥಿತಿ ಕೆಟ್ಟಿದೆ, ನೇಮಯ್ಯ ಬರಬೇಕು, ಎಂದ ಅವನ ಎರಡನೆಯ ಓಲೆಗಿಂತ ಸ್ವಲ್ಪವೆ ಮುಂದಾಗಿ ಮುಟ್ಟಿದ್ದಿತು. ನೇಮಯ್ಯ ಆ ಮೊದಲ ಓಲೆಯ ಮಾತನ್ನು ನವಾಬನಿಗೆ ತಿಳಿಸುವ ಕೆಲಸವನ್ನು ಶಾಸ್ತ್ರಿಯ ಕೈಯಲ್ಲಿ ಬಿಟ್ಟು ವಸ್ತಾರೆಗೆ ಬಂದಿದ್ದನು. ಶಾಸ್ತ್ರಿ ಮಾರನೆಯ ದಿನ ನವಾಬನಬಳಿ ಹೋಗಿ, ನೇಮಯ್ಯ ಊರಲ್ಲಿಲ್ಲದ್ದರಿಂದ ತಾನು ಬಂದಿರುವುದಾಗಿ ಹೇಳಿ, ತಮ್ಮ ಒಡೆಯನ ಉತ್ತರವನ್ನು ಅವನಿಗೆ ತಿಳಿಸಿದನು. ಹೈದರ್ ಈ ಮಾತನ್ನು ಕೇಳಿ ತುಂಬ ವ್ಯಥೆಯನ್ನು ತೋರಿದನು. "ನಾವು ನಾಯಕರಿಗೆ ಮರ್ಯಾದೆಗೆ ಕಡಮೆಯ ಸ್ಥಾನವನ್ನು ಸೂಚಿಸಿದೆವೆಂದು ಅವರು ತಿಳಿದಂತಿದೆ. ಅದು ನಮ್ಮ ಅರ್ಥವಲ್ಲ. ಆದರೆ ವಿಧಿ ಇಲ್ಲ. ಇನ್ನು ನಾವು ನಗರಕ್ಕೆ ಬರುವುದು ತಡವಾಗಬೇಕಾಗಿಲ್ಲ. ನಾಳೆನಾಳಿದ್ದರಲ್ಲಿ

ನಮ್ಮ ಪಡೆ ಎಲ್ಲ ನಗರದ ಹೊರವಳಯಕ್ಕೆ ಬರುತ್ತದೆ. ತಾವು ಅನುಕೂಲಗಳನ್ನು ಒದಗಿಸಿ ಕೊಡಬೇಕು. ನಮ್ಮ ಸೇನೆಯ ಜನಕ್ಕೆ ನಾವು ಎಚ್ಚರಿಕೆ ಹೇಳುತ್ತೇವೆ. ಬೆಂಗಳೂರಲ್ಲಿ ಹೇಗೆ ಇಲ್ಲಿಯೂ ಹಾಗೆ ನಡೆದುಕೊಳ್ಳಬೇಕು ಎಂದು. ತಾವು ತಮ್ಮ ಜನಕ್ಕೆ ಎಚ್ಚರಿಕೆ ಹೇಳೋಣಾಗಲಿ. ಯಾರು ಒಬ್ಬರು ಹೆಚ್ಚು ಕಡಮೆಯಾಗಿ ನಡೆದುಕೊಂಡರೂ ವೃಥಾ ಗಲಭೆ ಆಗುತ್ತದೆ," ಎಂದನು.

ಶಾಸ್ತ್ರಿ, ಆಗಬಹುದು, ಎಂದು ಹೊರಟು ಬಂದನು. ಊರ ರಕ್ಷಣೆಗೆ ಹೊಣೆಯಾಗಿದ್ದ ಮಲ್ಲಯ್ಯನಿಗೆ ಸಂಗತಿಯನ್ನು ತಿಳಿಸಿದನು.

ಮಲ್ಲಯ್ಯ, "ಕಾದು ಅಂದರೆ ನಾವು ಕಾದಬಲ್ಲೆವು ಅಣ್ಣಾ ಅವರೆ; ಈ ಬಿಟ್ಟುಕೊಡೋದು ಅನ್ನೋದನ್ನ ನಾವು ಕಲಿತಿಲ್ಲ; ಇದಕ್ಕೆ ನೀವು ಬೇರೆ ಜನಾನ ಇಟ್ಟುಕೊಳ್ಳಬೇಕು,'' ಎಂದನು.

ಏನು ಹೇಳಿದರೂ ಅವನು ಒಪ್ಪದ್ದರಿಂದ ಶಾಸ್ತ್ರಿ ಮಲ್ಲಯ್ಯನನ್ನು ಅವನ ಕೆಲಸದಿಂದ ಬಿಟ್ಟುಕೊಟ್ಟು ಪಡೆವಳನ ಸ್ಥಾನಕ್ಕೆ ಅವರ ಕೈಕೆಳಗಿದ್ದ ನಾಗಪ್ಪನನ್ನು ನೇಮಿಸಿದನು.

ಮಾರನೆಯ ದಿನ ಹೈದರನ ಸೈನ್ಯ ಎರಡು ಪಟಲವಾಗಿ ಹೊರಟು ಒಂದು ಪಟಲ ಯರಗಿಯ ಮಾರ್ಗದಿಂದ ಒಂದು ಪಟಲ ನಾಗರಹೊಳೆಯ ಮಾರ್ಗದಿಂದ ಬಂದು ನಗರವನ್ನು ಸೇರಿದವು. ಹೈದರ್ ಊರ ಹೊರವಳಯದಲ್ಲಿ ಬಿಡಾರ ಮಾಡಿಕೊಂಡು ನಿಂತನು.

ನೇಮಯ್ಯ ವಸ್ತಾರೆಯಿಂದ ಹಿಂದಿರುಗುವ ವೇಳೆಗೆ ನಗರ ಹೀಗೆ ಹೈದರನ ವಶದಲ್ಲಿದ್ದಿತು.

## ೧೩೪

ಮನೆಯನ್ನು ಮುಟ್ಟಿದೊಡನೆ ನೇಮಯ್ಯ ತಾನು ಬಂದ ಸಂಗತಿಯನ್ನು ಶಾಸ್ತ್ರಿಗೆ ತಿಳಿಯ ಹೇಳಿಕಳುಹಿಸಿದನು.

ಅದಕ್ಕೆ ಕೆಲವು ದಿನದ ಹಿಂದೆ ಕೆಂಚವ್ವೆ ದುರ್ಗದಿಂದ ಹಿಂದಿರುಗಿದ್ದಳು. ನಾಯಕನನ್ನು ನೋಡುವುದಕ್ಕಾಗಿ ನೇಮಯ್ಯ ವಸ್ತಾರೆಗೆ ಹೋಗಿರುವ ಸಂಗತಿ ತಿಳಿದು ಅವಳು ಕಳವಳಗೊಂಡಳು. ನೇಮಯ್ಯ ಹಿಂದಿರುಗಿದೊಡನೆ ತನಗೆ ತಿಳಿಸೆಂದು ಮನೆವಾರ್ತೆಯನ್ನು ಕೇಳಿ

ಕೊಂಡಿದ್ದಳು; ಈಗ ನೇಮಯ್ಯ ಬಂದ ಸಂಗತಿ ತಿಳಿದು ಒಡನೆ ಇವನನ್ನು ಕಾಣಲು ಬಂದಳು.

ಕೆಂಚವ್ವೆ ಚಿಕ್ಕಂದಿನಿಂದ ಶಾಂತವ್ವನ ಜೊತೆಯಲ್ಲಿ ಬೆಳೆದವಳು ಎಂದು ಹೇಳಿದ್ದಾಗಿದೆ. ಆಳು ಹೌದು; ಆದರೆ ಈ ಮನೆತನಗಳ ಒಂದು ಹಿರಿಯ ಸಂಪ್ರದಾಯದಲ್ಲಿ ಒಡತಿ ಹಿರಿಯಳೇ ಆದರೂ ಆಳು ಕಡಮೆ ಎಂಬ ಭಾವವಿರಲಿಲ್ಲ. ನೇಮಯ್ಯ ಕೆಂಚವ್ವೆಯನ್ನು ತನ್ನ ಇನ್ನೊಬ್ಬ ಮಗಳು ಎಂಬಂತೆ ನೋಡುವನು, ನುಡಿಸುವನು. ಕೆಂಚವ್ವೆ ಬಂದು ನೇಮಯ್ಯನ ಹತ್ತಿರ ನಿಂತು ಗಳಗಳ ಅತ್ತಳು.

ನೇಮಯ್ಯ ಅವಳ ಕಡೆ ನೋಡಿದನು; ತನ್ನ ಕಣ್ಣೂ ತುಂಬಿ ಕೊಂಡು ಬಂದು ಮುಖವನ್ನು ಕೆಳಕ್ಕೆ ಹಾಕಿದನು.

ಕೆಂಚವ್ವೆ, "ತಿಂಗಳಾಯಿತು. ಒಡತೀರನ್ನ ಕಳೆದುಕೊಂಡೆ, ವಾರದಾಚೆ ಚಿಕ್ಕಣ್ಣಯ್ಯ ತೀರಿಕೊಂಡದ್ದ ನೋಡಿಯಾಯ್ತು, ಈಗ ನಾಯಕರನ ಬಿಟ್ಟುಕೊಟ್ಟದಾಯ್ತು," ಎಂದಳು.

"ಹಂಪಯ್ಯ ದುರ್ಗದಲ್ಲಿ ತೀರಿಕೊಂಡರೆ?"

"ಹೂಂ, ಆ ಕಮರೀಲಿ ಜೀವಬಿಟ್ಟರು. ಒಡತೀರು ತೀರಿಕೊಂಡ ಮೂರು ರಾತ್ರಿ ಆಚೆ ಕಮರೀಲಿ ಅವರು ಮಲಗಿದ್ದ ತಾವು ಯಾರೋ ನರಳಿದ ಹಂಗಾಯ್ತು. ಏನು ನಾವು ಸೇವೆ ಮಾಡಲಿಲ್ಲೋ, ಅವ್ವನ ಜೀವ ನರಳುತದೆ, ಅಂತ ನಾವೆಲ್ಲ ಅಂಜಿದಿವಿ. ಬೆಳಗೆದ್ದು ನೋಡಿದರೆ ಅಲ್ಲಿ ಯಾರೋ ಬಿದ್ದಿರೋದು ಕಂಡಿತು. ಹೋಗಿ ನೋಡತೀವಿ; ಚಿಕ್ಕಣ್ಣಯ್ಯ ಮಗಳತಾವ ಸಾಯಬೇಕು, ಅವರನ್ನ ಅವರ ಮಗೂನ ಕಾಯಬೇಕು, ಅಂತ ನಾಯಕರೊಂದಿಗೆ ಅಂದಿದ್ದರು; ಹಂಗೇ ಮಾಡಿದ್ದರು. ಅಯ್ಯೋ ಪಾಪನೇ ಅಂತ, ಅವರ ಆಶೆ ಸಲ್ಲಲಿ ಅಂತ ಅವರನ ಅಲ್ಲೇ ಮಣ್ಣಿಗೆ ಕೊಟ್ಟು ಮರೆಸಿದಿವಿ. ಇದ್ದಷ್ಟು ದಿನ ಮಗಳನ ಒಲ್ಲೇ ಅಂದವರು, ಅವರು ತೀರಿಕೊಂಡದ್ದೇ, ನಾ ಬಿಟ್ಟಿರಲಾರೆ ಅಂತ ಹಠಮಾಡಿಬಿಟ್ಟರು. ಅಂತೂ ಆ ಬಸಿರಿ ಮಗಳನ ಮಣ್ಮರೆ ಮಾಡಿ ಈ ತಂದೀನ ಕಾವಲಿಗಿಟ್ಟು ಬರೀಕೈಲಿ ಬರೋಕೆ ಎಂತ ಹೋದೆ ನಾ ದುರ್ಗಕ್ಕೆ ತಿಂಗಳ ಹಿಂದೆ."

ಹೀಗೆಂದು ಕೆಂಚವ್ವೆ ಗೊಳೋ ಎಂದು ಅತ್ತಳು. ನೇಮಯ್ಯನಿಗೂ ಜೀವ ಕಹಿಯೆನಿಸಿತು.

೧೩೫

ಈ ವೇಳೆಗೆ ಶಾಸ್ತ್ರಿ ಬಂದನು, ನಾಯಕ ತೀರಿಕೊಂಡ ಸಂದರ್ಭದ ವಿವರವನ್ನೆಲ್ಲ ನೇಮಯ್ಯನಿಂದ ಕೇಳಿ ನವಾಬ ನಗರವನ್ನು ಹೊಕ್ಕ ರೀತಿಯನ್ನು ಅವನಿಗೆ ವರ್ಣಿಸಿ ಹೇಳಿದನು. ನವಾಬ ನಗರವನ್ನು ಹೊಕ್ಕದ್ದು ಚತುರ್ದಶಿಯ ದಿನ. ನಾಯಕ ಹುಣ್ಣಿಮೆಯ ದಿನ ತೀರಿ ಕೊಂಡನು. ನಾಡನ್ನು ಕಾಯ್ದುಕೊಳ್ಳಲಾರದ ದುಃಖದಿಂದ ಜೀವ ತೊರೆದನೋ ಎನ್ನುವಂತಿದ್ದಿತು, ಅವನ ಸಾವಿನ ರೀತಿ. ನೇಮಯ್ಯ ದುಃಖದಿಂದ ಅಧೀರನಾದಂತೆ ತೋರಿದಾಗ ಶಾಸ್ತ್ರಿ, "ಬಿಡಿ ನೇಮಯ್ಯ, ಅವರಿಗಾಗಿ ನಾವು ಅಳಲುವುದು ಬೇಡ. ಹುಟ್ಟುಕಲಿ ನಾಯಕರು. ಕಲಿಯಾಗಿ ಬಾಳಿದರು; ಕಲಿಯಾಗಿ ಮಡಿದರು. ದುರ್ದೈವ ಎದುರಿಗೆ ನಿಂತು ತಲೆಬಾಗು ಎಂದಾಗ ಇವರ ಸೆಡೆದಂತೆ ಸೆಡೆಯುವುದು ಸುಲಭ ಅಲ್ಲ. ಹಾರಿದ್ದು ಹುಲಿಯಾಯಿತು, ಓಡಿದ್ದು ನಾಯಾಯಿತು. ನಾಯಕರು ಎಂದೂ ಓಡಲಿಲ್ಲ; ಹಾರಿ ಹುಲಿಯಾದರು."

ನೇಮಯ್ಯನಿಗೆ ಈ ಪ್ರೀತಿಯ ಮಾತು ಬೇಕಾಗಿತ್ತು. ಎಂಥ ವಿವೇಕಿಗೂ ಒಮ್ಮೊಮ್ಮೆ ಒಂದು ಕ್ಷಣ ಮನಸೋಲುತ್ತದೆ. ಅಂಥ ಕ್ಷಣದಲ್ಲಿ ಈ ರೀತಿಯ ಪ್ರೀತಿ ಶಕ್ತಿಯನ್ನು ಕೊಡುತ್ತದೆ, ಸಮಾಧಾನ ವನ್ನು ತರುತ್ತದೆ.

ನೇಮಯ್ಯ, "ನಾಯಕರ ಮಾತನ್ನ ಅಯ್ಯನವರಿಗೆ ತಿಳಿಸಬೇಕಲ್ಲ," ಎಂದನು.

ಶಾಸ್ತ್ರಿ, "ನಾನು ಹೇಳಿಕಳುಹಿಸುತ್ತೇನೆ," ಎಂದನು.

"ಮುಂದಿನ ದಾರಿ?"

"ನನಗೆ ಒಡನೆ ತೋರುತ್ತಿಲ್ಲ. ನಿಮ್ಮ ಯೋಚನೆ ಏನು?"

"ವಸ್ತಾರೆಯ ಹುಡುಗ ದತ್ತವಾಗಿ ದೊರೆಯುವಂತಿಲ್ಲ. ದತ್ತವಾಗದೆ ನಾಯಕನ್ನ ಮಾಡೋದೆಂದರೆ ಗೌಡ ಹೆಗ್ಗಡೆಗಳನ್ನ ಒಂದು ಕಡೆ ಸೇರಿಸಿ ಕೇಳಬೇಕು."

"ಕೇಳೋಣ. ಆದರೆ ನನಗೆ ಇದು ಬೇಡವೋ ಎನ್ನಿಸುತ್ತದೆ. ನಾಯಕರ ಮನೆತನ ಇದ್ದಿದ್ದರೆ ನಾವು ಬೇರೆ ಕಡೆ ಕಣ್ಣುಹಾಯಿಸಬೇಕಾಗಿರಲಿಲ್ಲ. ಮನೆತನ ಮುಗಿದು ಮೈಸೂರರಸರು ರಾಜರಾಗಿರುವಾಗ ನಾವು ಇದು ಒಳ್ಳೆತೇ ಅನ್ನೋಣ."

"ಸಂಸ್ಥಾನ ಮೈಸೂರಿನಲ್ಲಿ ಅಡಗುವುದು ನಾಯಕರಿಗೆ ಬೇಡವಾಗಿತ್ತು."

"ಮೈಸೂರರಸರ ಮಕ್ಕಳನ್ನ ಕರಸೋಣ."

"ಅದಕಾದರೂ ಗೌಡ ಹೆಗ್ಗಡೆಗಳನ್ನ ಕೇಳಬೇಕಲ್ಲ."

"ಹೌದು ಕೂಡಿಸಿ ಕೇಳೋಣ."

"ಅಮ್ಮಾಜಿಯವರಿಗೆ ಹೇಳಿಕಳುಹಿಸಿ ಅವರ ಮನವನ್ನ ತಿಳಿಯಬೇಕು."

ಶಾಸ್ತ್ರಿ ರಾಣಿಯನ್ನು ಅಲ್ಲಗಳೆಯಬೇಕು; ಅದಕ್ಕೆ ಬಾಯಿ ಬಾರದೆ ಸುಮ್ಮನಿದ್ದನು.

೧೩೬

ನೇಮಯ್ಯ ಊರಲ್ಲಿಲ್ಲದ ದಿನದಲ್ಲಿ ನವಾಬ ಅವರು ಬಂದರೇ ಎಂದು ನಾಲ್ಕು ಸಲ ವಿಚಾರಿಸಿದ್ದನು: ಇಲ್ಲ ಎಂದು ತಿಳಿದು ಇದೇಕೆ ಇರಬಹುದು ಎಂದು ಬಹಳ ಯೋಚಿಸಿದನು; "ತನಗೆ ವಿರೋಧವಾಗಿ ಏನಾದರೂ ಸಂಚು ನಡೆಯುತ್ತಿದೆಯೊ? ನಡೆದರೆ ಆಶ್ಚರ್ಯವಿಲ್ಲ. ಒಳ್ಳೆತು ನೋಡೋಣ," ಎಂದುಕೊಂಡನು. ಆ ದಿನ ಅವನ ಕಡೆಯ ಆಳು ಮತ್ತೆ ಬಂದನು; ನೇಮಯ್ಯ ಹಿಂದಿರುಗಿರುವ ಸಂಗತಿಯನ್ನು ತಿಳಿದು ಹೋದನು.

ಸಂಜೆಯಲ್ಲಿ ನವಾಬ, ತಾನು ನೇಮಯ್ಯನವರೊಂದಿಗೆ ಮಾತನಾಡಬೇಕಾಗಿದೆ, ಅವರು ಸ್ವಲ್ಪ ತನ್ನಲ್ಲಿ ಬರಬಹುದೆ, ಎಂದು ಹೇಳಿಕಳುಹಿಸಿದನು. ನೇಮಯ್ಯ, "ಒಡನೆಯೆ ಬರಲಾರೆ. ಎರಡು ದಿನ ಬಿಟ್ಟು ಕಾಣಿಸಿಕೊಳ್ಳುತ್ತೇನೆ," ಎಂದು ಹೇಳಿಕಳುಹಿಸಿದನು. ಎರಡು ದಿನವಾಯಿತು; ಇವನು ಹೋಗಲಿಲ್ಲ. ಹೈದರನೂ ಮತ್ತೆ ಹೇಳಿಕಳುಹಿಸಲಿಲ್ಲ.

ನಾಯಕ ತೀರಿಕೊಂಡ ಸುದ್ದಿ ಪಿಸುಮಾತಿನಲ್ಲಿ ಊರೆಲ್ಲ ಹರಡಿತ್ತು.

ಈ ವೇಳೆಗೆ ನವಾಬನ ಕಿವಿಯನ್ನೂ ಮುಟ್ಟಿತು. ಅವನು ದೇವರೇ ತನ್ನ ಕೆಲಸವನ್ನು ನಡೆಸಿಕೊಡುತ್ತಿದಾನೆ ಎಂದುಕೊಂಡನು; ನೇಮಯ್ಯ ಬರದಿರುವುದಕ್ಕೆ ಇದು ಕಾರಣ ಎಂದುಕೊಂಡನು.

ರಾಣಿ ವೀರಮ್ಮಾಜಿ ಬಲ್ಲಾಳರಾಯನ ದುರ್ಗವನ್ನು ಬಿಟ್ಟು ಕಾವಲೆ ದುರ್ಗಕ್ಕೆ ಬಂದ ಸಂಗತಿ ಅದು ನಡೆದ ನಾಲ್ಕು ದಿನದಲ್ಲಿ ಹೈದರನಿಗೆ ತಿಳಿದಿತ್ತು. ಅವಳು ನಂಬಯ್ಯನೊಡನೆ ಹೊಸ ಸ್ಥಳಕ್ಕೆ ಬಂದು ಸೇರುವ ವೇಳೆಗೆ ನಗರದಿಂದ ಒಂದು ದಳ ಅಲ್ಲಿಗೆಂದು ಹೊರಟಿತು. ನಗರದಲ್ಲಿ ತಾನು ಭದ್ರವಾಗಿ ಹೆಜ್ಜೆ ಊರಿನಿಂತೊಡನೆ ನವಾಬ ಅವಶ್ಯಕವಾದರೆ ತಕ್ಕಷ್ಟು ದೊಡ್ಡ ಇನ್ನೊಂದು ದಳವನ್ನು ಕಳುಹಿಸಿ ರಾಣಿಯನ್ನು ನಗರಕ್ಕೆ ಹಿಡಿದು ತರಿಸಲು ನಿಶ್ಚಯಮಾಡಿಕೊಂಡನು. ಈಗ ಆ ಹೆಚ್ಚಿನ ದಳವನ್ನು ಕಳುಹಿಸಿ ಕೊಟ್ಟನು.

ರಾಣಿಯನ್ನು ಸೆರೆಹಿಡಿಯುವುದು ಕಷ್ಟವಾಗಲಿಲ್ಲ. ಅವಳು ಹಗೆಯ ಪಡೆಯನ್ನು ಎದುರಿಸದೆ ಸುಮ್ಮನೆ ಬಂದಿದ್ದರೆ ಚೆನ್ನಾಗಿತ್ತು; ಎದುರಿಸಿ ಸೆರೆಯಾದಳು. ನಗರದ ಜನಕ್ಕೆ ತಿಳಿಯದಂತೆ ಒಂದು ರಾತ್ರಿ ಅವಳನ್ನು ನಗರದೊಳಕ್ಕೆ ತಂದರು.

ನವಾಬ, ನೇಮಯ್ಯ ಶಾಸ್ತ್ರಿ ಇಬ್ಬರಿಗೆ ಮಾತ್ರ, "ರಾಣಿ ನಂಬಯ್ಯ ಇವರ ವಿಚಾರಣೆ ಮಾಡುತ್ತೇನೆ, ನೀವೂ ಬರಬೇಕು," ಎಂದು ಹೇಳಿ ಕಳುಹಿಸಿ ಅರಮನೆಯ ಸಭಾಮಂಟಪದಲ್ಲಿ ನ್ಯಾಯಾಧೀಶನಂತೆ ಕುಳಿತು ಅಪರಾಧಿಗಳನ್ನು ತನ್ನೆದುರಿಗೆ ಬರಮಾಡಿದನು.

## ೧೩೭

ಶಾಸ್ತ್ರಿ ಸಭೆಗೆ ಹೋದನು; ನೇಮಯ್ಯ ಹೋಗಲಿಲ್ಲ.

ನವಾಬನ ಎದುರಲ್ಲಿ ರಾಣಿ ದಿಟ್ಟವಾಗಿ ನಿಂತಳು. ನಂಬಯ್ಯ ತನ್ನೊಳಗೆ ತಾನೆ ಹುದುಗಿದಂತೆ ಅಡಗಿ ನಿಂತನು.

ರಾಣಿ ಬಂದಾಗ ಶಾಸ್ತ್ರಿ ಎದ್ದು ನಿಂತು ನಮಸ್ಕಾರ ಮಾಡಿದನು; ಅವಳು ನಿಂತಿರುವಷ್ಟು ಹೊತ್ತು ನಿಂತೇ ಇದ್ದನು. ಇದನ್ನು ನೋಡಿ ನವಾಬ ಅವಳಿಗೆ ಕುಳ್ಳಿರಬಹುದೆಂದು ಹೇಳಿದನು.

ರಾಣಿ, “ನಿಮ್ಮ ಕೆಲಸವನ್ನು ನಡಸಿರಿ. ನಾವು ನಿಮ್ಮಿಂದ ಮರ್ಯಾದೆ ಬರಲಿ ಎಂತ ಕಾದಿಲ್ಲ,” ಎಂದಳು.

ಶಾಸ್ತ್ರಿ, “ಕುಳ್ಳಿರಿ, ಅಮ್ಮಾಜಿ, ತಮ್ಮೆದುರಿಗೆ ನವಾಬರೂ ಚಿಕ್ಕವರೆ,” ಎಂದನು.

ರಾಣಿ ಕುಳಿತಳು.

ನವಾಬ, “ತಾವು ತಮ್ಮ ಮಕ್ಕಳನ್ನು ಕೊಲ್ಲಿಸಲು ಯತ್ನಿಸಿದಿರಿ ಎನ್ನುವುದು, ನಾವು ಬರುವುದು ತಿಳಿದು ಸವಣೂರು ಮಾರಟ್ಟವಾಡಿಗೆ ಸೈನ್ಯದ ಸಹಾಯಕ್ಕಾಗಿ ಓಲೆಬರೆದಿರಿ ಎನ್ನುವುದು, ನಾವು ಇತ್ತ ಬಂದ ಮೇಲೆ ನಮಗೆ ವಿರೋಧವಾಗಿ ಕಾದಿದೀರಿ ಎನ್ನುವುದು, ಈ ಮೂರು ತಪ್ಪು ನಿಮ್ಮ ಮೇಲೆ ಇವೆ. ಇದಕ್ಕೆ ತಾವು ಏನು ಹೇಳುತ್ತೀರಿ?” ಎಂದನು.

ರಾಣಿ, “ನಾವು ಈ ಯಾವ ಮಾತಿಗೂ ನಿಮಗೆ ಉತ್ತರ ಹೇಳುವ ಕಾರಣವಿಲ್ಲ. ಆದರೂ ನಮ್ಮ ಇಚ್ಛೆಯಿಂದ ಹೇಳುತ್ತೇವೆ. ನಾವು ನಮ್ಮ ಮಕ್ಕಳನ್ನು ಕೊಲ್ಲಿಸಲು ಯತ್ನಿಸಿದೆವೆನ್ನುವುದು ಅನ್ಯಾಯದ ಸುಳ್ಳು. ಉಳಿದ ಎರಡು ಮಾತಿನಲ್ಲಿ ತಪ್ಪು ಏನಿದೆ ನಮಗೆ ತಿಳಿಯುತ್ತಿಲ್ಲ. ನೀವು ದರೋಡೆ ಮಾಡುವುದಕ್ಕೆ ಬಂದರೆ ನಾವು ಸ್ಥಳದವರು ಬೇರೆಯವರ ಸಹಾಯ ಕೇಳಬಾರದೆ? ಸಹಾಯ ಬರಲಿಲ್ಲ; ನೀವು ಮುಂದಾಗಿ ಬಂದಿರಿ; ಇದ್ದ ಜನವನ್ನು ಮುಂದಿಟ್ಟು ದರೋಡೆಗಾರರನ್ನು ತಡೆಯುವುದು ತಪ್ಪೆ? ಈಗ ನಮಗೆ ಬಲ ಅನುಕೂಲ ಇದ್ದರೆ ನಿಮ್ಮನ್ನು ಇಲ್ಲಿ ಕುಳಿತಿರುವುದಕ್ಕೆ ಬಿಡುತ್ತಿರಲಿಲ್ಲ; ಹಗ್ಗದಿಂದ ಹೊಡೆಸಿ ಕಳುಹಿಸುತಿದ್ದೆವು. ನಮಗೆ ಅನುಕೂಲವಿಲ್ಲ; ನೀವು ಸುಖದಿಂದೀರಿ,” ಎಂದಳು.

“ತಾವು ಮರ್ಯಾದೆಯಿಂದ ಮಾತನಾಡಿದ್ದರೆ ನಿಮ್ಮ ಮಾತನ್ನು ಒಪ್ಪಿಕೊಂಡು ನಿಮ್ಮನ್ನು ಬಿಟ್ಟು ಮರ್ಯಾದೆಯಿಂದ ಕಾಣುತ್ತಿದ್ದೆವು. ಈ ಒರಟು ಮಾತಾಡಿ ನಿಮ್ಮ ಕೆಲಸವನ್ನು ನೀವೇ ಕೆಡಿಸಿಕೊಳ್ಳುತ್ತಿದೀರಿ.”

“ನಮ್ಮನ್ನು ರಾಣಿಯಾಗಿ ಬಿಟ್ಟು ನಿಮ್ಮ ಪಾಡಿಗೆ ಹೋಗುತಿದ್ದಿರಾ? ಇಲ್ಲ. ಇನ್ನು ನೀವು ನಮ್ಮನ್ನು ಬಿಟ್ಟು ನಮಗೆ ಆಗಬೇಕಾದದ್ದೇನು? ಇದು ಹೊರತು ಬೇರೆ ಮರ್ಯಾದೆ ನಮಗೆ ಸಾಲದು. ಅದಕ್ಕೆ ಅಂತಲೇ ನಮ್ಮ ಮನಸ್ಸನ್ನು ಮರೆಸದೆ ಮಾತನಾಡಿದೇವೆ.”

"ಆಗಬಹುದು; ಅಂದಮೇಲೆ ನೀವು ಯಾವ ಶಿಕ್ಷೆಯನ್ನು ನಿರೀಕ್ಷಿಸುತ್ತೀರಿ ?"

"ಈ ವಿಷಯದಲ್ಲಿ ನಮ್ಮನ್ನು ಕೇಳತಕ್ಕದ್ದೇನಿದೆ? ನಿಮ್ಮ ಮನಸ್ಸಿಗೆ ಬಂದಂತೆ ಮಾಡಿ. ಸೌತೇಕಾಯಿ ನಿಮ್ಮ ಕೈಯಲ್ಲಿದೆ; ಕತ್ತಿ ನಿಮ್ಮ ಕೈಯಲ್ಲಿದೆ."

ನಂಬಯ್ಯ ಹಿಂದಿನಿಂದ, "ಅವ್ವಾ ಅವರಿ ಹಂಗನ್ನಬೇಡಿರಿ; ಕೊಲ್ಲಿಸಿದಾರು," ಎಂದನು.

ರಾಣಿ ಅವನಿಗೆ, "ಯಾಕೊ ಹಿಂಗಂಜತೀ? ಬೇಕಾದರೆ ನಿನ್ನ ಮಾತು ನೀ ಬೇರೇ ಹೇಳಿಕೊ," ಎಂದಳು.

ನವಾಬ ಅವನಿಗೆ, "ನೀವೇನು ಹೇಳುತೀರಿ ನಂಬಯ್ಯ?" ಎಂದನು.

"ಜೀವ ತೆಗೆಯೋದು ಒಂದು ಬೇಡ, ಬೇರೆ ಯಾವುದೂ ನಮಗೆ ಒಪ್ಪಿಗೆ."

"ಸೆರೆಯಿಂದ ಬಿಟ್ಟು ನಮ್ಮಲ್ಲಿ ಕೆಲಸಕ್ಕೆ ಇರಿಸಿಕೊಳ್ಳುತೇವೆ; ಇರುತೀರಾ ?

"ಅಂತಾ ಮಾತು ಬೇಡಪ್ಪ. ನಾಯಕರ ಮನೇ ಸೇವೆ ಮಾಡಿ ನಿಮ್ಮ ಹತ್ತರ ಇರಬೇಕು ಅಂತ ನಮಗೇನು ಆಸೆ? ಅಮ್ಮಾಜಿಯವರಿಗೆ ಆದದ್ದು ನಮಗೂ ಆಗಲಿ; ಅದಕ್ಕೆ ಕಡಮೆ ಏನೂ ಬೇಡ."

"ಅವರ ಜೀವ ತೆಗೆದರೆ?"

ಶಾಸ್ತ್ರಿ ನವಾಬನಿಗೆ, "ತಾವು ದೊಡ್ಡವರು, ಇದು ವಿನೋದದ ವಿಷಯವಲ್ಲ. ನಿಮ್ಮೆದುರಿಗೆ ರಾಣಿಯೂ ಇದಾರೆ," ಎಂದನು.

ನವಾಬ ಅವನಕಡೆ ಕೋಪದಿಂದ ನೋಡಿದನು. ಆದರೆ ಮಾತನ್ನು ಬೆಳಸಲಿಲ್ಲ. "ಒಳ್ಳೆಯದು ಅಮ್ಮಾಜಿಯವರೆ, ನಮಗೆ ಬೇರೆ ದಾರಿ ಇಲ್ಲ, ನಾವು ನಿಮ್ಮನ್ನು ಜೀವಾವಧಿ ಸೆರೆಯಲ್ಲಿರಿಸಬೇಕೆಂದು ನಿಶ್ಚಯಿಸಿದೇವೆ. ಬೇರೆ ಕಡೆ. ನಗರದಲ್ಲಿ ಅಲ್ಲ," ಎಂದನು.

ರಾಣಿ, "ಅದು ನಮಗೂ ಬೇಕಿಲ್ಲ. ಹಾವು ಹೊಕ್ಕ ಮನೆ ಹುತ್ತ," ಎಂದಳು.

ನವಾಬ ನಂಬಯ್ಯನ ಕಡೆ ಮುಖಮಾಡಿ, "ಈ ಮನುಷ್ಯನಿಗೂ

ಅದೇ ಶಿಕ್ಷೆ. ಇವನು ನೀವು ಇರುವಲ್ಲಿಯೇ ಇರುತ್ತಾನೆ.” ಸ್ವಲ್ಪ ಕೊಂಕು ಬೆರೆತ ಹುಸಿನಗೆಯಿಂದ, “ಇದುವರೆಗೆ ಮಾಡಿರುವ ಮನವಾರ್ತೆ ಸೇವೆಯನ್ನು ಮಾಡುತ್ತಾನೆ,” ಎಂದನು.

ರಾಣಿ, ಉಂಟೋ ಇಲ್ಲವೊ ಎಂಬಂತೆ, ಸೂಕ್ಷ್ಮವಾಗಿ ತಲೆ ಆಡಿಸಿದಳು; ನಂಬಯ್ಯ “ಆಯಿತು,” ಎಂದನು.

ನವಾಬ ಆ ರಾತ್ರಿಯೇ ಇವರಿಬ್ಬರನ್ನೂ ನಗರದಿಂದ ಕಳುಹಿಸಿ ತಾನು ನಾಲ್ಕು ತಿಂಗಳ ಹಿಂದೆ ವಶಮಾಡಿಕೊಂಡಿದ್ದ ಮಧುಗಿರಿಯ ಬೆಟ್ಟದ ಮೇಲೆ ಅವರನ್ನು ಸೆರೆಯಲ್ಲಿರಿಸಿದನು.

ಒಂದೆರಡು ದಿನದನಂತರ ನವಾಬನ ಬೀಡಾರಕ್ಕೆ ಯಾರೋ ಕದ್ದು ಬಂದು ಅವನನ್ನು ಕೊಲ್ಲಲು ಯತ್ನಮಾಡಿದರೆಂದು ಮಾತು ಹುಟ್ಟಿತು. ಅದನ್ನು ನೆಪಮಾಡಿಕೊಂಡು ನವಾಬ ಅರಮನೆಯನ್ನು ಆಕ್ರಮಿಸಿಕೊಂಡನು.

## ೧೩೮

ಚಿನ್ನಬಸವ ನಾಯಕನ ನಗರ ಹೀಗೆ ನಿಷ್ಕಂಟಕವಾಗಿ ಹೈದರನ ಪಾಲಾಯಿತು. ಎಲ್ಲ ವಿವರವನ್ನೂ ಭದ್ರಪಡಿಸಿಕೊಂಡು ನವಾಬ ಪಟ್ಟಣಕ್ಕೆ ತನ್ನ ಅರಸರಿಗೆ ಒಂದು ಓಲೆಯನ್ನು ಬರೆಸಿಕಳುಹಿಸಿದನು. ಅದರ ಅಭಿಪ್ರಾಯ ಹೀಗಿದ್ದಿತು.

“ನವರಾತ್ರಿಗೆ ಮುನ್ನ ಪ್ರಭುಗಳ ದರ್ಶನಮಾಡಿ ಅಪ್ಪಣೆಪೆತ್ತು ಸಂಸ್ಥಾನದ ಉತ್ತರದ ಗಡಿಗೆ ಬಂದದ್ದು ಮೊದಲು ಚಿತ್ರದುರ್ಗಕ್ಕೆ ಸೇರಿದವರೆಗಿನ ಎಲ್ಲ ಸಂಗತಿಯನ್ನೂ ಪ್ರಭುಗಳಿಗೆ ಓಲೆಕಾರರ ಮೂಲಕ ಬಿನ್ನವಿಸಿಕೊಂಡಿದ್ದೇನೆ. ಚಿತ್ರದುರ್ಗದಲ್ಲಿ ನಗರದ ಆಡಳಿತ ಅವ್ಯವಸ್ಥೆಯಾಗಿದೆ ಎಂಬ ದೂರು ಬಂದು ಇಲ್ಲಿಗೆ ಸೇನೆಯೊಡನೆ ಹೊರಟದ್ದಾಯಿತು. ದಾರಿಯಲ್ಲಿ ಪ್ರಭುಗಳು ಅನುಗ್ರಹಿಸಿದ ಒಂದು ನಿರೂಪ ಮುಟ್ಟಿತು; ಸ್ಥಳದ ವಾಸ್ತವಸ್ಥಿತಿ ಪರಾಂಬರಿಕೆಗೆ ಬಂದಿರಲಿಲ್ಲವೆಂದು ಅದರಲ್ಲಿ ಕಾಣುತ್ತಿತ್ತು. ಅದರಮೇಲೆ ಪ್ರಯಾಣವನ್ನು ಮುಂದರಿಸಿ ಬಂದು ನಗರವನ್ನು ಕೈವಶಮಾಡಿಕೊಂಡಿದೇನೆ. ಇದೆಲ್ಲ ಪ್ರಭುಗಳು ನನಗೆ ನೀಡಿ ಕಾಪಾಡಿರುವ ಅನ್ನದ ಪ್ರಭಾವ. ನಗರದ ನಾಯಕರು ತೀರಿಕೊಂಡರು.

ಇವರು ನವರಾತ್ರಿಯಲ್ಲಿ ಪ್ರಭುಗಳ ಸನ್ನಿಧಿಗೆ ಬಂದಿದ್ದವರೆ. ನಗರ ಸ್ವಾಧೀನಕ್ಕೆ ಬಂದು ವ್ಯವಸ್ಥೆಯಾದಮೇಲೆ ಇವರನ್ನು ಪ್ರಭುಗಳ ಸಾಮಂತ ರಾಗಿ ಗಾದಿಯಮೇಲೆ ಇರಿಸಬಹುದಾಗಿದ್ದಿತು. ಅಕಾಲದಲ್ಲಿ ಅವರನ್ನು ಮೃತ್ಯು ಒಯ್ದು ಇದು ಸಾಧ್ಯವಲ್ಲವಾಗಿದೆ. ಸಂಸ್ಥಾನವನ್ನು ಮೈಸೂರಿ ನಲ್ಲಿ ಬೆರಸಬಾರದೆಂದೂ ಬೇರೆಯಾಗಿಯೇ ಇರಿಸಿ ಇದಕ್ಕೆ ನಾನು ನಾಯಕನಾಗಬೇಕೆಂದೂ ಇಲ್ಲಿಯ ಜನ ಒತ್ತಾಯಮಾಡಿ ಬೇಡುತ್ತಿದಾರೆ. ನನಗೆ ಇದು ಸಮ್ಮತವಿಲ್ಲ; ಆದರೂ ಸದ್ಯದಲ್ಲಿ ಆಡಳಿತದ ಅನುಕೂಲ ಕ್ಕಾಗಿ ಹೀಗೆಮಾಡುವುದು ಸರಿ ಎಂದು ಕಾಣುತ್ತಿರುವುದರಿಂದ, ಈ ಬಗ್ಗೆ ಪ್ರಭುಗಳ ಅಪ್ಪಣೆ ಪಡೆಯುತ್ತೇವೆ, ಎಂದು ಹೇಳಿ ಒಪ್ಪಿದೇನೆ. ಇದಕ್ಕೆ ಮುಖ್ಯ ಕಾರಣ ನನ್ನ ಮಕ್ಕಳಿಂದ ಪ್ರಭುಗಳಿಗೆ ಜಿಗುಪ್ಸೆ ಆಗಬಾರದು ಎನ್ನುವುದು. ಅವರಿಗೆ ಇಲ್ಲಿ ನೆಲೆಮಾಡಿ ಕೊಟ್ಟರೆ ಸಾಮಂತರಾಗಿ ದ್ರೋಹವೆಣಿಸದೆ ನಡೆದುಕೊಂಡಾರೆಂದು ಆಶಿಸಬಹುದು. ಯಾವುದಕ್ಕೂ ಇಷ್ಟರಲ್ಲೆ ಸನ್ನಿಧಾನಕ್ಕೆ ಬಂದು ಎಲ್ಲ ಸಂಗತಿಯನ್ನೂ ಮುಖತಃ ಅರಿಕೆ ಮಾಡಿ ಅಪ್ಪಣೆ ತೆಗೆದುಕೊಳ್ಳುತ್ತೇನೆ. ಈಗ ಇಲ್ಲಿಂದ ಘಟ್ಟ ಇಳಿದು ಮಂಗಳೂರು ಹೊನ್ನಾವರ ಮುಂತಾದ ನಾಲ್ಕು ಕಡೆ ರಾಜ್ಯವನ್ನು ಹಿಡಿತಕ್ಕೆ ತರಬೇಕಾಗಿದೆ. ಸೈನ್ಯದೊಡನೆ ಅಲ್ಲಿಗೆ ಹೊರಡುವನಾಗಿದೇನೆ. ಯಾವ ಕೆಲಸದಲ್ಲೂ ಪ್ರಭುಗಳ ಮತ್ತು ಮಾತೃಶ್ರೀಯವರ ಆಶೀರ್ವಾದ ಬೇಕು. ಇಬ್ಬರಿಗೂ ನನ್ನ ಭಕ್ತಿಪೂರ್ವಕವಾದ ನಮಸ್ಕಾರವನ್ನು ಒಪ್ಪಿ ಸುತ್ತಿದೇನೆ."

ಈ ಓಲೆ ಹತ್ತು ದಿನದ ಮೇಲೆ ಅರಸರಿಗೆ ಮುಟ್ಟಿತು. ಅವರೂ ರಾಜಮಾತೆಯೂ ಅದನ್ನು ಸರಿಯಾಗಿ ಅರ್ಥ ಮಾಡಿಕೊಂಡರು.

ರಾಜಮಾತೆ, "ಬೇಕು ಎಂದದ್ದು ನಡೆಯುವುದಿಲ್ಲ; ಬೇಡ ಅಂದದ್ದು ತಡೆಯುವುದಿಲ್ಲ; ನವಾಬನಂಥ ಆಳಿಗೆ ಒಂದು ಮರದ ತುಂಡು ದೊರೆ ಯಾಗಿರಬೇಕು," ಎಂದಳು.

ರಾಜರು ಏನೂ ಹೇಳಲಿಲ್ಲ. ತಾವು ಸಾಕಿದ ಹೈದರ್ ತಾನೊಂದು ಬೆಕ್ಕಾಗಿ ಸಾಕಿದ ತಮ್ಮನ್ನು ಇಲಿಮಾಡಿ ಮುಗಿಸಿಕೊಳ್ಳುವ ಮುನ್ನ ತಮ್ಮೊಂದಿಗೆ ಸರಸವಾಡುತ್ತಿದಾನೆ ಎಂದುಕೊಂಡರು.

ಹೈದರನ ಪ್ರಾಬಲ್ಯವನ್ನು ತಡೆಯಬೇಕೆಂದು ಇವರು ಮಾಡಿದ ಪ್ರಯತ್ನ ಉಳಿದ ದಿಕ್ಕಿನಲ್ಲಿಯೂ ಹೀಗೆಯೆ ನಿಷ್ಫಲವಾಯಿತು. ಮುಂದೆ ಏನಾಯಿತೆನ್ನುವುದು ಮೈಸೂರಿನ ಇತಿಹಾಸ. ಅದು ಈ ಕಥೆಯ ಬೇಲಿಯೊಳಗೆ ಬರುವುದಿಲ್ಲ.

೧೩೯

ವಸ್ತಾರೆಯ ಹುಡುಗನನ್ನು ನಾಯಕನಾಗಿ ಆರಿಸುವುದೇ ಎಂದು ಯೋಚಿಸುವುದಕ್ಕಾಗಿ ನೇಮಯ್ಯ ಶಾಸ್ತ್ರಿ ಸಂಸ್ಥಾನದ ಗೌಡ ಹೆಗ್ಗಡೆಗಳನ್ನು ಆ ಊರಿನಲ್ಲಿ ಸಭೆ ಕೂಡಿಸುವುದಕ್ಕೆ ಯತ್ನಮಾಡಿದರು. ಇದು ತನ್ನ ನಾಯಕನ ಇಷ್ಟವಾಗಿದ್ದಿತೆಂದು ಮಲ್ಲಯ್ಯ ಈ ಮಾತು ನಡೆಯಲೆಂದು ಬಹಳವಾಗಿ ದುಡಿದನು. ಆದರೆ ಸಾಕಾದಷ್ಟು ಜನ ಕೂಡಲಿಲ್ಲ; ಯತ್ನ ಮುಂದರಿಯಲಿಲ್ಲ. ಬಹು ಮಂದಿಗೆ ಅಶ್ರದ್ಧೆ. ಕೆಲವರಿಗೆ ಭಯ. ಇನ್ನು ಕೆಲವರಿಗೆ ಅಸೂಯೆ: ನಮ್ಮಂಥವನೆ ಒಬ್ಬನನ್ನು ನಮಗಿಂತ ಹಿರಿಯನೆಂದು ನಾವಾಗಿ ಏಕೆ ಮಾಡಬೇಕು? ಬಾಳಲಾರದ ಜನಕ್ಕೆ ಇಂಥ ಬುದ್ಧಿ ಬಹು ಸುಲಭ.

ಸಾಮಾನ್ಯ ಜನರಲ್ಲಿ ಎಚ್ಚರವಿಲ್ಲ. ಊರು ನಮ್ಮದು ನಾಡು ನಮ್ಮದು. ಸಂಸ್ಥಾನ ನಾಯಕರದು. ಸಂಸ್ಥಾನವನ್ನು ಉಳಿಸುವ ಯೋಚನೆ ನಮಗೇಕೆ?

ಹಾಗೆಂದಮೇಲೆ ಪ್ರಜೆಯೇನು? ಅದೊಂದು ರಕ್ಷಿತ ವಸ್ತು; ಬಿಡಿಸಿ ಹೇಳುವುದಾದರೆ ದನದ ಮಂದೆ. ಯಾರು ಆಳಿದರೆ ಅವರನ್ನು ಒಡೆಯ ಎಂದು ತಿಳಿದು ಅವರು ಕರೆದಾಗ ಇದ್ದ ಹಾಲನ್ನು ಕೊಟ್ಟು ಹುಲ್ಲು ಮೇದುಕೊಂಡು ಸುಖವಾಗಿ ಬಾಳುವುದು. ಒಬ್ಬ ಒಡೆಯ ಒಳ್ಳೆಯವನಾಗಿ ಗೋವು ಎಂದು ಪೂಜಿಸಿದರೆ ಕುಂಕುಮ ಹಚ್ಚಿಕೊಂಡು ಮಲಗಿ ಮೆಲುಕು ಹಾಕುವುದು; ಬೇರೊಬ್ಬ ಕಟುಕನಾಗಿ ಕೊಲ್ಲುವೆನೆಂದರೆ ಖಂಡವಿದೆಕೊ ಎಂದು ಸಮ್ಮತಿಯಿಂದ ಅವನ ಬಾಯನ್ನು ಹೊಕ್ಕು ನಿಷ್ಠೆಯಿಂದ ಆವನಿಗೆ ಜೀವವನ್ನು ಒಪ್ಪಿಸುವುದು.

ಆದರೂ ಅಲ್ಲಲ್ಲಿ ಕೆಲವರಲ್ಲಿ ಹೊರಗಿನವರು ದೊರೆಯಾದರೆ ಎಂಬ ಒಂದು ಅಸಂತುಷ್ಟಿ ಇದ್ದಿತು. ಯಾವನೊ ಒಬ್ಬ ಬೂದಿಬಸವಸ್ವಾಮಿ

ಎಂದು ನಾಡಲ್ಲಿ ನಡೆಯತೊಡಗಿದನು. ಚೆನ್ನಬಸವ ನಾಯಕ ಇದ್ದ ಕಾಲದಲ್ಲಿ ಹತ್ತು ದಿನ ತಾನೆ ಆಗಿ ಹತ್ತು ದಿನ ಬೇರೆಯವನಾಗಿ ಕಾಣಿಸಿಕೊಳ್ಳುತ್ತ ಮರೆಯಾಗಿರುತ್ತ ಆಟವಾಡಿದ್ದರಿಂದ ಈ ಬೂದಿಬಸವ ಅವನೇ ಎಂದು ಕೆಲವು ಜನ ನಂಬಿದರು. ನಾಯಕ ತೀರಿಕೊಂಡನೆಂಬುದನ್ನು ಬಲ್ಲವರು ಸುಮ್ಮನಿದ್ದರು. ಹೊಸ ಸ್ವಾಮಿಯಿಂದ ಉಂಟಾದ ಗಲಭೆಯನ್ನು ಹೈದರನ ಜನ ಸುಲಭದಲ್ಲಿ ನಿಲ್ಲಿಸಿದರು.

ಇಷ್ಟರ ಮೇಲೂ ಜನತೆಯಲ್ಲಿ, ನಾಯಕ ಸತ್ತನೆನ್ನುವುದು ಸುಳ್ಳು, ಸದ್ಯ ತಲೆ ಮರೆಸಿಕೊಂಡಿದ್ದಾನೆ, ಮತ್ತೆ ಬರುತ್ತಾನೆ, ಎಂಬ ಪ್ರತೀತಿ ಉಳಿದೇ ಉಳಿಯಿತು.

ಹೀಗಾಗಿ ಚೆನ್ನಬಸವ ತನ್ನ ಜನದ ಮನಸ್ಸಿನಲ್ಲಿ ಒಬ್ಬ ಮಾಟಗಾರ, ಒಬ್ಬ ಪವಾಡ ಪುರುಷ, ಆಗಿನಿಂತನು.

ನಗರದಲ್ಲಿ ಕೆಲವುಕಾಲ ಇದ್ದು ಜನರ ಮುಖಂಡನಾಗಿ ಅವರನ್ನು ನೋಡಿಕೊಂಡು ನೇಮಯ್ಯ ಆಮೇಲೆ ಪೀಠಕ್ಕೆ ಹೋಗಿ ತನ್ನ ಹಿರಿಯಯ್ಯ ಮೌನಿಯ ಆಶ್ರಯದಲ್ಲಿ ವೈರಾಗ್ಯದಲ್ಲಿ ಕಾಲಕಳೆದನು.

ಶಾಸ್ತ್ರಿ ನಗರದಲ್ಲೆ ನಿಂತನು. ಹೈದರ್ ಅವನಿಗೆ ತಕ್ಕ ಅಧಿಕಾರ ಕೊಡುತ್ತೇನೆಂದನು. ಶಾಸ್ತ್ರಿ, "ನಾವು ವೈದಿಕರು, ಇದರಲ್ಲಿ ನಮ್ಮ ಬುದ್ಧಿ ಓಡುವುದಿಲ್ಲ, ಮನ್ನಿಸಬೇಕು," ಎಂದು ಬಿಡಿಸಿಕೊಂಡನು. ಆದರೂ ಆ ಮೇಲೆ ಮೈಸೂರಿಗೆ ಅನುಕೂಲವಾಗಿಯೆ ನಡೆದುಕೊಂಡು ಹೈದರನಿಂದ ಅವನ ಮಗನಿಂದ ಶೃಂಗೇರಿಯ ಗುರುಮಠಕ್ಕೆ ಅನೇಕ ಸೌಕರ್ಯ ಮರ್ಯಾದೆಗಳನ್ನು ಗಳಿಸಿದನು.

ನಾಯಕನೂ ಅವನ ರಾಣಿಯೂ ತೀರಿಕೊಂಡದ್ದು ತಿಳಿದಾಗ ಅಯ್ಯ ಶಿವನ ಆಟ ಹೀಗೆ ಭೈರವವಾಯಿತೇ ಎಂದು ಈಷನ್ಮಾತ್ರ ಕ್ಷಣ ಮಾತ್ರ ಕ್ಷೋಭೆಯನ್ನನುಭವಿಸಿದನು. ಮತ್ತೆ ಅವನ ಜೀವ ನಿನ್ನ ಲೀಲೆಯನ್ನು ನೀನು ಬಲ್ಲೆ ಎಂದು ಸಮಾಧಾನವನ್ನು ಮುಟ್ಟಿತು. ಮಠ ಎಂದಿನಂತೆ ನಡೆಯಿತು. ಅಯ್ಯ ಅದರಲ್ಲಿಯೆ ಇದ್ದನು.

ನವಾಬ ಅವನಿಗೆ ಯಾವ ತೊಂದರೆಯನ್ನೂ ಕೊಡಲಿಲ್ಲ. ನಗರಕ್ಕೆ ಒದಗಿದ ವಿಪತ್ತಿನಲ್ಲಿ ಸಾವಿರಾರು ಜನಕ್ಕೆ ಅಯ್ಯನ ಮಾತು ಸಮಾಧಾನ

ತಂದಿತು, ಬೆಳಕನ್ನು ನೀಡಿತು, ದಾರಿಯನ್ನು ತೋರಿತು; ದಿನ ದಿನವೂ ಮಾರ್ಪಡುವ ಸಾವಿರ ವಿವರದ ಮಧ್ಯೆ ಧರ್ಮನಿಷ್ಠೆ ಒಂದೆ ನೆಟ್ಟ ಕಲ್ಲು ಎಂದು ಅಲ್ಲಿಯ ಆ ತಲೆಮಾರಿನ ಜನಕ್ಕೆಲ್ಲ ಸಾರಿತು.

ನವಾಬ ನಗರದಲ್ಲಿ ಭದ್ರವಾಗಿ ನಿಂತಮೇಲೆ ಪಾಳೆಯಗಾರನಿಗೆ ಭಾಸ್ಕರಯ್ಯನಿಗೆ ಚಿತ್ರದುರ್ಗದಲ್ಲಿ ಬಿಡುಗಡೆಯಾಯಿತು. ಇವರನ್ನು ಮರೆಯಲ್ಲಿ ಭದ್ರವಾಗಿ ನಿಲ್ಲಿಸಿದ್ದದರಿಂದ ಇವರು ನಗರದ ನಾಯಕ ಕುಮಾರ ಅವನ ಮಂತ್ರಿ ಲಿಂಗಣ್ಣಯ್ಯ ಎಂದು ಹೈದರನ ಸೈನಿಕರಲ್ಲಿ ನಂಬಿಕೆ ಬೆಳೆಯಿತು. ಅವರು ಪಾಳೆಯಗಾರನನ್ನು "ಗೈಬ್ ರಾಜ," ಎಂದರು. ಎಂದರೆ ಮರೆಯಲ್ಲಿರುವ ರಾಜ ಎಂದು ಅರ್ಥ. ಚಿತ್ರದುರ್ಗ ದಿಂದ ಬಿಡಿಸಿಕೊಂಡು ಬಂದು ಇವರು ತಮ್ಮ ಆ ಮೊದಲ ರೀತಿಯಲ್ಲಿ ಬಾಳತೊಡಗಿದರು. ಹೈದರ್ ಇವರನ್ನು ಬಹಳ ಪುರಸ್ಕರಿಸಲಿಲ್ಲ; ಇವರಿಗೆ ತೊಂದರೆಯನ್ನೂ ಕೊಡಲಿಲ್ಲ. ಇವರ ಮೇಲೆ ಒಂದು ಕಣ್ಣಿರಲಿ ಎಂದು ಮಾತ್ರ ರಾಜಾ ರಾಮಚಂದ್ರನಿಗೆ ಅಪ್ಪಣೆ ಮಾಡಿದನು.

ಸಂಸ್ಥಾನ ನಾಯಕ ಮನೆತನದ್ದಾಗಿ ಉಳಿಯಬಹುದೋ ಎಂಬ ಆಸೆ ಇದ್ದ ಕೊಂಚ ದಿನ ಲಿಂಗಣ್ಣಯ್ಯ ನೇಮಯ್ಯನ ಸೂಚನೆಯಂತೆ ಹೈದರನಿಗೆ ಅನುಕೂಲವಾಗಿ ನಿಂತನು. ಈ ಆಸೆ ಮುಗಿದಮೇಲೆ ದೂರ ವಾದನು; ರಾಜಾರಾಮಚಂದ್ರನ ಒಂದು ಕಣ್ಣಿನ ಅಡಿಯಲ್ಲಿ ನಿಂತನು.

ಪರರನ್ನಟ್ಟುವ ಕೆಲಸ ನಡೆಯದು ಎಂದು ತಿಳಿದಮೇಲೆ ಮಲ್ಲಯ್ಯ ತನ್ನ ಊರು ತೀರ್ಥಹಳ್ಳಿಯಲ್ಲಿ ನಿಂತನು; ಕೆಂಚವ್ವೆ ತನ್ನ ಒಡತಿ ಗಾಗಿ ಮರುಮರುಗಿ ಮರುಗುತ್ತ ಅವನನ್ನು ಮದುವೆಯಾಗಿ ಸಂಸಾರ ನಡೆಸಿದಳು.

ಸಗುನ ಮಲ್ಲಿಗೆ ವಸ್ತಾರೆಯನ್ನು ಸೇರಿದರು; ಒಡತಿಯಲ್ಲಿ ವಿಶ್ವಾಸ ದಿಂದ ನಡೆದುಕೊಂಡು ಸುಖದಿಂದ ಬಾಳಿದರು.

ಸಣ್ಣವ್ವ? ಆಟ ಮುಗಿದಮೇಲೆ ಚದುರಂಗದ ಕಾಯಿ ಪೆಟ್ಟಿಗೆ ಯನ್ನು ಸೇರುವಂತೆ ನಾಯಕ ಶಾಂತವ್ವ ತೀರಿ ರಾಣಿ ಸೆರೆಯಾದಮೇಲೆ ಇವಳು ತನ್ನ ಮನೆಯನ್ನು ಸೇರಿದಳು.

## ೧೪೦

ಇದೆಲ್ಲ ಆಗಿ ಈಗ ನೂರ ಅರುವತ್ತು ವರ್ಷ ಕಳೆದಿದೆ. ಬೆಳದಿಂಗಳ ರಾತ್ರಿ ನಾವು ಪೀಠದಮೇಲೆ ಕುಳಿತಿದೇವೆ. ಅತ್ತಿಗುಂಡಿಯ ಕೋಲಾಟದ ಹುಡುಗರು ನಮ್ಮೆದುರು ಕೋಲು ಹಾಕಲು ಬಂದಿದಾರೆ; ಹಾಡಿ ಕೋಲು ಹಾಕಿ ಕುಣಿಯುತ್ತಾರೆ:

ಕಟ್ಟಣಿಕೋಲ ಕಟ್ಟ್ಯವಳೇ ನಮ್ಮ
ಪಟ್ಟದ ರಾಣಿ ಬರ್ತವಳೇ.
" ಈ ರಾಣಿ ಯಾರು ? "

" ಬಲ್ಲಾಳ ರಾಯರ ಮಗಳಂತೆ; ಪೀಠಕ್ಕೆ ಬಂದು ಒಮ್ಮೆ ಸೇವೆ ಮಾಡಿದರು ಅಂತಾರೆ."

ಜೊತೆಯ ಹಿರಿಯರು ಹೇಳುತ್ತಾರೆ: " ಗಾಳಿಯ ಕೆರೆಯ ಪಕ್ಕದಲ್ಲಿ ಒಂದು ಮುರುಕು ಗೋಡೆ ಇದೆ. ಅದು ಈ ರಾಣಿಯ ಸ್ನಾನದ ಮನೆಯೆಂದು ಜನ ಹೇಳಿಕೊಳ್ಳುತ್ತಾರೆ."

ಎರಡು ದಿನದಾಚೆ ವಸ್ತಾರೆಯಲ್ಲಿ ಜೀತದ ಜನ ಕೋಲು ಹಾಕುತ್ತಾರೆ:

ಹೋದ್ಯೆಲ್ಲೋ ನೀ ರಂಗ,
ಹೋದ್ಯೆಲ್ಲೋ ನಮ್ಮ ಸಗುನ.

ಕೊಟಗೇಹರದಲ್ಲಿ ತೆರವಿಯ ಜೀತದವರು ಕುಣಿಯುತ್ತಾರೆ:

ಓ ನಮ್ಮ ರಾಜುರೇ, ಮೈಸೂರರಾಜುರೇ.
ಆನೇ ಆನೇ ನೂರು, ಆನೇಯ ಮರಿನೂರು,
ಆನೇ ನೂರರ ಮಧ್ಯೆ ರಾಜರು ಮೆರೆದಾರು,
ಓ ನಮ್ಮ ರಾಜುರೇ . . . .
ಒಂಟೆ ಒಂಟೆ ನೂರು, ಒಂಟೇಯ ಮರಿ ನೂರು,
ಒಂಟೆ ನೂರರ ಮಧ್ಯೆ ರಾಜರು ಮೆರೆದಾರು,
ಓ ನಮ್ಮ ರಾಜುರೇ . . . .

ಬಲ್ಲಾಳರಾಯನದುರ್ಗವನ್ನೇರಿದೇವೆ. ಜನ ಅಂದಿನ ಅರಮನೆಯ ಸ್ಥಾನವನ್ನು ತೋರಿಸುತ್ತಾರೆ; ಪಕ್ಕದ ಕಮರಿಯನ್ನು ತೋರಿಸಿ, "ಇಲ್ಲಿ

ಆಗ ಒಬ್ಬ ಗರ್ಭಿಣಿ ಹೆಣ್ಣುಮಗಳು ಬಿದ್ದು ಜೀವಬಿಟ್ಟಳಂತೆ. ಈಗಲೂ ತಿಂಗಳ ರಾತ್ರಿ ಇಲ್ಲಿ ನಿಂತರೆ ಕಮರಿಯ ತಗ್ಗಿನಿಂದ ಒಂದು ಎಳೆಯ ಮಗು ಅಳುವ ದನಿ, ತಾಯಿ ಅದನ್ನು ಳಳಳಳಳಳವಾಯಿ, ಎಂದು ಸಂತೈಸುವ ದನಿ, ಕೇಳುತ್ತವೆ," ಎನ್ನುತ್ತಾರೆ. ಬಾಳೀಹೊನ್ನೂರಲ್ಲಿ ಒಂದು ಕುಣಿತ. ಹಾಡು ಹೀಗೆ:

ಓ ನಮ್ಮ ನಾಯಕಾ ಬಾ ನಮ್ಮ ನಾಯಕಾ
ಬೇಗನೆ ಬಾ ನಮ್ಮ ಚೆನ್ನಬಸವ ನಾಯಕಾ.

"ಯಾರು ನಾಯಕರು?"

"ನಗರದ ನಾಯಕರು ಸ್ವಾಮಿ; ಅವರು ಇನ್ನೂ ಇದ್ದಾರೆ ಅಂತಾರೆ. ವೇಷ ಮರಸಿಕೊಂಡು ಮರೆಯಾಗಿ ನಿಂತರಂತೆ, ತಿರಿಗಿ ಬರುತಾರಂತೆ."

ಒಂದು ಜೀವಂತ ಸಂಪ್ರದಾಯ; ಜೀವಂತ ನಂಬಿಕೆ; ಸೂರ್ಯ ಚಂದ್ರ ನಕ್ಷತ್ರಗಳೊಂದಿಗೆ ಉಳಿದು ಬಂದಿದೆ.

ಚೆನ್ನಬಸವ ನಾಯಕ ಇನ್ನು ಬರುವುದುಂಟೆ? ಇತಿಹಾಸ ಕನಸ ಪಟ; ಯಾವ ಕನಸೂ ಮತ್ತೆ ಕಾಣುವುದಿಲ್ಲ. ಆದರೆ ಕನಸಿನ ಹಿಂದಿರುವ ಮನಸ್ಸು ಅಂತೆ ಇರುತ್ತದೆ. ಚೆನ್ನಬಸವ ನಾಯಕ ದುರ್ದೈವದ ಝಂಝಾವಾತದಲ್ಲಿ ಸಿಕ್ಕಿದ ಒಂದು ಹಕ್ಕಿಯಾದನು. ಅವನ ರಕ್ಕೆ ಅವನ ಅದೃಷ್ಟದ ಹೊಡೆತವನ್ನು ತಡೆಯಲಾರದೆ ಮುರಿಯಿತು. ಆದರೂ ಅವನ ಜೀವ ಸೋತೆನೆನ್ನಲಿಲ್ಲ; ದುರ್ದೈವವನ್ನು ಎದುರಿಸಿ ನಿಂತಿತು, ತಲೆಮಣಿಯದೆ ನಂದಿತು. ಆದರಿಂದ ಈಗ ಅದು ಸಂಪ್ರದಾಯವಾಗಿ ಜೀವಿಸಬಲ್ಲದು. ನಾಯಕನ ಆ ಸ್ವಾಭಿಮಾನ, ಆ ದೇಶಪ್ರೇಮ, ಅವನ ಆ ಸ್ವಜನ ವಾತ್ಸಲ್ಯ, ನಾಡಿನ ಜೀವನದಲ್ಲಿ ಎಂದೂ ಬೇಕಾದ ವಸ್ತುಗಳು; ಎಂದೂ ತಪ್ಪದೆ ಅವು ಆ ಜೀವನದಲ್ಲಿ ಕಾಣಲಿ; ನಿತ್ಯದ ಅವತಾರವಾಗಿ ಜನತೆಯನ್ನು ಕಾಯಲಿ.



ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ (ಸಣ್ಣ ದೃಶ್ಯ)
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ)
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪
ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕತೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ (ಲೇಖನಗಳು)
ಸಣ್ಣ ಕತೆಗಳು ೭, ೮
ನವರಾತ್ರಿ ೫
ಸಣ್ಣಕತೆಗಳು ೯

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols)
Subbanna (Story)
Rabindranath Tagore

"ಅಶ್ವತ್ಥ"
ಸಣ್ಣ ಕತೆಗಳು

"ಜೀವನ ಸಾಹಿತ್ಯ"

ಹುಚ್ಚ ಮುನಸೀಫ ಮತ್ತು ಇತರ ಕತೆಗಳು —ಶ್ರೀ ಬಾಗಲೋಡಿ ದೇವರಾಯ
ಕವಿಗೋವಿಂದಪ್ಪೈ —ಶ್ರೀ ಗುಂಡಲಪಂಡಿತ ರಾಜರತ್ನಂ

**ಸಂಚಾಲಕ, "ಜೀವನ ಕಾರ್ಯಾಲಯ", ಬಸವನಗುಡಿ, ಬೆಂಗಳೂರು ೪**